# ದೀವರ ಜನಾಂಗದ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಸ್ಥಿತ್ಯಂತರಗಳು

(ಪಿಎಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕ

ಎಂ. ವೀರೇಂದ್ರ

ಮಾರ್ಗದರ್ಶಕರು

ಡಾ.ಸ.ಚಿ.ರಮೇಶ

ಪ್ರವಾಚಕರು ಮತ್ತು ಮುಖ್ಯಸ್ಥರು

ಜಾನಪದ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬



ಜಾನಪದ ವಿಭಾಗ

ಕನ್ನಡ ನಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೪

# ದೀವರ ಜನಾಂಗದ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಸ್ಥಿತ್ಯಂತರಗಳು

(ಪಿಎಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕ

ಎಂ. ವೀರೇಂದ್ರ



ಮಾರ್ಗದರ್ಶಕರು

ಡಾ. ಸ. ಚಿ. ರಮೇಶ

ಪ್ರವಾಚಕರು ಮತ್ತು ಮುಖ್ಯಸ್ಥರು

ಜಾನಪದ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬



ಜಾನಪದ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೪

# ಪ್ರಮಾಣ ಪತ್ರ

'ದೀವರ ಜನಾಂಗದ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಸ್ಥಿತ್ಯಂತರಗಳು' ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಡಾ.ಸ.ಚಿ.ರಮೇಶ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಜಾನಪದ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಈ ಮಹಾಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಎಂ. ವೀರೇಂದ್ರ

ಸ್ಥಳ : ವಿದ್ಯಾರಣ್ಯ
ದಿನಾಂಕ : 29.4.04

(ಎಂ.ವೀರೇಂದ್ರ)
ಸಂಶೋಧಕ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ ಹಂಪಿ

# ದೃಢೀಕರಣ ಪತ್ರ

ಶ್ರೀ ಎಂ.ವೀರೇಂದ್ರ ಇವರು 'ದೀವರ ಜನಾಂಗದ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಸ್ಥಿತ್ಯಂತರಗಳು' ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಕನ್ನಡ ವಿಶ್ವವಿದ್ಯಾಲಯದ ಜಾನಪದ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಈ ಮಹಾಪ್ರಬಂಧವನ್ನು ಸಲ್ಲಿಸಲಾಗಿದೆ. ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇತರ ಉದ್ದೇಶಗಳಿಗಾಗಿ ಬಳಸಿಕೊಂಡಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ : 29.4.04

(ಡಾ.ಸ.ಚಿ.ರಮೇಶ್)
ಮಾಗದರ್ಶಕರು
ಪ್ರವಾಚಕರು ಹಾಗೂ ಮುಖ್ಯಸ್ಥರು
ಜಾನಪದ ವಿಭಾಗ
ಕನ್ನಡ ವಿಶ್ವವಿದ್ಯಾಲಯ ಹಂಪಿ

# ಕೃತಜ್ಞತೆಗಳು

'ದೀವರ ಜನಾಂಗದ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಸ್ಥಿತ್ಯಂತರಗಳು' ಎಂಬ ಪ್ರೌಢ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಮರ್ಪಿಸುವುದು ನನಗೆ ಅತ್ಯಂತ ಹರ್ಷವೆನಿಸುತ್ತದೆ. ಡಾ. ಚಂದ್ರಶೇಖರ ಕಂಬಾರರ ಕಲ್ಪನೆಯ 'ಮಹಾಮನೆ'ಗೆ ಬಂದಾಗ, ಅವರ ಸಾಧನೆಯ ಮೇರುಗಿರಿಯಲ್ಲಿ ಓಡಾಡುವಾಗ ನನ್ನಂಥ ಭಾಗ್ಯಶಾಲಿ ಬೇರೆ ಯಾರು ಇಲ್ಲ ಎಂಬಷ್ಟು ಹೆಮ್ಮೆಯಾಯಿತು. ಈ ಸಂದರ್ಭದಲ್ಲಿ ನನ್ನ ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ಅಂದಿನ ಕುಲಪತಿಗಳಾದ ಡಾ.ಎಂ.ಎಂ. ಕಲಬುರ್ಗಿ ಹಾಗೂ ಡಾ.ಎಚ್.ಜೆ.ಲಕ್ಕಪ್ಪಗೌಡ ಇಂದಿನ ಪ್ರಭಾರ ಕುಲಪತಿಗಳಾದ ಡಾ.ಕೆ.ವಿ.ನಾರಾಯಣ ಇವರುಗಳಿಗೆ ಅನಂತ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ಅಧ್ಯಯನ ಕೈಗೊಳ್ಳಲು ಆಡಳಿತಾತ್ಮಕ ಅನುಮತಿ ನೀಡಿ ಸೂಕ್ತ ಸಲಹೆ, ಮಾರ್ಗದರ್ಶನ, ಸಹಕಾರ, ನೀಡಿದ ಹಿಂದಿನ ಕುಲಸಚಿವರಾಗಿದ್ದ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ, ಅಧ್ಯಯನಾಂಗದ ನಿರ್ದೇಶಕರಾದ ಡಾ.ಕರಿಗೌಡ ಬೀಚನಹಳ್ಳಿಯವರಿಗೆ ಅನಂತ ಕೃತಜ್ಞತೆ ಗಳನ್ನು ಸಲ್ಲಿಸುತ್ತೇನೆ.

ನನ್ನ ಮಹಾಪ್ರಬಂಧದ ರಚನೆಯ ಪ್ರತಿ ಹಂತದಲ್ಲೂ ಸೂಕ್ತ ಸಲಹೆ ನೀಡಿದ ಮತ್ತು ಪ್ರಬಂಧದ ಹೆಸರು ಸೂಚಿಸಿ, ಅಧ್ಯಯನದುದ್ದಕ್ಕೂ ತಾಳ್ಮೆಯ ಮಾರ್ಗದರ್ಶನ ನೀಡಿದ, ನನ್ನನ್ನು ಪ್ರೋತ್ಸಾಹಿಸಿ ಆತ್ಮೀಯ ವಾಗಿ ನಡೆಸಿಕೊಂಡು, ಪ್ರಬಂಧ ಗಟ್ಟಿಗೊಳ್ಳಲು ಸಹಕರಿಸಿದ ನಮ್ಮ ವಿಭಾಗದ ಮುಖ್ಯಸ್ಥರು, ಮಾರ್ಗದರ್ಶಕರು ಆದ ಡಾ.ಸ.ಚಿ.ರಮೇಶ್‌ರವರಿಗೆ ಹಾಗೂ ವಿಭಾಗದವರಾದ ಡಾ.ಸಿ.ಟಿ.ಗುರುಪ್ರಸಾದ್, ಡಾ.ಮಂಜುನಾಥ ಬೇವಿನಕಟ್ಟಿ, ಡಾ.ಮೊಗಳ್ಳಿ ಗಣೇಶ್, ಡಾ.ಎಚ್.ಕೆ.ನಾಗೇಶ್ ಹಾಗೂ ಹರಿಶ್ಚಂದ್ರ ದಿಗ್ಸಂಗೀಕರ್‌ರವರಿಗೆ ತುಂಬು ಹೃದಯದ ಕೃತಜ್ಞತೆಗಳು.

ಅಧ್ಯಯನದ ಅವಧಿಯಲ್ಲಿ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಕರಿಸಿದ ಡಾ.ಹಿ.ಚಿ.ಬೋರಲಿಂಗಯ್ಯ ನವರಿಗೆ, ಶ್ರೀ ಎ.ಎಸ್.ಪ್ರಭಾಕರ, ಡಾ.ಚಲುವರಾಜು ಹಾಗೂ ನನ್ನ ಬರಹವನ್ನು ಓದಿ ಕರಡು ತಿದ್ದುವಲ್ಲಿ ಸಹಕರಿಸಿದ ಪ್ರಸಾರಾಂಗದ ಸಹಾಯಕ ನಿರ್ದೇಶಕರಾದ ಹೆಚ್.ಬಿ.ರವೀಂದ್ರರವರಿಗೆ ನನ್ನ ವಿಶೇಷ ಕೃತಜ್ಞತೆಗಳು ಸಲ್ಲುತ್ತವೆ.

ದೀವರ ಜನಾಂಗದ ಬಗ್ಗೆ ಮಾಹಿತಿ ಒದಗಿಸಿದ ಜಾನಪದ ತಜ್ಞ ಹುಚ್ಚಪ್ಪ ಮಾಸ್ತರಿಗೆ, ಮಲೆನಾಡಿನ ಸಾಗರದ 'ನಾಡಿ' ಎಂದೆ ಖ್ಯಾತರಾದ ಸಾಹಿತಿ ನಾ.ಡಿಸೋಜರಿಗೆ, ದೀವರ ಡೊಳ್ಳು ಕಲೆಯನ್ನು ರಾಷ್ಟ್ರ ಅಂತರಾಷ್ಟ್ರೀಯ ಮಟ್ಟಕ್ಕೆ ತೆಗೆದುಕೊಂಡು ಹೋದ ಕಲಾಕಾರರಾದ ಬಹುಮುಖ ಪ್ರತಿಭೆಯುಳ್ಳ ಕಾಗೋಡು ಅಣ್ಣಾಜಿಯವರಿಗೆ, ದೀವರ ಜನಾಂಗದ ಹಿರಿಯರಾದ ಕಾಗೋಡು ಚಳುವಳಿಯ ನೇತಾರರಾದ ವಪ್ಪಾಳ ಗಣಪತಿಯಪ್ಪನವರಿಗೆ, ನನ್ನ ಅನಂತ ಪ್ರಣಾಮಗಳನ್ನು ಸಲ್ಲಿಸುತ್ತೇನೆ.

ಅಧ್ಯಯನದ ಸಂದರ್ಭದಲ್ಲಿ ಹಲವಾರು ಸಮಸ್ಯೆಗಳಿಗೆ ಸ್ಪಂದಿಸಿದ, ನನ್ನನ್ನು ತಮ್ಮನೆಂದು ಪರಿಗಣಿಸಿ ಆತಿಥ್ಯ ನೀಡಿ ಸಹಕರಿಸಿದ ಶ್ರೀಮತಿ ಅನುರಾಧಾ ಎಚ್.ಜಿ.ರವೀಂದ್ರ, ಕೃಷ್ಣಮೂರ್ತಿ ಹಾಗೂ ಗುರುಮೂರ್ತಿ ಯವರಿಗೆ, ವೀರೇಶ್, ಶ್ರೀನಿವಾಸಗೌಡ, ಗಂಗಾಧರ ದೈವಜ್ಞ, ಬಂಗಾರಪ್ಪ, ಚಂದ್ರಶೇಖರರವರನ್ನು ಪ್ರೀತಿಯಿಂದ ನೆನೆಯುತ್ತೇನೆ.

ನನ್ನ ವಿದ್ಯಾಭ್ಯಾಸ ಮುಂದುವರಿಯಲು ಕಾರಣರಾದ ಹಾಗೂ ಅನೇಕ ಕನಸುಗಳನ್ನು ಕಟ್ಟಿಕೊಂಡಿರುವ ತಂದೆ ತಾಯಿಯರಾದ ಶ್ರೀ ಮಲ್ಲಿಕಾರ್ಜುನಪ್ಪಗೌಡ ಶ್ರೀಮತಿ ಗಿರಿಜಮ್ಮ ಶ್ರೀಮತಿ ನೇತ್ರಾವತಿ, ಮತ್ತು ಅಕ್ಕ-ಭಾವರಾದ ಶ್ರೀಮತಿ ಪುಷ್ಪಪಾಲಾಕ್ಷ ಶ್ರೀ ಪಾಲಾಕ್ಷ, ಪ್ರೀತಿಯ ತಮ್ಮನಾದ ಶ್ರೀ ಚನ್ನಮಲ್ಲಿಕಾರ್ಜುನ ಹಾಗೂ ಅಳಿಯಂದಿರಾದ ಕೃಪಾಲ, ಕುಶಾಲರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಸ್ನೇಹಿತರಾಗಿ, ಹಿತೈಷಿಗಳಾಗಿ ಯಾವತ್ತು ನನ್ನ ಏಳ್ಗೆಯನ್ನು ಬಯಸುವ ಎಂ.ಪಿ.ಷಣ್ಮುಖಪ್ಪ, ಶಿವಕುಮಾರ ಹಿತ್ಲ, ಪ್ರಕಾಶ್ ಸಿದ್ದಪ್ಪ ಬಣಗಾರ, ಎಂ.ಎಂ.ಮಂಜುನಾಥ, ಅನಿತಾ ಹೆಗ್ಡೋಡು, ಬೋಜಪ್ಪಗೌಡ್ರು ಸುತ್ತುಗದೆಲೆ, ವರಶಂಕರಯ್ಯ, ಹೆಚ್.ಆನಂದ ಮಾವ, ನಿರಂಜನ, ಜಯಣ್ಣ, ಪುಟ್ಟರಾಜು, ಕೇಶವಮೂರ್ತಿ ಹಾಗೂ ಪ್ರಬಂಧವನ್ನು ಸುಂದರವಾಗಿ ಅಕ್ಷರ ಜೋಡಣೆ ಮಾಡಿದ ಯಾಜಿ ಗ್ರಾಫಿಕ್ಸ್, ಹೊಸಪೇಟೆಯ ಶ್ರೀಮತಿ ಸವಿತಾ ಯಾಜಿ ಮತ್ತು ಗಣೇಶ ಯಾಜಿ ಇವರುಗಳಿಗೆ ನನ್ನ ಅನಂತ ಕೃತಜ್ಞತೆಗಳನ್ನು ಅರ್ಪಿಸುವೆ.

ಸಂಶೋಧಕ

**ಎಂ. ವೀರೇಂದ್ರ**

# ಪರಿವಿಡಿ

# ಅಧ್ಯಾಯ ೧

# ಪ್ರಸ್ತಾವನೆ

## ೧.೧. ಜನಾಂಗಗಳ ಅಧ್ಯಯನದ ಮಹತ್ವ

ಭಾರತದ ಸಾಮಾಜಿಕ ಸಂರಚನೆಯನ್ನು ಕುರಿತ ಅಧ್ಯಯನ ಬಹಳ ಜಟಿಲವಾದುದು. ಭಾರತದ ಅಖಂಡ ಭೌಗೋಳಿಕ ಕಲ್ಪನೆಯೇ ಮೂಲಭೂತವಾಗಿ ಅನೇಕ ಸಮಸ್ಯೆಗಳನ್ನು ನಮ್ಮ ಮುಂದೆ ಇಡುತ್ತದೆ. ಆದಿಯಿಂದ ಇಲ್ಲಿಯವರೆಗೆ ಮಾನವನ ಬೆಳವಣಿಗೆಯಲ್ಲಿ ಅನೇಕ ಮಾರ್ಪಾಟುಗಳಾಗಿವೆ. ಮಾನವನ ವಿಕಾಸದ ನಂತರ ಅಲೆಮಾರಿಯಾದ, ಒಬ್ಬಂಟಿಯಾದ, ತದನಂತರದಲ್ಲಿ ಸಂಘಜೀವನ ಪ್ರಾರಂಭಿಸಿದ ಮೇಲೆ ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂಘರ್ಷಗಳು ನಡೆದಿವೆ. ಸಂಘರ್ಷದಿಂದಾಗಿ ಅನೇಕ ಬದಲಾವಣೆಗಳಾಗಿವೆ. ಭಾರತ ದಂತಹ ದೇಶದಲ್ಲಿ ಅನೇಕ ಸಮುದಾಯಗಳು ವಾಸಿಸುತ್ತಿವೆ. ಈ ಮಣ್ಣಿನಲ್ಲಿ ಹುಟ್ಟಿ ಬೆಳೆದ ಮೂಲ ನಿವಾಸಿಗಳಿದ್ದಾರೆ. ಹೊರದೇಶದಿಂದ ಬಂದು ಇಲ್ಲಿನ ಸಂಸ್ಕೃತಿಗೆ ಹೊಂದಿಕೊಂಡವರಿದ್ದಾರೆ. ಈ ದೇಶದಲ್ಲಿ ಯಾವುದೇ ಜನಾಂಗದ ಅಧ್ಯಯನವು ಸಂಕೀರ್ಣ ಸ್ವರೂಪದ್ದಾಗಿರುತ್ತದೆ. ಇಲ್ಲಿಯ ಜನರು ಅನೇಕ ಭಾಷೆ, ಜಾತಿ, ಧರ್ಮ, ವೃತ್ತಿಗಳಿಗೆ ಸೇರಿದವರಾಗಿದ್ದಾರೆ. ಭಾರತದ ಉತ್ತರದಿಂದ ದಕ್ಷಿಣದ ಕನ್ಯಾಕುಮಾರಿಯವರೆಗೆ ಪ್ರಾದೇಶಿಕ ಭಿನ್ನತೆಯಿಂದಾಗಿ ಅನೇಕ ಜನ ಸಮುದಾಯಗಳು ವೈವಿಧ್ಯತೆಯನ್ನು ಹೊಂದಿವೆ. ಪ್ರತಿಯೊಂದು ಬುಡಕಟ್ಟು, ಜಾತಿಗಳಲ್ಲಿ ಸಾಮ್ಯವಿರುವಂತೆ ಕಂಡುಬಂದರೂ ಅನೇಕ ವ್ಯತ್ಯಾಸಗಳಿವೆ. ತಮ್ಮದೇ ಆದ ಅನನ್ಯತೆಗಳಿವೆ. ಇದಕ್ಕೆ ಕಾರಣ ಭೌಗೋಳಿಕ ಪರಿಸರ, ಭಾಷೆ, ವೃತ್ತಿ ಮುಂತಾದವು. ಇಲ್ಲಿಯ ಜಾತಿಯ ವ್ಯವಸ್ಥೆಯು ಅತ್ಯಂತ ಜಟಿಲವಾಗಿದೆ. ಮಾನವನ ಉಗಮದ ಬಗ್ಗೆ ಡಾರ್ವಿನ್‌ನ ವಿಕಾಸವಾದ ವೈಜ್ಞಾನಿಕವಾಗಿ ಸ್ಪಷ್ಟಪಡಿಸುತ್ತದೆ. ಸೂಕ್ಷ್ಮಾಣುವಿನಿಂದ ಅನೇಕ ಜೀವಿಗಳ ಸೃಷ್ಟಿ ನಂತರ ಮಾನವನ ಸೃಷ್ಟಿಯಾಯಿತು. ಆದರೆ ಜಾತಿಯ ಉಗಮದ ಬಗ್ಗೆ ಖಚಿತ ಆಧಾರಗಳಿಲ್ಲ. ಮೂಲ ನಿವಾಸಿಗಳಿಗೂ ವಿದೇಶಿಯರಿಗೂ ಮುಖಾಮುಖಿ ಯಾದಾಗ ಜಾತಿ ಪದ್ಧತಿಗೆ ನಾಂದಿ ಹಾಡಿರಬೇಕು. ಭಾರತದಲ್ಲಿ ಜಾತಿ ವ್ಯವಸ್ಥೆ ಏಣಿಶ್ರೇಣಿಯಿಂದ ಕೂಡಿದೆ. ಅತ್ಯಂತ ಕೆಳಸ್ತರದಲ್ಲಿ ಹಿಂದುಳಿದ ಜಾತಿ, ಬುಡಕಟ್ಟುಗಳು ಬರುತ್ತವೆ. ಜಾತಿಯ ಬಗ್ಗೆ ವೇದಗಳಲ್ಲಿ ಸ್ಪಷ್ಟವಾಗಿ ಗುರುತಿಸಿದ್ದಾರೆ. ಋಗ್ವೇದದ ಕಾಲದಲ್ಲಿ ಬ್ರಾಹ್ಮಣ, ಕ್ಷತ್ರಿಯ ಎಂಬ ಎರಡು ಜಾತಿಗಳು, ನಂತರ ಪುರುಷ ಸೂಕ್ತದಲ್ಲಿ ವೈಶ್ಯ, ಶೂದ್ರ ಎಂಬ ಇನ್ನೆರಡು ವರ್ಗಗಳು ಸೇರಿದವು. ಸೃಷ್ಟಿಕರ್ತನ ಒಂದೊಂದು ಅಂಗದಿಂದ ಒಂದು ಜಾತಿ ಸೃಷ್ಟಿಯಾಯಿತು ಎಂದು ತೈತ್ತಿರೀಯದ ಕಲ್ಪನೆ ಚಾತುರ್ವರ್ಣದಲ್ಲಿ ಅಸಮಾನತೆಯನ್ನು ಹುಟ್ಟು ಹಾಕಿತೆಂದು ಕಾಣುತ್ತದೆ. ಸೃಷ್ಟಿಕರ್ತನ ಮುಖದಿಂದ ಬ್ರಾಹ್ಮಣ, ಭುಜದಿಂದ ಕ್ಷತ್ರಿಯ, ಹೊಟ್ಟೆಯಿಂದ ವೈಶ್ಯ, ಕಾಲಿನಿಂದ ಶೂದ್ರ ಜನಿಸಿದರೆಂಬ ವಿವರಣೆಯಿದೆ. ಆದರೆ ಶೂದ್ರವರ್ಗದ ನಂತರದ ಜಾತಿಗಳ ಪ್ರಸ್ತಾಪವಿಲ್ಲ. ದೇಹದಲ್ಲಿ ತಲೆಯನ್ನು

ಮೇಲ್ಪಂಕ್ತಿಯಲ್ಲೂ, (ಅಂದರೆ ಶ್ರೇಷ್ಠ, ಉಚ್ಚ ಎಂಬ ಕಲ್ಪನೆ) ಕಾಲುಗಳನ್ನು ಕೆಳಪಂಕ್ತಿಯಲ್ಲಿ (ಅಂದರೆ ನೀಚ ಎಂಬ ಕಲ್ಪನೆ) ನೋಡುವ ಒಂದು ದೃಷ್ಟಿಕೋನ ವೇದಗಳ ಕಾಲದಲ್ಲಿ ಗೋಚರಿಸಿತು. ಇದಕ್ಕೆ ಕಾರಣ ತಲೆ ಶ್ರೇಷ್ಠ ಎಂಬ ಪರಿಕಲ್ಪನೆಯೇ ಆಗಿದೆ. ಇದನ್ನು ಈ ರೀತಿಯಾಗಿ ಆಲೋಚಿಸಬಹುದು. ಮನುಷ್ಯ ಜ್ಞಾನಿಯಾಗಿ, ಬಲಶಾಲಿಯಾಗಿ, ಕೆಲಸ ಕಾರ್ಯದಲ್ಲಿ ದಕ್ಷನಾದರೆ ಆತನೇ ಸೃಷ್ಟಿಕರ್ತನಾಗಬಹುದು. ಬುಡಕಟ್ಟು ಜನಾಂಗಗಳನ್ನು ಗಮನಿಸಿದರೆ, ಅವರಲ್ಲಿ ಅಪಾರವಾದ ಸಾಂಪ್ರದಾಯಿಕ ಜ್ಞಾನ ಸಂಪತ್ತಿದೆ. ಜೀವನಕ್ರಮದಲ್ಲಿ ಪರಿಣಿತರು, ಕೆಲಸದಲ್ಲಿ ದಕ್ಷರು ಆಗಿರುವುದರಿಂದ ಅವರು ಇಂದಿಗೂ ತಮ್ಮತನವನ್ನು ಉಳಿಸಿಕೊಂಡು ಬಂದಿದ್ದಾರೆ. ಜಾತಿಯ ಬಗೆಗಿನ ಉಲ್ಲೇಖವನ್ನು ಕ್ರಿ.ಪೂ.೩೦೦ರಲ್ಲಿ ಚಂದ್ರಗುಪ್ತನ ಆಸ್ಥಾನಕ್ಕೆ ರಾಯಭಾರಿಯಾಗಿ ಬಂದಿದ್ದ ಮೆಗಾಸ್ತನೀಸ್ ಭಾರತದಲ್ಲಿ ಏಳು ಜಾತಿಗಳಿವೆಯೆಂಬುದನ್ನು ಹೇಳಿದ್ದಾನೆ. ಈ ಜಾತಿಗಳಲ್ಲಿ ಪರಸ್ಪರ ಸಹಭೋಜನ ಕೊಳು ಕೊಡುಗೆಗಳು ನಿಷಿದ್ಧವೆಂದು ಹೇಳಿದ್ದಾನೆ. ಬೇರೆ ವಿಷಯಗಳ ಪ್ರಸ್ತಾಪವಿಲ್ಲ.

ಕೆಲದಶಕಗಳಿಂದೀಚೆಗೆ ಕರ್ನಾಟಕದಲ್ಲಿ ಸಂಸ್ಕೃತಿ ಅಧ್ಯಯನ ಕುರಿತು ಅನೇಕ ಅಧ್ಯಯನಗಳು ನಡೆದಿವೆ. ಈಗಲೂ ನಡೆಯುತ್ತಲೂ ಇವೆ. ಇದೊಂದು ಮಹತ್ವದ ಬೆಳವಣಿಗೆಯಾಗಿದೆ. ಜನಾಂಗಗಳ ಜೀವನ ಕ್ರಮವನ್ನು ಕುರಿತ ಅಧ್ಯಯನ ಬಹಳ ಜಟಿಲವಾದುದು. ಕಾರಣ ಭಾರತದ ಭೌಗೋಳಿಕ ವಿನ್ಯಾಸವೇ ಅನೇಕ ಸಮಸ್ಯೆಗಳನ್ನು ಸೃಷ್ಟಿ ಮಾಡುತ್ತದೆ. ಇಂದು ಒಂದು ಜನಾಂಗವು ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ವಲಯಗಳಲ್ಲಿ ಬದಲಾವಣೆ ಒಂದು ಸಹಜ ಪ್ರಕ್ರಿಯೆ. ಆದರೆ ಒಂದು ಜನಾಂಗದ ಸಂಸ್ಕೃತಿ ಬೇರೊಂದು ಜನಾಂಗದ ಸಂಸ್ಕೃತಿಗಿಂತ ಬೇರೆಯಾಗಿರುತ್ತದೆ. 'ಒಂದು ವ್ಯಕ್ತಿಯ ಅಂತರಂಗದ ನೆಲೆಗಳನ್ನು ಕೇಂದ್ರವಾಗಿಟ್ಟುಕೊಂಡು ವ್ಯಾಖ್ಯಾನಗಳು ಸಂಸ್ಕೃತಿಯನ್ನು ಹಳೆಯ ಆಕೃತಿಗಳಾಗಿ ಸ್ವೀಕರಿಸುವುದುಂಟು. ಎರಡನೆಯದು ವ್ಯಕ್ತಿಯ ಬಹಿರಂಗ ನೆಲೆಯನ್ನು ಪ್ರಧಾನವಾಗಿ ಪರಿಗಣಿಸಿದ ವ್ಯಾಖ್ಯಾನಗಳು ವಸ್ತುಸಂಸ್ಕೃತಿಯ ವಿವರಗಳನ್ನು ಒಳಗೊಂಡಿರುತ್ತದೆ.' ಡಿ.ಡಿ.ಕೊಸಂಬಿ (ಉದ್ಧೃತ) ಇವರ ಮಾತುಗಳು ಚರಿತ್ರಕಾರರಿಗೆ ಮಾತ್ರವಲ್ಲ ಜನಾಂಗಗಳ ಅಧ್ಯಯನ ಮಾಡುವವರಿಗೂ ಅವಶ್ಯಕ.

ಜನಾಂಗಗಳ ಸಾಂಸ್ಕೃತಿಕ ಇತಿಹಾಸವನ್ನು ಗುರುತಿಸುವಾಗ ಪ್ರಮುಖವಾಗಿ ಲಿಖಿತ ಆಕರಗಳು ಮತ್ತು ಮೌಖಿಕ ಆಕರಗಳನ್ನು ಆಧರಿಸಿಕೊಳ್ಳಬೇಕಾಗುತ್ತದೆ. 'ನಾಗರಿಕ ಲೇಖಕರು ಹೇಳಲು ಧೈರ್ಯ ಮಾಡಿರದ ಅಮುಖ್ಯವೆಂದು ಕೈ ಬಿಟ್ಟಿರಬಹುದಾದ ಅನೇಕ ಮುಖ್ಯ ಸಂಗತಿಗಳನ್ನು ಜಾನಪದರು ಎಷ್ಟೇ ವ್ಯತ್ಯಾಸವಾದರೂ ಧ್ವನಿರೂಪದಲ್ಲಿ, ಆಚರಣೆಯ ರೂಪದಲ್ಲಿ ರಕ್ಷಿಸುತ್ತಾ ಬಂದಿದ್ದಾರೆ. ಇವುಗಳನ್ನು ಇತಿಹಾಸ ಪುನರಚನಾ ಪ್ರಸಂಗದಲ್ಲಿ ಆಧಾರ ಸಾಮಗ್ರಿಯೆಂದು ಎಚ್ಚರಿಕೆಯಿಂದ ಬಳಸಿಕೊಂಡು ಇತಿಹಾಸ ಬರೆಯುವ ಕಂಠಸ್ಥ ಇತಿಹಾಸಕಾರರ ತಂಡವೆ ಇಂದು ಬೆಳೆದು ಬರಬೇಕಾಗಿದೆ' (ಡಾ.ಎಂ.ಎಂ.ಕಲಬುರ್ಗಿ, ೧೯೮೬, ಪುಟ ೬೩). ಮೌಖಿಕ ಆಕರ ಅಂದರೆ ಕಂಠಸ್ಥ ಆಕರ ಎಷ್ಟು ಪ್ರಮುಖವಾದುದು ಮತ್ತು ಸಂಶೋಧಕ ಹೇಗೆ ಬಳಸಿಕೊಳ್ಳಬೇಕು ಎಂದು ಎಚ್ಚರಿಸಿದ್ದಾರೆ. ಇಲ್ಲಿ ಲಿಖಿತ ಆಕರಗಳಿಗಿರುವಷ್ಟೇ (ಶಿಷ್ಟ) ಪ್ರಾಮುಖ್ಯತೆ ಮೌಖಿಕ ಆಕರಗಳಿಗಿದೆ. ಇಲ್ಲಿಯ ಗ್ರಹಿಕೆಗಳೆಲ್ಲಾ ಶಿಷ್ಟ ಪರಂಪರೆ ಎಂದು ಪರಿಗಣಿತವಾಗಿರುವ ಪುರೋಹಿತಶಾಹಿ ಮತ್ತು ಪಾಶ್ಚಾತ್ಯ ವಸಾಹತುಶಾಹಿ ಮನೋಧರ್ಮದಿಂದ ಗ್ರಹಿಸಿರುವಂತಹದ್ದಾಗಿದೆ. ನಮ್ಮಲ್ಲಿಯ ಇತಿಹಾಸ ಅಧ್ಯಯನವೆಂದರೆ

ಪುರಾಣ, ಉಪನಿಷತ್ತು, ವೇದ, ಸ್ಮೃತಿಗಳು ಮತ್ತು ಕಾವ್ಯಗಳು. ಇವುಗಳ ಆಧಾರದಿಂದಲೇ ಅಧ್ಯಯನವನ್ನು ಮಾಡಬೇಕಾಗಿತ್ತು. ಇವು ಒಂದು ನಿರ್ದಿಷ್ಟ ಜನರ ಆಶಯ ಆಕಾಂಕ್ಷೆಯನ್ನು ಮತ್ತು ಒಳಿತನ್ನು ಪ್ರತಿಬಿಂಬಿಸುತ್ತವೆಯೇ ಹೊರತು ಸಮಷ್ಟಿಯನ್ನಲ್ಲ. ಇದಕ್ಕೆ ಮುಖ್ಯಕಾರಣ ವಿದ್ಯೆಯ ಕೇಂದ್ರೀಕರಣ ಮತ್ತು ಅದು ಪರರಿಗೆ ಸೇರಬಾರದೆಂಬ ಗೌಪ್ಯ ಸಂರಕ್ಷಣೆ. ಈ ರೀತಿಯ ವ್ಯವಸ್ಥೆ ಭಾರತದ ಬಹುದೊಡ್ಡ ಜನ ಸಮೂಹವನ್ನು ಶಿಕ್ಷಣದಿಂದ ದೂರವಿರಿಸಿತು. ಇದರಿಂದಾಗಿ ಈ ಜನ ಸಮೂಹ ಆ ಸಾಹಿತ್ಯದಲ್ಲಿ ಏನಿದೆ ಎಂಬುದನ್ನು ತಿಳಿಯುವ ಅವಕಾಶವೇ ಇಲ್ಲದಾಯಿತು. ಅವುಗಳನ್ನೆಲ್ಲಾ ಭಯ ಭಕ್ತಿಯಿಂದ ನೋಡುವ ಸ್ಥಿತಿ ನಿರ್ಮಾಣವಾಯಿತು. ಈ ದೂರವಿರಿಸುವ ಕ್ರಮದಿಂದಾಗಿ ನಮ್ಮ ಜನ ಸಮೂಹದ ಮೌಖಿಕ ಸಾಹಿತ್ಯ ಸಂಪತ್ತು ಬೃಹದಾಕಾರವಾಗಿ ಬೆಳೆಯಲು ಕಾರಣವಾಯಿತು. ಹಾಗು ಸಂಸ್ಕೃತಿಯಲ್ಲಿ ಕಲಬೆರಕೆಯ ಪ್ರಮಾಣ ಕಡಿಮೆಯಾಯಿತೇನೋ ಎನ್ನಬಹುದು. ಬುಡಕಟ್ಟುಗಳು ಪ್ರತ್ಯೇಕವಾಗಿ ಉಳಿಯಲು ಬೆಳೆಯಲು ಕಾರಣವಾಯಿತು. ಶಿಷ್ಟ ಪರಂಪರೆಯ ಆಕರಗಳೆಲ್ಲ ಸಾಮಾನ್ಯ ಜೀವನ ವಿಧಾನವನ್ನು ಪ್ರತಿಪಾದಿಸದೆ ಅತೀತವಾದ ವಿಧಾನ ಮತ್ತು ಮೌಲ್ಯಗಳನ್ನು ಪ್ರತಿಪಾದಿಸಿದವು. ತೈತ್ತೀರಿಯೋಪನಿಷತ್‌ನಲ್ಲಿ ಅವಾಸ್ತವದ ಜಾತಿಗಳ ಹುಟ್ಟಿನ ಕಥೆ ಹೆಣೆಯಲಾಗಿದ್ದು ಬರಿ ಅಸತ್ಯಗಳ, ಅವೈಜ್ಞಾನಿಕ ಚಿಂತನೆಗಳೆ, ಶಿಷ್ಟ ಪರಂಪರೆಯ ಪ್ರತಿಪಾದನೆಗಳಾಗಿವೆ. ತಲೆಯಿಂದ ಹುಟ್ಟಿದವರ ವೃತ್ತಿ ಮತ್ತು ಅವರಿಂದ ಸೃಷ್ಟಿಯಾದ ಸಾಹಿತ್ಯಗಳು ಒಂದಕ್ಕೊಂದು ಸಂಬಂಧವಿದೆ. ಇಹಪರ ಕಲ್ಪನೆಯ ಸಾಹಿತ್ಯವೇ ಅಂದಿನ ಕಾಲದ ವಿಶಿಷ್ಟತೆಗಳು. ಜನ ಸಾಮಾನ್ಯ ಮತ್ತು ಶಿಷ್ಟರ ಮಧ್ಯೆ ಒಂದು ದೊಡ್ಡ ಕಂದರವೇ ಏರ್ಪಟ್ಟಿತ್ತು. ಇದಕ್ಕೆ ಕಾರಣ ಅಂದಿನ 'ರಾಜ ವ್ಯವಸ್ಥೆ'. ಹೆಚ್ಚಿನ ರಾಜರೆಲ್ಲಾ ಬುಡಕಟ್ಟುವಿನಿಂದ ಜಾತಿಯಾಗಿ ಮಾರ್ಪಟ್ಟ ಜನಾಂಗದ ವ್ಯಕ್ತಿ ಮತ್ತು ಕುಟುಂಬದ ಸದಸ್ಯರೇ ಆಗಿರುವುದು. ನಮ್ಮಲ್ಲಿಯ ದೇವರು ಸಹಿತ (ದೇಹದ ಆಕಾರ, ಬಣ್ಣ) ಹಿಂದುಳಿದ ವರ್ಗದಿಂದ ಬಂದವರೇ ಆಗಿರುವುದು. ಆದರೆ ಇವರಿಬ್ಬರು ಶಿಷ್ಟ ಪರಂಪರೆಯ ಮಂತ್ರಘೋಷಗಳ ಮಧ್ಯೆ ನಿಂತಿರುವುದು. ಹೀಗಾಗಿ ರಾಜನ ಆಸ್ಥಾನದ ಕವಿ, ಇತಿಹಾಸಕಾರರೆಲ್ಲ ರಾಜನ ಸುತ್ತ ಗಿರಕಿ ಹೊಡೆದ ಜನಸಾಮನ್ಯನ ಬದುಕಿನ ಮೌಲ್ಯಗಳಿಗೆ ಯಾವುದೇ ಮನ್ನಣೆಗಳನ್ನು ಕೊಡದಿರುವುದನ್ನು ಕಾಣುತ್ತೇವೆ. ಇತಿಹಾಸದುದ್ದಕ್ಕೂ ಯುದ್ಧ, ದರ್ಬಾರಿನ ವೈಭವ, ರಾಜನನ್ನು ನಾಯಕನನ್ನಾಗಿ ಇಟ್ಟುಕೊಂಡ ಸಾಹಿತ್ಯ ಮುಂತಾದ ಚಿತ್ರಣಗಳನ್ನು ಕಾಣುತ್ತೇವೆ. ಜನಪದರ ಸಂಸ್ಕೃತಿಗೆ ಅಲ್ಲಿ ಸ್ಥಾನಮಾನಗಳೇನು? ಇವರ ಮೌಖಿಕ ಸಾಹಿತ್ಯದ ವಿಶಿಷ್ಟತೆಗಳೇನು ಎಂಬ ಚಿಂತನೆ ಎಲ್ಲೂ ಕಂಡು ಬರುವುದಿಲ್ಲ.

ಜಗತ್ತಿನ ಎಲ್ಲಾ ಅಲಕ್ಷಿತ ಸಮುದಾಯಗಳು ಪ್ರಭು ಸಂಸ್ಕೃತಿ ಹೊರಿಸಿದ ಸಾಂಸ್ಕೃತಿಕ ವಿಕಲ್ಪ ಹಾಗೂ ವಿಸ್ಮೃತಿಯ ಕೋಶ ಹರಿದು ಬಿಡುಗಡೆಗೆ ಪ್ರಯತ್ನಿಸುತ್ತವೆ. ಹೀಗೆ ಸಂಸ್ಕೃತಿಯೊಂದು ತನ್ನ ಅನನ್ಯತೆಯ ಧ್ಯಾನ ಮತ್ತು ಹುಡುಕಾಟದಲ್ಲಿನ ಸವಾಲಿಗೆ ದೇಶೀಯ ಚಿಂತನೆಯಲ್ಲಿ ತನ್ನದೇ ಇತಿಹಾಸವನ್ನು ಕಟ್ಟಿಕೊಳ್ಳುತ್ತದೆ. ಹೀಗೆ ಕಟ್ಟಿಕೊಳ್ಳುತ್ತಲೇ ಅದು ಬೆಳೆಯುವ ಪ್ರಕ್ರಿಯೆಗೆ ತೊಡಗುತ್ತದೆ. ಮಾನವನ ಜೀವನದಿಂದ ಸಾಂಸ್ಕೃತಿಕ ಪರಂಪರೆಯ ಪ್ರಾರಂಭವನ್ನು ಕಾಣಬಹುದು. ಮನುಷ್ಯ, ಸಂಘಜೀವನದಿಂದ ನಾಗರೀಕತೆಯ ಪ್ರವೇಶ ಪಡೆದು ನಂತರ ಅನೇಕ ಬದಲಾವಣೆಗಳು ದೈಹಿಕವಾಗಿ, ಸಾಂಸ್ಕೃತಿಕವಾಗಿ ಆಗುತ್ತಾ ಬಂದವು. ಈ ಬದಲಾವಣೆ

ಯನ್ನು ಬುಡಕಟ್ಟು ಸಂಸ್ಕೃತಿ, ಗ್ರಾಮೀಣ ಸಂಸ್ಕೃತಿ ನಂತರದಲ್ಲಿ ನಗರ ಸಂಸ್ಕೃತಿ ಎಂದು ಗುರುತಿಸಬಹುದು. ತೀ.ನಂ.ಶಂಕರನಾರಾಯಣರವರು ಹೇಳುವಂತೆ 'ಬುಡಕಟ್ಟು ಸಂಸ್ಕೃತಿ ಪುರೋಹಿತ ಸ್ಪರ್ಶದಿಂದಾಗಿ ಜಾತಿಗಳಾಗಿ ಪರಿವರ್ತನೆಗೊಂಡವು'. ಅಂದರೆ ಬುಡಕಟ್ಟುಗಳ ಸಂಪ್ರದಾಯ ಆಚರಣೆಗಳಲ್ಲಿ ಪುರೋಹಿತರು ಸಾರಥ್ಯ ವಹಿಸಿದ ನಂತರ ಅವುಗಳೆಲ್ಲಾ ಜಾತಿಗಳಾಗಿ ಮಾರ್ಪಾಟು ಹೊಂದಿದವು. ಹೀಗೆ ಹಿಂದೂ ಧರ್ಮದೊಂದಿಗೆ ಸಮ್ಮಿಳಿತಗೊಂಡು ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ ಬದಲಾದರು ಮತ್ತು ಮೂಲದ ಆಚರಣೆಯಲ್ಲಿ ವ್ಯತ್ಯಾಸ ಗಳಾದವು. ಕೆಲವು ಜಾತಿಗಳು ತಮ್ಮ ಸಂಪ್ರದಾಯ, ನಂಬಿಕೆಗಳಿಂದಾಗಿ ತಮ್ಮ ತನವನ್ನು ಉಳಿಸಿಕೊಂಡವು. ಕೆಲವು ಬುಡಕಟ್ಟು ಜನಾಂಗಗಳು ಯಾವ ಪ್ರಭಾವಕ್ಕೆ ಒಳಗಾಗದೆ ಆಧುನಿಕತೆಗೆ ಬೆನ್ನುಮಾಡಿ ಒಂದು ಚೌಕಟ್ಟಿನೊಳಗಡೆಯೆ ಇನ್ನೂ ಇವೆ. ಗ್ರಾಮ, ನಗರ, ಧರ್ಮ, ಸಂಸ್ಕೃತಿಯ ಸೋಂಕಿಲ್ಲದ ಅನೇಕ ಬುಡಕಟ್ಟು ಸಂಸ್ಕೃತಿ ಅಸ್ತಿತ್ವದಲ್ಲಿದೆ. ಅನೇಕ ಬೆಳವಣಿಗೆಯಿಂದಾಗಿ ಸಮುದಾಯದ ಸ್ವರೂಪ ಬದಲಾಗುತ್ತಿದೆ. ಎಲ್ಲೋ ಒಂದು ಕಡೆ ಜನರು ತಮ್ಮ ಜೀವನಕ್ರಮದಲ್ಲಿ ಸಂಪೂರ್ಣವಲ್ಲದ ಹೊರಗಿನ ಜೀವನ ಪದ್ಧತಿಯ ಜೊತೆ ಯಲ್ಲಿಯೇ ತಮ್ಮ ಮೂಲ ಪದ್ಧತಿಯನ್ನು ಉಳಿಸಿಕೊಂಡಿದ್ದಾರೆ. ಹಲವು ಕಾರಣಗಳಿಂದಾಗಿ ಗ್ರಾಮ ಮತ್ತು ನಗರಗಳ ಸಂಬಂಧ ವೃದ್ಧಿಸುತ್ತಿದೆ. ಇದರಿಂದಾಗಿ ಅನೇಕ ಬದಲಾವಣೆಗಳು ಘಟಿಸುತ್ತಿವೆ. ಪರಿವರ್ತನೆ ಒಂದು ಸಹಜ ಪ್ರಕ್ರಿಯೆ, ಮನುಷ್ಯನ ಬದುಕಿನಲ್ಲಿ ಪಲ್ಲಟಗಳು ಅನಿವಾರ್ಯ. ಇದು ಸಮಾಜದ ಆರ್ಥಿಕ ಬೆಳವಣಿಗೆಗೆ ಪೂರಕಕೂಡ. ಈ ಪ್ರಕ್ರಿಯೆಯನ್ನು ಜನಾಂಗಗಳು ಒಪ್ಪಿಕೊಂಡು ತಮ್ಮ ಒಟ್ಟು ಸಾಂಸ್ಕೃತಿಕ ಬದುಕಿನಲ್ಲಿಯ ವೈಶಿಷ್ಟ್ಯತೆಯನ್ನು ಉಳಿಸಿಕೊಂಡಿವೆ.

ಬುಡಕಟ್ಟು ಮತ್ತು ಕೆಳಜಾತಿಗಳ ಬಗೆಗಿನ ಅಧ್ಯಯನ ಮಾನವಶಾಸ್ತ್ರದಲ್ಲಿ ಬಹಳವಾಗಿ ನಡೆದಿದೆ. ಹೆಚ್ಚಿನ ಅಧ್ಯಯನಗಳೆಲ್ಲಾ ಈ ಜಾತಿ ಜನಾಂಗಗಳನ್ನು ಅಧ್ಯಯನದ ಆಕರಗಳಾಗಿ ಬಳಸಿ, ಮನುಷ್ಯನ ಆ ಗುಂಪಿನ ಪ್ರಾಚೀನತೆಯನ್ನು ಗುರುತಿಸುವುದಕಷ್ಟೇ ಸೀಮಿತಗೊಂಡಿತು. ಆ ಬುಡಕಟ್ಟಿನ ಬಣ್ಣ, ತಲೆ, ಕೂದಲಿನ ರೀತಿ, ಮೂಗಿನ ಉದ್ದ ಮುಂತಾದವುಗಳ ಅಳತೆ ಮಾಡುವುದರಲ್ಲಿ ಕಾಲವ್ಯಯ ಮಾಡಿದರೆ ಹೊರತು, ಆ ಮನುಷ್ಯನ ಒಳಗೂ ಒಂದು ಸಂಸ್ಕೃತಿ ಇದೆ ಎಂಬ ಕುತೂಹಲ ಅವರಿಗೆ ಇರಲಿಲ್ಲ. ಈ ಕೆಲಸವನ್ನು ಸ್ವಲ್ಪ ಮಟ್ಟಿಗೆ ಸಾಂಸ್ಕೃತಿಕ ಮಾನವ ಶಾಸ್ತ್ರ ಮಾಡಿತು. ಆದರೆ ಇತ್ತೀಚಿನ ಕೆಲ ದಶಕಗಳಿಂದೀಚೆಗೆ ಒಂದು ಜನಾಂಗದ ಸಾಂಸ್ಕೃತಿಕ ಅಧ್ಯಯನ ನಡೆಯುತ್ತಿರುವುದು ಶ್ಲಾಘನೀಯವಾದ ಕಾರ್ಯವಾಗಿದೆ. ವಿಶ್ವವಿದ್ಯಾಲಯಗಳ ಪಾತ್ರ ಈ ನಿಟ್ಟಿನಲ್ಲಿ ಮಹತ್ತರವಾದದ್ದಾಗಿದೆ.

ಜಾನಪದದಲ್ಲಿ ಯಾವುದೇ ಸಂಸ್ಕೃತಿಯ ಬಗೆಗಿನ ಕಲ್ಪನೆಯನ್ನು ಇಟ್ಟುಕೊಳ್ಳದೆ ಬುಡಕಟ್ಟುಗಳ, ಜಾತಿಗಳ ಅಧ್ಯಯನದ ಮೂಲಕ ಒಂದು ಸಂಸ್ಕೃತಿಯ ಚಿತ್ರಣವನ್ನು ನೀಡಲು ಪ್ರಯತ್ನಿಸಲಾಗುತ್ತಿದೆ. ಈ ರೀತಿಯ ಅಧ್ಯಯನ ಇಂದು ಅನಿವಾರ್ಯ ಮತ್ತು ಅಗತ್ಯವಾಗಿ ಆಗಬೇಕಾದುದು. ಏಕೆಂದರೆ ಏಕಸಂಸ್ಕೃತಿಯ ಹಿನ್ನೆಲೆಯಲ್ಲಿ ನಾವು ಮಾತನಾಡಿದಾಗ ಹಲವಾರು ಜಾತಿಗಳ ಮೌಲ್ಯಗಳನ್ನೇ ಕಡೆಗಣಿಸುತ್ತೇವೆ. ಮತ್ತು ಏಕ ಸಂಸ್ಕೃತಿಯ ಕಲ್ಪನೆ ಭಾರತದಲ್ಲಿ ಹಲವಾರು ಸಂಸ್ಕೃತಿಗಳ ತಿರಸ್ಕಾರಕ್ಕೂ ಕಾರಣವಾಗುತ್ತದೆ. ಭಾರತದಲ್ಲಿ ಸಂಸ್ಕೃತಿ ಮತ್ತು ರಾಷ್ಟ್ರೀಯತೆಗಳ ಕಲ್ಪನೆಯಲ್ಲಿ ಇಂದು ಗಂಭೀರವಾದ ಚಿಂತನೆಗಳು ನಡೆಯುತ್ತಿರಬೇಕಾದರೆ ಈ ರೀತಿಯ ಕೆಳ ಸಂಸ್ಕೃತಿಗಳ ಅಧ್ಯಯನ ಅವುಗಳಿಗೊಂದು ಪರಿಹಾರವನ್ನು ಸೂಚಿಸಲು ಸಮರ್ಥವಾಗುತ್ತದೆ.

ಬೃಹತ್ ನಾಗರೀಕತೆಗಳನ್ನು, ಸಂಕೀರ್ಣವಾದ ಸಂಸ್ಕೃತಿಯನ್ನು ಪಡೆದಿರುವ ಸಮಾಜಗಳಲ್ಲಿ ಮೂಲಭೂತ ಸಾಮಾಜಿಕ ಅಂಶಗಳೂ ಆಳದಲ್ಲಿ ಮರೆಯಾಗಿ ಅಡಗಿ ಕುಳಿತಿರುತ್ತವೆ. ಸರಳ ಹಾಗೂ ಮಿತವಾದ ಜನಾಂಗಗಳಲ್ಲಿ ಈ ಸಾಮಾಜಿಕ ಸಂಗತಿಗಳು ಸ್ಫುಟವಾಗಿ ನಿಚ್ಚಳವಾಗಿ ಕಂಡುಬರುತ್ತದೆ. ಸರಳ ಸಮಾಜಗಳಲ್ಲಿ ಸಾಮಾಜಿಕ ಜೀವನ, ಅದರ ನಡೆ, ಹಿಂಜರಿಕೆ, ಏಳು-ಬೀಳುಗಳು ಇವೆಲ್ಲವನ್ನು ಗುರುತಿಸಿಕೊಳ್ಳಬಹುದು. ಜನಾಂಗಗಳ ಅಧ್ಯಯನದಿಂದ ಸಮಾಜಗಳು ರೂಢಿಸಿಕೊಂಡಿರುವ ಸಂಸ್ಕೃತಿ ಮತ್ತು ಸಮಾಜ ವ್ಯವಸ್ಥೆಗಳ ವೈಶಿಷ್ಟ್ಯಗಳನ್ನು ಗುರುತಿಸಬಹುದು. ಬೇರೆ ಬೇರೆ ಸಮಾಜಗಳ ಜೀವನದ ಮಹತ್ವ ನಡುವಿನ ಸಂಬಂಧ ನೋಡಬಹುದಾಗಿದೆ.

ಭಾರತೀಯ ಜನಾಂಗಗಳ ಮೇಲೆ ಆಧುನಿಕತೆಯ ಪರಿಣಾಮಗಳ ಅಧ್ಯಯನ ಬಹಳ ಮುಖ್ಯವಾದುದು. ಜನಾಂಗಗಳು ಆಧುನಿಕ ವ್ಯವಸ್ಥೆಯನ್ನು ಸಂಪೂರ್ಣವಾಗಿ ಒಪ್ಪಿಕೊಂಡಿರುವುದರಿಂದ ಅನೇಕ ಬದಲಾವಣೆಗಳನ್ನು ನೋಡಬಹುದಾಗಿದೆ. ಇದಕ್ಕೆಲ್ಲಾ ಕಾರಣ ಮನುಷ್ಯ ಇತರ ಜೀವಿಗಳಿಗಿಂತ ಭಿನ್ನವಾಗಿದ್ದಾನೆ. ಈತ ಸಂಸ್ಕೃತಿ ಮತ್ತು ಸಮಾಜವನ್ನು ರೂಢಿಸಿಕೊಂಡಿರುವುದರಿಂದ ಪಲ್ಲಟಗಳು ಅನಿವಾರ್ಯವಾಗಿದೆ. ಅನೇಕ ಬಗೆಯ ಸಂಸ್ಕೃತಿಯನ್ನು, ಬೇರೆ ಬೇರೆ ಗುಣಲಕ್ಷಣಗಳನ್ನು ಹೊಂದಿದ ಜನಾಂಗಗಳಿವೆ. ಎಲ್ಲಾ ಸಂಸ್ಕೃತಿಗಳು ವೈವಿಧ್ಯಮಯ ವಿಭಿನ್ನತೆಗಳನ್ನು ಹೊಂದಿರುವುದು ಒಂದು ವಿಶೇಷ ಎನ್ನಬಹುದು.

ಪಾಶ್ಚಾತ್ಯರು ಭಾರತಕ್ಕೆ ಬರುವ ಮುಂಚೆ ಇಲ್ಲಿ ಜನಪದ ಸಂಸ್ಕೃತಿಯ ಬಗೆಗೆ ಇದ್ದ ಪೂರ್ವಾಗ್ರಹಗಳು ಬ್ರಿಟಿಷರ ಆಗಮನದಿಂದ ಏನೇನು ಬದಲಾಗಲಿಲ್ಲ. ಇವರ ಆಳ್ವಿಕೆಯೊಂದಿಗೆ ಅಲ್ಲಿಯ ಶಿಕ್ಷಣ, ನ್ಯಾಯ ಪದ್ಧತಿ, ಆಡಳಿತ ಪದ್ಧತಿ ಎಲ್ಲವನ್ನು ತಂದರು. ಬ್ರಿಟಿಷರು ಭಾರತದಲ್ಲಿ ಶಿಕ್ಷಣವನ್ನು ಸಾರ್ವತ್ರಿಕಗೊಳಿಸಿದರು. ಅವರ ಮೂಲ ಉದ್ದೇಶವೇ ಬೇರೆಯಾಗಿತ್ತು. ಅವರ ಆಡಳಿತಕ್ಕೆ ಕಾರಕೂನರ ಅಗತ್ಯತೆ ಕಾರಣವಾಗಿತ್ತು. ಈ ವಿದ್ಯಾಭ್ಯಾಸಕ್ಕೆ ಮೊದಲು ಪ್ರವೇಶ ಪಡೆದವರು ಬ್ರಾಹ್ಮಣರು. ಇವರ ಮೂಲಕ ತಮ್ಮ ಆಡಳಿತ ನಿಯಂತ್ರಣ ಮಾಡುವುದು ಸುಲಭವಾಗಿತ್ತು. ಕೆಳವರ್ಗಗಳು ಇದರಿಂದ ವಂಚಿತವಾದವು. ಈ ವರ್ಗಗಳು ಸಮಾಜದ ಪ್ರಮುಖವಾಹಿನಿಗೆ ಬರಲಾಗಲಿಲ್ಲ. ದೀವರ ಜನಾಂಗದ ಇತಿಹಾಸವನ್ನು ಕೆದಕಿದರೆ ೧೯೪೦-೫೦ರ ದಶಕದಲ್ಲಿ ಊರಿಗೆ ಒಬ್ಬ ಮಾತ್ರ ಎರಡನೆ ತರಗತಿ ಓದಿದ ವಿದ್ಯಾವಂತರನ್ನು ಗುರುತಿಸಬಹುದಾಗಿತ್ತು. ಈ ಕುಲದಲ್ಲಿ ಗಣಪತಿಯಪ್ಪನವರು ಸಾಗರ, ಸಿದ್ದಾಪುರದ ದೀವರ ಜನಾಂಗದಲ್ಲಿ ಮೆಟ್ರಿಕ್ ಓದಿದ ವಿದ್ಯಾವಂತ ಮತ್ತು ಮಾಸ್ತರು ಆಗಿರುವುದು ಒಂದು ವಿಶೇಷವೇ ಆಗಿತ್ತು. ಇಡೀ ಶಿವಮೊಗ್ಗ ಜಿಲ್ಲೆಯಲ್ಲಿ ದೀವರು ಅಧಿಕ ಸಂಖ್ಯೆಯಲ್ಲಿದ್ದರು ಹಾಗೂ ಗೇಣಿರೈತರಾಗಿದ್ದ ಇವರು ೧೯೫೦-೫೧ರಲ್ಲಿ ಗಣಪತಿಯಪ್ಪನವರ ನೇತೃತ್ವದಲ್ಲಿ ಸಂಘಟಿತರಾಗಿ ಕಾಗೋಡು ಸತ್ಯಾಗ್ರಹ ಎಂಬ ದಾಖಲೆಯ ಹೋರಾಟ ಮಾಡಿರುವುದು ಏಕವ್ಯಕ್ತಿ ವಿದ್ಯಾವಂತ ನಾದ್ದರಿಂದ ಎಂಬುದು ಸಹ ದಾಖಲೆಯ ವಿಷಯವೇ ಆಗಿದೆ.

ಬ್ರಿಟಿಷ್ ಶಿಕ್ಷಣ ಪದ್ಧತಿ ಸೀಮಿತ ದೃಷ್ಟಿಕೋನ ಹೊಂದಿತ್ತು. ಶಿಕ್ಷಣ ಪದ್ಧತಿಯಲ್ಲಿ ಶಿಷ್ಟ ಪರಂಪರೆಯ ಸಾಹಿತ್ಯವಿತ್ತು ವಿನಃ ಸಾಂಸ್ಕೃತಿಕ ಮಹತ್ವ ಇರಲಿಲ್ಲ. ಜನಪದ ಸಂಸ್ಕೃತಿಯ ಭಾಗಗಳು ಶಿಕ್ಷಣದಲ್ಲಿ ಶಿಸ್ತೀಯ ಅಧ್ಯಯನಕ್ಕೆ ಒಳಪಡಲಿಲ್ಲ. ಪರಿಚಯಿಸುವ ಉದ್ದೇಶವು ಯಾರಿಗೂ ಇರಲಿಲ್ಲ. ಆದರೆ ಕೆಲ ಆಂಗ್ಲ ಅಧಿಕಾರಿ

ಗಳು ಜನಾಂಗದ ಪೂರ್ವಾಪರದ ಬಗ್ಗೆ ಆಸಕ್ತಿಯನ್ನು ಹೊಂದಿದ್ದರು. ಸ್ವಾತಂತ್ರ ಶಿಕ್ಷಣ ಕೂಡ, ವಸಾಹತು ಶಾಹೀ ಮನೋಧರ್ಮದ ಶಿಕ್ಷಣ ಮುಂದುವರೆಯುತ್ತಾ ಬಂದಿದೆ. ಈ ಪದ್ಧತಿಯಿಂದ ನಮ್ಮವರು ಹೊರಬರದೆ ಪುರೋಹಿತಶಾಹಿ ಮೌಲ್ಯಗಳನ್ನು ಒಳಗೊಂಡ ವಸಾಹತುಶಾಹಿ ಶಿಕ್ಷಣ ಮುಂದುವರೆದು ಭಾರತದ ರಾಷ್ಟ್ರೀಯತೆ ಮತ್ತು ಸಾಂಸ್ಕೃತಿಕ ಅನನ್ಯತೆಯ ಪ್ರಶ್ನೆಗಳು ಉದ್ಭವಿಸುವಂತೆ ಮಾಡಿದವು. ಭಾರತದಲ್ಲಿ ಈ ಎರಡು ಪರಂಪರೆಗಳು ಭಾರತೀಯ ಸಾಮಾಜಿಕ ಮಾತ್ತು ಬೌದ್ಧಿಕ ನೆಲೆಗಳ ಮೇಲೆ ಅಪಾರ ಪರಿಣಾಮವನ್ನುಂಟುಮಾಡಿ ಭಾರತದ ಒಳಗಡೆ ಇರುವ ಸಂಸ್ಕೃತಿಗಳನ್ನು ನೋಡುವಿಕೆಯಲ್ಲಿ ಒಂದು ಸೀಮಿತ ದೃಷ್ಟಿಕೋನವನ್ನು ತಂದು ಕೊಟ್ಟವು. ಬುಡಕಟ್ಟು ಮತ್ತು ಹಿಂದುಳಿದ ವರ್ಗಗಳಿಗೆ ಒಂದು ಸಂಸ್ಕೃತಿ ಇದೆ ಎಂಬುದನ್ನು ಪರಿಗಣಿಸದೆ ಅವರನ್ನೆ ಸಂಸ್ಕೃತೀಕರಣಕ್ಕೆ ಒಳಗು ಮಾಡುವುದಕ್ಕೆ ಪ್ರಯತ್ನಿಸಿದರು. ಈ ಗುಂಪುಗಳಲ್ಲಿ ಇದ್ದ ಮಾನವೀಯ, ಧಾರ್ಮಿಕ ಮೌಲ್ಯಗಳನ್ನು ಗುರುತಿಸದೆ ಅವುಗಳನ್ನು ಸಾರಸಗಟಾಗಿ ತಿರಸ್ಕರಿಸಲಾಯಿತು. ಪುರೋಹಿತಶಾಹಿ ಮತ್ತು ವಸಾಹತುಶಾಹಿ ಪರಂಪರೆಯಿಂದ ಉಳಿದ ಪರಂಪರೆಗಳು ಬೂದಿ ಮುಚ್ಚಿದ ಕೆಂಡದಂತೆ ಅಗೋಚರ ವಾದವು. ಜನಾಂಗಗಳ ಅಧ್ಯಯನವನ್ನು ಪ್ರತಿಯೊಂದು ಜನಾಂಗಗಳ ಸಂಸ್ಕೃತಿ ತಿಳಿಯುವುದಕ್ಕಾಗಿ, ಮತ್ತು ಒಟ್ಟಾರೆ ಮಾನವ ಸಂಸ್ಕೃತಿಯ ಸ್ವರೂಪವೇನು ಎಂಬುದನ್ನು ತಿಳಿಯುವ ಉದ್ದೇಶದಿಂದ ಮಾಡಲಾಗುತ್ತದೆ. ಅಧ್ಯಯನದಿಂದ ಸಂಸ್ಕೃತಿಯ ಸ್ವರೂಪ, ಕಾರ್ಯ ವ್ಯಾಪ್ತಿಯನ್ನು ಅರಿಯಲು ಸಾಧ್ಯ.

ಶಿಷ್ಟ ಸಾಹಿತ್ಯ ಪರಂಪರೆಯು ಮೇಲ್ವರ್ಗ ಮತ್ತು ರಾಜಮಹಾರಾಜರುಗಳ ಭವ್ಯಭೋಗದ ನೆಲೆಯಲ್ಲಿ ಸೃಷ್ಟಿಯಾಗಿ, ಅವರನ್ನೇ ಉದಾತ್ತೀಕರಿಸುವ ಕೆಲಸವನ್ನು ಮಾಡಿವೆ. ಅಲ್ಲಿ ಜನ ಸಾಮಾನ್ಯರ ಜೀವನದ ರೀತಿ ನೀತಿಗಳ, ಸಾಹಿತ್ಯ, ಸಂಸ್ಕೃತಿಗಳ ಉಲ್ಲೇಖಗಳು ದೊರೆಯುವುದಿಲ್ಲ. ಆದುದರಿಂದಲೇ ನಮ್ಮ ಸಾಹಿತ್ಯಗಳಲ್ಲೇ ಒಂದು ವರ್ಗದ ಮನೋವೃತ್ತಿಯನ್ನು ತಿಳಿಸುವ ಸಾಹಿತ್ಯ ಮತ್ತು ಸಂಸ್ಕೃತಿಗಳಾಗಿ ಪರಿಗಣಿತವಾಗಿದೆ. ಇದಕ್ಕೆ ಆಧಾರವಾಗಿ ನಮ್ಮಲ್ಲಿ ದೊರೆಯುವ ಶಾಸನಗಳನ್ನು ಕೂಡಾ ನೀಡಬಹುದು. ಈ ಶಾಸನಗಳೆಲ್ಲ ಮುಖ್ಯವಾಗಿ ಯುದ್ಧ, ಬಲಿದಾನ, ತ್ಯಾಗ, ದಾನಗಳಿಗೆ ಸಂಬಂಧಪಟ್ಟಿರುವವುಗಳು. ಜನಸಾಮಾನ್ಯರಲ್ಲಿ ಯಾರಾದರೊಬ್ಬರು ಅಸಾಮಾನ್ಯ ಸಾಧನೆಯನ್ನು ಮಾಡಿ ಪ್ರಾಣತ್ಯಾಗವನ್ನು ಮಾಡಿದರೆ ಅವನ ಬಲಿದಾನದ ಕುರಿತಾದ ಉಲ್ಲೇಖ ಸಿಗುತ್ತದೆಯೇ ಹೊರತು ಅವನ ತ್ಯಾಗದ ಹಿಂದಿನ ಮನಸ್ಸನ್ನು ಅರ್ಥಮಾಡಿಕೊಳ್ಳುವ ಪ್ರಯತ್ನಕ್ಕೆ ತೊಡಗಿಲ್ಲ. ಹೀಗೆ ದೇಶದ ಇತಿಹಾಸ, ಸಾಹಿತ್ಯ, ಶಾಸನಗಳೆಲ್ಲ ಕೇವಲ ಒಂದು ಪಾರ್ಶ್ವದ ದಾಖಲೆಗಳಾಗಿವೆ. ಈ ರೀತಿಯ ಜೀವನಕ್ಕೆ ಭಿನ್ನವಾಗಿ ಬದುಕಿದ ಜನ ಅನಾದಿ ಕಾಲದಿಂದಲೂ ಇದ್ದರು. ಅವರ ಜೀವನ ಚರಿತ್ರೆಯ ನ್ನಾಗಲಿ, ಅವರ ಸಾಹಿತ್ಯವನ್ನಾಗಲಿ ಅವರ ಸಂಸ್ಕೃತಿಯನ್ನಾಗಲೀ ಗಮನಿಸಿದಂತೆ ಕಂಡುಬರುವುದಿಲ್ಲ. ಈ ಕಡೆಗಣಿಸಿರುವ ಸಂಸ್ಕೃತಿಯನ್ನು ಅರಿಯಬೇಕಾದರೆ ನಾವಿಂದು ಜನರ ಬದುಕಿನ ಕಡೆಗೆ ನೋಡಬೇಕಾಗಿದೆ. ಅಲ್ಲಿ ಅವರು ಬದುಕಿರುವುದು ಬದುಕುತ್ತಿರುವುದು ವಾಸ್ತವ. ಆ ವಾಸ್ತವದ ಮುಖವನ್ನು ಪರಿಚಯ ಮಾಡಿಕೊಳ್ಳಬೇಕಾದರೆ ಭಾರತದಲ್ಲಿ ಕಡೆಗಣಿಸಲ್ಪಟ್ಟ ಜಾತಿಗಳ ಸಾಂಸ್ಕೃತಿಕ ಅಧ್ಯಯನವನ್ನು ಮಾಡಬೇಕಾ ಗುತ್ತದೆ. ಜನರ ಸುಖ-ದುಃಖ, ಹಬ್ಬ-ಆಚರಣೆಗಳು ಯಾವ ರೀತಿ ಎಂಬುದನ್ನು ತಿಳಿಯಬೇಕು. ಪರಂಪರಾಗತ ವಾಗಿ ಹರಿದು ಬಂದಿರುವ ಈ ಸಂಸ್ಕೃತಿ ಇತಿಹಾಸದ ಇನ್ನೊಂದು ಮುಖವನ್ನು ಪರಿಚಯಿಸುತ್ತದೆ. ಈ ರೀತಿ ಜನಾಂಗಗಳನ್ನು ಅಧ್ಯಯನಕ್ಕೆ ಒಳಪಡಿಸಿದಾಗ ಭಾರತದಲ್ಲಿ 'ಸಂಸ್ಕೃತಿ'ಯ ಬಗೆಗಿನ ಕಲ್ಪನೆಗಳೇ ಬೇರೆ ಯಾಗುತ್ತವೆ ಮತ್ತು

ಕೆಳಜಾತಿಗಳ ಸಂಸ್ಕೃತಿಗಳ ಬಗೆಗಿನ ಕಲ್ಪನೆಗಳೇ ಬೇರೆಯಾಗುತ್ತವೆ. ಈ ಅಲಿಖಿತ ಇತಿಹಾಸ ಹೊಂದಿರುವ ಸಂಸ್ಕೃತಿಯ ಅಧ್ಯಯನದ ಒಂದು ಭಾಗವಾಗಿರುವ ದೀವರ ಜನಾಂಗದ ಸ್ಥಿತ್ಯಂತರ ಗಳನ್ನು ಪ್ರಸ್ತುತ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ನಮ್ಮ ಚರಿತ್ರೆಯನ್ನು ಗಮನಿಸಿದರೆ ಅನೇಕ ಆಕ್ರಮಣ, ದಬ್ಬಾಳಿಕೆ, ಸಂಘರ್ಷಗಳು ಕಂಡುಬರುತ್ತವೆ. ಮೂಲನಿವಾಸಿಗಳ ಮೇಲೆ ದ್ರಾವಿಡರ ಆಕ್ರಮಣ, ನಂತರ ಆರ್ಯರು, ಮಂಗೋಲಿಯನ್ನರು, ಮುಸ್ಲಿಮರು, ಆಂಗ್ಲರು, ಡಚ್ಚರು, ಪೋರ್ಚುಗೀಸರು ಹೀಗೆ ಅನೇಕರ ದಾಳಿಗೆ ಈ ನೆಲ ಪ್ರತ್ಯಕ್ಷ ಮೂಕ ಸಾಕ್ಷಿಯಂತಿತ್ತು. ಭಾರತದ ಸಾಂಸ್ಕೃತಿಕ ಚರಿತ್ರೆಯಲ್ಲಿ ಹತ್ತೊಂಬತ್ತನೆಯ ಶತಮಾನದ ಕೊನೆ ಮತ್ತು ಇಪ್ಪತ್ತನೆಯ ಶತಮಾನದ ಆರಂಭದ ಕೆಲ ದಶಕಗಳವರೆಗೆ ಭಾರತೀಯ ಜನಾಂಗಗಳ ಮೇಲೆ ಬರಿ ದಾಳಿಯೊಂದೆ ಅಲ್ಲದೆ ರಾಜಕೀಯ ಆಡಳಿತವು ಬ್ರಿಟಿಷರಿಂದ ಹೇರಲ್ಪಟ್ಟಿತು. ಪ್ರಾದೇಶಿಕವಾಗಿ ಭಿನ್ನವಾಗಿ ಬೇರೆ ಬೇರೆ ಆಡಳಿತಕ್ಕೆ ಒಳಪಟ್ಟಿದ್ದ ದೇಶಿಯ ಆಡಳಿತ ಮತ್ತು ಭಾರತೀಯ ಜನಾಂಗವು ಒಂದು ಹೊರಗಿನ ಶಕ್ತಿಯ ಹಿಡಿತಕ್ಕೆ ಸಿಲುಕಿತು. ಹೀಗಾಗಿ ಭಾರತೀಯ ಜೀವನ ಕ್ರಮ ಅನೇಕ ಹೊಸ ಹೊಸ ಸ್ವರೂಪಗಳನ್ನು ಪಡೆದುಕೊಂಡಿತು. ಬ್ರಿಟಿಷರ ರಾಜಕೀಯ ವಿಸ್ತಾರಕ್ಕೆ ಭಾರತದಲ್ಲಿ ತೊಡರುಗಾಲು ಹಾಕಿದವರು ಬುಡಕಟ್ಟು ನಿವಾಸಿಗಳು.[1] ಅನೇಕ ಯುದ್ಧ ಗಳಲ್ಲಿ ಬ್ರಿಟಿಷ್ ಸೈನ್ಯ ಆದಿವಾಸಿಗಳ ಯುದ್ಧ ನೈಪುಣ್ಯತೆಯಿಂದ ಸೋಲಬೇಕಾಯಿತು. ಇವರ ಯುದ್ಧತಂತ್ರ ಬ್ರಿಟಿಷರನ್ನು ಚಕಿತಗೊಳಿಸಿತು. ಇದಕ್ಕೆಲ್ಲಾ ಈ ಜನಾಂಗಗಳು ರೂಢಿಸಿಕೊಂಡು ಬಂದಿದ್ದ ಜೀವನ ಕ್ರಮ, ಅರಣ್ಯದೊಂದಿಗಿನ ಅವರ ನಿಕಟ ಸಂಬಂಧ ಮುಂತಾದವು, ಬದುಕನ್ನು ಗಟ್ಟಿಗೊಳಿಸಿದವು. ಅರಣ್ಯ ಮತ್ತು ಆದಿವಾಸಿ ಜನಾಂಗಗಳೆರಡು ಬೇರೆಯಾದರೆ ಆದಿವಾಸಿಗಳ ಜೀವನ ಮೌಲ್ಯಗಳು ಕುಸಿಯಲು ಪ್ರಾರಂಭಿಸುತ್ತವೆ ಎಂಬುದನ್ನು ಬ್ರಿಟಿಷ್ ಆಡಳಿತ ಕಂಡುಕೊಂಡಿತು. ಇಲ್ಲಿಂದ ಅರಣ್ಯಗಳು ವಸಾಹತು ಆಡಳಿತದಲ್ಲಿ ಸೇರಿ ಹೋಗಿ ರಾಷ್ಟ್ರೀಕರಣಗೊಳಿಸಿದವು. ಆದಿವಾಸಿಗಳ ಜೀವನ ಕ್ರಮಕ್ಕೆ, ತಳಪಾಯಕ್ಕೆ ಬಲವಾದ ಪೆಟ್ಟು ಬಿದ್ದಿತು. ಕಾನೂನಿನ ವ್ಯವಸ್ಥೆಯೊಳಗೆ ಈ ತರಹದ ಜನಾಂಗಗಳನ್ನು ಮೊದಲ ಒಕ್ಕಲೆಬ್ಬಿಸುವ ಕ್ರಿಯೆ ವಸಾಹತು ಸರ್ಕಾರದಿಂದ ಪ್ರಾರಂಭವಾಯಿತು. ಅತಂತ್ರರಾದ ಇವರು ಪುರೋಹಿತಶಾಹಿ ಮತ್ತು ಉಳ್ಳವರ ಕೆಳಗೆ ಕೃಷಿ ಕೂಲಿಗಳಾಗಿ ಬದುಕುವ ವ್ಯವಸ್ಥೆ ರೂಪುಗೊಂಡಿತು. ಅನೇಕ ಜನಾಂಗಗಳ ಸಂಪ್ರದಾಯ ಆಚರಣೆಗಳಲ್ಲಿ ಯಾವಾಗ ಪುರೋಹಿತಶಾಹಿ ಪೌರೋಹಿತ್ಯವನ್ನು ವಹಿಸುವುದರೊಂದಿಗೆ ಬುಡಕಟ್ಟುಗಳು ಜಾತಿಗಳಾಗಿ ರೂಪಾಂತರಗೊಂಡವು. ಭಾರತದ ಹಿಂದುಳಿದ ವರ್ಗಗಳಲ್ಲಿ ಹೆಚ್ಚಿನ ವರ್ಗಗಳ ಮೂಲ "ಬುಡಕಟ್ಟು" ಆಗಿದೆ. ಈ ಪಲ್ಲಟಗಳಿಗೆ ರಾಜಕೀಯವಲ್ಲದೆ ಧರ್ಮವು ಸಹ ಕಾರಣವಾಗಿದೆ. ಬುಡಕಟ್ಟು ಮತ್ತು ಹಿಂದುಳಿದ ಜಾತಿಗಳ ಸಾಂಸ್ಕೃತಿಕ ದ್ರವ್ಯಗಳನ್ನು ಸ್ವಲ್ಪ ಗಮನಿಸಿದರೆ ಹಿಂದುಳಿದ ಜಾತಿಗಳು ಕಂದಮಿಳ, ದ್ರಾವಿಡ ಗುಂಪಿಗೆ ಸೇರಿದಂತವು. ಇವರು ಮರ, ನೀರು, ಪಶುಪತಿ, ಮಾರುತಿ ಪೂಜೆ ಮಾಡುವವರು. ತಾಯಿ ಎಲ್ಲಮ್ಮ, ಶಾಕ್ತ ಪರಂಪರೆ ಇಲ್ಲಿ ಕಂಡುಬರುವುದು. ಮುನಿ ಸಂಪ್ರದಾಯ, ತಪಸ್ಸು, ಯೋಗ ಮುಂತಾದ ದೇಹ ದಂಡನೆಯ ವಿಧಾನಗಳು ಕಂಡುಬರುತ್ತವೆ. ಕ್ರಿಯಾಶೀಲ ವ್ಯಕ್ತಿಗಳಾದ ಇವರು ಲಲಿತಕಲೆ ಮತ್ತು ಜಾನಪದ ಸಾಹಿತ್ಯದ ಸೃಷ್ಟಿಕರ್ತರು. ಕೆಲವರು ರಸಸಿದ್ಧಿ ಹೊಂದಿದ್ದು ಪಾಂಚಾಳ ಪರಂಪರೆಯನ್ನು ಹೊಂದಿರುವರು. ಹಿಂದುಳಿದ ವರ್ಗಗಳೆಲ್ಲಾ ಆಯಾಜಕರು ಅಂದರೆ ಯಜ್ಞ ವಿರೋಧಿಗಳು. ಈ ಎಲ್ಲಾ ಅಂಶಗಳನ್ನು ಹೊಂದಿರುವ

ಇವರು ಪುರೋಹಿತಶಾಹಿ ಪರಂಪರೆಯಿಂದ ಬದಲಾಗಿರುವರು. ಇಲ್ಲಿ ಸಂಸ್ಕೃತಿ ಕಳೆದುಕೊಳ್ಳುವ ಸ್ಥಿತಿ ನಿರ್ಮಾಣವಾಗದೆ, ರೂಢಿಸಿಕೊಳ್ಳುವ ಮತ್ತು ವೈವಿಧ್ಯತೆಯನ್ನು ಪಡೆದುಕೊಂಡಿದೆ.

ಬುಡಕಟ್ಟು ಮತ್ತು ಹಿಂದುಳಿದ ಜನಾಂಗಗಳ ಮೇಲೆ ಇತ್ತೀಚಿನ ದಿನಗಳಲ್ಲಿ ಕೈಗಾರಿಕರಣ, ಬಂಡವಾಳ ಶಾಹಿ ವ್ಯವಸ್ಥೆ ಮುಂತಾದ ಅನೇಕ ಬಗೆಯ ಅವಿಷ್ಕಾರಗಳು ಸಹ ಇವರ ಸಂಪ್ರದಾಯಿಕ ಜೀವನಕ್ರಮದ ಮೇಲೆ ಬದಲಾವಣೆಯನ್ನು ತಂದಿತು. ಸರಳ ಜೀವನ, ಸುಂದರ ಬದುಕು ಎಂಬ ವ್ಯವಸ್ಥೆಯಲ್ಲಿದ್ದ ಇವರು ಆರ್ಥಿಕ ಅಭಿವೃದ್ಧಿ ಎಂಬ ಮರೀಚಿಕೆಯ ಕರಾಳ ಹಸ್ತಕ್ಕೆ ಸಿಲುಕಿ ಜೀವನ ಕ್ರಮದಲ್ಲಿ ಅಗಾಧ ಬದಲಾವಣೆಯಾಯಿತು. ಬಂಡವಾಳಶಾಹಿ ಜಗತ್ತಿನಲ್ಲಿ ಮನುಷ್ಯ ಸಹ ಯಂತ್ರವಾಗುತ್ತಾನೆ. ಅವನನ್ನು ಭೌತಿಕ ವಸ್ತು ಎಂದು ಪರಿಗಣಿಸಲಾಗುತ್ತದೆ. ನೈಸರ್ಗಿಕ ಸಂಪನ್ಮೂಲ ಆದಾಯ ಗಳಿಕೆಯ ಮಾರ್ಗವಾಗಿ ನಶಿಸಲು ಪ್ರಾರಂಭಿಸುತ್ತದೆ. ಇದಕ್ಕೆಲ್ಲಾ ಕಾರಣ ವಸಾಹತು ನೀತಿಯನ್ನು ನಮ್ಮ ಸರ್ಕಾರಗಳು 'ಕರಗ' ಎಂಬಂತೆ ಹೊತ್ತು ಮೆರೆಯುತ್ತಿರುವುದರಿಂದ ಇಲ್ಲಿಯ ಶಿಕ್ಷಣ ಮತ್ತು ರಾಜಕೀಯಕ್ಕೆ ವಸಾಹತು ಆಡಳಿತದ ಅಭಿಪ್ರಾಯ ಇದೆ. ಹೀಗೆ ಆಧುನಿಕತೆ, ಬಂಡವಾಳಶಾಹಿ ವ್ಯವಸ್ಥೆ ರಾಜಕೀಯ ವ್ಯವಸ್ಥೆ, ಇವುಗಳೆಲ್ಲ ಭಾರತೀಯ ಸಮಾಜಕ್ಕೆ ಪ್ರವೇಶಿಸಿದ ನಂತರದಲ್ಲಿ ಬುಡಕಟ್ಟು ಮತ್ತು ಹಿಂದುಳಿದ ಜಾತಿಗಳ ಸ್ಥಿತಿಗತಿ ಏನು? ಸಂಸ್ಕೃತಿಯಲ್ಲಿ ಆದ ಮಾರ್ಪಾಟುಗಳೇನು? ಎಂಬ ವಿಷಯಗಳ ಬಗ್ಗೆ ಅಧ್ಯಯನ ಮಾಡಬೇಕಾಗುತ್ತದೆ. ಈ ಎಲ್ಲಾ ಹಿನ್ನೆಲೆ ಜನಾಂಗೀಯ ಅಧ್ಯಯನಕ್ಕೆ ಪ್ರಸ್ತುತವಾಗಿದೆ.

ಇತ್ತೀಚಿನ ದಿನಗಳಲ್ಲಿ 'ಜಾಗತೀಕರಣ' ಎಂಬ ಮಾಯಾ ಕನ್ನಡಿಯಲ್ಲಿ ಅನೇಕ ಭಿನ್ನತೆಗಳು, ಎಲ್ಲೆಗಳು, ಕಾಣೆಯಾಗುವ ಸಂಭವವಿದೆ. ಜಾಗತೀಕರಣ ಎಂದರೆ ಜಗತ್ತು ಒಂದು ಗ್ರಾಮವಾಗುವ, ಮನೆಯಾಗುವ ಪ್ರಕ್ರಿಯೆ ಎನ್ನಬಹುದು. ಜಾಗತೀಕರಣದ ಸ್ವರೂಪದ ಬಗ್ಗೆ ಚಂದ್ರಶೇಖರ ಕಂಬಾರರು "ಮನೆಯೆಂದರೆ ಬಾಗಿಲು, ಕಿಟಕಿ, ಗೋಡೆಗಳನ್ನು ಬಳಸಿ ಕಟ್ಟಿರುತ್ತೇವೆ. ಗೋಡೆ ರಕ್ಷಣೆಗೆ, ಕಿಟಕಿ ಗಾಳಿ ಬೆಳಕು ದೊರೆಯಲು, ಬಾಗಿಲು ಹೊರ ಜಗತ್ತಿನ ಸಂಪರ್ಕ ಹೊಂದಲು ಇರುತ್ತದೆ. ಗೋಡೆ, ಕಿಟಕಿಯನ್ನು ತೆಗೆದು ಬರಿ ಬಾಗಿಲುಗಳನ್ನು ಜೋಡಿಸಿ ಮನೆ ನಿರ್ಮಾಣ ಮಾಡಿದರೆ, ಮನೆಯ ಉದ್ದೇಶ ಹಾಳಾಗುತ್ತದೆ. ರಕ್ಷಣೆಗೆ ಪರದಾಡಬೇಕಾಗುತ್ತದೆ." ಇದೇ ಜಾಗತೀಕರಣದ ಸ್ವರೂಪ ಎಂದು ಸಾಗರದ ಕಾಗೋಡು ರಂಗಮಂಚದ ಅಭಿನಂದನಾ ಸಮಾರಂಭದಲ್ಲಿ ಹೇಳಿರುವ ಮಾತು ಅರ್ಥಪೂರ್ಣವಾದಂತಹದು. ಈ ವ್ಯವಸ್ಥೆಯಲ್ಲಿ ಅಭಿವೃದ್ಧಿ ಹೊಂದಿದ ರಾಷ್ಟ್ರಗಳು ಬದುಕುತ್ತವೆ ಮತ್ತು ಬೆಳೆಯುತ್ತವೆ. ಉಳಿದ ರಾಷ್ಟ್ರಗಳು ಬೆಳೆಯದೆ ಮುರುಟಿ ಹೋಗುವ ಸಾಧ್ಯತೆಯೇ ಹೆಚ್ಚು. ಇಂತಹ ವಿಚಿತ್ರ ಸನ್ನಿವೇಶದಲ್ಲಿ ಬುಡಕಟ್ಟು ಮತ್ತು ಹಿಂದುಳಿದ ಜಾತಿಗಳು ಹೇಗೆ ಎದುರಿಸುತ್ತಿವೆ? ಮುಂತಾದ ಆಲೋಚನೆಗಳ ಅವಶ್ಯಕತೆಯಿದೆ. ಅಂತರ್ಜಾಲವೆಂಬ ತಂತ್ರಜ್ಞಾನದಿಂದ ಜಗತ್ತಿನ ಒಂದು ಮೂಲೆಯಿಂದ ಇನ್ನೊಂದು ಮೂಲೆಯನ್ನು ನಿಮಿಷಾರ್ಧದಲ್ಲಿ ತಲುಪುವ ವ್ಯವಸ್ಥೆ ಇತ್ತೀಚಿನ ದಿನಗಳಲ್ಲಿ ಲಭ್ಯವಿದೆ. ಸಮರೋಪಾದಿಯಲ್ಲಿ ಎಲ್ಲಾ ರಾಷ್ಟ್ರಗಳು ಈ ವ್ಯವಸ್ಥೆಯಲ್ಲಿ ಕಾಣಿಸಿಕೊಳ್ಳುವುದರಿಂದ ಜಗತ್ತು ಒಂದು ಗ್ರಾಮವಾಗುವ ಪರಿಕಲ್ಪನೆ ಹುಟ್ಟಿಕೊಂಡಿದೆ. ಲಾಭ-ನಷ್ಟಗಳ ಅಪಾಯದಿಂದ ಉದ್ಭವಿಸುವ ಸ್ವರೂಪವನ್ನು ತಿಳಿಯಲು ಅಧ್ಯಯನಗಳಾಗುತ್ತಿವೆ. ನಮ್ಮಲ್ಲಿಯ ಬಹುರೂಪಿ ಸಂಸ್ಕೃತಿಯ ತಾಕಲಾಟ,

ತಳಮಳವನ್ನು ಗುರುತಿಸಬೇಕಾಗುತ್ತದೆ. ಈ ಎಲ್ಲಾ ಕಾರಣಗಳಿಂದಾಗಿ ಸಮುದಾಯಗಳಲ್ಲಿ ಸ್ಥಿತ್ಯಂತರಗಳೇರ್ಪಟ್ಟಿದೆ. ಕಾಲದಿಂದ ಕಾಲಕ್ಕೆ ಬದಲಾಗುತ್ತಾ ತಮ್ಮ ಅನನ್ಯತೆಯನ್ನು ಉಳಿಸಿಕೊಂಡು ಬಂದಿವೆ. ಆದಿಮ ಸಂಸ್ಕೃತಿ ಮತ್ತು ಆಧುನಿಕ ವಾಸ್ತವಗಳು ಮುಖಾಮುಖಿಯಾದಾಗ ಈ ಜನಾಂಗಗಳು ಅನುಸರಿಸಿ ಕೊಂಡು ಬಂದಿದ್ದ ಆಚರಣೆಗಳು, ಸಂಪ್ರದಾಯಗಳು ನಂಬಿಕೆಗಳು ಸಂಘರ್ಷಕ್ಕೆ ಈಡಾಗುತ್ತದೆ. ಈ ಎಲ್ಲಾ ಅಂಶಗಳನ್ನು ಪರಿಗಣಿಸಬೇಕಾಗುತ್ತದೆ.

ದೀವರ ಜನಾಂಗ ಹಲವು ವಿಶಿಷ್ಟ ಜನಾಂಗಗಳಲ್ಲೊಂದು ರಾಜ್ಯದಲ್ಲಿ ಮೀಸಲಾತಿ ವರ್ಗೀಕರಣದ ಸಂದರ್ಭದಿಂದಾಗಿ ಆರ್ಥಿಕವಾಗಿ ವ್ಯತ್ಯಾಸಗಳಿರುವ ಜಾತಿಗಳನ್ನೆಲ್ಲಾ ವರ್ಗಗಳಾಗಿ ವಿಭಜಿಸಲಾಗಿತ್ತು. ಇದರಿಂದಾಗಿ ಆಯಾ ವರ್ಗದಲ್ಲಿ ಬರುವ ಜಾತಿಗಳೆಲ್ಲ ಒಂದೇ ಮೂಲದವು ಎಂಬ ಅನುಮಾನವನ್ನು ಸೃಷ್ಟಿ ಮಾಡಿತ್ತು. ಅಲ್ಲದೆ ಅನೇಕ ಕೃಷಿಕ ಜನಾಂಗಗಳೆಲ್ಲಾ ಮೇಲ್ನೋಟಕ್ಕೆ ಒಂದೇ ತೆರನಾದ ಅಂಶಗಳು ಕಂಡು ಬರುವುದು ಸರ್ವೇಸಾಮಾನ್ಯ. ಸೂಕ್ಷ್ಮವಾಗಿ ಗಮನಿಸಿದಾಗ ಅನೇಕ ವಿಭಿನ್ನತೆಗಳು ಗೋಚರಿಸುತ್ತವೆ. ಅವುಗಳನ್ನೆಲ್ಲಾ ವಿಸ್ತಾರವಾಗಿ ಮುಂದಿನ ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ. ಸ್ವಾತಂತ್ರ್ಯ ಬಂದು ೫೫ ವರ್ಷಗಳ ನಂತರದಲ್ಲಿ ಜನಾಂಗಗಳೆಲ್ಲಾ ಆರ್ಥಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ ಪರಿವರ್ತನೆಗಳಾಗುತ್ತಿವೆ. ಇವುಗಳನ್ನೆಲ್ಲಾ ಅಧ್ಯಯನ ಸಂದರ್ಭದಲ್ಲಿ ಗಮನಿಸಲಾಗಿದೆ.

## ೧.೨. ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಈ ಮಹಾಪ್ರಬಂಧದಲ್ಲಿ ಅಧ್ಯಯನದ ಅನುಕೂಲಕ್ಕಾಗಿ ದೀವರು ದಟ್ಟವಾಗಿ ಕಂಡುಬರುವ ಮಲೆನಾಡಿನ ಭಾಗವನ್ನು ಗಮನಿಸಲಾಗಿದೆ. ಸಹ್ಯಾದ್ರಿ ಪರ್ವತದ ಮಗ್ಗುಲಲ್ಲಿ ಶರಾವತಿ ನದಿಯ ಆಸುಪಾಸು ಹಾಗು ವರದಾ ನದಿಯ ದಡದಲ್ಲಿ ಕಂಡುಬರುವ ತಾಲ್ಲೂಕುಗಳಾದ ಹೊಸನಗರ, ಸಾಗರ, ಸೊರಬ ತಾಲ್ಲೂಕುಗಳನ್ನು ಮಾತ್ರ ಸೀಮಿತವಾಗಿರಿಸಿಕೊಂಡಿದ್ದೇನೆ. ಸರ್ಕಾರಿ ದಾಖಲೆಗಳಲ್ಲಿ ದೀವರು, ಈಡಿಗ ಎಂಬ ವರ್ಗದ ಅಡಿಯಲ್ಲಿ ಸೇರಿರುವುದರಿಂದ ಮತ್ತು `ಆರ್ಯ ಈಡಿಗ' ಎಂಬ ಹೆಸರಿನಲ್ಲಿ ಕೆಲ ಕೋಮುಗಳು ಸಂಘಟಿತರಾದ್ದರಿಂದ 'ಈಡಿಗ' ಜನಾಂಗದ ಪ್ರಸ್ತಾಪ ಅಲ್ಲಲ್ಲಿ ವಿರಳವಾಗಿ ಬಂದಿದೆ. ಕರಾವಳಿಯಲ್ಲಿ ಕಾಣಬರುವ ಪ್ರಮುಖ ಪಂಗಡವಾದ ತೆಂಗಿನ ದೀವರ ಪ್ರಸ್ತಾಪ ಇಲ್ಲಿ ಗೌಣವಾಗಿಸಿದೆ. ಮಲೆನಾಡಿನ ದೀವರು (ಹಳೆಪೈಕ) ಸಾಗರ ತಾಲ್ಲೂಕಿನಲ್ಲಿ ಸಂಘಟಿಸಿದ 'ರಾಷ್ಟ್ರ ದಾಖಲೆಯ ರೈತ ಹೋರಾಟ' 'ಕಾಗೋಡು ಸತ್ಯಾಗ್ರಹ' ಮತ್ತು ನಂತರ ದಲ್ಲಿ ಸಂಭವಿಸಿದ ಘಟನೆಗಳಿಗೆ ಈ ಹೋರಾಟ ಸ್ಫೂರ್ತಿಯ ಸೆಲೆಯಾಗಿ ಇವರು ಹೇಗೆ ರಾಜಕೀಯ ಆರ್ಥಿಕ ಕ್ಷೇತ್ರದಲ್ಲಿ ಸ್ವಾವಲಂಬನೆಯನ್ನು ಸಾಧಿಸಿದರು ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿನ ಪರಿವರ್ತನೆಗಳು, ವೃತ್ತಿಗಳಲ್ಲಿನ ಪಲ್ಲಟಗಳು ಹೇಗೆ ಸಂಭವಿಸಿದವು ಎಂಬುದನ್ನು ಕ್ಷೇತ್ರ ಕಾರ್ಯ ಮಾಡಿ ಸಂಗ್ರಹಿಸಲಾಗಿದೆ. ಕಾಗೋಡು, ಹಿರೇನೆಲ್ಲೂರು, ತಡಗಳಲೆ, ಶರಾವತಿ ಹಿನ್ನೀರಿನ ಗ್ರಾಮಗಳು, ಚಂದ್ರಗುತ್ತಿ ಮುಂತಾದ ಊರುಗಳು ಪ್ರಮುಖವಾಗಿ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ. ಅವರ ವಿಶಿಷ್ಟ ಹಬ್ಬಗಳು ಜನಪದ ಕಲೆ ಮತ್ತು ಸಾಹಿತ್ಯ ಎಲ್ಲವನ್ನು ಅವರೊಂದಿಗೆ ಚರ್ಚಿಸಿ ದಾಖಲು ಮಾಡಲಾಗಿದೆ. ಬುಡಕಟ್ಟು ಜಗತ್ತಿನಿಂದ ಬೇರ್ಪಟ್ಟು ಒಂದು ಜಾತಿಯಾಗಿ ಏನೆಲ್ಲಾ ಬದಲಾವಣೆಗಳಾದವು ಎಂಬುದನ್ನು ಸಮಗ್ರವಾಗಿ ಚರ್ಚಿಸಲಾಗಿದೆ.

ಮೂಲತಃ ವಲಸೆಗಾರರಾಗಿ ಸಹ್ಯಾದ್ರಿ ಪರ್ವತಗಳಲ್ಲಿ ಸೇರಿ ಬೇಟೆಗಾರರಾಗಿ ಬುಡಕಟ್ಟು ಜನಾಂಗದಂತೆ ಬದುಕು ನಿರ್ವಹಿಸುತ್ತಿದ್ದ ಜನಾಂಗ ದಿಟ್ಟತನ, ಧೀರತನದಿಂದ ಸೈನಿಕ ವೃತ್ತಿಯಲ್ಲಿ ತಮ್ಮನ್ನು ತೊಡಗಿಸಿ ಕೊಂಡು ದಂಡನಾಯಕ ಪದವಿಯನ್ನಲಂಕರಿಸಿದ ಇವರು ಸಮಾಜದಲ್ಲಿ ಪ್ರಗತಿಯನ್ನು ಹೊಂದಿ ನಂತರ ರಾಜ ಪರಂಪರೆ ನಾಶವಾಗಿ ವಸಾಹತುಶಾಹಿ ಅಧಿಕಾರದಲ್ಲಿ ಮಲೆನಾಡಿನ ದೀವರು ಆ ಭಾಗದ ಲಿಂಗಾಯಿತರ, ಬ್ರಾಹ್ಮಣ ಕೋಮಿನವರ ಕೆಳಗೆ ಕೂಲಿಗಳಾಗಿ, ಗೇಣಿರೈತರಾಗಿ ನಂತರ ಹೇಗೆ ಭೂಮಾಲಿಕರಾದರು ಎಂಬ ಸವಿಸ್ತಾರವಾದ ವಿವರಣೆಯನ್ನು ಕ್ಷೇತ್ರಕಾರ್ಯದ ಮುಖಾಂತರ ಸಂಗ್ರಹಿಸಲಾಗಿದೆ. ಅಧ್ಯಯನ ಮಾಡುವಾಗ ವ್ಯಾಪ್ತಿ ಇನ್ನಷ್ಟು ವಿಸ್ತಾರವಾಗುವುದು ಸಹಜವೇ ಆಗಿದೆ. ಸಿದ್ದಾಪುರದ ಪೂರ್ವಭಾಗದಲ್ಲಿ ಕಂಡುಬರುವ ಕೆಲ ಹಳ್ಳಿಗಳನ್ನು ಗಮನಿಸಲಾಗಿದೆ.

## ೧.೩. ಅಧ್ಯಯನದ ವಿಧಾನ

ಮಲೆನಾಡಿನಲ್ಲಿ ಕಂಡುಬರುವ ಜನಾಂಗಗಳ ಅಧ್ಯಯನ ಮಾಡಿದ ಪ್ರಬಂಧಗಳನ್ನು ಗಮನಿಸಲಾಗಿದೆ. ಹಸಲರು, ಶೈವ, ಒಕ್ಕಲಿಗರು, ಕುಣಬಿ ಮುಂತಾದ ಕೆಲ ಅಧ್ಯಯನಗಳನ್ನು ಅಭ್ಯಸಿಸಲಾಗಿದೆ. ದೀವರ ಜನಾಂಗದ ಬಗ್ಗೆ ಬರೆದ ಲೇಖನಗಳು, ಕೃತಿಗಳು, ದಾಖಲೆಗಳನ್ನು ಮೊದಲು ಸಂಗ್ರಹಿಸಿ ನಂತರ ಈ ಜನಾಂಗದ ಪ್ರಮುಖ ಗಣ್ಯರಲ್ಲಿ ಗಣ್ಯರಾದ, ಚಳುವಳಿ ನೇತಾರರಾದ ಶ್ರೀ ಗಣಪತಿಯಪ್ಪ, ಜಾನಪದ ತಜ್ಞರಾದ ಶ್ರೀ ಎಸ್.ಹುಚ್ಚಪ್ಪ ಮಾಸ್ತರ, ಕ್ರಿಯಾಶೀಲ ದಕ್ಷ ರಾಜಕಾರಣಿಯಾದ ಕಾಗೋಡು ತಿಮ್ಮಪ್ಪ, ಹಾಗೂ ಹಿರಿಯರಾದ ಬರಸಿನ ದ್ಯಾವಪ್ಪ, ಮೊನ್ನೆ ದಿವಂಗತರಾದ ಕಲ್ಕುಡಿ ಹುಚ್ಚಪ್ಪ ಮುಂತಾದವರನ್ನು ಮುಖಾಮುಖಿಯಾಗಿ ಬೇಟಿಮಾಡಲಾಗಿದೆ. ಕಾಗೋಡು ರಂಗಮಂಚದ ಅಧ್ಯಕ್ಷರಾದ ಕ್ರಿಯಾಶೀಲ ವ್ಯಕ್ತಿತ್ವದ ಅಣ್ಣಪ್ಪನವರು, ಡೊಳ್ಳುಕಲಾವಿದರಾದ ಟಾಕಪ್ಪನವರು ಹಾಗೂ ಜನಪದ ಗೀತೆಗಳ ಹಾಡುಗಾರರೊಂದಿಗೆ ಸಂವಾದ ಮಾಡಿ ಹಾಡುಗಳನ್ನು ಕ್ಯಾಸೆಟ್‌ನಲ್ಲಿ ಸಂಗ್ರಹಿಸಲಾಗಿದೆ. ಈ ಜನಾಂಗದ ಹಿರಿಯ ವಕ್ತಗಳನ್ನು ಸಂಪರ್ಕಿಸಿ ಮಾಹಿತಿ ಸಂಗ್ರಹಿಸಲಾಗಿದೆ. ಸಾಕಷ್ಟು ಛಾಯಾಚಿತ್ರಗಳು, ಆಡಿಯೋ ಕ್ಯಾಸೆಟ್‌ಗಳು ವಿಪುಲವಾಗಿ ಸಂಗ್ರಹವಾಗಿದೆ.

ಅಧ್ಯಯನದ ಉದ್ದಕ್ಕೂ ಪ್ರಾಥಮಿಕ ಆಕರಗಳನ್ನು ಆಧರಿಸಿ ಈ ಪ್ರಬಂಧ ರಚಿಸಲಾಗಿದೆ. ಈ ಜನಾಂಗದ ಬಗ್ಗೆ ಯಾವುದೇ ಅಧ್ಯಯನಗಳು ಅಷ್ಟಾಗಿ ನಡೆಯದಿದ್ದರಿಂದ ಕ್ಷೇತ್ರಕಾರ್ಯದಲ್ಲಿ ಪಡೆದ ಪ್ರತ್ಯಕ್ಷ ಅನುಭವಗಳು, ಮೌಖಿಕ ದಾಖಲೆಗಳು ಇಲ್ಲಿಯ ಅಧ್ಯಯನಕ್ಕೆ ಆಧಾರವಾಗಿದೆ. ಈ ಎಲ್ಲಾ ಕಾರಣಗಳಿಂದಾಗಿ ಮಹಾಪ್ರಬಂಧದಲ್ಲಿ ಅಡಿಟಿಪ್ಪಣಿಗಳು ಅಷ್ಟಾಗಿ ಕಾಣಬರುವುದಿಲ್ಲ. ಅಗತ್ಯವಿದ್ದ ಕಡೆ ಅಡಿಟಿಪ್ಪಣಿ ಕೊಡ ಲಾಗಿದೆ. ರೈತ ಕುಟುಂಬದಿಂದ ಬಂದವನಾದುದರಿಂದ ನನ್ನಲ್ಲಿರುವ ಮಾಹಿತಿಗಳನ್ನು ಅಧ್ಯಯನಕ್ಕೆ ಬಳಸಿ ಕೊಂಡಿದ್ದೇನೆ. ಇದರಿಂದ ಪ್ರಸ್ತುತ ಅಧ್ಯಯನಕ್ಕೆ ನ್ಯಾಯ ಒದಗಿಸಲು ಸಾಧ್ಯವಾಗಿದೆ.

ಕೆಳಜಾತಿಗಳ ಮತ್ತು ಬುಡಕಟ್ಟುಗಳ ಅಧ್ಯಯನವನ್ನು ಸಮಾಜಶಾಸ್ತ್ರಜ್ಞರು, ಮಾನವಶಾಸ್ತ್ರಜ್ಞರು ಮತ್ತು ಜಾನಪದ ವಿಜ್ಞಾನಿಗಳು ಬೇರೆ ಬೇರೆ ಮಾನದಂಡಗಳಿಂದ ಅಧ್ಯಯನ ನಡೆಸಿದ್ದಾರೆ. ಇವರೆಲ್ಲರ ಮುಖ್ಯ ಉದ್ದೇಶವೇ ಸಂಸ್ಕೃತಿಯ ಅಧ್ಯಯನ. ಆದರೆ ಈ ಸಂಸ್ಕೃತಿಯ ಅಧ್ಯಯನಕ್ಕೆ ಇವರು ಬಳಸಿದ ಮಾರ್ಗಗಳು

ಭಿನ್ನವಾಗುತ್ತವೆ. ಸಮಾಜಶಾಸ್ತ್ರಜ್ಞರು ಮತ್ತು ಮಾನವಶಾಸ್ತ್ರಜ್ಞರು ಒಂದು ಆರೋಪಿತ ಸಂಸ್ಕೃತಿಯ ಮಾನದಂಡದಿಂದ ಇನ್ನೊಂದು ಸಂಸ್ಕೃತಿಯನ್ನು ಗುರುತಿಸುವ ಮತ್ತು ಬೆಲೆ ಕಟ್ಟುವ ಕೆಲಸವನ್ನು ಮಾಡಿದರು. ಹಾಗೆ ಅಧ್ಯಯನ ಮಾಡುವಾಗ ಅವರಿಗೆ ಮುಖ್ಯವಾದುದು ಒಂದು ಜನಾಂಗದ ಪ್ರಾಚೀನತೆ, ಅವರ ವಾಸ್ತವ್ಯದ ಪ್ರದೇಶಗಳು, ಅವರ ದೈಹಿಕ ಲಕ್ಷಣಗಳು ಮತ್ತು ಅವರು ಎಷ್ಟು ಅನಾಗರೀಕರಾಗಿದ್ದರೆಂದು ಕಂಡು ಹಿಡಿಯುವುದು ಇವರ ಸಂಸ್ಕೃತಿಯ ಪೂರ್ವಕಲ್ಪಿತ ಮೌಲ್ಯಗಳೊಂದಿಗೆ ಇನ್ನೊಂದು ಸಂಸ್ಕೃತಿಯ ಅಧ್ಯಯನವನ್ನು ಆರಂಭಿಸಿದರು. ಸಂಸ್ಕೃತಿಯ ಆಧಾರದಿಂದ ಹೊಸದೊಂದು ಸಂಸ್ಕೃತಿಯನ್ನು ಕಂಡು ಹಿಡಿಯಲು ಇವರು ಪ್ರಯತ್ನಿಸಿದರು. ಸಂಸ್ಕೃತಿಯ ಬಗೆಗಿನ ಕಲ್ಪನೆಗಳು ಶ್ರೇಷ್ಠವೇ ಅಥವಾ ಅಲ್ಲವೆ ಎಂಬ ಹಿನ್ನೆಲೆಯಲ್ಲಿ ರೂಪುಗೊಂಡಿರುವಂತಹವು. ಒಂದು ಸಂಸ್ಕೃತಿಯ ಬಗ್ಗೆ ಹೊರಗಿನ ಮೌಲ್ಯಗಳೊಂದಿಗೆ ನೋಡುವ ಮತ್ತು ಬೆಲೆಕಟ್ಟುವ ಪ್ರಯತ್ನ ಇಲ್ಲಿ ನಡೆಯಿತು. ಅಧ್ಯಯನಗಳು ಒಂದು ಸಂಸ್ಕೃತಿಯ ಆಂತರಿಕ ವಸ್ತುಗಳಿಂದ ರೂಪುಗೊಳ್ಳಲಿಲ್ಲ ಮತ್ತು ಆ ಸಂಸ್ಕೃತಿಯ ಮೌಲ್ಯಗಳನ್ನು ಆ ಜನಾಂಗದ ಸಂಸ್ಕೃತಿಯ ಚೌಕಟ್ಟಿನಲ್ಲಿ ಕಂಡು ಹಿಡಿಯಲು ಪ್ರಯತ್ನಿಸಲಿಲ್ಲ. ಆದರೆ ಜಾನಪದ ವಿಜ್ಞಾನ ಇದಕ್ಕೆ ಭಿನ್ನವಾಗಿ ಒಂದು ಜಾತಿಯ ಆಂತರಿಕ ಆಚಾರ, ವಿಚಾರಗಳು, ನಂಬಿಕೆಗಳು, ಹಬ್ಬಗಳು, ಮುಂತಾದವುಗಳನ್ನು ಇಟ್ಟುಕೊಂಡು ಒಂದು ಜಾತಿಯ ಸಮೂಹ ಸಂಸ್ಕೃತಿಯನ್ನು ಗುರುತಿಸುವ ಮತ್ತು ಪ್ರಚಲಿತ ಸಾಮಾಜಿಕ ವ್ಯವಸ್ಥೆಯೊಳಗೆ ಅದನ್ನು ಪ್ರತಿಷ್ಠಾಪಿಸುವ ಕೆಲಸವನ್ನು ಕ್ಷೇತ್ರಕಾರ್ಯ ಮತ್ತು ಅಭ್ಯಾಸಗಳಿಂದ ಮಾಡಲಾಗಿದೆ.

ಕರ್ನಾಟಕದ ಮಲೆನಾಡು ಜಾನಪದ ಅಧ್ಯಯನ ಕಳೆದ ಶತಮಾನದಲ್ಲಿಯೇ ಮುಂದಗತಿಯಲ್ಲಿ ಪ್ರಾರಂಭವಾಯಿತು. ಕತೆ, ಗೀತೆ, ಲಾವಣಿಗಳ ಸಂಗ್ರಹಗಳು ಪ್ರಕಟವಾದಂತೆ, ಸಂಪ್ರದಾಯಗಳ ಮೇಲೆ ಹೆಚ್ಚು ಕೃತಿಗಳು ಪ್ರಕಟವಾಗದಿದ್ದರೂ 'ಇಂಡಿಯನ್ ಆಂಟಿಕ್ವರಿ' ಮುಂತಾದ ಉನ್ನತ ಮಟ್ಟದ ಸಂಶೋಧನಾತ್ಮಕ ಪತ್ರಿಕೆಗಳಲ್ಲಿ ಸಾಕಷ್ಟು ಪರಿಚಯ ಲೇಖನಗಳು ಬೆಳಕಿಗೆ ಬಂದವು. ಇನ್ನೂ ಕೆಲವು ಲೇಖನಗಳು 'ಇಂಡಿಯನ್ ಆಂಟಿಕ್ವರಿ' ಮಿಥಿಕ್ ಸೊಸೈಟಿಯ ಪತ್ರಿಕೆ, ಪ್ರಬುದ್ಧ ಕರ್ನಾಟಕ ಮುಂತಾದವುಗಳಲ್ಲಿ ಪ್ರಕಟಗೊಂಡಿವೆ. ವಿ.ಎನ್. ನರಸಿಂಹಯ್ಯಂಗಾರರು ಇಂಡಿಯನ್ ಆಂಟಿಕ್ವರಿಯಲ್ಲಿ ಪ್ರಕಟಿಸಿರುವ (1872) "The Bhutas of Nagar Malnad & Shravana saturday of Nagar Malnad" ಎಂಬ ಲೇಖನಗಳು ಮಲೆನಾಡಿನ ವಿಶಿಷ್ಟ ಸಂಪ್ರದಾಯಗಳ ಮೇಲೆ ಬೆಳಕು ಚೆಲ್ಲುತ್ತದೆ. ಮೆಕೆಂಜ್‌ರವರು ಇಂಡಿಯನ್ ಆಂಟಿಕ್ವರಿಯಲ್ಲಿ ಪ್ರಕಟಿಸಿರುವ 'ಹಳೆಮಕ್ಕಳು' ಎಂಬ ಲೇಖನವೂ ಗಮನಾರ್ಹವಾಗಿದೆ.

ಮಲೆನಾಡಿನ 'ಅಂಟಿಕ ಪಂಟಿಕೆ' ಸಂಪ್ರದಾಯವನ್ನು ಕುರಿತು ಕೆ.ವಿ.ಸುಬ್ಬಣ್ಣನವರು ಪ್ರಕಟಿಸಿರುವ 'ಅವರು ನೀಡಿದ ದೀಪ' ಹಾಗೂ ಡಾ.ಶ್ರೀಕಂಠ ಕೂಡಿಗೆಯವರ 'ಅಂಟಿಕೆ-ಪಂಟಿಕೆ ಪದಗಳು' ಸಂಪ್ರದಾಯಗಳನ್ನು ಕುರಿತು ಒಳ್ಳೆಯ ಅಧ್ಯಯನವಾಗಿವೆ. ಡಾ.ಹಾ.ಮಾ.ನಾಯಕರ 'ಅಂಟಿಕೆ-ಪಂಟಿಕೆ' ಸಂಪ್ರದಾಯವನ್ನು ಕುರಿತ ಉತ್ತಮ ಲೇಖನಗಳಾಗಿವೆ. ನಾ.ಡಿಸೋಜರವರು ದೀವರ ಹಬ್ಬಗಳ ಕುರಿತು ಪ್ರಜಾವಾಣಿ ಪತ್ರಿಕೆಯಲ್ಲಿ ಬರೆದ ಕೆಲ ಲೇಖನಗಳು, 'ಕಾಗೋಡು ಸತ್ಯಾಗ್ರಹ' ಜಿ.ರಾಜಶೇಖರ ಅವರು ಪ್ರಕಟಿಸಿರುವ ಕೃತಿ ಅತ್ಯುತ್ತಮವಾದದ್ದಾಗಿದೆ. ವೈ.ಸಿ.ಭಾನುಮತಿಯವರ 'ಮಲೆನಾಡು ಶೈವ ಒಕ್ಕಲಿಗರು-ಒಂದು ಜಾನಪದೀಯ ಅಧ್ಯಯನ'

ಎಂಬ ಕೃತಿ ಮಲೆನಾಡಿನ ಒಕ್ಕಲಿಗರ ಕುರಿತ ಅಧ್ಯಯನವಾಗಿದೆ. ಮಲೆನಾಡಿನ ಗಿರಿಜನರಾದ ಬುಡಕಟ್ಟು ಜನಾಂಗವಾದ ಹಸಲರ ಬಗ್ಗೆ ಪ್ರೊ.ಹಿ.ಚಿ.ಬೋರಲಿಂಗಯ್ಯನವರು ಕೈಗೊಂಡ `ಒಂದು ಬುಡಕಟ್ಟಿನ ಲೋಕ ದೃಷ್ಟಿ' ನಾ.ಡಿಸೋಜರವರು ಶ್ರಮಿಕ ಜನಾಂಗಗಳಾದ ಮಲೆನಾಡಿನ ಹಸಲರು ಮತ್ತು ದೀವರು ಕುರಿತು ಕೃತಿ ರಚಿಸಿದ್ದಾರೆ. ಅವರ ಕಥೆಗಳಾದ ಕುರ್ಚಿ, ನೇಗಿಲು ನೊಗಕೊಟ್ಟಿದವರು, ಜೋಡು ನಳಿಕೆ ಬಂದೂಕು, ಹೆಡೆ, ಓಡಿ ಹೋಗುವರ ಹುಡಕ ಹೊರಟವರು (ಹಸಲರ ಕುರಿತು), ಕಾದಂಬರಿ `ಕೊಳಗ` ದೀವರ ಜನಾಂಗದ ಸಂಸ್ಕೃತಿಯ ಮೇಲೆ ಬೆಳಕು ಚೆಲ್ಲುತ್ತದೆ. ಲಿಖಿತ ಸಾಹಿತ್ಯವಲ್ಲದೆ, ಮೌಖಿಕ ಸಾಹಿತ್ಯವನ್ನು ಗಮನಿಸಲಾಗಿದೆ.

## ಅಡಿಟಿಪ್ಪಣಿಗಳು

೧. ಕೆಳದಿ ಅರಸರ ಕಾಲದಲ್ಲಿ ತಿಮ್ಮಣ್ಣ ನಾಯಕ ಮೊಗಲರ ಆಕ್ರಮಣಗಳಿಗೆ ಕಡಿವಾಣ ಹಾಕಿದ್ದಲ್ಲದೆ, ಅನೇಕ ಯುದ್ಧಗಳಲ್ಲಿ ಕೆಳದಿ ಅರಸರಿಗೆ ಜಯ ದೊರೆಯಲು ಕಾರಣನಾಗಿದ್ದಾನೆ.

೨. ಕಾಸರಗೋಡು ತಿಮ್ಮಣ್ಣ ನಾಯಕ - ದೀವರ ಜನಾಂಗದವ. ಚೆನ್ನಮ್ಮಾಜಿಯ ಆಣತಿಯ ಮೇರೆಗೆ ಈತ ವಿಜಾಪುರದ ಆದಿಲ್‌ಶಾಹಿ ಸೈನ್ಯವನ್ನು ಹಿಮ್ಮೆಟ್ಟಿಸಿದ.

# ಅಧ್ಯಾಯ ೨

# ದೀವರು

## ೨.೧. ಭೌಗೋಳಿಕ ಪರಿಚಯ

ಭಾರತವು ಏಷ್ಯ ಖಂಡದಲ್ಲಿ ದಕ್ಷಿಣಕ್ಕೆ ಭೂಮಧ್ಯರೇಖೆಯ ಮೇಲೆ ಇರುವ ಒಂದು ರಾಷ್ಟ್ರ. ಉತ್ತರಕ್ಕೆ ಹಿಮಾಚಲ ಪ್ರದೇಶ ಮತ್ತು ನೇಪಾಳ ರಾಷ್ಟ್ರವನ್ನು ಹೊಂದಿದ್ದರೆ, ದಕ್ಷಿಣ, ಪೂರ್ವ, ಪಶ್ಚಿಮಗಳಲ್ಲಿ ಸಮುದ್ರವನ್ನು ಹೊಂದಿದೆ. ವಾಯುವ್ಯದಲ್ಲಿ ಪಾಕಿಸ್ತಾನ, ಈಶಾನ್ಯದಲ್ಲಿ ಬಾಂಗ್ಲಾದೇಶ, ದಕ್ಷಿಣದ ತುದಿಯಲ್ಲಿ ಶ್ರೀಲಂಕಾ ರಾಷ್ಟ್ರವಿದೆ. ಭಾರತದಲ್ಲಿ ಅಪಾರ ನೈಸರ್ಗಿಕ ಸಂಪತ್ತಿನ ಜೊತೆಯಲ್ಲಿಯೆ ಮರುಭೂಮಿಯು ಇದೆ. ದಕ್ಷಿಣ ಭಾರತದ ಪೂರ್ವ ಪಶ್ಚಿಮದಲ್ಲಿ ನೀಲಗಿರಿ ಪರ್ವತಗಳು ಕರಾವಳಿಯ ಪ್ರದೇಶವನ್ನು ಹೊಂದಿದ್ದು ಅನೇಕ ಜನಾಂಗಗಳ ಆಶ್ರಯತಾಣವಾಗಿದೆ. ಈ ಉಪಖಂಡಕ್ಕೆ ವಿವಿಧ ಕಡೆಯಿಂದ ವಲಸೆ ಬಂದು ಉತ್ತರದಲ್ಲಿ ನೆಲೆಸಿದ ಜನಾಂಗವನ್ನು ಆರ್ಯರೆಂದೂ ಗುರುತಿಸಲಾಗಿದೆ. ಈ ಖಂಡದಲ್ಲಿನ ಜನಾಂಗ ಮತ್ತು ವಿವಿಧ ಪ್ರದೇಶಗಳಿಂದ ಬಂದ ಜನಾಂಗಗಳು ಪರಸ್ಪರ ಸಂಕರಗೊಂಡು ಬೇರೆ ಬೇರೆ ಜನಾಂಗಿಯ ಪ್ರಭೇಧಗಳು ಹುಟ್ಟಿಕೊಂಡವು. ಹೀಗೆ ಪ್ರವೇಶಿಸಿದ ಆದಿಯ ಜನಾಂಗಗಳ ಮೂಲಗಳಲ್ಲಿ ಮೊದಲನೆಯದು ನೀಗ್ರಿಟೊ ಅಥವಾ ಪ್ರೋಟೊ ನೀಗ್ರಿಟೊ, ಅನಂತರ ಕ್ರಮವಾಗಿ ಆಸ್ಟ್ರಲಾಯಿಡ್ (ಬಿಷ್ಲೇಯ) ಮತ್ತು ಕಾಕೊಸಾಯಿಡ್ ಜನಾಂಗಗಳು ಬಂದವು. ದಕ್ಷಿಣ ಭಾರತದ ಜನಾಂಗೀಯ ರಚನೆಯು ಈ ಎರಡೂ ಜನಾಂಗೀಯ ಅಂಶಗಳ ಸಮ್ಮಿಶ್ರ ಹೊಂದಿದ ಜನಾಂಗಗಳ ಸೃಷ್ಟಿಗೆ ಕಾರಣವಾಯಿತು. ದ್ರಾವಿಡರು ಮೊದಲು ಬಂದವರಾದ್ದರಿಂದ ಇಲ್ಲಿನ ಮೂಲ ನಿವಾಸಿಗಳಾದರು ಮತ್ತು ಮೂಲನಿವಾಸಿಗಳೊಂದಿಗೆ ಬೆರೆತು ಹೋದರು. ದೀವರು ಸಮ್ಮಿಶ್ರ ಹೊಂದಿದ (ದ್ರಾವಿಡ) ಜನಾಂಗಿಯ ಪ್ರಭೇದಕ್ಕೆ ಸೇರಿದವರಾಗಿದ್ದಾರೆ.

ದೀವರ ಜನಾಂಗ ಶಿವಮೊಗ್ಗ ಜಿಲ್ಲೆಯ ಸಹ್ಯಾದ್ರಿ ಬೆಟ್ಟಗಳ ತಪ್ಪಲು ಅಥವಾ ಮಲೆನಾಡು ಪ್ರದೇಶವೆಂದು ಗುರುತಿಸುವ ಪ್ರದೇಶಗಳಾದ ಸಾಗರ, ಹೊಸನಗರ, ಸೊರಬ ತಾಲ್ಲೂಕುಗಳಲ್ಲಿ ದಟ್ಟವಾಗಿ ಸಿದ್ಧಾಪುರದ (ಉ.ಕ.ಜಿಲ್ಲೆ) ಪೂರ್ವ ಭಾಗದಲ್ಲಿ ಶಿಕಾರಿಪುರ ತಾಲ್ಲೂಕುಗಳಲ್ಲಿ ವಿರಳವಾಗಿ ಕಂಡು ಬರುವರು. ಇವರ ಭಾಷೆ ಕನ್ನಡವಾಗಿದ್ದು ಕೃಷಿಯನ್ನು ಜೀವನೋಪಾಯಕ್ಕೆ ಅವಲಂಬಿಸಿದ ಜನಾಂಗವಾಗಿರುತ್ತದೆ.

ಕರ್ನಾಟಕದ ವಿವಿಧ ಪ್ರದೇಶಗಳಲ್ಲಿ ಪ್ರಾದೇಶಿಕವಾಗಿ ಹಂಚಿಹೋಗಿರುವ ದೀವರು, ಮಲೆನಾಡಿನಲ್ಲಿ ದೀವರು ಅಥವಾ ಹಳೆಪೈಕ ಎಂದು, ಕರಾವಳಿಯ ಭಾಗದಲ್ಲಿ ಬಿಲ್ಲವ, ತೆಂಗಿನ ದೀವರು, ಉತ್ತರ ಕನ್ನಡದಲ್ಲಿ ನಾಮಧಾರಿ, ಬಯಲುನಾಡು ಬಳ್ಳಾರಿ ಹಾಗೂ ಮೈಸೂರು ಭಾಗದಲ್ಲಿ ಈಡಿಗ ಎಂದು ಕರೆಯಿಸಿಕೊಳ್ಳುವರು.

ಪ್ರಾದೇಶಿಕ ಭಿನ್ನತೆಯಿಂದಾಗಿ ಭಾಷಾಶೈಲಿ, ಜೀವನಶೈಲಿ, ಆಚರಣೆ ವೃತ್ತಿಯಲ್ಲಿ ಅನೇಕ ವ್ಯತ್ಯಾಸಗಳಿವೆ. ಈಡಿಗರು ಕನ್ನಡವನ್ನಲ್ಲದೆ ತೆಲುಗು, ತಮಿಳು ಭಾಷೆಯನ್ನು ಮಾತನಾಡುವರು. ಕರಾವಳಿಯ ತೆಂಗಿನ ದೀವರು, ಬಿಲ್ಲವರು ಕನ್ನಡ ಮತ್ತು ತುಳು ಭಾಷೆಯನ್ನು ಮಾತನಾಡುತ್ತಾರೆ. ಆದರೆ ದೀವರು ಕನ್ನಡ ಭಾಷೆಯನ್ನು ಮಾತ್ರ ಮಾತನಾಡುವರು. ಈಡಿಗರು ಕರ್ನಾಟಕ ರಾಜ್ಯವಲ್ಲದೆ ತಮಿಳು ಮತ್ತು ತೆಲುಗು ನಾಡಿನಲ್ಲಿಯು ನೆಲೆಸಿದ್ದಾರೆ. ಈ ಎಲ್ಲಾ ಹೆಸರಿನ ಸಮಾಜದ ಹಿರಿಯರು ೧೯೫೮ರಲ್ಲಿ ಬೆಂಗಳೂರಿನಲ್ಲಿಯು, ೧೯೬೧ರಲ್ಲಿ ಮೈಸೂರಿನಲ್ಲಿಯು ನಡೆದ ಮಹಾಸಮ್ಮೇಳನದಲ್ಲಿ 'ಆರ್ಯ ಈಡಿಗ' ಎಂಬ ಹೆಸರಿನಲ್ಲಿ ಒಗ್ಗೂಡಿದ್ದಾರೆ. ಈಡಿಗ, ಈಳವ, ಈಳಿಗರ್, ಬಿಲ್ಲಾವ, ಪೂಜಾರಿ, ನಾಮಧಾರಿ, ನಾಡಿರ್, ತಿಯಾನ್, ದೇವರ ಮಕ್ಕಳು, ಕಲಾಲ್, ಗೌಂಡ್ಲ ಮುಂತಾದ ಎಲ್ಲಾ ಪ್ರಭೇದಗಳು 'ಆರ್ಯ ಈಡಿಗ' ಎಂಬ ಹೆಸರಿನಲ್ಲಿ ಸಂಘಟನೆಗೊಂಡಿವೆ.

ಪ್ರಾದೇಶಿಕವಾಗಿ ಕೆಲ ಅಸಮಾನತೆಗಳಿರುವಂತೆ ಆರ್ಥಿಕವಾಗಿ ಬಹಳ ವ್ಯತ್ಯಾಸವಿದೆ. ಶಿವಮೊಗ್ಗ, ಕರಾವಳಿ ಮತ್ತು ಉತ್ತರ ಕನ್ನಡ ಜಿಲ್ಲೆಯಲ್ಲಿ ಕಾಣಬಹುದು. ಮಲೆನಾಡಿನ ಭಾಗದಲ್ಲಿ ಅತ್ಯಧಿಕ ಮಳೆಯಿಂದಾಗಿ ಮಣ್ಣಿನ ಸವೆತ ಉಂಟಾಗುತ್ತದೆ. ಈ ಮಣ್ಣಿನ ಸವೆತದಿಂದಾಗಿ ಭೂಮಿ ಫಲವತ್ತತೆಯನ್ನು ಕಳೆದುಕೊಳ್ಳುತ್ತದೆ. ಅತೀಯಾದ ಮಳೆಯಿಂದಾಗಿ ಮರಳು ಭೂಮಿಯ ಮೇಲ್ಭಾಗದಲ್ಲಿ ಬರುವುದರಿಂದ ಬೆಳೆ ಇಳುವರಿ ಕಾಣುವುದಿಲ್ಲ. ಈಡಿಗರು ವ್ಯಾಪಾರ ವೃತ್ತಿಯನ್ನು ಅವಲಂಬಿಸಿರುವುದರಿಂದ ಆರ್ಥಿಕವಾಗಿ ಸಧೃಡರು. ಈ ಎಲ್ಲಾ ಹಿನ್ನೆಲೆಯನ್ನು ಗಮನಿಸಿ 'ರಾಜ್ಯ ದೀವರ ಸಂಘ'ದ ಅಧ್ಯಕ್ಷರಾದ ಎಚ್.ಗಣಪತಿಯಪ್ಪನವರು 'ದೀವರು ಈಡಿಗರಲ್ಲ' ಎಂಬ ಪ್ರಕಟಣೆಯನ್ನು ಕೊಟ್ಟಿದ್ದಾರೆ. ಇದಕ್ಕೆ ಗಣಪತಿಯಪ್ಪನವರ ಸ್ಪಷ್ಟೀಕರಣ ಹೀಗಿದೆ. 'ದೀವರ ಕಸುಬು ವ್ಯವಸಾಯ ಮತ್ತು ಹಾಲು ಮಾರಾಟ. ಈಡಿ ಎಂದರೆ ಹೆಂಡ. ಇದನ್ನು ಕುಲಕಸುಬಾಗಿ ಸ್ವೀಕರಿಸಿದವರನ್ನು ಈಡಿಗರು ಎಂದು ಕರೆಯುವರು.' ದೀವರು ಭೂಮಿ, ನೀರು, ಪ್ರಾಣಿ ಪೂಜೆಯ ಹಬ್ಬಗಳನ್ನು ಆಚರಿಸುವರು. ಈಡಿಗರಿಗೆ ಈಚಲು ಮರ ಶ್ರೇಷ್ಠವೆಂದು ಪೂಜಿಸುತ್ತಾರೆ. ಇವರ ಸಂಘದ ಲಾಂಛನ 'ಈಚಲು ಮರದಲ್ಲಿ ಹೆಂಡ ಇಳಿಸುವ ಚಿತ್ರವಾಗಿದೆ. ದೀವರು ಆರ್ಯರಲ್ಲ ದ್ರಾವಿಡರು ಎಂಬ ವಿಚಾರವನ್ನು ಪ್ರಕಟಣೆಯಲ್ಲಿ ತಿಳಿಸಿದ್ದಾರೆ.' ಸೊರಬ ತಾಲೂಕಿನ ದೀವ ಮುಖಂಡರು 'ಹಾಲಕ್ಷತ್ರಿಯ'ರಾದ ನಾವು ಅತ್ಯಂತ ಕೆಳಮಟ್ಟದ ಆರ್ಥಿಕ ಸ್ಥಿತಿಯನ್ನು ಹೊಂದಿದ್ದು, ಮೀಸಲಾತಿಯಲ್ಲಿ ನಮ್ಮನ್ನು ಈಡಿಗರಿಂದ ಪ್ರತ್ಯೇಕಿಸಿ ನೋಡಬೇಕೆಂದು ಸರ್ಕಾರಕ್ಕೆ ಮನವಿ ಅರ್ಪಿಸಿದ್ದಾರೆ. ಇತ್ತೀಚಿನ ದಿನಗಳಲ್ಲಿ 'ಲಿಕ್ಕರ್ ಲಾಬಿ' ಎನ್ನುವುದು ತತ್‌ಕ್ಷಣ ವ್ಯಕ್ತಿಯನ್ನು ಶ್ರೀಮಂತರನ್ನಾಗಿಸುತ್ತದೆ. ಇದರಿಂದ ಸೃಷ್ಟಿಯಾದ ಆರ್ಥಿಕ ಅಸಮಾನತೆ ಈ ಭಿನ್ನಾಭಿಪ್ರಾಯಕ್ಕೇ ಕಾರಣವಾಗಿರಬಹುದು. ಲಿಂಗಾಯಿತ ವರ್ಗದ ಜಂಗಮರನೇಕರು 'ಬೇಡಜಂಗಮ' ಎಂಬ ವರ್ಗವೆಂದು ದಾಖಲೆ ಮಾಡಿಸಿಕೊಂಡು ಪರಿಶಿಷ್ಟ ವರ್ಗ, ಮೀಸಲಾತಿಯನ್ನು ಕಬಳಿಸುವ ಪ್ರಯತ್ನ ಮತ್ತು ಅದರಿಂದಾಗಿ ಅತಂತ್ರ ಸ್ಥಿತಿ ನಿರ್ಮಾಣವಾಗಿರುವುದು ಎಲ್ಲರು ತಿಳಿದ ವಿಷಯವಾಗಿದೆ. ಇದಕ್ಕೆಲ್ಲಾ ಕಾರಣ 'ಭೂಶಾಸನ' ಕಾಯಿದೆಯ ಪರಿಣಾಮವಿರಬಹುದು. ಆರ್ಥಿಕ ಪರಿಳಿತದ ಚಕ್ರಕ್ಕೆ ಸಿಲುಕಿದ ಪ್ರತಿಯೊಬ್ಬರು ತತ್‌ಕ್ಷಣದ ಬದಲಾವಣೆ ಬಯಸುವುದು ಸಾಮಾನ್ಯ.

'ಮಲೆನಾಡಿನಲ್ಲಿ ಕಂಡುಬರುವ ಈ ಸಮುದಾಯದಲ್ಲಿ ಇಂದು ಕೃಷಿಯೇ ಮೂಲ ಉದ್ಯೋಗವಾಗಿದೆ. ಇವರನ್ನು ಹಳೆಪೈಕರು ಎಂದು ಕರೆಯುವ ಸಂಪ್ರದಾಯ ಒಂದು ಕಾಲಕ್ಕಿತ್ತು. ಮಲೆನಾಡಿನ ದೀವರನ್ನು ಕಾನು ದೀವರು ಅಥವಾ ಬಗನೆ ದೀವರು ಮತ್ತು ತೆಂಗಿನ ದೀವರು ಎಂದು ವಿಭಾಗಿಸಿದ್ದಾರೆ. ಸಿದ್ದಾಪುರ ಮತ್ತು ಭಟ್ಕಳದಲ್ಲಿ ವಾಸಿಸುವ ಇವರನ್ನು ನಾಯ್ಕ ಮತ್ತು ನಾಮಧಾರಿ ಜನಾಂಗದವರೆಂದೂ, ದಕ್ಷಿಣ ಕನ್ನಡದಲ್ಲಿ ಬಿಲ್ಲವರು, ಬಿರ್ವರು, ಸುವರ್ಣ, ಪೂಜಾರಿ ಮತ್ತು ಮೂರ್ತೆದಾರರು ಎಂದು ಮಲೆಯಾಳಿ ಬಿಲ್ಲವರೆಂದು, ಕೇರಳದಲ್ಲಿ, ತಮಿಳುನಾಡಿನಲ್ಲಿ ನಾಡರ್ ಎಂದು ಕರೆಯುತ್ತಾರೆ'(ಗಂಗಾಧರ ದೈವಜ್ಞ, ೨೦೦೦, ಪುಟ ೧೪).

ಶಿವಮೊಗ್ಗ ಜಿಲ್ಲೆಯ ದೀವರಿಗೆ, ದೀವರು, ದೀವನಾಯಕರು, ಹಳೆಪೈಕ, ಬಗನೆ ದೀವರು, ಕಾನು ದೀವರು ಎಂದು ಕರೆಯುತ್ತಾರೆ. ಸಮಾಜದ ಚಾತುರ್ವರ್ಣದಲ್ಲಿ ಶೂದ್ರ ಗುಂಪಿಗೆ ಸೇರಿದವರಾಗಿರುತ್ತಾರೆ. ಇವರ ಮಂಗಳಕಾರ್ಯಗಳಲ್ಲಿ ಪೌರೋಹಿತ್ಯವನ್ನು ಬ್ರಾಹ್ಮಣರು ವಹಿಸಿರುತ್ತಾರೆ. ಬ್ರಾಹ್ಮಣರ ಸಂಪರ್ಕ ದಿಂದಾಗಿ 'ಆರ್ಯ' ಎಂಬುದನ್ನು ಜಾತಿಯ ಮುಂಭಾಗದಲ್ಲಿ ಸೇರಿಸಿರುವ ಕೆಲ ಜನಾಂಗಗಳನ್ನು ಗಮನಿಸ ಬಹುದು.

## ೨.೨. ಪ್ರಾಚೀನತೆ : ಪುರಾಣ - ದಂತಕಥೆಗಳಲ್ಲಿ ಸೃಷ್ಟಿ ಪುರಾಣ ಕಥೆ

ದೀವರ ಪ್ರಾಚೀನತೆಯು ಪುರಾಣದ ಮಹಾಪುರುಷರ ಹೆಸರಿನಲ್ಲಿ ತಳುಕು ಹಾಕಿಕೊಂಡಿರುವ ಅನೇಕ ದಂತಕಥೆಗಳಿವೆ. ದೀವರ ಮೂಲಪುರುಷ ವ್ಯಾಸ ಮಹರ್ಷಿ ಎಂದು ಹೇಳುತ್ತಾರೆ. ಇದಕ್ಕೆ ದೀವರಲ್ಲಿ ಕಾಣಬರುವ ಒಂದು ಮಾತಿದೆ. 'ಅಣ್ಣ ಹೊಳೆ ದಾಟಿ ಬ್ರಾಹ್ಮಣನಾದ, ತಮ್ಮ ಅಲ್ಲೇ ಉಳಿದು ದೀವನಾದ'. ಇಲ್ಲಿ ಹೊಳೆ ದಾಟುವ ಕ್ರಿಯೆ ಪ್ರಗತಿಯನ್ನು, ಬದಲಾವಣೆಯನ್ನು ತಿಳಿಸುತ್ತದೆ. ಬ್ರಾಹ್ಮಣ ಎಂಬುದು ಜಾತಿಯಾಗದೆ ಜ್ಞಾನಿ, ವಿದ್ಯಾವಂತ ಎಂದಾಗುತ್ತದೆ. 'ವ್ಯಾಸ' ಮಹರ್ಷಿಯ ಸುತ್ತ ಅನೇಕ ಜಾತಿಗಳು ಕಂಡು ಬರುವವು. ಇದಕ್ಕೆ ಸಂಬಂಧಿಸಿದಂತೆ ಕೆಲ ಕಥೆಗಳನ್ನು ಗಮನಿಸಬಹುದು.

ವ್ಯಾಸ ಮಹರ್ಷಿಗೆ ದ್ವೈಪಾಯನ, ಕೃಷ್ಣದ್ವೈಪಾಯನ ಎಂದು ಕರೆಯುವರು. ವ್ಯಾಸ ಮಹರ್ಷಿಗಳು ಸತ್ಯವತಿ ಅಥವಾ ಮತ್ಸಗಂಧಿನಿ ಎಂಬ ಹೆಸರಿನ ಜಲಗಾರ ಕನ್ಯೆಯಲ್ಲಿ ಪರಾಶರ ಮುನಿಗಳಿಂದ ಜನ್ಮ ಪಡೆದವರು. ಸತ್ಯವತಿಯ ತಂದೆಯು ಧರ್ಮಾತ್ಮನೂ, ಸತ್ಯಪ್ರಿಯನೂ ಆಗಿದ್ದು, ಯಮುನಾ ನದಿಯಲ್ಲಿ ದೋಣಿ ನಡೆಸುತ್ತಿದ್ದ ಒಬ್ಬ ಜಲಗಾರ. ಅವನಿಗೆ ಬೇರೆ ಕೆಲಸವಿದ್ದಾಗ ಸತ್ಯವತಿ ದೋಣಿ ನಡೆಸುತ್ತಿದ್ದಳು. ಒಂದು ದಿನ ವಶಿಷ್ಠರ ಮೊಮ್ಮಗ ಶಕ್ತಿಮುನಿಗಳ ಮಗ ಪರಾಶರ ಮುನಿಗಳು ನದಿ ದಾಟಲು ಬಂದು ದೋಣಿ ನದಿಯ ಮಧ್ಯಭಾಗ ಸೇರಿದಾಗ ಯೌವನ ಶೋಭಿಯಾದ ಸತ್ಯವತಿಯಿಂದ ಆಕರ್ಷಿತರಾಗಿ ಸಮಾಗಮ ವನ್ನು ಬಯಸಿ ತಮ್ಮ ಆಸೆಯನ್ನು ಪೂರೈಸಿಕೊಂಡರು. ನವಮಾಸ ಗರ್ಭಧಾರಣೆ ಇಲ್ಲದೆ ಅದೇ ಕಾಲದಲ್ಲಿಯೇ ತೇಜಪುಂಜ ಪೂರ್ಣನಾದ ಮಗ ಹುಟ್ಟಿದ. ಕಪ್ಪಗಿದ್ದರಿಂದ ಕೃಷ್ಣದ್ವೈಪಾಯನ ಎಂದು ನದಿಯ ಮಧ್ಯದಲ್ಲಿ ಹುಟ್ಟಿದ್ದರಿಂದ ದ್ವೈಪಾಯನನೆಂದೂ ಕರೆಯಲ್ಪಟ್ಟು ಇವನು ಆಪತ್ಕಾಲದಲ್ಲಿ ಕರೆದಾಗ ಬರುವೆನೆಂದು ತಾಯಿಗೆ ವಚನ ಕೊಟ್ಟು ವಿದ್ಯಾರ್ಜನೆಗೆ ತಂದೆಯೊಡನೆ ತೆರಳಿದ. ವೇದಗಳನ್ನು ಋಗ್ವೇದ, ಯಜುರ್ವೇದ, ಸಾಮವೇದ

ಮತ್ತು ಅಥರ್ವಣವೇದವೆಂದು ನಾಲ್ಕು ವಿಭಾಗಗಳಾಗಿ ವಿಂಗಡಿಸಿದ್ದರಿಂದ ವ್ಯಾಸನೆಂದು ಮಹರ್ಷಿಗಳು ಕರೆದರು. ವ್ಯಾಸರಿಗೆ ಬಾದರಾಯಣನೆಂದೂ ಹೆಸರು. ದ್ವೈಪಾಯನ ಎಂಬುದು ದೀವರು ಎಂಬುದಾಗಿ ಕರೆಯಿಸಿ ಕೊಂಡಿದೆ. ಈಡಿಗರ ಮೂಲ ಪುರುಷನು ಮಹಾಭಾರತದ ವೇದವ್ಯಾಸನೆಂದು ಹೇಳಲಾಗುತ್ತದೆ. ಜೆಸ್ತರು ಸಹ ಇದನ್ನೆ ಹೇಳುತ್ತಾರೆ.

ಮಾನವ ಸೃಷ್ಟಿಯ ಕುರಿತು ದೀವರಲ್ಲಿ ಕಥೆ ಇದೆ. 'ಒಂದು ಸಾರಿ ಪ್ರಪಂಚದಲ್ಲಿ ಬೆಂಕಿ ಮಳೆ ಪ್ರಾರಂಭವಾಗಿ ಮನುಷ್ಯ, ಪ್ರಾಣಿ, ಪಕ್ಷಿ ಎಲ್ಲ ಜೀವಿಗಳು ನಾಶವಾಗುತ್ತವೆ. ಈ ಸಂದರ್ಭದಲ್ಲಿ ಅಣ್ಣ-ತಂಗಿಯರು ಒಂದು ದೊಡ್ಡ ಕಾರೇಡಿಯ ಚಿಪ್ಪಿನೊಳಗೆ ಅಡಗಿ ಕುಳಿತುಕೊಳ್ಳುತ್ತಾರೆ. ಹೀಗಾಗಿ ಇವರಿಬ್ಬರು ನಾಶವಾಗದೆ ಉಳಿಯುತ್ತಾರೆ. ಕೆಲ ಸಮಯದ ನಂತರ ಬೆಂಕಿ, ಮಳೆ ನಿಲ್ಲುತ್ತದೆ. ಅಣ್ಣ-ತಂಗಿ ಕಾರೇಡಿಯ ಚಿಪ್ಪಿನಿಂದ ಈಚೆ ಬಂದು ನೋಡಿದರೆ ಎಲ್ಲವು ಬೆಂಕಿಗೆ ನಾಶವಾಗಿರುತ್ತದೆ. ಆಗ ಇವರಿಬ್ಬರು ಶಿವನನ್ನು ಪ್ರಾರ್ಥಿಸುತ್ತಾರೆ. ಇವರ ಪ್ರಾರ್ಥನೆಗೆ ಓಗೊಟ್ಟ ಶಿವ ಪ್ರತ್ಯಕ್ಷನಾಗಿ ಅಣ್ಣ-ತಂಗಿಯರನ್ನು ಗಂಡ ಹೆಂಡತಿಯರನ್ನಾಗಿ ಪರಿವರ್ತಿಸಿ, ಸಂತತಿ ಬೆಳೆಯಲಿ ಎಂದು ಆಶೀರ್ವದಿಸಿ ಮಾಯವಾಗುತ್ತಾನೆ. ಹೀಗೆ ಮಾನವ ಸಂತತಿ ಬೆಳೆಯುತ್ತದೆ. ಇವರು ಜೀವನ ನಿರ್ವಹಣೆಗೆ ಕೃಷಿಯನ್ನು ಮುಖ್ಯ ಕಸುಬಾಗಿ ಅವಲಂಬಿಸುತ್ತಾರೆ. ಮತ್ತೊಂದು ಕಥೆಯ ಪ್ರಕಾರ ಶಿವ-ಪಾರ್ವತಿ ಸಂಚಾರ ಮಾಡುತ್ತಾ ಭೂಲೋಕದ ಕಡೆಗೆ ಬರುತ್ತಾರೆ. ಪಾರ್ವತಿಗೆ ಬಾಯಾರಿಕೆಯಾಗಿ ಶಿವನಿಗೆ ನೀರು ಬೇಕೆಂದು ಕೇಳುತ್ತಾಳೆ. ಶಿವನು ತನ್ನ ಬೆವರಿನಿಂದ ಒಬ್ಬ ವ್ಯಕ್ತಿಯನ್ನು ಸೃಷ್ಟಿಸಿ, ಆತನಿಗೆ ಪಾರ್ವತಿಗೆ ಬಾಯಾರಿಕೆಯಾಗಿದೆ ಕುಡಿಯಲು ನೀರು ತಾ ಎಂದು ಆಜ್ಞೆ ಮಾಡುತ್ತಾನೆ. ಆ ವ್ಯಕ್ತಿ ಎಲ್ಲಿ ಸುತ್ತಾಡಿದರು ನೀರು ಸಿಗುವುದಿಲ್ಲ. ನಂತರ ಬಗನಿ ಗಿಡದ ರಸವನ್ನು ತಂದು ಕೊಡುತ್ತಾನೆ. ಶಿವ-ಪಾರ್ವತಿ ಬಗನಿ ಗಿಡದ ರಸವನ್ನು ಕುಡಿದು ಸಂತುಷ್ಟರಾಗಿ ಆತನಿಗೆ ಈ ವೃತ್ತಿ ನಿನಗೆ ಕಷ್ಟಕಾಲದಲ್ಲಿ ಉಪಯೋಗವಾಗಲಿ ಕೃಷಿಯ ಜೊತೆಗೆ ಈ ವೃತ್ತಿಯನ್ನು ಮುಂದುವರಿಸಿಕೊಂಡು ಹೋಗಿ, 'ಬಗನಿ ದೀವ'ರೆಂದು ಸಮಾಜದಲ್ಲಿ ಖ್ಯಾತಿ ಗಳಿಸಿರಿ ಎಂದು ಹರಸಿ ಮಾಯವಾಗುತ್ತಾರೆ. ತೆಂಗಿನ ದೀವರ ಸೃಷ್ಟಿ ಹೇಗಾಯಿತು ಎಂದರೆ ಬ್ರಹ್ಮನಿಗೆ ಬಾಯಾರಿಕೆಯಾಗಿ ಒಬ್ಬನನ್ನು ಸೃಷ್ಟಿಸಿ ಅವನ ಕೈಗೆ ಬಿಲ್ಲು ಬಾಣ ಕೊಟ್ಟು ಕುಡಿಯಲು ಏನಾದರು ತನ್ನಿ ಎಂದು ಹೇಳುತ್ತಾನೆ. ಅವನು ಆಯುಧಗಳೊಂದಿಗೆ ಕಾಡಿಗೆ ತೆರಳಿ ತೆಂಗಿನ ಮರದಿಂದ ತೆಂಗಿನಕಾಯಿ ತಂದು (ಎಳನೀರು) ಬ್ರಹ್ಮನಿಗೆ ಕೊಡುತ್ತಾನೆ. ಅದನ್ನು ತೆಗೆದುಕೊಂಡ ಬ್ರಹ್ಮ ಆತನಿಗೆ 'ತೆಂಗಿನ ದೀವರ' ಎಂದು ಕರೆದು ಹರಸಿ ಮಾಯವಾಗುತ್ತಾನೆ. ಹೀಗೆ 'ತೆಂಗಿನ ದೀವರು' ಭೂಮಿಯಲ್ಲಿ ಅವತರಿಸಿದ ಕಥೆಯಿದೆ. ಈ ಕಥೆಗಳನ್ನು ಗಮನಿಸಿದರೆ ದೀವರ ಜನಾಂಗದ ಮೂಲ ಪುರುಷ ಶಿವ ಪರಮಾತ್ಮ ಆಗಿರುತ್ತಾನೆ. ಶಿವನಿಂದಲೇ ನಮ್ಮ ವಂಶ ಸೃಷ್ಟಿಯಾಗಿದೆ ಎಂಬ ತಿಳುವಳಿಕೆ ದೀವರಲ್ಲಿದೆ. ಈ ಕಥೆಗಳಲ್ಲಿ ಎರಡು ದೇವರುಗಳ ಪ್ರಸ್ತಾಪ ಮಾಡಲಾಗಿದೆ. ಶಿವನಿಂದ ಸೃಷ್ಟಿಯಾದ ವ್ಯಕ್ತಿಯಿಂದ ನಮ್ಮ ಜನಾಂಗ ಬೆಳೆದಿದೆ ಎಂಬ ಕಥೆ. ಬ್ರಹ್ಮನಿಂದ ಸೃಷ್ಟಿಯಾದ ವ್ಯಕ್ತಿಯಿಂದ ತೆಂಗಿನ ದೀವರ ವಂಶ ಬೆಳೆಯಿತು ಎಂಬ ಕಥೆಯನ್ನು ಗಮನಿಸಿದರೆ, ದೀವರಲ್ಲಿ ಕಾನು ದೀವರು ಮತ್ತು ತೆಂಗಿನ ದೀವರು ಎಂಬ ಪಂಗಡಗಳ ವ್ಯತ್ಯಾಸ ಏನು ಎಂಬುದು ತಿಳಿಯುತ್ತದೆ. ಕಾನು ದೀವರು ಅಥವಾ ಬಗನೆ ದೀವರು ಕಾಡಿನ ಸಮೀಪದಲ್ಲಿ ವ್ಯವಸಾಯ ಮಾಡುತ್ತಿದ್ದರು. ತೆಂಗಿನ

ದೀವರು ನಗರ ಸಮೀಪ ಬದುಕನ್ನು ರೂಢಿಸಿಕೊಂಡಿರಬಹುದು. ಹಾಗಾಗಿ ನಾಗರೀಕತೆಯ ಪ್ರಭಾವ ಇವರ ಮೇಲಾಗಿದೆ. ಇಲ್ಲಿ ಕಂಡು ಬರುವ ಬ್ರಹ್ಮ ಮತ್ತು ಶಿವ ದೇವರುಗಳ ವಿಚಾರವನ್ನು ಈ ರೀತಿ ಆಲೋಚಿಸ ಬಹುದು. ದೀವರ ಸೃಷ್ಟಿಗೆ ಕಾರಣವಾದ ದೇವರು 'ಶಿವ' ಆಗಿರುತ್ತಾನೆ. ಹಾಗೂ ಆಚಾರ್ಯರ ಪ್ರಭಾವದಿಂದಾಗಿ ವೈಷ್ಣವ ಧರ್ಮದ ತಿರುಪತಿ ತಿಮ್ಮಪ್ಪನ ಆರಾಧಕರಾಗಿಯೂ ಇರುವರು. ಆದರೆ ಘಟ್ಟದ ತಗ್ಗಿನಲ್ಲಿರುವ ತೆಂಗಿನ ದೀವರು ರಾಮಾನುಜಾಚಾರ್ಯರ ಪ್ರಭಾವದಿಂದಾಗಿ ವೈಷ್ಣವ ಧರ್ಮದ ತತ್ವಗಳನ್ನು ಅಳವಡಿಸಿ ಕೊಂಡು ತಮ್ಮ ಕಥೆಯಲ್ಲಿ ಸೃಷ್ಟಿಕರ್ತ ಬ್ರಹ್ಮನ ಕಲ್ಪನೆ ತಂದಿರಬಹುದು. ಈ ಪ್ರಬಂಧಕ್ಕೆ ಆಯ್ಕೆ ಮಾಡಿಕೊಂಡ ದೀವರು ಘಟ್ಟದ ಮೇಲಿನ ದೀವರು ಅಂದರೆ ಕಾನು ದೀವರು ಅಥವಾ ಬಗನೆ ದೀವರು (ಮಲೆನಾಡಿನ ದೀವರು) ಆಗಿರುತ್ತಾರೆ. ಘಟ್ಟದ ಕೆಳಗಿನ ದೀವರು ತೆಂಗಿನ ದೀವರಾಗಿರುತ್ತಾರೆ. ಇವರು ಕೂಲಿ, ಮೀನು ಹಿಡಿಯುವುದು, ತೆಂಗಿನ ಬೆಳೆ ಬೆಳೆಯುವುದು, ಈಚಲು ಮರದಿಂದ ಸೇಂದಿ ತಯಾರಿಸುವುದನ್ನು ಉಪಕಸುಬಾಗಿ ಅವಲಂಬಿಸಿರುತ್ತಾರೆ. ತೆಂಗಿನ ದೀವರು ಆರ್ಥಿಕವಾಗಿ ಸಧೃಡರಾಗಿದ್ದರಿಂದ ವ್ಯವಹಾರಿಕವಾಗಿ ಬ್ರಾಹ್ಮಣರ ಸಂಪರ್ಕದಿಂದಾಗಿ ಸಹಜವಾಗಿ ಇವರು ವೈಷ್ಣವ ಧರ್ಮದ ಪ್ರಭಾವಕ್ಕೊಳಗಾದರು. ಉತ್ಪಾದನಾ ವ್ಯವಸ್ಥೆ ಮತ್ತು ಆರ್ಥಿಕ ಸ್ಥಿತಿಗಳಿಂದ ಸಮುದಾಯ ಸ್ಥಿತ್ಯಂತರಗೊಳ್ಳುತ್ತದೆ. ತೆಂಗಿನ ಉತ್ಪಾದನೆ ತೆಂಗಿನ ದೀವರ ಆರ್ಥಿಕ ಸಧೃಡತೆಗೆ ಕಾರಣವಾಗಿ ಇವರ ಸ್ಥಿತಿಗತಿಗಳನ್ನು ಬದಲಾಯಿಸಿದ್ದರಿಂದ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ರಾಜಕೀಯದಲ್ಲಿ ಬದಲಾವಣೆಯಾಗಿ 'ಬ್ರಹ್ಮ'ನ ಕಲ್ಪನೆ ಸಹಜವಾಗಿ ಕಥೆಯಲ್ಲಿ ಹುಟ್ಟಿ ಕೊಂಡಿರಬಹುದು. ದೀವರಲ್ಲಿ ಮೊದಲು ಶೈವ ಪ್ರಭಾವವಿದ್ದು ನಂತರದಲ್ಲಿ ರಾಮಾನುಜಾಚಾರ್ಯರ ಪ್ರಭಾವದಿಂದಾಗಿ ವೈಷ್ಣವ ಪ್ರಭಾವ ಇವರ ಮೇಲಾಗಿರುವುದು ಸಹಜವಾಗಿದೆ.

ಕೆಳದಿಯ ಚನ್ನಮ್ಮಾಜಿಯ ಆಳ್ವಿಕೆಯ ಕಾಲದಲ್ಲಿ ಸೇನಾದಳಿತದಲ್ಲಿ ಪ್ರಮುಖ ಪಾತ್ರವಹಿಸಿದ ತಿಮ್ಮಣ್ಣ ನಾಯಕನ ಕಥೆ ಇಂತಿದೆ. ವಿಜಾಪುರದ ಆದಿಲ್‌ಶಾಹಿಯ ದಂಡು ಅಂಕೋಲೆಯ ಕೋಟೆಯನ್ನು ಗೆದ್ದುಕೊಂಡು ಮಿರ್ಜಾನ ಕೋಟೆಗೆ ಮುತ್ತಿಗೆ ಹಾಕಿದಾಗ ಕೆಳದಿಯ ಚನ್ನಮ್ಮಾಜಿಗೆ ಇದು ಗೊತ್ತಾಗಿ ಆಕೆ ದೀವೃತಿಯ ಮಗ ತಿಮ್ಮಣ್ಣನಾಯಕನಿದ್ದಲ್ಲಿಗೆ ಸ್ವತಃ ಹೋಗಿ ಯುದ್ಧಕ್ಕೆ ಪ್ರೇರೇಪಿಸುತ್ತಾಳೆ. ದಾಸನ ಮೇಪತೊಟ್ಟು ದಂಡಿನ ಕಡೆಗೆ ಹೊರಟ ತಿಮ್ಮಣ್ಣನಾಯಕನು ಅವರಿಂದ ಒಂದೊಂದು ದಮಡಿಯನ್ನು ಪಡೆದು ಎಣಿಸಿದಾಗ ಮೂರು ಸಾವಿರ ದಮಡಿಗಳಾದವು. ಮೂರುಸಾವಿರ ಸೈನಿಕರು ವೈರಿ ಪಡೆಯಲ್ಲಿದ್ದಾರೆ ಎಂದು ತಿಳಿದ ಈತ ಭಟ್ಕಳ, ಮುರ್ಡೇಶ್ವರ ಮಾರ್ಗವಾಗಿ ತನ್ನ ದಂಡನ್ನು ತೆಗೆದುಕೊಂಡು ಅವರ ಮೇಲೆರಗಿ ಅವರ ಬಿಡಾರವನ್ನು ಸುಟ್ಟು ಸೈನಿಕರನ್ನು ಸೆರೆ ಹಿಡಿಯುತ್ತಾನೆ. ತಿಮ್ಮಣ್ಣ ನಾಯಕನು Toddy Man ಆಗಿದ್ದನು ಎಂದು ಜೋನ್ ಪ್ರಾಯರ್ ಎಂಬ ವಿದ್ವಾಂಸ ಹೇಳಿದ್ದಾರೆ.

ಈಡಿಗ ಜನಾಂಗ ಮತ್ತು ದೀವರ ಜನಾಂಗದ ಬಗ್ಗೆ ಈ ರೀತಿ ಒಂದು ಕಥೆಯಿದೆ. ನವಬ್ರಹ್ಮರಲ್ಲಿ ಒಬ್ಬರಾದ ಅತ್ರಿ ಮಹರ್ಷಿಗಳು ಬ್ರಹ್ಮನ ಇಚ್ಛೆಯಂತೆ ದೇವಲೋಕ ಮತ್ತು ಭೂಲೋಕ ವಾಸಿಗಳ ಕ್ಷುತ್ ಬಾಧಾ ಪರಿಹಾರಕ್ಕಾಗಿ ಶ್ರಮಿಸಲು ಇಚ್ಛಿಪಟ್ಟರು.

"ಅತ್ರಿವಂಶ ಸಮುತ್ಪನ್ನ ಗೋತ್ರ

ಕಾರಾಗ್ನಿ ಬೋಧಯೆ।

ಕರ್ದಮಾಯನ ಶಾಖೇಯಸ್ತದಾ

ಕೌಂಡಿಣ್ಯ ನಾಶ್ಚಯೆ॥

ತನ್ನ ಆತ್ಮ ತೇಜಸ್ಸಿನ ಶಕ್ತಿಯಿಂದ 'ಓಂ' ಎನ್ನುವ ಮಂತ್ರ ಬಲದಿಂದ ಒಬ್ಬ ದಿವ್ಯ ಪುರುಷನನ್ನು ಸೃಷ್ಟಿಸಿದರು. ಆ ಪುರುಷನು ಆಯುಧಗಳ ಸಮೇತ ಅವತರಿಸಿದನು. ಈತನೇ ಕೌಂಡಿನ್ಯನೆಂಬ ನಾಮಧೇಯವುಳ್ಳವನಾದನು. ಈತನೇ ಅತ್ರಿ ಮಹರ್ಷಿಯ ಅಯೋನಿ ಪುರುಷನು. ಇವರು ಕೌಂಡಿನ್ಯ ಮಹರ್ಷಿ ಎಂದು ಪ್ರಖ್ಯಾತರಾದರು. ಕೌಂಡ್ಯಿ ಮಹರ್ಷಿಯು ತನ್ನ ತಂದೆಯ ಆಜ್ಞೆಯ ಪ್ರಕಾರ ಮತ್ತು ಮಂತ್ರಶಕ್ತಿಗಳ ಪ್ರಭಾವದಿಂದ ಭೂಲೋಕದಲ್ಲಿ ಪ್ರಥಮವಾಗಿ ಕಲ್ಪವೃಕ್ಷಗಳು, ನಾರಿಕೇಳ ವೃಕ್ಷಗಳು ಫಲವೃಕ್ಷಗಳು ಮತ್ತು ಮೂಲಿಕಾ ಪುಷ್ಪಲತಾ ಗಿಡಮರಗಳನ್ನು ಸೃಷ್ಟಿಸಿದ. ಇದರಿಂದ ಭೂಲೋಕ ಮತ್ತು ದೇವಲೋಕವಾಸಿಗಳಿಗೆ ಆಹಾರ ಒದಗಿಸಿಕೊಟ್ಟಂತಾಯಿತು. ಕೌಂಡಿನ್ಯ ಮಹರ್ಷಿಯು ತಂದೆಯ ಆಜ್ಞೆಯಂತೆ ಬ್ರಾಹ್ಮಣ ಮನೆತನಕ್ಕೆ ಸೇರಿದ ಸುಮಂತ-ಪ್ರದೇವ ಎಂಬ ದಂಪತಿಗಳಿಗೆ ಜನಿಸಿದ ಮಾಯಕನ್ಯೆ ಎಂಬ ಕನ್ಯೆಯನ್ನು ಪಾಣಿಗ್ರಹಣ ಮಾಡಿಕೊಂಡು ಅನೇಕ ವರ್ಷಗಳ ಕಾಲ ಸುಖ ಸಂತೋಷಗಳಿಂದ ಕಾಲ ಕಳೆದರು.

ಅನಂತರ ಈ ದಂಪತಿಗಳಿಗೆ ದಿವ್ಯಜ್ಞಾನ ಸಂಪನ್ನರೂ, ತೇಜೋವಂತರೂ ಆದ ನಾಲ್ಕು ಮಂದಿ ಗಂಡು ಮಕ್ಕಳು ಜನಿಸಿದರು. ಇವರೇ ಕ್ರಮವಾಗಿ ಕೌಂಡಿಲ್ಯ, ಆಯ್ಯುದ್ಧವರ್ಮ, ವಾಮಾಕ್ಷ, ದೇವಾಶ್ರಯ ಎಂಬ ಹೆಸರುಗಳಲ್ಲಿ ಈ ನಾಲ್ಕರೂ ಕೌಂಡಿನ್ಯ ಗೋತ್ರೋದ್ಭವರಾದರು. ಕೌಂಡಿಲ್ಯನು ಸ್ಪುರದ್ರೂಪಿ ಎಂಬ ಕನ್ಯೆಯನ್ನು ಆಯ್ಯುದ್ಧವರ್ಮನು ವಿಮಲಾದೇವಿ ಎಂಬ ಕನ್ಯೆಯನ್ನು, ವಾಮಾಕ್ಷನು ನಿರ್ಮಲಾದೇವಿ ಎಂಬ ಕನ್ಯೆಯನ್ನು ದೇವಾಶ್ರಯನು ಕುಶಲಾದೇವಿ ಎಂಬ ಕನ್ಯೆಯನ್ನು ವಿವಾಹವಾದರು. ಕ್ರಮವಾಗಿ ಇವರು ನಾಲ್ಕು ಗೋತ್ರ ಹೆಸರುಗಳಲ್ಲಿ ಪ್ರಸಿದ್ಧರಾದರು. ದೇವತೆಗಳ ಆಯುಷ್ಯ ವೃದ್ಧಿಗೆ ಕಲ್ಪವೃಕ್ಷದಲ್ಲಿ ಅಮೃತಸಿದ್ಧಿ ರಸವನ್ನು ಸೃಷ್ಟಿಸಿ ದೇವತೆಗಳಿಗೆ ಅರ್ಪಿಸುತ್ತಿದ್ದರು. ಇವರು ನಾಲ್ಕು ಜನರು ಶಿವಪೂಜೆ ಮಾಡುತ್ತಿದ್ದರು. ಕಲ್ಪವೃಕ್ಷದಿಂದ ಅಮೃತಸಿದ್ಧಿ ರಸವನ್ನು ತೆಗೆಯುತ್ತಿದ್ದ ಜನರು ಇವರ ಪ್ರೀತಿಗೆ ಪಾತ್ರರಾದರು. ಈ ಮುನಿಕುಮಾರರು ಇವರಿಗೆ ಇದೆ ವೃತ್ತಿಯನ್ನು ಮುಂದುವರಿಸಿಕೊಂಡು ಲೋಕ ಪ್ರಸಿದ್ಧಿ ಪಡೆಯುವಿರಿ ಎಂದು ಹರಸಿದರು. ಹೀಗೆ ಈಡಿಗ ಜನಾಂಗ ಜನ್ಮ ತಾಳಿತು. (ಆದಿಗೌಡ ದೀಪಿಕ)

ಮತ್ತೊಂದು ಕಥೆ. ಇಂತಿದೆ ಶಿವ ಪಾರ್ವತಿಯರು ವಿಹಾರಕ್ಕೆಂದು ಹೊರಟಾಗ ಪಾರ್ವತಿಗೆ ದಾರಿ ಮಧ್ಯದಲ್ಲಿ ಬಾಯಾರಿಕೆಯಾಗುತ್ತದೆ. ಒಂದು ಹನಿ ನೀರು ಅಲ್ಲೆಲ್ಲಿಯು ದೊರಕುವುದಿಲ್ಲ. ಪಾರ್ವತಿಗೆ ಈಚಲು ಮರ ಕಣ್ಣಿಗೆ ಬಿತ್ತು. ದಾರಿಯಲ್ಲಿ ಬಣಜಿಗನೊಬ್ಬ ಬಳೆಗಳ ಸರವನ್ನು ಹೆಗಲ ಮೇಲೆ ಹಾಕಿಕೊಂಡು ಹೋಗುತ್ತಿದ್ದನು. ಪಾರ್ವತಿಯ ಸ್ಥಿತಿ ನೋಡಿ ಅಲ್ಲೆಲ್ಲಿಯು ನೀರು ಕಾಣದೆ ಈಚಲು ಮರವನ್ನು ಹತ್ತಿ ಕೊರಳಲ್ಲಿದ್ದ ಶಿವಲಿಂಗದ ಕರಂಡಿಕೆಯಲ್ಲಿ ಆ ರಸವನ್ನು ತೆಗೆದುಕೊಂಡು ಬಂದು ಪಾರ್ವತಿಗೆ ಕೊಟ್ಟನು. ಪಾರ್ವತಿಯು ಇದರ ರುಚಿ ಮತ್ತು ತತ್‌ಕ್ಷಣದಲ್ಲಿ ಆಯಾಸ ಪರಿಹಾರದ ಶಕ್ತಿಯನ್ನು ಸ್ವತಃ ಅನುಭವಿಸಿದಳು. ಸಂತೋಷ

ಗೊಂಡ ಈಕೆ ಇದನ್ನೆ ಉದ್ಯೋಗ ಮಾಡಿಕೊಂಡು ಮುಂದುವರೆ ಎಂದು ಹರಸಿದಳು. ಹೀಗೆ ಈಡಿಗ ಜನಾಂಗ ಸೃಷ್ಟಿ ಯಾಯಿತು ಹಾಗೂ ಈಡಿಗ ಜನಾಂಗದ ಮೂಲಕ್ಕೆ ಸಂಬಂಧಪಟ್ಟ ಕಥೆಯಿದಾಗಿದೆ.

ದೀವರ ಚಾತುರ್ಯಕ್ಕೆ ಸಂಬಂಧಪಟ್ಟ ಕಥೆಯೊಂದು ಮಲೆನಾಡಿನ ಭಾಗದಲ್ಲಿ ಪ್ರಚಲಿತದಲ್ಲಿದೆ. ಕೆಳದಿಯ ರಾಜಮನೆತನಕ್ಕೆ ಮುಸ್ಲಿಂ ದಾಳಿ ಪದೆ ಪದೆ ಆಗುತ್ತಿತ್ತು. ಒಂದು ಸಾರಿ ಕೆಳದಿಯ ಸಾಮ್ರಾಜ್ಯ ಅದಿಲ್‌ಶಾಹಿಯ ವಶವಾಗುವ ಕಾಲ ಸನ್ನಿತವಾಗಿತ್ತು. ಕೆಳದಿಯ ಸೈನ್ಯ ಅದಿಲ್‌ಶಾಹಿಯ ಕುಟಿಲ ಯುದ್ಧ ನೀತಿಯಿಂದಾಗಿ ದಿಕ್ಕಾಪಾಲಾಗಿ ಹಂಚಿಹೋಗಿತ್ತು. ಕೆಲ ಸಹಸ್ರ ಸೈನಿಕರನ್ನು ವಿಜಾಪುರದ ಸೈನಿಕರು ಮುತ್ತಿಗೆ ಹಾಕಿ ಸೆರೆ ಹಿಡಿಯುವ ಸಂದರ್ಭದಲ್ಲಿ ದೀವರ ಜನಾಂಗದ ಸೈನಿಕರು ತತ್‌ಕ್ಷಣ ಕುಂಡೆಗೆ 'ನಸರಿ' ಬಳಿದುಕೊಂಡು ಸತ್ತ ಸೈನಿಕರ ಮುಗ್ಗುಲಲ್ಲಿ ಮಲಗಿಕೊಂಡರು. ಅದಿಲ್‌ಶಾಹಿಯ ಸೈನಿಕರು ಕೆಳದಿಯ ಸೈನ್ಯ ದಿಕ್ಕಾಪಾಲಾ ಯಿತು. ಹೆಚ್ಚು ಸೈನಿಕರು ಸತ್ತರೆಂದು ಭ್ರಮಿಸಿ ವಾಪಾಸು ಹೊರಟಿತು. ಸತ್ತಂತೆ ಮಲಗಿದ ದೀವ ಸೈನಿಕರು ಮತ್ತು ದಿಕ್ಕಾಪಾಲಾಗಿ ಓಡಿಹೋದ ಅರಣ್ಯದಲ್ಲಿ ತಲೆಮರೆಸಿಕೊಂಡಿದ್ದ ಇತರೆ ಸೈನಿಕರು ಒಟ್ಟಾಗಿ ಅದಿಲ್ ಶಾಹಿಯ ಸೈನ್ಯದ ಮೇಲೆ ಆಕ್ರಮಣ ಮಾಡಿ ಅವರನ್ನು ಸೋಲಿಸಿದರು. (ಗೆರಿಲ್ಲಾ ಯುದ್ಧತಂತ್ರ)

ದೀವರಿಗೆ ಸಂಬಂಧಪಟ್ಟ ದಂತಕಥೆಗಳೆಲ್ಲ ಶೌರ್ಯಕ್ಕೆ ಚಾತುರ್ಯಕ್ಕೆ, ಸಾಹಸಕ್ಕೆ ಸಂಬಂಧಪಟ್ಟಿದ್ದರೆ, ಈಡಿಗ ಜನಾಂಗದ ಬಗೆಗಿನ ದಂತಕಥೆಗಳು ತೆಂಗಿನ ಮರದ ರಸ, ಈಚಲ ಮರದ ರಸಕ್ಕೆ ಸಂಬಂಧಪಟ್ಟ ಕಥೆಗಳಾಗಿವೆ.

**ಕರ್ನಾಟಕ ಗೆಜೆಟಿಯರ್ ೩೨ರಲ್ಲಿ ದಾಖಲಾದಂತೆ**

ಕರ್ನಾಟಕದ ಬೇರೆ ಬೇರೆ ಪ್ರದೇಶಗಳಲ್ಲಿ ವಾಸಿಸುವ ದೀವರು, ದೀವರ ಮಕ್ಕಳು, ಹಳೆಪೈಕ, ಬಿಲ್ಲವರು, ನಾಮಧಾರಿಗಳು ಪೂಜಾರರು, ಈಳಿಗೇರ್, ಕುಮಾರ ಪಂಥದವರು, ಈಡಿಗ ಮುಂತಾದ ಸಮುದಾಯಗಳಿವೆ. 'ಹಳೆಪೈಕರು' ಎಂಬುದು ಹಳೆಯ ಸೈನಿಕರು ಎಂಬ ಅರ್ಥವನ್ನು ನಿರ್ದೇಶಿಸುತ್ತದೆ. ಮಲೆನಾಡು ಜಿಲ್ಲೆಗಳಲ್ಲಿ ದೀವರು (ಹಳೆಪೈಕ) ಎಂಬ ಸಮುದಾಯ ಕೇಂದ್ರೀಕೃತಗೊಂಡಿದೆ. ಇವರಲ್ಲಿ ಈಗ ಸೈನಿಕರ ಕೆಚ್ಚು ಉಳಿದ ಲಕ್ಷಣ ಇಲ್ಲ. ಬಹಳಷ್ಟು ಜನ ಕೃಷಿಯನ್ನು ಅವಲಂಬಿಸಿದ್ದಾರೆ. ವೈಷ್ಣವ ಪಂಥದ ಅನುಯಾಯಿಗಳು ಪ್ರಾದೇಶಿಕ ಸ್ವರೂಪಕ್ಕೆ ಅನುಗುಣವಾಗಿ ಶಿವಭಕ್ತರೂ ಇದ್ದಾರೆ. ಕೃಷಿಯನ್ನು ಸಂಪೂರ್ಣವಾಗಿ ಅವಲಂಬಿಸುವ ಮೊದಲು ಈಚಲು, ತೆಂಗು ಮತ್ತು ತಾಳೆ ಮರಗಳಿಂದ ಹೆಂಡ ಇಳಿಸುವ ಕಾಯಕವನ್ನು ನಡೆಸುತ್ತಿದ್ದರು. (ಕರ್ನಾಟಕದಲ್ಲಿ ಸಾಮಾಜಿಕ ಕ್ರಾಂತಿ ಸಂಭವಿಸಿದ ೧೨ನೆಯ ಶತಮಾನದಲ್ಲಿ ಬಸವಣ್ಣನ ಅನುಯಾಯಿ ಆಗಿ ಹೆಂಡದ ಮಾರಯ್ಯ ಎಂಬ ಈ ಜನಾಂಗದ ವಚನಕಾರ ಇದ್ದನು)

ದಕ್ಷಿಣ ಕನ್ನಡದಲ್ಲಿ ಪ್ರಚಲಿತ ಇರುವ ಬಿಲ್ಲವರಲ್ಲಿ ಕೂಡ ಸೈನಿಕ ಹಿನ್ನೆಲೆ ಇದೆ. ಬಿಲ್ಲವ ಎಂಬುದು ಬಿಲ್ಲಾಳು ಎಂಬುದರಿಂದ ಬಂದಿರುವ ಸಾಧ್ಯತೆ ಇದೆ. ಗ್ರಾಮ ದೇವತೆಗಳ ಪೂಜಾ ಕೈಂಕರ್ಯವನ್ನು ಈ ಸಮುದಾಯದಲ್ಲಿಯೇ ಕೈಗೊಳ್ಳುತ್ತಿದ್ದ ಕಾರಣ ಪೂಜಾರಿ ಎಂಬ ನಾಮ ವಿಶೇಷವೂ ಸೇರ್ಪಡೆಯಾಗಿದೆ.

## ಕಾಸ್ಟಸ್ ಅಂಡ್ ಟ್ರೈಬ್ಸ್ ಆಫ್ ಸದರ್ನ್ ಇಂಡಿಯಾ

೧೯೦೯ರಲ್ಲಿ ಪ್ರಕಟವಾದ ಎ.ಥರ್ಸ್ಟನ್‌ರವರ 'ಕಾಸ್ಟಸ್ ಅಂಡ್ ಟ್ರೈಬ್ಸ್ ಆಫ್ ಸದರ್ನ್ ಇಂಡಿಯಾ' ಎಂಬ ಪುಸ್ತಕದಲ್ಲಿ ಹಳೆಪೈಕ ದೀವರು ಎಂಬ ಹೆಸರನ್ನು ಉಲ್ಲೇಖಿಸಿದ್ದಾರೆ. ಹಳೆಪೈಯಕ ಅಥವಾ ಹಳೆಪಾಯಕ, ಹಳೆ ಎಂದರೆ ಪುರಾತನ, ಪಾಯಕ ಎಂದರೆ ಸೈನಿಕ, ಪದಾತಿದಳ, ಕಾಲಾಳು, ಕಾಲುದಳ ಎಂದರ್ಥ. ಇವರು ವಿಜಯನಗರ ಮತ್ತು ಕೆಳದಿ ಸಾಮ್ರಾಜ್ಯಗಳಲ್ಲಿ ಸೈನಿಕರಾಗಿ ಉದ್ಯೋಗ ಮಾಡುತ್ತಿದ್ದರು ಎಂದು ಹೇಳಲಾಗಿದೆ. ದಕ್ಷಿಣ ಕನ್ನಡ ಜಿಲ್ಲೆಯ ಬಿಲ್ಲವರು, ಕೇರಳದ ಥಿಯಸ್, ಉತ್ತರ ಕನ್ನಡ ಜಿಲ್ಲೆಯ ದೀವರು ಮೂಲತಃ ಒಂದೇ ಬುಡಕಟ್ಟಿಗೆ ಸೇರಿದವರು.

ತೆಂಗಿನ ದೀವರು ಕರಾವಳಿ ಪ್ರದೇಶದಲ್ಲಿ ವಾಸವಾಗಿದ್ದು ತೆಂಗಿನ ಮರದಿಂದ ಹೆಂಡ ಇಳಿಸುವ ಉದ್ಯೋಗ ಮಾಡುತ್ತಿದ್ದರಿಂದ ತೆಂಗಿನ ದೀವರಾದರು. ಬಯಿನೆ ಅಥವಾ ಕಾನುದೀವರು ಪಶ್ಚಿಮ ಘಟ್ಟಗಳ ಅರಣ್ಯ ಪ್ರದೇಶದಲ್ಲಿ ವಾಸವಾಗಿದ್ದು, ಬಗನೆ ಮರದಿಂದ ಹೆಂಡ ಇಳಿಸುವ ಉದ್ಯೋಗ ಮಾಡುತ್ತಿದ್ದರಿಂದ ಬಯಿನೆ ಅಥವಾ ಕಾನುದೀವರಾದರು. ಕರಾವಳಿ ಪ್ರದೇಶದಲ್ಲಿ ಬಹುಬೇಗ ನಾಗರಿಕತೆ ಪ್ರವೇಶ ಮಾಡಿದ್ದರಿಂದ ತೆಂಗಿನ ದೀವರು ತಮ್ಮ ಉಡುಗೆ-ತೊಡುಗೆ, ಜೀವನ ಪದ್ಧತಿಯನ್ನು ಬದಲಾಯಿಸಿಕೊಂಡು ಕಾನುದೀವರಿಗಿಂತ ಸಾಮಾಜಿಕವಾಗಿ ಮೇಲ್‌ಸ್ತರಕ್ಕೆ ಏರಿದರು. ಮೂಲದಲ್ಲಿ ಈ ಎರಡು ಗುಂಪುಗಳು ಒಂದೇ ಆಗಿದ್ದವು. ಈ ಕಾನುದೀವರೆ ಮಲೆನಾಡಿನ ಭಾಗದ ದೀವರು.

## ೨.೪. ಶಾಸನಗಳು

### ಹೈಗುಂದದ ಶಾಸನ

ಹೈಗುಂದ ಎಂಬ ಪ್ರದೇಶವು ಹೊನ್ನಾವರದಿಂದ ಹನ್ನೆರಡು ಮೈಲು ದೂರದಲ್ಲಿ ಶರಾವತಿ ನದಿಯ ದಂಡೆಯ ಮೇಲಿದೆ. ಕ್ರಿ.ಶ.ಹತ್ತನೆಯ ಶತಮಾನದ ಶಾಸನವೊಂದು ಶರಾವತಿಯ ನದಿಯ ಬಂಡೆಯ ಮೇಲಿದೆ. 'ಪೈಗುಂದ' 'ಪಯ್ಯಿಗುಂದ ದಬ್ಬೆ'ಯ ಉಲ್ಲೇಖವಿದೆ. ಮಾತೃ ಪ್ರಧಾನ ಕುಟುಂಬಗಳಾದ ಪೈಕರು ಈ ಅಬ್ಬೆ ಅಬ್ಬೆಯ (ಮಾತೃ ದೇವತೆ) ಆರಾಧಕರಾಗಿದ್ದರು. ಈ ಪಶುನಾಡಿನ ಮೂಲ ನಿವಾಸಿಗಳು ಪಶುಕರು, ಈ ಪಶುಕರೇ ಕ್ರಮೇಣ ಪಯಿಕ, ಪೈಕರಾಗಿರಬೇಕು. ಪೈಕರು ಇಲ್ಲಿಯ ವಾತಾವರಣಕ್ಕೆ ಒಗ್ಗುವ ಬೇಟೆಗಾರಿಕೆ, ಪಶುಪಾಲನೆ, ಬೇಸಾಯಗಳನ್ನು ಕೈಕೊಂಡು ಈ ಪ್ರದೇಶವನ್ನು ಆಳಿರಬೇಕು. ಪೈಗುಂದದ ದೊರೆಯೊಬ್ಬನು ಬ್ರಾಹ್ಮಣರನ್ನು ಇಲ್ಲಿಗೆ ಬರಮಾಡಿಕೊಂಡು, ಅವರ ಯಜ್ಞಯಾಗಾದಿಗಳಿಗೆ ಸಹಾಯ ಸಲ್ಲಿಸಿದನಂತೆ. ಆ ದೊರೆಯ ಕೃಪಾಪೋಷಣೆಯಲ್ಲಿ ಬ್ರಾಹ್ಮಣರು, ಪೈಗುಂದದಲ್ಲಿ ತಮ್ಮ ಮೊದಲ ಯಜ್ಞವನ್ನು ನೆರವೇರಿಸಿದರಂತೆ. ಈ ಐತಿಹ್ಯವನ್ನು ಪುಷ್ಟೀಕರಿಸುವ ನಿದರ್ಶನಗಳಾಗಿ, ಹೈಗುಂದದಲ್ಲಿ ಹಿಂದೆ ಬ್ರಾಹ್ಮಣರು ಮಾಡಿದ ಕುಂಡಗಳ ಕುರುಹುಗಳು ಇನ್ನೂ ಇವೆ. ಬ್ರಾಹ್ಮಣರಿಗೆ ಯಜ್ಞಮಾಡಲು ನೆರವಿತ್ತ ಈ ದೊರೆ, ಪೈಕ ದೊರೆಯೇ ಆಗಿರಬೇಕು. ಬೇರೆಡೆಯಿಂದ ಈ ಪಶುನಾಡಿಗೆ, ಪಚ್ಚೆನಾಡಿಗೆ ವಲಸೆ ಬಂದ ಬ್ರಾಹ್ಮಣರು ಇಲ್ಲಿಯೇ ನೆಲಸಿ ಪಶುಪಾಲನೆ, ತೋಟಗಾರಿಕೆ ವ್ಯವಸಾಯಗಳನ್ನು ಕೈಗೊಂಡು ಪಶುಕ > ಪಯಕ > ಪೈಕ > ಹೈಕ, ಹೈಗರಾದರು.

ಬ್ರಾಹ್ಮಣರು ಹೈಗರಾಗಿ ಹೆಸರುವಾಸಿಗಳಾದ ಮೇಲೆ ಇಲ್ಲಿಯ ಮೂಲ ನಿವಾಸಿಗಳಾದ ಪೈಕರನ್ನು ಹಳೆಪೈಕರೆಂದು ಕರೆದಿರಬೇಕು.

### ಶಿವಮೊಗ್ಗ ಶಾಸನ

ಶಿವಮೊಗ್ಗ ಶಾಸನವು ದೀವರ ಉಲ್ಲೇಖದ ಬಗ್ಗೆ ಬೆಳಕು ಚೆಲ್ಲುತ್ತದೆ. ಶಿವಮೊಗ್ಗ ತಾಲ್ಲೂಕಿನ ಕೂಡಲಿ ಗ್ರಾಮದಲ್ಲಿರುವ ಶಾಸನ ಈ ರೀತಿ ಇದೆ. 'ಮದ್ವಾಚಾರ್ಯ ಮತಾಂಭೋಜ ಮಾರ್ತಾಂಡಾಯಿತ್ ತೇಜಸೇ, ಬ್ರಹ್ಮಣ್ಯ ತೀರ್ಥ ಶಿಷ್ಯಾಯ ಬ್ರಹ್ಮ ನಿರ್ಮಲ ಮೂರ್ತಯೇ ವ್ಯಾಸ ತೀರ್ಥಯ ತೀಂದ್ರಾಯ ವಿದ್ವದಿಂ ದೀವರೇಂದವೆ'(ಶಿವಮೊಗ್ಗ ತಾ. ಶಾಸನ ಸಂ. ೮೫, ಕೂಡಲಿ)

'ಗೊರವ ಬ್ರಾಹ್ಮಣ ಸ್ರಿತರ್ಜಿಡವರಿಷ್ಪರ್ಣಂಡಿತ ಪ್ಪಾರ ಕರ್ಪಿರಿ! ಯುರ್ಗಾಯುಕವಾದಕಕ್ಕರ್ಥಕರಂ ನಾನರ್ತ್ರಕ...ಡಿಗಳ ರಣಾಯುತ ವಿಗಂಬರರ್ಬ್ರಧಿಯಾದ್ರ ಷೋಡಸ...ದೆತಾಂಕರೆ ದೀವಂ, ಮಧುಸೂಧನಂ ಸೊಗಯಿಪ ಭೂಲೋಕ ಕಲ್ಪದ್ರುಮಃ'(ಶಿವಮೊಗ್ಗ ತಾ., ಶಾಸನ ಸಂ. ೫, ಬಸವನಗಂಗೂರು)

ದೀವರನ್ನು ಶಿಲಾ ಶಾಸನಗಳಲ್ಲಿ ಧರ್ಮ ಸೂಚವಾಗ ಪ್ರಯೋಗಿಸಿರುವುದನ್ನು ಕಾಣಬಹುದು. ಇದರಿಂದ ದೀವರು ಎಂಬ ಜನಾಂಗ ಬಹುಕಾಲದಿಂದ ಇತ್ತೆಂಬುದು ಕಂಡು ಬರುತ್ತದೆ.

### ರಾಷ್ಟ್ರಕೂಟ ಕೃಷ್ಣನ ಕಾಲದ ಶಾಸನ

ರಾಷ್ಟ್ರಕೂಟ ಕೃಷ್ಣನ ಕಾಲದ ಶಾಸನ ECVIMG ೨೨ ೧೧೨೯ AD ದಲ್ಲಿ ದೀವರು ಮೀನನ್ನು ಹಿಡಿದು ಸೇವಿಸುತ್ತಿದ್ದರು ಮತ್ತು ಆ ದೀವರ ಬಮ್ಮರ್ಣನ ಹೆಸರು ಶಾಸನೋಕ್ತವಾಗಿದ್ದು, ಇಲ್ಲಿ ಬೌದ್ಧ ಸನ್ಯಾಸಿಗಳಿಗೆ ವಿಹಾರ ಮತ್ತು ಆರ್ಯ ಸಂಘಗಳಿಗೆ ದೀಪಕ ಎಂಬ ನಾಡಿನಲ್ಲಿ ಸುಂದರಿಕಾ ಎಂಬ ಹೆಸರಿನ ಊರನ್ನು ದಾನವಾಗಿ ಕೊಟ್ಟು ಶಾಸನವಿದೆ. ಇತಿಹಾಸಕಾರರು ಈ ಶಾಸನವನ್ನು ಆಧಾರವಾಗಿಟ್ಟುಕೊಂಡು ಕಾರವಾರದ ಸಮೀಪ ಅಂಜದಿವ್ ಅಥವಾ ಗೋವೆಯ ಸಮೀಪದ ದಿವರ್ ಎಂಬ ನಾಡಿನಲ್ಲಿ ದೀವರು ಇದ್ದು ಮೀನು ಹಿಡಿದು ಜೀವನ ಸಾಗಿಸುತ್ತಿದ್ದರೆಂದು, ನಂತರ ಅಲ್ಲಿಂದ ಕರಾವಳೀ ಪ್ರದೇಶಕ್ಕೂ ತದನಂತರ ಪಶ್ಚಿಮ ಘಟ್ಟಗಳ ಮೇಲೇರಿ ಬಂದು ಜನಾಂಗ ಹರಡಿಕೊಂಡಿತೆಂದೂ ಅಭಿಪ್ರಾಯ ಪಟ್ಟಿರುತ್ತಾರೆ. ಆದರೆ ಇತಿಹಾಸ ತಜ್ಞರ ಅಭಿಪ್ರಾಯ ತಪ್ಪು, ಆ ದ್ವೀಪದಲ್ಲಿದ್ದ ಕಾಲದಲ್ಲಿಯೇ ಇಲ್ಲಿಯೂ ದೀವರಿರುವುದು ಕಂಡು ಬರುತ್ತದೆ. ಯಾವುದೇ ರಾಜನ ಸೈನ್ಯದೊಡನೆ ಯುದ್ಧಾಸಕ್ತರಾಗಿ ಹೋಗಿದ್ದ, ನಂತರ ಅಲ್ಲಿಯೇ ಕೆಲವರು ಗೆದ್ದ ದೊರೆಯ ಸೈನಿಕರಾಗಿ ನೆಲೆಸಿರಬಹುದು. ದೀವರಿಗೆ ಇನ್ನೊಂದು ಪುರಾತನ ಹೆಸರು ಹಳೆಪೈಕ. ಹಳೆಪೈಕ ಎಂದರೆ ಆದಿ ಸೈನಿಕ, ಅಥವಾ ಆದಿಯೋಧ, ಹಳೆಪೈಕ ಎನ್ನುವುದೇ ಇವರ ವೃತ್ತಿ. ಯೋಧ ವೃತ್ತಿ, ಹೋರಾಟದ ಮನೋಭಾವ ದವರು ಧೀರರು ಶೂರರು ಎಂಬುದನ್ನು ಸ್ಪಷ್ಟಪಡಿಸುತ್ತದೆ.

### ಕರ್ನಾಟಕದ ಕೈಫಿಯತ್ತುಗಳು

'ಕರ್ನಾಟಕದ ಕೈಫಿಯತ್ತು' ಕರ್ನಾಟಕದ ಸಾಂಸ್ಕೃತಿಕ ಜಗತ್ತಿನ ಮರು ಪರಿಶೀಲನೆಗೆ ಮತ್ತು ಚಿಂತನೆಗೆ ಸಂಬಂಧಪಟ್ಟ ಆಕರ ಸಾಮಗ್ರಿ, ರಾಜ್ಯಗಳ ಪೂರ್ವಕಾಲೀನ ಕನ್ನಡ ನಾಡಿನ ಅಧ್ಯಯನಕ್ಕೆ ಶಾಸನಗಳು-

ಸಾಹಿತ್ಯಗಳು ಮುಂತಾದ ಆಕರ ಸಾಮಗ್ರಿಗಳು ನೆರವಾದರೆ ಉತ್ತರಕಾಲೀನ ಮತ್ತು ಜನಾಂಗಗಳ ಅಧ್ಯಯನಕ್ಕೆ ಕೈಫಿಯತ್ತುಗಳು ಸಹಾಯಕವಾಗುತ್ತವೆ. ಸತ್ಯಾಸತ್ಯಗಳಿಂದ ಕೂಡಿರುವ ಕೆಲ ಸಂಗತಿಗಳನ್ನು ಸಹಜವಾಗಿ ಬೇರ್ಪಡಿಸಿ ನೋಡಿಕೊಳ್ಳಬಹುದಾಗಿದೆ. ಇದು ಜನಾಂಗೀಯ ಅಧ್ಯಯನಕಾರನಿಗೆ ಉಪಯುಕ್ತ ಮಾದರಿಯಾಗಿದೆ. ಶಾಸನಗಳು ಪ್ರಧಾನ ಆಕರ ಸಾಮಗ್ರಿಯಾದರೆ, ಕೈಫಿಯತ್ತು ಗೌಣ ಆಕರ ಸಾಮಗ್ರಿ ಯಾಗಿದೆ. ಕೈಫಿಯತ್ತುಗಳನ್ನು ಸಂಗ್ರಹಿಸಿದ ಪ್ರಮುಖ ವಿದ್ವಾಂಸ ಕರ್ನಲ್ ಮೆಕೆಂಝಿ, ಕರ್ನಾಟಕದಲ್ಲಿ ಪ್ರಥಮ ವ್ಯಕ್ತಿ ಈತನೆ ಆಗಿದ್ದಾನೆ. ಈತನ ಕಾರ್ಯ ಶ್ಲಾಘನೀಯವಾದದ್ದು. 'ಕೈಫಿಯತ್' ಮೂಲತಃ ಅರೇಬಿಯನ್ ಭಾಷೆಯ ಪದವಾಗಿದ್ದು ಬಹುಮನಿ ಅರಸರೊಂದಿಗೆ ಭಾರತವನ್ನು ಪ್ರವೇಶಿಸಿತು. ಕೈಫಿಯತ್ ಎಂದರೆ ಸ್ಥಳ ಪುರಾಣ, ಎಂಬ ಅರ್ಥ ಹೊಂದಿದ್ದು ಬರುಬರುತ್ತಾ ವೃತ್ತಿ, ಜಾತಿ, ರಾಜಕೀಯ, ಧಾರ್ಮಿಕ, ಕೃಷಿ ವಾಣಿಜ್ಯ, ಕೈಗಾರಿಕೆ ಇತ್ಯಾದಿಗಳನ್ನು ಒಳಗೊಂಡಿದೆ. ಚರಿತ್ರೆ, ಐತಿಹ್ಯ ಪುರಾಣಗಳ ಮಿಶ್ರಣವಾಗಿದೆ. ಇವುಗಳನ್ನು ಬರೆದುಕೊಟ್ಟವರು ಶಾನುಭೋಗರು, ಗ್ರಾಮದ ಮತ್ತು ಜಾತಿಯ ಪ್ರಮುಖರು ಆಗಿದ್ದಾರೆ.

## ಸಾಗರದ ಕೈಫಿಯತ್ತು

ಸಾಗರ ಕೈಫಿಯತ್ತಿನಲ್ಲಿ ಕೆಳದಿಯ ಇತಿಹಾಸ, ಇಕ್ಕೇರಿ ಮತ್ತು ಸಾಗರದ ಪ್ರಸ್ತಾಪವಿದೆ. ಸಾಗರದಲ್ಲಿ ಕಾಣಬರುವ ಪಾಳೇಯಗಾರರ ವಿವರಣೆಗಳು ಯಾವ ಯಾವ ವಂಶದವರ ಆಳ್ವಿಕೆಗೆ ಒಳಪಟ್ಟಿತ್ತು ಎಂಬ ವಿವರಣೆಯಿದೆ. ದಿನಸಿಪೇಟೆಯ ವಿವರಣೆ, ತೆರಿಗೆ ಮತ್ತಿತರ ವಿಚಾರಗಳಿವೆ. ಕೆಳದಿ ಗ್ರಾಮದ ನಿರ್ಮಾಣ ಮಾಡುವಾಗ ಯಾವ ಯಾವ ಭಾಗದಲ್ಲಿ ಯಾವ ಜನಾಂಗಗಳ ಕೇರಿ ಇರಬೇಕೆಂದು ನಿಶ್ಚಯಿಸಲಾಯಿತು. ಬ್ರಾಹ್ಮಣರ ಕೇರಿ, ಕುಂಬಾರರ ಕೇರಿ, ಲಿಂಗಾಯಿತರ ಕೇರಿ, ಕಂಚಗಾರಕೇರಿ, ಕೇಣಿಮಾಡುವವರ ಕೇರಿ, ಉಪ್ಪಾರ ಕೇರಿ, ದೀವರ ಕೇರಿ, ತುರುಕರ ಕೇರಿ, ಅಗಸರ ಕೇರಿ, ಸಮಗಾರ ಕೇರಿ, ಕಾಯಿಪಲ್ಯೆ ಮಾರುವವರ ಕೇರಿ, ಕೊಂಕಣಿ ಕೇರಿ, ಹೀಗೆ ಅನೇಕ ಜಾತಿಗಳ ಕೇರಿಯ ಪ್ರಸ್ತಾಪವಿದೆ. ಮಠ ಮಂದಿರಗಳ ನಿರ್ಮಾಣದ ವಿಷಯಗಳೆಲ್ಲವು ಇದೆ. ಇಲ್ಲಿ ಯಾವುದೇ ಜನಾಂಗದ ಪೂರ್ಣ ವಿವರಗಳು ಲಭ್ಯವಾಗದೆ ಕೆಳದಿಯ ಇತಿಹಾಸಕ್ಕೆ ಒತ್ತು ಕೊಡುತ್ತದೆ (ಡಾ.ಎಂ.ಎಂ.ಕಲಬುರ್ಗಿ, ೧೯೯೪, ಪುಟ ೧೬೦).

## ಹಳೆಪೈಕದ ಜಾತಿ ರಿವಾಜು ಕೈಫಿಯತ್ತು

ಭಾವ ಸಂವತ್ಸರದಲ್ಲು ಸೋದೆ ಶೀಮೆ ಸಮಸ್ತ ಹಳೆಪೈಕದ ಕುಲದವರು ಕಟ್ಟೆಮನೆ ಗವುಡ, ಮರಗುಂಡಿ ಹನುಮನಾಯಕ ಬೆಡಸಗಾವೆ ಬಿಳೆನಾಯಕ, ಹುಲೆಕಲ್ಲ ಲಿಂಗನಾಯಕ, ಶಾಂತಪುರದ ಗವುಡ ಲಿಂಗನಾಯಕ, ಹೆರೂರ ಶೀಮೆ ಬದ್ರನಾಯಕ, ನಿಲುಕುಂದ ಕರೆನಾಯಕನ ಮಗ ತಿಮ್ಮ, ಬಾಳೂರು ಭರಮನಾಯಕ, ಕರೂರು ಶೀಮೆ ಕಾನುಗೋಡು ಮರಯ ನಾಯಕ, ಶಿರಸಿ ಶೀಮೆ ಬಸಿಯನಾಯಕ, ಯಲ್ಲಾಪುರದ ಶೀಮೆ ಸವಣಗಿರೆ ತಿಪ್ಪನಾಯಕ ಮುಂತಾದವರು ಸಹಾ ಬರೆಸಿಕೊಟ್ಟ ಹಳೆಪೈಕದ ಜಾತಿ ರಿವಾಜು ಕೈಫಿಯತು ಯೇನೆಂದರೆ..... ಹೀಗೆ ಪ್ರಾರಂಭವಾಗುತ್ತದೆ. ಮಲೆನಾಡಿನ ಹೊಸನಗರ, ಸಾಗರ, ಸಿದ್ದಾಪುರ, ತಾಲ್ಲೂಕುಗಳ ಗ್ರಾಮಗಳ ಮುಖಂಡರ ಹೆಸರುಗಳ ಪ್ರಸ್ತಾಪದೊಂದಿಗೆ ಜಾತಿಯ ರೀತಿ ರಿವಾಜುಗಳಿಗೆ ಸಂಬಂಧಪಟ್ಟಂತೆ ಕೆಲ ವಿಷಯಗಳಿವೆ (ಡಾ.ಎಂ.ಎಂ.ಕಲಬುರ್ಗಿ, ೧೯೯೪, ಪುಟ ೩೭೯).

“ನಮ್ಮ ಕುಲದಲ್ಲಿ ಜನನವಾದರೆ ಆರು ದಿವಸ ಹೊಲೆಯಿರಬೇಕು. ಏಳನೆಯ ದಿವಸಕ್ಕೆ ಕೂಸಿನ ತೊಟ್ಟಿಲಲ್ಲಿ ಹಾಕುತ್ತಲೆ ಸೂತಕ ಕಳೆಯುತ್ತದೆ. ತಿಂಗಳ ನಂತರ ಯರಕೊಂಡು ಕಾಯಿ ಹಣ್ಣು ವೀಳ್ಯದೆಲೆ ತಕ್ಕೊಂಡು ಹೊಳೆಗೆ ಹೋಗಿ ಪೂಜೆಮಾಡಿ ಹಣ್ಣು ಕಾಯಿ ವಡದು ಹೊಳೆ ಮೆಟ್ಟುವುದು ಕಲಂ” ಹೀಗೆ ಮುಕ್ತಾಯವಾಗುತ್ತದೆ.

**ಜಾತಿಯಲ್ಲಿ ಭೇದ**

೧. ಹಳೆದೀವರು ಜಾತಿ

೨. ಹೊಸದೀವರು ಜಾತಿ

೩. ಹಳೆದೀವರ ಹೆಣ್ಣು ಹೊಸದೀವರಿಗೆ ಆದೀತು, ಹೊಸದೀವರ ಹೆಣ್ಣು ಹಳೆದೀವರಿಗೆ ಆದೀತು. ಹಳೆದೀವರ ಹೆಣ್ಣು ಹಳೆದೀವರಿಗೆ ಆಗದು ಹೊಸದೀವರ ಹೆಣ್ಣು ಹೊಸದೀವರಿಗೆ ಆಗದು ಕಲಂ

೪. ನಮ್ಮ ಜಾತಿಯ ಬೆಡಗಿನ ವಿವರ... (ಮಾಹಿತಿ ಅಲಭ್ಯ)

ಇಲ್ಲಿ ಪ್ರಸ್ತಾಪಿಸಿದ ಹಳೆದೀವರು ಎಂದರೆ ಮೂಲನಿವಾಸಿಗಳು ಅಥವಾ ದಾಯಾದಿ (ಸೋದರ) ಕುಟುಂಬ, ಹೊಸದೀವರು ಹೊರಗಿನಿಂದ ಬಂದ ದೀವರು ಎಂದರ್ಥ. ಇಲ್ಲಿ ಮಾಹಿತಿ ಅಪೂರ್ಣವಾದರೂ ಹಳೆಪೈಕ ಎಂಬುವವರು ದೀವರೆ ಎಂಬ ವಿಷಯ ತಿಳಿಯುತ್ತದೆ.

## ೨.೫. ಕಾವ್ಯಗಳಲ್ಲಿ

ಕಾವ್ಯಗಳಲ್ಲಿ ದೀವ ಎಂಬ ಪದವನ್ನು ಉಪಮೆಗಳಾಗಿ ಬಳಸಿರುವುದನ್ನು ಕಾಣುತ್ತೇವೆ. ಇದನ್ನು ಗಮನಿಸಿದಾಗ ದೀವರು ಎಂಬ ಜನಾಂಗ ಸಮಾಜದಲ್ಲಿ ಗುರುತಿಸಿಕೊಂಡಿತ್ತು ಎಂಬ ವಿಷಯ ಕಾವ್ಯಗಳಲ್ಲಿ ಬಳಕೆಯಾಗಿರುವುದರಿಂದ ತಿಳಿಯುತ್ತದೆ

೧) ‘ಹರುಷದಿಂ ತಾನು ಬಸವ ದೀವರನು ಮಖಿಳ ನಿಯೋಗದೋಲಗವೆರಸಿ’ (ಬಸವ ಪುರಾಣ ೫-೧೨)

೨) ‘ಕರೆಸಿದನು ದೀವರನಯ್ಯ ನಾಗರಸಿಯಾಗಲಿ ನಿನ್ನ ಮಗಳೆನಲು’ (ಕುಮಾರವ್ಯಾಸ ೨-೨)

೩) ‘ದೀವರಿಗೆ ಬೇಡಿದುದನಿತ್ತು ಕಳುಹೆ’ (ಪ್ರೌಢರಾಯ ೧೧-೩೨)

೪) ‘ಗಗನ ಗಹನದೊಳೆ ಗವಿಯಿಪ ಖಗಕ್ಕೆ ಪತ್ತಿಂದ್ರ ದೀವರಂ ಬೀಸಿದ ರೇಣುಗಣ ನವಜಾಲ ಕೊಳಗಾಯ್ತೊ ಗುಮಿಗೆಯಿಂದ ನಿಮಿಷ ಪ್ರತಾಪನಃ ಚಿತ್ರಂ (ರಾಜಶೇಖರ ಚರಿತೆ ೬-೪೦ ಸ೦.)

೫) “ಪಿಡಿದೊಂದ ಪರ್ಬುಲಿಯ ನೊರ್ವಲ ಕಕ್ಷದಿಂದೊತ್ತಿ ತನ್ನ ಗೃಹಕ್ಕೆಳ್ತು ದುರುರ್ದನೊಂದೆತೆ ಯೊಳುದ್ಯದ್ಧೀವರರಂ” (ಜಗನ್ನಾಥ ವಿಜಯ, ೧೬-೩೦)

## ದೀವರು ಪದದ ಅರ್ಥ

| | | |
|---|---|---|
| ದೀವ | = | ಹಗಲು, ಸ್ವರ್ಗ, ಆಕಾಶ |
| ದೀವ | = | ದೀಪ, ಜ್ಯೋತಿ |
| ದೀವರ್ | = | ಪ್ರಕಾಶಿಸು, ಜ್ಞಾನಿ, ಬೆಳಕನ್ನು ಕೊಡು, ವೀರ, ಶೂರ |
| ದಿವರ್ | = | ದ್ವೀಪ, ದೀಪಕ |
| ಧೀ | = | ಜ್ಞಾನ, ಪಾಂಡಿತ್ಯ, ಬುದ್ಧಿಶಾಲಿ, ಪಂಡಿತ, ವಿದ್ವಾಂಸ |
| ದೀವ; ದೀವರ | = | ದೀವ, ಎಂದು ಕರೆಯುತ್ತಾರೆ. |
| ಧೀವರ | = | ಜಾಣ, ಶೌರ್ಯಶಾಲಿ, ಬಲಶಾಲಿ, ಪರಾಕ್ರಮಿ, ಮೀನು ಹಿಡಿಯುವವನು. |
| ಕನ್ನಡ ನಿಘಂಟಿನ ಪ್ರಕಾರ ದೀವರು | = | ಬುದ್ಧಿವಂತರು, ಜ್ಞಾನಿ ಎಂದು ವ್ಯಾಖ್ಯಾನಿಸಲಾಗುತ್ತದೆ. |

ಮಲೆನಾಡಿನ ದೀವರಿಗೆ ಹಳೆಪೈಕ ಎಂದು ಕರೆಯುತ್ತಾರೆ.

ಹಳೆ+ಪೈಕ > ಹಳೆ - ಹಿಂದಿನ, ಪುರಾತನ, ಆದಿಪೈಕ > ಪಾಯಿಕ ಎನ್ನುವುದರ ಅಪಭ್ರಂಶ ರೂಪ, ಪಾಯಕ > ಪಯಿಕ > ಪೈಕ > ಕಾಲಾಳು ಎಂದರ್ಥ. ಹಳೇಪೈಕರು > ವೀರಯೋಧರು. ಕುಮಾರ ಕ್ಷತ್ರಿಯರೆಂದು ಕರೆದುಕೊಳ್ಳುತ್ತಾರೆ. ಟಿಪ್ಪು ಸುಲ್ತಾನ್, ಹೈದರ, ಕೆಳದಿಯ ದೊರೆಗಳಲ್ಲಿ ಸೈನಿಕ ಸೇವೆ ಸಲ್ಲಿಸಿ ಖ್ಯಾತಿಗಳಿಸಿದವರು ಹಾಗು ಯುದ್ಧದಲ್ಲಿ ತಂತ್ರಗಾರಿಕೆಯಲ್ಲಿ ನಿಪುಣರು. 'ಸಾವಿರ ತಲೆ ಹೋದರು ದೀವರ ತಲೆ ಹೋಗ' ಎನ್ನುವ ಗಾದೆಯ ಮಾತು ಇವರ ವೀರ ಪರಂಪರೆಗೊಂದು ಜ್ವಲಂತ ನಿದರ್ಶನ.

ಅರಸರು ಬೇಟೆಯಾಡುವಾಗ ಬೇಟೆಯಲ್ಲಿ 'ದೀವ' ಕಟ್ಟುವ ಒಂದು ವಿಶಿಷ್ಟ ಸಂಪ್ರದಾಯವಿತ್ತು. ಈ ಕೆಲಸವನ್ನು ದೀವರ ಜನಾಂಗದವರು ಮಾಡುತ್ತಿದ್ದರು. ಇವರಿಗೆ 'ದೀವರು' ಎಂಬ ಹೆಸರು ಬಂತೆಂಬುದು ಸಾಮಾನ್ಯ ಅಭಿಪ್ರಾಯವಾಗಿದೆ.

## ಅಡಿಟಿಪ್ಪಣಿಗಳು

೧. 'ನಸರಿ' - ಮರದ ಪೊಟರೆಯಲ್ಲಿ ಜೇನಿನಂತಹ ಕೀಟ ವಿಶಿಷ್ಟವಾದ ತುಪ್ಪ ತಯಾರಿಸುತ್ತದೆ. ಇದು ಜೇನಿನಂತೆ ಕಚ್ಚುವುದಿಲ್ಲ.

೨. ಹೊಲೆ-ಮೈಲಿಗೆ-ಸೂತಕ

# ಅಧ್ಯಾಯ ೩

# ದೀವರ ಕುಟುಂಬ ಪದ್ಧತಿ ಮತ್ತು ಸಾಮಾಜಿಕ ಸಂರಚನೆ

ಭಾರತದಲ್ಲಿ ಕಂಡುಬರುವ ಸಮುದಾಯಗಳೆಲ್ಲ ಸಾಮಾಜಿಕ ಕಟ್ಟು ಪಾಡುಗಳನ್ನು ಪಾಲಿಸುತ್ತಾ ಬಂದಿದೆ. ಸಮಾಜಗಳೆಲ್ಲಾ ಬದುಕಿನ ನಿಯಮಗಳನ್ನು ಮುಂದುವರಿಸಿಕೊಂಡು ಬಂದಿವೆ. ಸನಾತನ ವ್ಯವಸ್ಥೆಯಿಂದ ಹಿಂದುಳಿದ ಜಾತಿ, ಬುಡಕಟ್ಟು, ಶ್ರಮಿಕ ವರ್ಗಗಳೆಲ್ಲ ಒಂದು ನಿರ್ದಿಷ್ಟ ಅಂತರವನ್ನು ಇಟ್ಟುಕೊಂಡಿರುತ್ತವೆ. ಎಲ್ಲಾ ಜಾತಿಗಳಲ್ಲೂ ಕಟ್ಟುಪಾಡುಗಳಿವೆ. ಅವರದ್ದೆ ಆದ ಕಾನೂನುಗಳಿವೆ. ಆಳುವ ವರ್ಗ ಇಡಿ ಸಮುದಾಯದ ಮೇಲೆ ಅಧಿಕಾರ ಹೊಂದಿದ್ದರು ಸಹಿತ ಅವುಗಳಿಂದ ದೂರವೇ ಉಳಿಯುತ್ತದೆ. ತಮ್ಮ ಗಡಿಯೊಳಗೆ ಬೇರೆಯ ಅಧಿಕಾರದ ಹಸ್ತಕ್ಷೇಪವನ್ನು ಈ ಸಮುದಾಯಗಳು ಒಪ್ಪುವುದಿಲ್ಲ. ಆದರೆ ಕೆಲ ಬದಲಾವಣೆಗಳು ಜೀವನ ಚಕ್ರದಲ್ಲಿ ಆಗುತ್ತಿದ್ದರು, ಪರಂಪರೆಯ ಬಗೆಗಿನ ಮೋಹವನ್ನು ಬಿಟ್ಟು ಕೊಡುವುದಿಲ್ಲ. ಭಾರತೀಯ ಬಹು ಸಂಸ್ಕೃತಿಯ ಮೇಲೆ ಅನೇಕ ದಾಳಿಗಳಾದರು ಸಹ ಬದಲಾವಣೆ ಎಂಬುದು ಮೇಲ್ನೋಟಕ್ಕೆ ಜೀವನ ಕ್ರಮದಲ್ಲಿಯ ಕೆಲ ಮಾರ್ಪಾಟುಗಳೇ ಹೊರತು ಅವುಗಳ ಆದಿಮ ತಿಳುವಳಿಕೆಯ ಜಗತ್ತು ಹಾಗೆ ಉಳಿದುಕೊಂಡು ಬಂದಿದೆ. ಭಾರತೀಯ ಇತಿಹಾಸದಲ್ಲಿ ಸಾವಿರಾರು ವರ್ಷಗಳಿಂದ ಅನೇಕ ಧರ್ಮಗಳು ಸಾಮ್ರಾಜ್ಯಗಳು ಏನೆಲ್ಲಾ ವ್ಯವಸ್ಥೆ ಗಳು ಕ್ರಮವಾಗಿ ಬಂದಿದ್ದರು, ಕೂಡ ಬಹುಸಂಸ್ಕೃತಿಗಳ ಅಂತಃಸತ್ವದಲ್ಲಿ ಬದಲಾವಣೆಗಳನ್ನು ಪರಿಷ್ಕರಿಸಿ ತನ್ನವುಗಳನ್ನಾಗಿಸಿಕೊಂಡು ಮೂಲ ರೂಪಗಳನ್ನು ಹಾಗೆಯೇ ಇರಿಸಿಕೊಂಡಿವೆ. ದೀವರು ಭೂಮಿ, ನೀರು, ಪ್ರಕೃತಿಯ ಆರಾಧಕರಾಗಿದ್ದರು. ಆರ್ಯರ (ಬ್ರಾಹ್ಮಣರ) ಸಂಪರ್ಕದಿಂದ ತಿರುಪತಿ ತಿಮ್ಮಪ್ಪ ದೇವರನ್ನು ಮನೆದೇವರಾಗಿ ಕೆಲವರು ಮಾಡಿಕೊಂಡಿರುವುದರ ಜೊತೆಗೆ ಮೂಲ ದೈವಗಳಾದ ಎಲ್ಲಮ್ಮ, ಹುಲಿದೇವರು, ಕುದುರೆ ದೇವರು, ರೇಣುಕಮ್ಮ, ಮುಂತಾದ ದೇವರ ಆರಾಧಕರು ಆಗಿರುವರು. ಹೀಗೆ ಆದಿಮ ಜನಾಂಗ ಮೂಲವನ್ನು ಬಿಡದೆ ಹೊಸತನ್ನು ಸೇರಿಸಿಕೊಂಡು ತಮ್ಮ ಸಂಸ್ಕೃತಿಯೊಳಗೆ ಆಚರಿಸಲ್ಪಡುತ್ತದೆ. ಈ ಬದಲಾವಣೆ ಕೇವಲ ಭೌತಿಕ ಪರಿಕರಗಳ ಸ್ಫೋಟವಲ್ಲ, ಜನಾಂಗಗಳ ಬದುಕಿನಲ್ಲಿ ಮತ್ತು ತಿಳುವಳಿಕೆಯ ಜಗತ್ತಿನಲ್ಲಿ ಸಂಭವಿಸುವ ಬೌದ್ಧಿಕ ಪ್ರಕ್ರಿಯೆಯಾಗಿದೆ.

ಕುಟುಂಬ ವ್ಯವಸ್ಥೆಯು ಸಂಘಟಿತ ಜೀವನ ವ್ಯವಸ್ಥೆಯ ಚಿಕ್ಕ ಘಟಕವಾಗಿದೆ. ಕುಟುಂಬ ವ್ಯವಸ್ಥೆಯಿಂದ ಮಾನವ ಜೀವನದ ವಿಧಿವಿಧಾನಗಳನ್ನು ಶೈಲಿಯನ್ನು ನೋಡಬಹುದು. ಸಮುದಾಯದ ಸಂಸ್ಕೃತಿಯನ್ನು ಅರಿಯಲು ಕುಟುಂಬದ ಆಳ-ವಿಸ್ತಾರಗಳನ್ನು, ಸಂಬಂಧ ಸಂಸ್ಕಾರಗಳನ್ನು ಮತ್ತು ವೃತ್ತಿ-ಪ್ರವೃತ್ತಿಗಳನ್ನು ಅಭ್ಯಸಿಸಲೇಬೇಕಾಗುತ್ತದೆ. ಒಂದು ಸಮಗ್ರ ಅಧ್ಯಯನದಿಂದ ಒಂದು ಜನಾಂಗದಲ್ಲಾದ ಸ್ಥಿತ್ಯಂತರವನ್ನು ಕಾಣಬಹುದಾಗಿದೆ.

ದೀವ ಜನಾಂಗದಲ್ಲಿ ಮೊದಲು ಅವಿಭಕ್ತ ಕುಟುಂಬ ಪದ್ಧತಿ ರೂಢಿಯಲ್ಲಿತ್ತು. ಒಂದು ಮನೆ ಅಥವಾ ಕುಟುಂಬದಲ್ಲಿ ೩೦ ರಿಂದ ೪೦ ಜನ ಸದಸ್ಯರು ಇರುತ್ತಿದ್ದರು. ಪ್ರಗತಿ, ಉನ್ನತ ಎಂಬ ಮರೀಚಿಕೆಯ ಬೆನ್ನು ಹತ್ತಿ, ಶಾಂತಿ, ಸಹನೆ, ಸಹಬಾಳ್ವೆ ಮುಂತಾದ ನೀತಿಗಳು ಸದಸ್ಯರಲ್ಲಿ ಮಾಯವಾಗಿ ಇಂದು ವಿಭಕ್ತ ಕುಟುಂಬ ಗಳು ಸರ್ವೇಸಾಮಾನ್ಯವಾಗಿದೆ. ಕುಟುಂಬಗಳಿಗೆ ಕೆಲ ಅಡ್ಡ ಹೆಸರುಗಳಿಂದ ಗುರುತಿಸಲಾಗುತ್ತದೆ. ಉದಾ ಹರಣೆಗೆ ಹಿರೇನೆಲ್ಲೂರಿನಲ್ಲಿ ಕಂಡುಬರುವ ಬರಸಿನ ಕುಟುಂಬ, ನೀರಗುಡಿ ಕುಟುಂಬ, ಉಳ್ಳಿ, ಅಳ್ಳೆ, ಎಲೆಯರ್ ಕುಟುಂಬ ಹೀಗೆ ಅನೇಕ ಹೆಸರಿನ ಕುಟುಂಬಗಳಿವೆ. ಒಂದೊಂದು ಕುಟುಂಬವು ಒಂದೊಂದು ಮನೆಯಲ್ಲಿ ಒಗ್ಗಟಿನಿಂದ ಸಹಬಾಳ್ವೆ ನಡೆಸುತ್ತಿದ್ದವು. ಇಂದು ಒಂದೊಂದು ಕುಟುಂಬ ಒಂದೊಂದು ಕೇರಿ ಯಾಗಿದೆ. ಪ್ರಸ್ತುತ ಜನಾಂಗದಲ್ಲಿ ಕಂಡು ಬರುವ ಗಾದೆ ಇಂತಿದೆ. 'ಇವತ್ತು ದಾರೆ, ನಾಳೆ ಬೇರೆ'. ಎಂಬ ಗಾದೆಯು ವಿಭಕ್ತ ಕುಟುಂಬದ ಬಗೆಗಿನ ಅಣಕು ನುಡಿಯಾಗಿದೆ. 'ಮದುವೆಯಾದ ವರ್ಷ ಹೆಂಡ್ತಿ ಚೆಂದ, ಬೇರೆಯಾದ ವರ್ಷ ಕೆಲಸ ಚೆಂದ' ಈ ಮಾತು ಸಹ ಅದನ್ನು ಧ್ವನಿಸುತ್ತದೆ. ಈಗ ಕುಟುಂಬ ಎಂದರೆ ಗಂಡ ಹೆಂಡತಿ ಮಕ್ಕಳು ಎನ್ನುವಷ್ಟರ ಮಟ್ಟಿಗೆ ಸಂಕುಚಿತವಾಗಿದೆ. ಮೂಲ ಕುಟುಂಬವು ಹಿಸೆಯಾಗಿ ಚಿಕ್ಕ ಚಿಕ್ಕ ಘಟಕವಾದ ನಂತರದಲ್ಲಿ ಮೂಲ ಕುಟುಂಬದೊಂದಿಗೆ ವಿವಾಹ ಸಂಬಂಧರ್ವೇರ್ಪಡುವುದಿಲ್ಲ. ಇವುಗಳನ್ನು ದಾಯಾದಿ ಮನೆತನಗಳು ಎಂದು ಕರೆಯುವರು.

ಅವಿಭಕ್ತ ಕುಟುಂಬವು ವಿಭಕ್ತ ಕುಟುಂಬಗಳಾಗುತ್ತಿದ್ದಂತೆ ಜಮೀನು ಸಹ ತುಂಡು ಭೂಮಿಯಾಗಿ ಹಂಚಲ್ಪಡುತ್ತದೆ. ಇದರಿಂದಾಗಿ ಜಮೀನಿನ ನಿರ್ವಹಣೆ ಕಷ್ಟ ಸಾಧ್ಯವಾಗುತ್ತದೆ. ಒಗಟ್ಟಿನಲ್ಲಿ ಬಲವಿದೆ ಎಂಬ ಗಾದೆಯ ಅಡಿಯಲ್ಲಿ ಜೀವನ ನಿರ್ವಹಿಸುತ್ತಿದ್ದ ಕುಟುಂಬವು ಚಿಕ್ಕ ಘಟಕವಾಗುತ್ತಿದ್ದಂತೆಯೇ ಜಗಳ, ಮನಸ್ತಾಪ, ಮುಂತಾದ ಕಿರಿಕಿರಿಗಳು ಶುರುವಾಗಿ ಜೀವನ ದುಸ್ತರವಾಗುತ್ತದೆ. ಮೊದಲು ಎರಡು ಮೂರು ತಲೆಮಾರಿನವರು ಒಂದೇ ಸೂರಿನಲ್ಲಿ ವಾಸಿಸುತ್ತಿದ್ದರು. ಮನೆಯ ಹಿರಿಯ ಯಜಮಾನಿಕೆ ಮಾಡಿದರೆ ಉಳಿದವರು ಗೃಹಕೃತ್ಯಗಳಲ್ಲಿ ತೊಡಗಿರುತ್ತಿದ್ದರು. ಹಳ್ಳಿಯಲ್ಲಿ ಓಡಾಡಿದಾಗ ಕೆಲ ಪದಗಳು ಕಿವಿಗೆ ಬೀಳುತ್ತವೆ. ಬಂಡೆಪ್ಪ, ಪ್ಯಾಟ್ಯಪ್ಪ, ಬರಪ್ಪ. ಇಲ್ಲಿ ಬಂಡೆಪ್ಪ ಎಂದರೆ ಬಂಡಿ ಹೊಡೆಯುವವ. ಪ್ಯಾಟ್ಯಪ್ಪ ಪೇಟೆ ವಹಿವಾಟು ನಡೆಸುವವ, ಬರಪ್ಪ- ಓದಿದ, ಲೆಕ್ಕಪತ್ರ, ಆಳುಕಾಳುಗಳ ಜವಾಬ್ದಾರಿ ಹೊಂದಿದವನು ಎಂದರ್ಥ. ಇತ್ತೀಚಿಗೆ ವಿಭಕ್ತ ಕುಟುಂಬದಲ್ಲಿ ತಂದೆ, ಮಕ್ಕಳು ಬೇರೆಯಾಗಿ ವಾಸಿಸುವ ಸಂದರ್ಭಗಳು ಇವೆ. ಮೂಲ ಮನೆಯ ಸನಿಹದಲ್ಲಿ ವಾಸಿಸುವ ಅನುಮತಿ ಇದೆ. ಈ ಜನಾಂಗದಲ್ಲಿ ಮನೆಯ ಹಿರಿಯ ಅಥವಾ ಜಾತಿಯ ಹಿರಿಯರಲ್ಲಿ ಅಪಾರವಾದ ಗೌರವವಿದೆ. ಇವರ ಮಾತಿಗೆ ಮನ್ನಣೆ ಇದೆ. ಹೀಗೆ ಹಂಚಿ ಹೋದ ಕುಟುಂಬದ ಮಂಗಳ ಕಾರ್ಯ, ಸಂಕಟಕಾರ್ಯದಲ್ಲಿ ಮುಂಚೂಣಿಯಲ್ಲಿ ನಿಂತು ಕಾರ್ಯ ಸುಗಮವಾಗುವಂತೆ ನೋಡಿಕೊಳ್ಳುವನು.

ಅವಿಭಕ್ತ ಕುಟುಂಬ ಪದ್ಧತಿಯಿಂದ ವಿಭಕ್ತ ಕುಟುಂಬ ಪದ್ಧತಿಗೆ ಬದಲಾದ ದೀವರ ಜನಾಂಗದವರೆಲ್ಲರು ಒಂದೇ ಪ್ರದೇಶದಲ್ಲಿ ವಾಸಿಸುತ್ತಾರೆ. ಅನೇಕ ಕುಟುಂಬಗಳು ಸೇರಿ ಸಮಾಜ, ಊರು ಸೃಷ್ಟಿಯಾಗಿದೆ. ದೀವರ ಜನಾಂಗದ ಸಂರಚನೆಯ ಹೊಣೆಯನ್ನು ಈ ಜನಾಂಗದ 'ಹಿರಿಯ' ಎಂದು ಕರೆಯಿಸಿಕೊಳ್ಳುವ ಮುಖಂಡನು ಹೊತ್ತಿರುತ್ತಾನೆ. ಈತನ ಮಾತುಗಳನ್ನು ಇತರರೆಲ್ಲರು ಕೇಳಬೇಕು. ಈತನಿಗೆ ಜನಾಂಗದಲ್ಲಿ ತುಂಬಾ ಗೌರವ

ವಿದೆ. ಹಬ್ಬ, ಮದುವೆ ಮುಂತಾದ ಕಾರ್ಯಗಳೆಲ್ಲ ಈತನ ಮುಂದಾಳತ್ವದಲ್ಲಿ ಜರುಗುತ್ತದೆ. ನಾನು ಗಮನಿಸಿದಂತೆ ಆರಿದ್ರ ಮಳೆಯ ಹಬ್ಬದ ಉಸ್ತುವಾರಿ 'ಹಿರಿಯ'ನದೆ ಆಗಿದೆ. ದೇವರ ಹಣ, ಒಡವೆ, ಹಬ್ಬದ ನಿರ್ಧಾರ, ಡೊಳ್ಳು ಇಳಿಸುವುದು ಎಲ್ಲದರ ಜವಾಬ್ದಾರಿ ಈತನೆ ವಹಿಸಿಕೊಳ್ಳಬೇಕು. ನಂತರದ ಸ್ಥಾನ 'ಬುದ್ಧಿವಂತ' ಎಂದು ಕರೆಯಿಸಿಕೊಳ್ಳುವ ವ್ಯಕ್ತಿಗೆ ಸಲ್ಲುತ್ತದೆ. ಈ ವ್ಯಕ್ತಿ ಮಂತ್ರಿಯಿದ್ದ ಹಾಗೆ. ನ್ಯಾಯ ತೀರ್ಮಾನ, ದೇವತಾ ಕಾರ್ಯ, ಮದುವೆ ಕಾರ್ಯದಲ್ಲಿ ಪ್ರಮುಖ ಪಾತ್ರವಹಿಸುವನು. 'ಹಿರಿಯ'ನಿಗೆ ಸಲಹೆ ಸೂಚನೆಗಳನ್ನು ಕೊಡುವುದು ನ್ಯಾಯ ಹಾದಿತಪ್ಪದಂತೆ ವಿಷಯ ಸಂಗ್ರಹಣೆ ಮಾಡಿ 'ಹಿರಿಯ'ನಿಗೆ ತಿಳಿಸುವುದು ಈತನ ಕಾರ್ಯವಾಗಿದೆ. 'ಕೋಲಕಾರ' ಎಂದು ಕರೆಯಿಸಿ ಕೊಳ್ಳುವ ಇವನು ಹಬ್ಬ, ಮದುವೆ, ನ್ಯಾಯ ತೀರ್ಮಾನವಾಗುವಾಗ ಮತ್ತು ನಂತರ, ಕೆಲವು ಪ್ರಮುಖರಿಗೆ ಸುದ್ದಿ ಮುಟ್ಟಿಸಿ, ಅವರನ್ನು ಕರೆತರುವ, ವಿಷಯ ತಿಳಿಯುವ ಕೆಲಸ ಮತ್ತು ಹಬ್ಬಹರಿದಿನಗಳಿಗೆ ಹಿರಿಯರು ವಿಧಿಸಿದ ವರಾಡದ ಹಣ, ದಂಡದ ಹಣ ಸಂಗ್ರಹಿಸಿ ಹಿರಿಯರಿಗೆ ಒಪ್ಪಿಸುವುದು. 'ಊರು ಸಾರುವ' (ತಳವಾರ) ಇವನು ಜನರನ್ನು ಪ್ರಮುಖ ಕಾರ್ಯಗಳಿಗೆ ಸೇರಿಸುವುದು. ಮನೆಯ ಬಾಗಿಲಿಗೆ ಹೋಗಿ ಕರೆಯದೆ ಕೇರಿಯಲ್ಲಿ ಅಡ್ಡಾಡುತ್ತ "ನಾಳೆ ದೇವಸ್ಥಾನದ ಕಟ್ಟೆಗೆ ಮನಿಗೊಂದು ಜನ ಬರಬೇಕಂತ್ರೆ, ಬರದೆ ಇದ್ದವರಿಗೆ ದಂಡ (ಜುಲ್ಮಾನೆ) ಅಂತ್ರೆ" ಎಂದು ಕೂಗುತ್ತಾನೆ. ಹೀಗೆ ಊರಿನ ಜನರನ್ನು ಸೇರಿಸುತ್ತಾನೆ. ಈತ ಒಂದು ಜಾತಿಯ ವಿಷಯಕ್ಕಲ್ಲದೆ ಊರಿನ ಎಲ್ಲಾ ಜನಾಂಗದ ಒಟ್ಟಾರೆಯ ಸಮಸ್ಯೆಗಳಿಗೆ ಜನ ಸೇರಿಸುವನು. ದನಕರುಗಳನ್ನು ಕಟ್ಟದೆ, ಕಾಯದೆ, ರಾತ್ರಿ ಹಗಲು ತುಡ ತಿನ್ನಲು ಬಿಟ್ಟರೆ ಬೆಳೆದು ನಿಂತ ಪೈರು ನಾಶವಾಗುತ್ತದೆ. ಜನರು ಊರಿನ ಹಿರಿಯನ ಗಮನಕ್ಕೆ ತರುವರು. ಅಥವಾ ಬುದ್ಧಿವಂತ ಇದನ್ನು ತಿಳಿಸುವನು. ತತ್‌ಕ್ಷಣ ಊರು ಸಾರುವವನ ಕರೆದು 'ದನಗಾವಲು ಮಾಡಬೇಕು ಬಾಲಕ್ಕೆ ೧೦ ರೂ ದಂಡ' ಎಂದು ಸಾರಲು ಹೇಳುವರು. ಮಳೆ ಬರದೆ ಕೈಕೊಟ್ಟಾಗ ದೇವಸ್ಥಾನದ ಕಂಬಕ್ಕೆ ನೀರು ಹಾಕಲು ಇದೇ ರೀತಿ ಸಾರುವುದನ್ನು ನಾನು ಗಮನಿಸಿದ್ದೇನೆ.

ರಾಜ್ಯದಲ್ಲಿ ಸುವ್ಯವಸ್ಥೆಯ ಜೀವನ ನಿರ್ವಹಣೆಗಾಗಿ ಹಲವಾರು ಕಾನೂನುಗಳನ್ನು ರಚಿಸುವಂತೆ ಮಾನವ ತನ್ನ ಸಮಾಜದಲ್ಲಿ ಅನಾಚಾರ, ಭ್ರಷ್ಟತೆ-ಅದಕ್ಷತೆ ಉಂಟಾಗದಂತೆ ಕೆಲವು ನಿಯಮ ನಿಬಂಧನೆಗಳನ್ನು ರೂಪಿಸಿದ್ದಾನೆ. ಇವುಗಳಿಂದ ಸಮಾಜದಲ್ಲಿ ಬಿಗಿಭದ್ರತೆ ಏರ್ಪಟ್ಟು ಸುಗಮ ಜೀವನ ಸಾಗುತ್ತದೆ. ಕುಲದ ಪದ್ಧತಿಗಳೂ ಒಂದು ಕಡೆ ಸಂಪ್ರದಾಯದ ನೆಲಗಟ್ಟಿನಲ್ಲಿ ಬೆಳೆದಿದ್ದರೂ ಸಹ ಅವುಗಳ ಹಿಂದಿರುವ ಉದ್ದೇಶ ಮಾತ್ರ ಸಮಾಜಕ್ಕೆ ಒಳ್ಳೆಯದಾಗಿರುತ್ತದೆ.

ದೀವರ ಜನಾಂಗದ ನಿಯಂತ್ರಣಕ್ಕೆ ಅವರದೆ ಆದ ಕಾನೂನು ಚೌಕಟ್ಟುಗಳಿವೆ. ಹಿರಿಯರು ಹಾಕಿದ ನಿಯಮಗಳು-ನಿಬಂಧನೆಗಳು ಪವಿತ್ರವಾದವು ಎಂದು ಗೌರವದಿಂದ ಎಲ್ಲರು ನಡೆದುಕೊಳ್ಳುವರು. ದಾಯಾದಿ ಕುಟುಂಬದಲ್ಲಿ ವಿವಾಹ ಸಂಬಂಧಗಳು ಇಲ್ಲದಿರುವುದು. ವಂಚನೆ ಮೋಸ ಮಾಡದಿರುವುದು ಇವು ಘನ ನಿಯಮಗಳಾಗಿವೆ. 'ಹಿರಿಯ' 'ಬುದ್ಧಿವಂತ' 'ಕೋಲಕಾರ', ಸಾರುವವ ಮತ್ತು ಮನೆಯ ಯಜಮಾನರ ಮಾರ್ಗದರ್ಶನದಲ್ಲಿ ಸಾಗುವುದು ಇವರ ಸ್ವಭಾವವಾಗಿದೆ. ಈ ಜನಾಂಗದಲ್ಲಿ ಅನೇಕ ಕಟ್ಟುಪಾಡುಗಳಿವೆ. ಈ ಕಟ್ಟುಪಾಡುಗಳನ್ನು ಮೀರಿದರೆ ದಂಡ, ಬಹಿಷ್ಕಾರ ಅಥವಾ ಕಟ್ಟು ಕೊಡುವುದು ಮಾಡಲಾಗುತ್ತದೆ.

ಕುಟುಂಬದಲ್ಲಿ ಹೊತ್ತುಕೊಂಡ ಹರಕೆ-ಮುಡಿಪುಗಳನ್ನು ಕಾಲಕಾಲಕ್ಕೆ ಸಲ್ಲಿಸಬೇಕು, ಇಲ್ಲದಿದ್ದರೆ ಈ ಸಮಾಜಕ್ಕೆ ಅಥವಾ ದಾಯಾದಿ ಕುಟುಂಬದಲ್ಲಿ ರೋಗರುಜಿನ ಕಾಣಿಸಿಕೊಳ್ಳುವುದು ಎಂಬ ನಂಬಿಕೆಯಿದೆ. ಇದೇ ಕುಟುಂಬಕ್ಕೆ ಸಂಬಂಧಪಟ್ಟ ಮತ್ತೊಂದು ಮನೆಯವರು ಜಾತಿಯ ಹಿರಿಯರಿಗೆ ತಿಳಿಸುತ್ತಾರೆ. ಹಿರಿಯ ಮತ್ತು ಬುದ್ಧಿವಂತ ಹರಕೆ ಹೊತ್ತ ಕುಟುಂಬದ ಸ್ಥಿತಿಗತಿ ನೋಡಿ, ಹಾಗೂ ಮನೆತನದ ಎಲ್ಲರನ್ನು ಕರೆದು ಹರಕೆ ಸಲ್ಲಿಸಲು ಸಹಾಯ ಮಾಡುವಂತೆ ಹೇಳುತ್ತಾರೆ. ಇವರ ಕಾರ್ಯವ್ಯಾಪ್ತಿ ದೊಡ್ಡದು. ಗಂಡ-ಹೆಂಡತಿಯ ಜಗಳಗಳು, ಪೂರ್ವಿಕರ ಆಸ್ತಿ ತಕರಾರುಗಳು, ಚರ ಆಸ್ತಿಯ ತಕರಾರುಗಳು ಮತ್ತು ವಿವಾಹ ಸಂದರ್ಭದಲ್ಲಿ ತಲೆದೋರುವ ಸಮಸ್ಯೆಗಳು, ಸಂಸ್ಕಾರ ಕ್ರಿಯೆಯಲ್ಲಿ ಕಂಡುಬರುವ ತೊಂದರೆಗಳು ಎಲ್ಲದಕ್ಕು ದೀವರು ಮೆಚ್ಚುವಂತೆ ತೀರ್ಮಾನಗಳನ್ನು ಕೊಡುವರು.

ಕುಟುಂಬದ ನಿರ್ವಹಣೆಯಲ್ಲಿ ಸ್ತ್ರೀಯ ಪಾತ್ರ ಮಹತ್ತರವಾದದು. ಮನೆಯ ಆರ್ಥಿಕ ಭದ್ರತೆ ಈಕೆಯನ್ನು ಅವಲಂಬಿಸಿದೆ. ಮನೆಯಲ್ಲಿ ಅಡುಗೆ ಮುಂತಾದ ಕೆಲಸಕಾರ್ಯವಲ್ಲದೆ ದೀವರ ಪ್ರಮುಖ ಆದಾಯವಾದ ಹೈನುಗಾರಿಕೆ ಮಹಿಳೆಯನ್ನು ಅವಲಂಬಿಸಿದೆ. ಕೆಲವು ಮನೆಗಳು ಹೈನುಗಾರಿಕೆಯಿಂದಲೇ ಜೀವನ ನಿರ್ವಹಿಸುತ್ತಿವೆ. ಒಂದು ಕುಟುಂಬದ ಒಟ್ಟು ಆದಾಯದಲ್ಲಿ ಮಹಿಳೆಯ ದುಡಿಮೆ ಪುರುಷನಿಗಿಂತ ಒಂದು ಪಟ್ಟು ಹೆಚ್ಚು. ಈಕೆಗೆ ವರುಷದಲ್ಲಿ ಒಂದು ದಿನವು ಬಿಡುವು ಎಂಬುದಿಲ್ಲ. ಆದರೆ ಗಂಡಸು ಅರಳಿಕಟ್ಟೆಯಲ್ಲೊ, ಅಂಗಡಿಯಲ್ಲೊ ಹರಟೆಹೊಡೆಯುವುದನ್ನು ಕ್ಷೇತ್ರಕಾರ್ಯದಲ್ಲಿ ನಾನು ಸ್ವತಃ ಗಮನಿಸಿದ್ದೇನೆ. ದೀವರ ಪ್ರಗತಿಗೆ ಮಹಿಳೆಯೇ ಆಧಾರಸ್ತಂಭವಾಗಿರುವಳು. ನಾನು ಗಮನಿಸಿದಂತೆ ಈ ಮಹಿಳೆಯರು ನಸುಕಿನಲ್ಲಿ ಎದ್ದು ಒಲೆ ಉರಿಸಿ, ಅಡುಗೆ ಕೆಲಸ ಮಾಡುತ್ತಲೇ ಹಾಲು ಕರೆದು, ಕೊಟ್ಟಿಗೆಯನ್ನು ಶುಚಿಗೊಳಿಸಿ, ಕೊಟ್ಟಿಗೆಗೆ ಬೇಕಾಗುವ ಎಲೆದರಕನ್ನು ತರಲು ಕಳ್ಳಿ ಅಥವಾ ಚೀಳದೊಂದಿಗೆ ಕಾಡಿಗೆ ತೆರಳಿ ಎಲೆದರಕನ್ನು ಮನೆಗೆ ತರುವರು. ಈ ಕಾಯಕವನ್ನು ಚಳಿಗಾಲ ಮತ್ತು ಬೇಸಿಗೆಕಾಲದಲ್ಲಿ ದಿನಂಪ್ರತಿ ಮಾಡುತ್ತಾರೆ. ಹೀಗೆ ಮಹಿಳೆ ಮನೆಯಲ್ಲಿ ಮತ್ತು ಗದ್ದೆಯಲ್ಲಿ ಕೆಲಸವನ್ನು ಮಾಡುವುದರಿಂದ ಆ ಕುಟುಂಬದ ಆರ್ಥಿಕ ಸ್ಥಿತಿಗತಿ ದುಡಿಯುವ ಈಕೆಯನ್ನು ಅವಲಂಬಿಸಿದೆ.

ಮೊದಲು ಇವರ ಮನೆಗಳು ಹುಲ್ಲಿನ ಮಾಡಿನ ಮನೆಗಳಾಗಿದ್ದವು. ಇವುಗಳ ವಿನ್ಯಾಸ ಬಹಳ ಸರಳವಾಗಿತ್ತು. ಮಲೆನಾಡಿನ ಅತಿಯಾದ ಮಳೆ ಮತ್ತು ಹಾವು, ಚೇಳು ಮುಂತಾದ ಪ್ರಾಣಿಗಳಿಂದಾಗುವ ತೊಂದರೆಯನ್ನು ಗಮನದಲ್ಲಿಟ್ಟುಕೊಂಡು ಮನೆಯನ್ನು ನಿರ್ಮಾಣ ಮಾಡುತ್ತಿದ್ದರು. ಮನೆಗಳು ಎತ್ತರಿಸಿದ ಕಟ್ಟೆಯ ಮೇಲೆ ಚೌಕಾಕಾರದ ಗೋಡೆಯ ಮೇಲೆ ನಾಲ್ಕು ಮೂಲೆಗು ಬಾಗಿರುವ ಗಳದ (ಬಿದಿರು) ಮನೆಗೆ ಹುಲ್ಲು (ಕರಡ) ಹೊದಿಸುತ್ತಿದ್ದರು. ಈಗ ಇಂಥ ಮನೆಗಳು ಬಹಳ ಅಪರೂಪವಾಗಿದೆ. ಎಲ್ಲೆಲ್ಲಿಯು ಹೆಂಚಿನ ಮನೆಗಳಿವೆ. ಇದರ ಚರ್ಚೆಯನ್ನು ವಿಸ್ತಾರವಾಗಿ ಮುಂದಿನ ಭಾಗದಲ್ಲಿ ಮಾಡಲಾಗಿದೆ.

## ೩.೧. ಉತ್ತರಾಧಿಕಾರಿ

ಮನೆಯ ಹಿರಿಯನ ನಂತರ ಆತನ ಚಟುವಟಿಕೆಗಳನ್ನು ನಿರ್ವಹಿಸುವವನು ಈತನ ಹಿರಿಯ ಮಗನೆ ಆಗಿರುತ್ತಾನೆ. ಆಸ್ತಿಯ ಹಕ್ಕುಗಳು ಎಲ್ಲಾ ಮಕ್ಕಳಿಗು ಸಲ್ಲುತ್ತದೆ. ಈ ಹಿರಿಯ ಮಗನೆ 'ಉತ್ತರಾಧಿ

ಕಾರಿ'ಯಾಗಿರುತ್ತಾನೆ. ಮಲೆನಾಡಿನ ದೀವರು ಪಿತೃವಂಶ ಪದ್ಧತಿಯನ್ನು ರೂಢಿಸಿಕೊಂಡಿದ್ದಾರೆ. ಇದರಿಂದಾಗಿ ಆಸ್ತಿಗೆ ಹಕ್ಕುದಾರರು ಗಂಡುಮಕ್ಕಳು ಆಗಿರುವರು. ಹೆಣ್ಣುಮಕ್ಕಳಿಗೆ ತಾಯಿಯ ಒಡವೆ ವಸ್ತ್ರ ಮರಣಾನಂತರ ಲಭ್ಯವಾಗುತ್ತದೆ. ಮನೆಯ ಯಜಮಾನ ತೀರಿದ ನಂತರ ಹಿರಿಯ ಮಗ ಅಂತ್ಯಕ್ರಿಯೆಯಲ್ಲಿ ಪಾಲ್ಗೊಂಡು ನಂತರದಲ್ಲಿ ಕೇಶಮುಂಡನ ಮಾಡಿಸಿಕೊಳ್ಳಬೇಕು. ಇದಕ್ಕೆ ಋಣಕೊಡುವ ಪದ್ಧತಿ ಎಂದು ಕರೆಯುವರು. ಮನೆಯ ಜವಾಬ್ದಾರಿಯನ್ನು ಹಿರಿಯಾತ ನಿರ್ವಹಿಸಿದಂತೆ ಉತ್ತರಾಧಿಕಾರಿಯು ಮುನ್ನಡೆಸಿಕೊಂಡು ಹೋಗಬೇಕು.

ಹಬ್ಬ ಮುಂತಾದ ಶುಭಕಾರ್ಯದಲ್ಲಿ ಉತ್ತರಾಧಿಕಾರಿಯಾದವನು ಮನೆಯ ಹೆಣ್ಣು ಮಕ್ಕಳನ್ನು (ಮದುವೆಯಾದ) ಹಬ್ಬಕ್ಕೆ ಕರೆದು ಅವರಿಗೆ ಸೀರೆ ಕುಪ್ಪಸ ತಂದು ಉಪಚರಿಸಿ ಕಳುಹಿಸಬೇಕಾಗುತ್ತದೆ. ಹಬ್ಬಗಳಲ್ಲಿ ಪಾಲ್ಗೊಳ್ಳುವವರು ಮನೆಯ ಮಗಳೆ ಹೊರತು ಸೊಸೆಯಲ್ಲ. ಊರ ಜಾತ್ರೆಯಲ್ಲಿ ಮಗಳು ಮತ್ತು ಸೊಸೆ ಇಬ್ಬರು ಇರಬಹುದು. ಉತ್ತರಾಧಿಕಾರಿಯು ಕುಟುಂಬದಲ್ಲಿ ಪ್ರಮುಖ ವ್ಯಕ್ತಿಯಾಗಿರುವನು. ಶುಭ ಮತ್ತು ಅಶುಭಕಾರ್ಯ, ಮನೆಯ ಲೆಕ್ಕ ಪತ್ರ, ಕೆಲಸ ಕಾರ್ಯ ಎಲ್ಲದರಲ್ಲೂ ಮುತುವರ್ಜಿ ವಹಿಸಿ ನಡೆಯಬೇಕಾಗುತ್ತದೆ. ಮನೆಯ ಹಿರಿಯ ನಿರ್ವಹಿಸಿದ ಎಲ್ಲಾ ಕೆಲಸವನ್ನು ಮಾಡಬೇಕಾಗುತ್ತದೆ.

ಆದರೆ ಘಟ್ಟದ ಕೆಳಗಿನ ತೆಂಗಿನ ದೀವರು 'ಮಾತೃವಂಶ' ಪದ್ಧತಿಯನ್ನು ಅವಲಂಬಿಸಿದ್ದಾರೆ. ಮನೆಯಲ್ಲಿ ಹುಟ್ಟಿದ ಹೆಣ್ಣುಮಗುವಿಗೆ ಮನೆಯ ಅಥವಾ ವಂಶದ ಆಸ್ತಿ ಸೇರುತ್ತದೆ. ತಾಯಿ ಮನೆಯಲ್ಲಿ ಹುಟ್ಟಿ ಬೆಳೆದ ಮಗಳಾದರೆ ತಂದೆ ಹೊರಗಿನಿಂದ ಬಂದವನು. ಮನೆಯಲ್ಲಿ ಗಂಡುಮಗುವಾದರೆ ಪ್ರಾಯಕ್ಕೆ ಬಂದ ನಂತರ ಮದುವೆಯಾಗಿ ಹೆಂಡತಿಯ ಮನೆಗೆ ಹೋಗಿ ನೆಲಸಬೇಕು. ಇದಕ್ಕೆ 'ಅಳಿಸಂತಾನ' ಪದ್ಧತಿ ಎಂದು ಕರೆಯುವರು. ಆಸ್ತಿಯ ಹಕ್ಕುದಾರಿಕೆ ಹೆಣ್ಣು ಸಂತಾನದ ಮೂಲಕವೇ ಚಲಾವಣೆಗೊಳ್ಳುತ್ತದೆ. ಈ ವ್ಯವಸ್ಥೆಯಲ್ಲಿ ವರದಕ್ಷಿಣೆ ಪದ್ಧತಿ ಗೋಚರಿಸುವುದಿಲ್ಲ. ಗಂಡು ಹೆಣ್ಣಿನ ಮನೆಗೆ ಹೋಗುವುದರಿಂದ ಬರಿ ಪೋಷಕ ಮಾತ್ರ ಆಗಿರುತ್ತಾನೆ. ಇಲ್ಲಿ ಉತ್ತರಾಧಿಕಾರಿ ಮಗಳೆ ಆಗಿರುವುದು ಒಂದು ವಿಶೇಷವೇ ಆಗಿದೆ.

## ೩.೨. ದೀವರು ಅಥವಾ ಹಳೇಪೈಕರಲ್ಲಿ ಬಳಿಗಳು

ಹಳೇಪೈಕ ಅಥವಾ ದೀವರಲ್ಲಿ ಭಿನ್ನಗೋತ್ರಗಳ ಸಾಮಾಜಿಕ ಗುಂಪುಗಳಿವೆ. ಇದೊಂದು ಕುಟುಂಬ ಪದ್ಧತಿ. ಇವರು ಬಳಿಯ ಮೂಲಕ ಒಂದು ಸಾಮಾಜಿಕ ಸಮೂಹವನ್ನು ಹೊಂದಿದ್ದಾರೆ. ಬಳಿಗಳ ವಿಶೇಷತೆ ಎಂದರೆ ಅವುಗಳ ಮೂಲ ಹಿಡಿಯುವುದು. ಈ ಪದ್ಧತಿಯಿಂದ ಬಹುಪತ್ನಿತ್ವ ರೂಢಿಯಲ್ಲಿದ್ದ ದಕ್ಷಿಣ ಭಾರತದಲ್ಲಿ ಈ ಜಾತಿಯ ಮೂಲವಿದೆ ಎಂದು ತೋರುತ್ತದೆ. ಬಗನೆ ದೀವರು, ತೆಂಗಿನ ದೀವರು, ಬಿಲ್ಲವರು ಮತ್ತು ತೀಯಾನರಲ್ಲಿ ಇರುವ ಬಳಿಗಳು ಒಂದೇ ರೀತಿಯ ಬಳಿಗಳಾಗಿವೆ.

'ದಿ ಮೈಸೂರು ಟ್ರೈಬ್ಸ್ ಅಂಡ್ ಕ್ಯಾಸ್ಟ್' ಎಂಬ ಗ್ರಂಥದ ಸಂಪುಟದಲ್ಲಿ (೩ನೆಯ ಸಂಪುಟ) ಎಲ್.ಕೆ. ಅನಂತಕೃಷ್ಣ ಐಯ್ಯಂಗಾರರು ತೆಂಗಿನ ದೀವರಲ್ಲಿ ಇಪ್ಪತ್ತು ಬಳಿಗಳನ್ನು ಹಾಗೂ ಬಗಿನೆ ದೀವರಲ್ಲಿ ನಾಲ್ಕು ಬಳಿಗಳನ್ನು ಗುರುತಿಸಿದ್ದಾರೆ. ಆರ್.ಇ.ಎಂಥೋವನ್‌ರವರು ತಮ್ಮ 'ದಿ ಟ್ರೈಬ್ಸ್ ಅಂಡ್ ಕ್ಯಾಸ್ಟ್ ಆಫ್

ಬಾಂಬೆ' ಎಂಬ ಗ್ರಂಥದ ಸಂಪುಟ ಎರಡರಲ್ಲಿ ಬಯಿಸೆ ದೀವರಲ್ಲಿ ಹತ್ತು ಬಳಿಗಳನ್ನು ಗುರುತಿಸಿದ್ದಾರೆ. ಆ ಬಳಿಗಳು ಈ ಕೆಳಗಿನಂತಿವೆ.

೧. ಮಹಾರ ಬಳಿ - ತಾಳೇಮರ ಮಹಾರ - ಕೀಳುಜಾತಿ

೨. ಬಂಗಾರ ಬಳಿ - ಬಂಗಾರ - ಚಿನ್ನ - ಲೋಹ

೩. ಕಡವೆ ಬಳಿ - ಕಡವೆ - ಕಡ - ಪ್ರಾಣಿ

೪. ಸರ್ಪನ ಬಳಿ - ಸರ್ಪ - ಹಾವು

೫. ಶೆಟ್ಟಿ ಬಳಿ - ಮೀನು

೬. ಹೊನ್ನೆಬಳಿ - ಹೊನ್ನೆಮರ

೭. ಚೆಂಡಿಬಳಿ - ಚೆಂಡಿ ಮರ

೮. ತೋಳನ ಬಳಿ - ತೋಳ - ಪ್ರಾಣಿ

೯. ದೇವನ ಬಳಿ - ದೇವನ ಬಳಿ

೧೦. ಹೊಳೆ ಬಳಿ - ಹೊಳೆ ನದಿ

**ಘಟ್ಟದ ಮೇಲಿನ ದೀವರಲ್ಲಿ ಪ್ರಚಲಿತವಾಗಿರುವ ಬಳಿ**

೧. ಶಿವನ ಬಳಿ - ಶಿವನೇ ಮರ

೨. ಗಂಗೆ ಬಳಿ - ನೀರು

೩. ಹೆನ್ನೆ ಬಳಿ - ಹೊನ್ನೆ ಮರ

೪. ತೋಳನ ಬಳಿ - ತೋಳ ಪ್ರಾಣಿ

೫. ಶೆಟ್ಟಿ ಬಳಿ - ಮೀನು

'ಬಳಿ'- ಬಳ್ಳಿ ಎಂದರೆ ಹಬ್ಬುವುದು, ಬೆಳೆಯುವುದು, ಸಂಬಂಧ ಬೆಸೆಯುವುದು ಎಂದರ್ಥ. ಅದು ಯಾವುದಾದರು ಮರ, ಹೂವು, ಪ್ರಾಣಿ, ಆಯಾ ಬಳಿಯವರ ಪೂರ್ವಿಕರ ಸಂಕೇತಗಳಾಗಿವೆ. ಅವುಗಳಿಗೆ ಯಾವುದೇ ರೀತಿಯ ಗಾಯ, ನೋವು ಮಾಡುವ ಹಾಗಿಲ್ಲ ಎಂಬ ನಂಬಿಕೆ ಇದೆ. ಶಿವನ ಬಳಿ ಮತ್ತು ಗಂಗೆ ಬಳಿಯೊಂದಿಗೆ ವಿವಾಹ ಸಂಬಂಧ ವಿರುತ್ತದೆ. ಗಂಗೆ ಬಳಿಗೂ ಹೊಳೆ ಬಳಿಗು ಸಂಬಂಧವೇರ್ಪಡುವುದಿಲ್ಲ. ಹೊಳೆ ಬಳಿ ಮತ್ತು ಶೆಟ್ಟಿಬಳಿಗೆ ವಿವಾಹ ಸಂಬಂಧವಿದೆ. ಹೆನ್ನೆ ಬಳಿಗು ತೋಳನ ಬಳಿಗು ವಿವಾಹ ಸಂಬಂಧ ವಿದೆ. ಆದರೆ ಇತ್ತೀಚಿಗೆ ಬಳಿ ನೋಡುವ ಪದ್ಧತಿ ಕಡಿಮೆಯಾಗುತ್ತಾ ಬಂದಿದೆ. ಪುರೋಹಿತರು ಹೆಸರಿನ ಮೇಲೆ ಗುಣಗಳನ್ನು ಲೆಕ್ಕಹಾಕಿ ಸಂಬಂಧ ಬೆಳೆಸಬಹುದು ಎಂದು ಹೇಳಿದ ನಂತರದಲ್ಲಿ ವಿವಾಹ ಸಂಬಂಧಗಳು

ಬೆಸೆಯುತ್ತವೆ. ಕೆಲವು ವರ್ಷಗಳಲ್ಲಿ 'ಬಳಿ' ಅಂದರೆ ಏನು ಎಂದು ಹುಡುಕಬೇಕಾದ ಪರಿಸ್ಥಿತಿ ನಿರ್ಮಾಣವಾದರೆ ಆಶ್ಚರ್ಯವಿಲ್ಲ. ಇತ್ತೀಚಿನ ತಲೆಮಾರಿನವರಿಗೆ 'ಬಳಿ' ಎಂಬುದರ ಬಗ್ಗೆ ಖಚಿತ ಮಾಹಿತಿ ಗೊತ್ತಿಲ್ಲ.

## ೩.೩. ಧರ್ಮ ಮತ್ತು ದೀವರ ಮಠ

ಸಾಮಾಜಿಕ ವ್ಯವಸ್ಥೆಯ ಪರಿಪಾಲಕನಾಗಿದ್ದ ರಾಜನು ಧರ್ಮದ ರಕ್ಷಕನಾಗಿದ್ದನು. ವರ್ಣಾಶ್ರಮ ಪದ್ಧತಿಯನ್ನು ಅನುಸರಿಸಿಕೊಂಡು ಹೋಗುತ್ತಿದ್ದರು. ಕಾಲಾನುಕಾಲಕ್ಕೆ ಮೂರು ಪ್ರಮುಖ ಧರ್ಮಗಳು ಕನ್ನಡ ಇತಿಹಾಸದಲ್ಲಿ ಉತ್ತುಂಗಕ್ಕೇರಿ, ಸಮಾಜಕ್ಕೆ, ದೇಶಕ್ಕೆ ತಮ್ಮದೆ ಸೇವೆಯನ್ನು ಸಲ್ಲಿಸಿದವು. ಮೊದಲನೆಯದಾಗಿ ಜೈನ ಧರ್ಮ ಇದರ ಪ್ರಭಾವ ತೀರ್ಥಹಳ್ಳಿ ತಾಲ್ಲೂಕಿನ ದೀವರ ಮೇಲೆ ಆಗಿತ್ತು. ದೀವರು ಹಬ್ಬ ಹರಿದಿನಗಳಲ್ಲಿ ಜೈನಡೆಯನ್ನು (ಜೇನಡೆ-ಜೈನಡೆ) ಪ್ರತ್ಯೇಕವಾಗಿ ಇಡುತ್ತಿದ್ದು, ಇವರುಗಳು ಜೈನಧರ್ಮ ಉತ್ಕರ್ಷೆಯಲ್ಲಿದ್ದಾಗ ಆ ಧರ್ಮವನ್ನು ಅನುಸರಿಸಿ, ಮುಂದೆ ಪಾಲಿಸಲಾಗದೆ ಮೂಲ ಧರ್ಮಕ್ಕೆ ಮರಳಿ ದೇವತಾರ್ಚನೆಯ ಸಂದರ್ಭದಲ್ಲಿ ಸಾಂಕೇತಿಕವಾಗಿ ಜೈನಡೆ(ಜೈನ ಎಡೆ)ಯನ್ನು ಇಡುವ ಪದ್ಧತಿ ಇಂದೂ ಇದೆ.

ಮನಸ್ಸಿನಿಂದ ಮತ ಹುಟ್ಟುವುದು, ಮತ ಎಂದರೆ ಶ್ರದ್ಧೆ ವಿಶ್ವಾಸ ಅಂದರೆ ಒಂದು ನಂಬಿಕೆಯ ಅನುಸರಣೆ. 'ಮತ' ಎಂಬ ಪದವು, 'ಮನ್' ಎಂಬ ದಾತುವಿನಿಂದ ಹುಟ್ಟಿದೆ. ಸಮಾಜವೆಂದರೆ ಸಮುದಾಯ, ಸಮಷ್ಟಿ. ಇದರ ಒಂದು ಅಂಗ ಕುಟುಂಬ, ಅಥವಾ ವ್ಯಕ್ತಿಯನ್ನು ವ್ಯಷ್ಟಿ ಎನ್ನುತ್ತಾರೆ. ದೀವರು ಮೂಲತಃ ದ್ರಾವಿಡರಾದರು, ವೈದಿಕ ಮತಾನುಚರಣೆ ಹೊಂದಿದವರು. ಜನನ ಕ್ರಿಯಾದಿನಾಮಕರಣ, ಮದುವೆ, ಹಬ್ಬಗಳಲ್ಲಿಯು ಸಹ ವೈದಿಕರ ಅಣತಿಯಂತೆ ಆಚರಿಸಲ್ಪಡುತ್ತಿದೆ. ಶವಸಂಸ್ಕಾರ ಮತ್ತು ಧಾರ್ಮಿಕ ಕಾರ್ಯಗಳು ಆಯಾ ಭಾಗದಲ್ಲಿ ಪ್ರಭಾವವಿದ್ದ ಧರ್ಮದ ಪದ್ಧತಿಯಂತೆ ಆಚರಿಸಲ್ಪಡುತ್ತದೆ. ಧಾರ್ಮಿಕ ಕಾರ್ಯಗಳಲ್ಲಿ ಶೈವ ಪ್ರಭಾವವಿದ್ದ ಕಡೆಯಲ್ಲಿ ಶೈವಪದ್ಧತಿ ಪರಂಪರೆ ಇದೆ. ಶವ ಸಂಸ್ಕಾರ ಪದ್ಧತಿ ಹೆಚ್ಚಾಗಿ ದೀವರ ಮೂಲ ಪದ್ಧತಿಯನ್ನು ಇನ್ನೂ ಬಿಟ್ಟುಕೊಟ್ಟಿಲ್ಲ. ಪವಿತ್ರ ಕಾರ್ಯಗಳಿಗೆ ಬ್ರಾಹ್ಮಣ ಪುರೋಹಿತರನ್ನೇ ಅವಲಂಬಿಸಿರುತ್ತಾರೆ. ದೈವಾರಾಧಾನೆಯಲ್ಲಿ ಕೆಲವರು ಶಿವ ಸ್ವರೂಪಿಯಾದ ಕಾಲಭೈರವನನ್ನು, ವಿಷ್ಣು ಸ್ವರೂಪಿಯಾದ ತಿರುಪತಿ ತಿಮ್ಮಪ್ಪನನ್ನೂ ಆರಾದಿಸುವರು. ಭೈರವ ಆರಾಧಕರು ಸೋಮವಾರವನ್ನು ವಿಷ್ಣು ಆರಾಧಕರು ಶನಿವಾರವನ್ನು ದೇವತಾವಾರವಾಗಿ ಆಚರಿಸುವರು. ಮೂಲದಲ್ಲಿ ಶೈವಾರಾಧಕರಾಗಿದ್ದು, ರಾಮಾನುಜಾಚಾರ್ಯರ ಪ್ರಭಾವಕ್ಕೊಳಪಟ್ಟು, ಹಾಗೂ ಶ್ರೀತಿರುಪತಿ ತಿಮ್ಮಪ್ಪನ ದಾಸವರೇಣ್ಯರ ಪ್ರಭಾವಕ್ಕೊಳಗಾಗಿ ಶ್ರೀವಿಷ್ಣು ಆರಾಧಕರಾಗಿರಬಹುದು.

ಹೊಸನಗರ ತಾಲ್ಲೂಕಿನ ದೀವರು ಚೇನುಕಲ್ಲಮ್ಮ ಮತ್ತು ನಾಗೋಡಿಯ ಬೆಣ್ಣೆಟ್ಟೆ ಅಮ್ಮನನ್ನು ಮನೆ ದೇವರಾಗಿ ಪೂಜಿಸುತ್ತಾರೆ. ಸಾಗರ, ಸೊರಬ ಭಾಗದ ದೀವರು ಚಂದ್ರಗುತ್ತಿಯ ರೇಣುಕಮ್ಮ (ಗುತ್ಯಮ್ಮ) ಮತ್ತು ಶಿಕಾರಿಪುರದ ಹುಚ್ಚುರಾಯ ಸ್ವಾಮಿಯ ಆರಾಧಕರಾಗಿದ್ದಾರೆ. ಈ ಜನಾಂಗದ ಹಳೆಯ ತಲೆಮಾರಿನ ಹೆಸರುಗಳನ್ನು ಗಮನಿಸಿದಾಗ ಆ ಹೆಸರುಗಳು, ತಿಮ್ಮಪ್ಪ, ತಿಮ್ಮಮ್ಮ, ಗುತ್ಯಪ್ಪ, ಗುತ್ಯಮ್ಮ, ಕನ್ನಪ್ಪ, ಹುಚ್ಚಪ್ಪ ಈ ರೀತಿಯ ಮನೆದೇವರ ಹೆಸರುಗಳು ಕಂಡುಬರುತ್ತವೆ.

ಬ್ರಾಹ್ಮಣ, ವೀರಶೈವರಂತೆ 'ದೀವರು' ಮಠ ಸ್ಥಾಪಿಸಿರುವುದು ಅಚ್ಚರಿಯ ವಿಷಯವಾಗಿದೆ. ಬ್ರಾಹ್ಮಣ ಮತ್ತು ವೀರಶೈವ ಮಠಗಳ ಪ್ರಭಾವವು ಇದರ ಮೇಲೆ ಆಗಿರಬಹುದು. ನಮ್ಮ ಜನಾಂಗಕ್ಕೆ ಸತ್ಯವಂತ, ಧರ್ಮವಂತ ಜ್ಞಾನಿಯ ಮಾರ್ಗದರ್ಶನ ಬೇಕು. ಆತನ ಮಾರ್ಗದರ್ಶನದಲ್ಲಿ ನಮ್ಮ ಜನಾಂಗ ಪ್ರಗತಿ ಕಾಣಬೇಕು ಎಂಬ ಹಂಬಲದಂತೆ ಆವಿನಹಳ್ಳಿಯ ಪಟಗುಪ್ಪೆಯಲ್ಲಿ ಒಂದು ಮಠವನ್ನು ಸಂಸ್ಥಾಪಿಸಿದ್ದರು. ಮೂವತ್ತೆರಡು ಸೀಮೆಯ ದೀವರು ಚಂದಾ ಎತ್ತಿದ ಹಣದಲ್ಲಿ ಒಂದು ಮಠವನ್ನು ಕಟ್ಟಿದ್ದರು. ಈ ಮಠಕ್ಕೆ ಹಿರಿಯರ ಮಠ ಎಂದು ಕರೆದರು. ಸುಮಾರು ೧೯ನೇ ಶತಮಾನದ ಕೊನೆಯಲ್ಲಿ ಅಥವಾ ೨೦ನೇ ಶತಮಾನ ದಲ್ಲಿ ಈ ಮಠವನ್ನು ಕಟ್ಟಿರಬೇಕು. ಈ ಪ್ರದೇಶವು ಹಿರೇಭಾಸ್ಕರ ಅಣೆಕಟ್ಟಿನಲ್ಲಿ ೧೯೪೪ನೇ ಸಾಲಿನಲ್ಲಿ ಮುಳುಗಡೆಯಾದ್ದರಿಂದ ಯಾವ ಕಾಲದಲ್ಲಿ ಮಠಸ್ಥಾಪನೆಯಾಯಿತು ಎಂಬ ವಿಷಯ ಕರಾರುವಕ್ಕಾಗಿ ದೊರೆಯುವುದಿಲ್ಲ. ಮಠದ ಗುರುಗಳು ಮೇಲುಕೋಟೆಗೆ ಸೇರಿದ ಶ್ರೀವೈಷ್ಣವರಾಗಿದ್ದರೆಂಬುದು ಸ್ಪಷ್ಟವಾಗಿರುತ್ತದೆ.

ಮಡೆನೂರು ಶಾನುಭೋಗರು ಈ ಮಠದ ಬಗ್ಗೆ ಕೆಲ ಮಾಹಿತಿಯನ್ನು ಸಂಗ್ರಹಿಸಿದ್ದಾರೆ. ಅದು ೧೯೩೫-೩೭ರಲ್ಲಿ ಈ ಮಠದ ಪಾಲೆಕಾರ ಅಥವಾ ದಫೇದಾರರಾಗಿದ್ದ ಅವಣೆಕೊಪ್ಪದ ಶ್ರೀ ಗಾಮನಾಯ್ಕರು ತಮ್ಮ ೧೮ನೇ ವರ್ಷದಲ್ಲಿ ಈ ಮಠದಲ್ಲಿ ಪಾಲೇಕಾರರಾಗಿ ಸೇರಿಕೊಂಡಿದ್ದರು. ಇವರ ಕಾಲದಲ್ಲಿ ಸುಮಾರು ಐವತ್ತು ವರ್ಷದ 'ತಾತಾಚಾರ್' ಎಂಬ ಗುರುಗಳಿದ್ದು ಇವರು, ಇವರ ಹಿಂದಿನ ಗುರುಗಳಾದ ಕರೇಗುರುಗಳಿಂದ ಪಟ್ಟವನ್ನು ಪಡೆದವರಾಗಿದ್ದರು. ಗಾಮನಾಯ್ಕರು ಕಿರಿಯ ವಯಸ್ಸಿನವರಾಗಿದ್ದಾಗ ಸೇರಿದ್ದರಿಂದ ಮಠದ ಪೂರ್ಣ ಮಾಹಿತಿಯ ಬಗ್ಗೆ ಯಾವುದೇ ಆಸಕ್ತಿ ತಳೆಯದೆ ಇದ್ದುದರಿಂದ, ಈ ಹಿಂದೆ ಮಠದಲ್ಲಿ ಎಷ್ಟು ಜನ ಗುರುಗಳು ಆಳಿದರು ಮತ್ತು ಮಠದ ಸ್ಥಾಪನೆ ಯಾವಾಗ ಎಂಬಿತ್ಯಾದಿ ವಿಷಯಗಳು ದೊರಕುವುದಿಲ್ಲ. ತಾತಾಚಾರ್ಯರ ಹಿಂದೆ ಕರೆಗುರುಗಳು ಇದ್ದರು ಎಂಬುದು ಮಾತ್ರ ಶ್ರೀ ಗಾಮನಾಯ್ಕರಿಂದ ತಿಳಿದುಬರುತ್ತದೆ. ೧೯೫೦ರ ಹೊತ್ತಿಗೆ ತಾತಾಚಾರ್ಯರು ಮಠ ಬಿಟ್ಟು ಹೋಗಿದ್ದು, ಯಾವುದೇ ದಾಖಲಾತಿಗಳು ದೊರೆಯದ್ದರಿಂದ ಹೆಚ್ಚಿನ ಮಾಹಿತಿ ಸಿಗುತ್ತಿಲ್ಲ. ಈ ಎಲ್ಲಾ ಮಾಹಿತಿಯನ್ನು ಮದುಗಣಪತಿರಾವ್ ಮಡೆನೂರು[1] ಇವರು ತಮ್ಮ ಲೇಖನದಲ್ಲಿ ಸ್ಪಷ್ಟಪಡಿಸಿದ್ದಾರೆ.

ಪಟಗುಪ್ಪೆಯ ಮಠವು ಮೊದಲು ಕರಿಹೆಂಚಿನ ಮನೆಯನ್ನು ಹೊಂದಿದ್ದು, ತಾತಾಚಾರ್ಯರ ಕಾಲದಲ್ಲಿ ಮಂಗಳೂರು ಹೆಂಚಿನ, ಎಂಟು ಅಂಕಣದ ಮುಚ್ಚಿಗೆಯ ಮನೆಯಾಗಿ ನವ ನಿರ್ಮಾಣ ಕಂಡಿತು. ಒಂದು ಭಾಗದಲ್ಲಿ ಸ್ವಾಮಿಯ ವಾಸ ಮತ್ತೊಂದು ಕಡೆ ಬಾಂಧವರಿಗೆ ಕೂರಲು ಹಜಾರ ಮತ್ತು ಅದರ ಇನ್ನೊಂದು ಮುಗ್ಗುಲಲ್ಲಿ ಕೆಂಚರಾಯ, ಹುಚ್ಚುರಾಯ ಹಾಗೂ ಭೂತರಾಯ ದೇವರುಗಳನ್ನು ಪ್ರತಿಷ್ಠಾಪಿಸಿದ್ದರು. ಮೂವತ್ತೆರಡು ಗ್ರಾಮದ ಹಿರಿಯರು ವರ್ಷಕ್ಕೆ ಮೂರು ಸಾರಿ ಸಾಮಾನ್ಯವಾಗಿ, ಧಾರ್ಮಿಕ ಸಮಸ್ಯೆ ಬಂದಾಗಲೆಲ್ಲ ಈ ಸ್ವಾಮಿಗಳಿಗೆ ದೂರು ಸಲ್ಲಿಸಲು ಹೋಗುತ್ತಿದ್ದರು. ಹಿರಿಯರಲ್ಲಿ ಏಳು ಪಾಲು ಹಿರಿಯ, ಐದು ಪಾಲು ಹಿರಿಯ ಮೂರುಪಾಲು ಹಿರಿಯ ಮತ್ತು ಒಂದು ಪಾಲು ಹಿರಿಯ ಎಂಬ ಪ್ರಬೇಧವಿದ್ದು ಆಯಾ ಪ್ರಾಂತದ ಮನೆತನದ ದೊಡ್ಡಸ್ತಿಕೆಯ ಮೇಲೆ ನಿರ್ಧಾರವಾಗಿ ಅನುವಂಶೀಯವಾಗಿ ಮುಂದುವರಿದು ಕೊಂಡು ಬಂದಿತ್ತು. ಈ ಹಿರಿಯರ ಆಣತಿಯಂತೆ ಕುಲಬಾಂಧವರು ನಡೆದುಕೊಳ್ಳಬೇಕಾಗಿತ್ತು. ಮತ್ತು

ಹಿರಿಯರಿಗೆ ಸಮಾಜದಲ್ಲಿ ಗೌರವ ಸ್ಥಾನವಿದ್ದು ಹಬ್ಬ ಹರಿದಿನ, ಮದುವೆ ಮುಂತಾದ ಶುಭ ಕಾರ್ಯದಲ್ಲಿ ಈ ಹಿರಿಯನ ಪಾತ್ರ ಬಹುಮುಖ್ಯವಾಗಿತ್ತು. ಮಠದಲ್ಲಿ ಅವಣೆಕೊಪ್ಪದ ಗಾಮನಾಯ್ಕರು, ನಾಗನಾಯ್ಕರು, ಹಾಲನಾಯ್ಕ, ರುದ್ರನಾಯ್ಕ, ಮತ್ತು ಒಬ್ಬ ಮುಸ್ಲಿಂ ಇಬ್ರಾಹಿಂ ಸಾಬ್ ಎಂಬ ವಾಲೆಕಾರರು ಐದು ಜನರಿದ್ದು, ಇವರಲ್ಲಿ ಒಬ್ಬನಾದ ಗಾಮನಾಯ್ಕರಿಗೆ ನ್ಯಾಯಾಲಯದಲ್ಲಿನ ದಫೇದಾರರಂತೆ ಕೋಟು, ಪೇಟ ಮತ್ತು ಕೆಂಪು ಪಟ್ಟಿ ಹಾಗೂ ಹಿಂದುಸ್ತಾನೀ ಬರಹದಲ್ಲಿದ್ದ ಬಿಲ್ಲೆ (ಮುದ್ರೆ ಯಾವುದೆಂದು ಗೊತ್ತಿಲ್ಲ) ಸಹ ತೊಡುತ್ತಿದ್ದರು. ಇವರು ಸ್ವಾಮಿಗಳು ನೀಡಿದ ತಿಳುವಳಿಕೆ ಜಾರಿಮಾಡುವುದು ಮತ್ತು ಕರೆತರುವ ಕೆಲಸವಾಗಿದ್ದು ಮಠದಿಂದ ವರ್ಷಕ್ಕೆ ೭೫ ರೂಪಾಯಿ ಸಂಬಳ ಹಾಗೂ ಹತ್ತು ಖಂಡುಗ ಭತ್ತ ಪಡೆಯುತ್ತಿದ್ದರು.

ಪಟಗುಪ್ಪೆಯಿಂದ ಆವಿನಹಳ್ಳಿಗೆ ಮಠ ಸ್ಥಳಾಂತರಗೊಂಡಿತು, ಕಾರಣ ಅಣೆಕಟ್ಟೆ ಕಟ್ಟಿದ್ದರಿಂದ ಜಾಗವೆಲ್ಲವು ನೀರಿನಲ್ಲಿ ಮುಳುಗಡೆಯಾಯಿತು. ೧೯೪೮-೫೦ರಲ್ಲಿ ಮಠದ ಸ್ವಾಮಿಗೂ ದೀವರ ಜನಾಂಗದವರಿಗೂ ಮನಸ್ತಾಪ ಬಂದು ಸ್ವಾಮಿಯವರು ಮಠ ತ್ಯಜಿಸಿ ಹೋದರು. ಹೋಗುವಾಗ ಪರಿಹಾರದ ಹಣ, ಕಾಣಿಕೆಯ ಹಣ ಎಲ್ಲವನ್ನು ತೆಗೆದುಕೊಂಡು ಹೋದರು. ಇತ್ತೀಚಿನ ದಿನಗಳಲ್ಲಿ ಮಠದ ಬಗ್ಗೆ ಯಾರಿಗು ಗೊತ್ತಿಲ್ಲ. ಅವರಿವರ ಬಾಯಲ್ಲಿ ಕಥೆಯಾಗಿದೆ. ಈ ಮಠದ ಬಗ್ಗೆ ಕೆಲವು ಸಂಕ್ಷಿಪ್ತ ವಿವರಗಳನ್ನು ಸಾಗರ ತಾ. ಹೆಗ್ಗೋಡು ಗೀಜಗದ ಭದ್ರಯ್ಯಗೌಡರು, ಮಠ ಇದ್ದದ್ದು ನಿಜ. ಮುಳುಗಡೆಯಾದ ನಂತರ ಮಠದ ಚರಾಸ್ತಿಯನ್ನು ಆವಿನಹಳ್ಳಿಗೆ ತರಲಾಯಿತು. ಮಠದ ಸ್ವಾಮಿಯು ಮುಳುಗಡೆ ಪರಿಹಾರದ ಹಣದೊಂದಿಗೆ ಎತ್ತ ಹೋದರೋ ತಿಳಿಯದು. ಮಠದ ಹೆಂಚು, ಪಕಾಸಿ, ತೊಲೆಯೆಲ್ಲವು ಆವಿನಹಳ್ಳಿಯಲ್ಲಿ ಬಿದ್ದಿತ್ತು. ಸ್ವಾಮಿಯವರೇ ಹೋದ ಮೇಲೆ ಚರಾಸ್ತಿಯೆಲ್ಲವು ಯಾರ ಯಾರ ಪಾಲಾಯಿತೊ ತಿಳಿಯದು ಎಂದು ಹೇಳಿದರು. ಹೀಗೆ ಜನಹಿತಕ್ಕೆ ಸೃಷ್ಟಿಯಾದ ಮಠವು ಜನರ, ಸ್ವಾಮಿಯವರ ನಿರ್ಲಕ್ಷ್ಯದಿಂದ ನಾಶ ಹೊಂದಿ ದುರಂತ ಕಥೆಯಾಗಿದೆ.

## ೩.೪. ಒಳಪಂಗಡಗಳು

ದೀವರಲ್ಲಿ ನಾನು ಗಮನಿಸಿದಂತೆ ಯಾವುದೇ ಒಳಪಂಗಡಗಳಿಲ್ಲ. ಕೈಫಿಯತ್ತುಗಳಲ್ಲಿ (ಮಕೆಂಜಿ ಸಂಗ್ರಹ) ಹಳೆದೀವರು, ಹೊಸದೀವರು ಎಂಬ ಜಾತಿಗಳಿವೆ ಎಂಬ ಪ್ರಸ್ತಾಪವಿದೆ. ಹಳೆದೀವರು ಮತ್ತು ಹೊಸದೀವರು ವಿವಾಹ ಸಂಬಂಧಗಳನ್ನು ಮಾಡಿಕೊಳ್ಳಬಹುದು. ಹಳೆದೀವರು ಹಳೆದೀವರಿಗೂ, ಹೊಸ ದೀವರು ಹೊಸದೀವರೊಂದಿಗೆ ವಿವಾಹ ಸಂಬಂಧ ಮಾಡುವಂತಿರಲಿಲ್ಲ. ಕ್ಷೇತ್ರಕಾರ್ಯಕ್ಕೆ ಹೋದಾಗ ದೀವರ ಜಾತಿಗಳ ಬಗ್ಗೆ ವಿಚಾರಿಸಿದರೆ ಅವರು ಹೇಳುವುದು 'ಮಲೆನಾಡಿನ ದೀವರು, ಕಾನುದೀವರು ಅಥವಾ ಬಗಿನಿ ದೀವರು' ಎಂದು ಎರಡು ಪಂಗಡವಿದೆ ಎನ್ನುತ್ತಾರೆ. ಬಹಳ ಹಿಂದೆ ತೆಂಗಿನ ದೀವರು ಮತ್ತು ಕಾನುದೀವರಲ್ಲಿ (ದೀವರು) ವಿವಾಹ ಸಂಬಂಧಿತ ಕಾರ್ಯಗಳು ನಡೆಯುತ್ತಿರಲಿಲ್ಲ. ಆದರೆ ಇತ್ತೀಚಿನ ದಿನಗಳಲ್ಲಿ ವಿವಾಹ ನಡೆಯುತ್ತದೆ. ಕಾನುದೀವರು ಎಂದು ಕರೆಯಿಸಿಕೊಳ್ಳುವ ಮಲೆನಾಡಿನ ದೀವರು ಶಿವಮೊಗ್ಗ ಜಿಲ್ಲೆಯ ಸಾಗರ, ಸೊರಬ, ಹೊಸನಗರಗಳಲ್ಲಿ ಕಂಡುಬರುವರು. ಶಿಕಾರಿಪುರ, ತೀರ್ಥಹಳ್ಳಿ, ಸಿದ್ದಾಪುರ (ಉ.ಕ.ಜಿಲ್ಲೆ) ತಾಲ್ಲೂಕುಗಳಲ್ಲಿ ವಿರಳವಾಗಿ ಇರುವರು. ತೆಂಗಿನ ದೀವರು ಶಿವಮೊಗ್ಗ ಜಿಲ್ಲೆಯಲ್ಲಿ ಮಲೆನಾಡಿನ ದೀವರಿಗಿಂತ ಸಂಖ್ಯೆಯಲ್ಲಿ ಬಹಳ ಕಡಿಮೆ ಇದ್ದಾರೆ. ತೆಂಗಿನ ದೀವರು ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ, ಕುಮಟಾ,

ಅಂಕೋಲ ತಾಲ್ಲೂಕುಗಳಲ್ಲಿ ಹೆಚ್ಚಾಗಿ ವಾಸವಾಗಿದ್ದಾರೆ. ದಕ್ಷಿಣ ಕನ್ನಡ ಜಿಲ್ಲೆಯ ಬಿಲ್ಲವರು, ಕೇರಳದ ಥಿಯಸ್, ಉತ್ತರ ಕನ್ನಡ ಜಿಲ್ಲೆಯ ದೀವರು ಮೂಲತಃ ಒಂದೇ ಬುಡಕಟ್ಟಿಗೆ ಸೇರಿದವರು. ತೆಂಗಿನ ದೀವರು ಕರಾವಳಿ ಪ್ರದೇಶದಲ್ಲಿ ವಾಸವಾಗಿದ್ದು ತೆಂಗಿನ ಮರದಿಂದ ಹೆಂಡ ಇಳಿಸುವ ಉದ್ಯೋಗ ಮಾಡುತ್ತಿದ್ದರಿಂದ ತೆಂಗಿನ ದಿವರಾದರು. ಬಯಿನೆ ಅಥವಾ ಕಾನುದೀವರು ಪಶ್ಚಿಮ ಘಟ್ಟಗಳ, ಸಹ್ಯಾದ್ರಿ ಬೆಟ್ಟಗಳ ಅರಣ್ಯ ಪ್ರದೇಶದಲ್ಲಿ ವಾಸವಾಗಿದ್ದು ಕಾನುದೀವರಾದರು. ಕೆಳದಿ ಸಂಸ್ಥಾನದ ಸೈನಿಕರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿದ್ದ ದೀವರು, ಕೆಳದಿ ಪತನಾನಂತರ ದಿಕ್ಕಾಪಾಲಾಗಿ ಅರಣ್ಯ ಸೇರಿಕೊಂಡರು. ನಂತರ ಜೀವನ ನಿರ್ವಹಣೆಗೆ ಯಾವ ಉದ್ಯೋಗವು ಇಲ್ಲದೆ ಬಯಿನೆ ಮರದಿಂದ ಹೆಂಡ ತಯಾರಿಸುವ ಕೆಲಸ ಕೈಗೊಂಡಿದ್ದರಿಂದ ಕಾನುದೀವರಾದರು.

ಮೈಸೂರಿನ ಹಾಗೂ ಕರಾವಳಿಯ ಹಳೆಪೈಕದವರು ಮಲಬಾರಿನ ಇಜುವಾನರು ಅಥವಾ ತೀಯಾನರು (ದ್ವೀಪಾರ ಅಥವಾ ದೀವರ್, ಅಂದರೆ ದ್ವೀಪದವರು) ಒಂದೇ ಗುಂಪಿಗೆ ಸೇರಿದವರು. ಇಜುವಾನರು ಅಥವಾ ತೀಯಾನರು ಶ್ರೀಲಂಕಾದಿಂದ ವಲಸೆ ಬಂದ 'ಶಾನರ್' ವಸಾಹತಿನವರೆಂದು ಹೇಳಲಾಗುತ್ತದೆ. ಇವರು ಪಶ್ಚಿಮ ಕರಾವಳಿಯ ಕಡೆ ವಲಸೆ ಬಂದಾಗ ತೆಂಗಿನ ಮರ ಹಾಗೂ ಕಳ್ಳು ತೆಗೆಯುವ ಪದ್ಧತಿಯನ್ನು ತಮ್ಮೊಡನೆ ತರುತ್ತಾರೆ. ಈಗಲು ಇವರ ಉದ್ಯೋಗ ತೆಂಗಿನ ಮರದ ಕೃಷಿಯಾಗಿದೆ.

ಕ್ರಿ.ಶ. ಹಾಗೂ ಕ್ರಿ.ಪೂ.ಗಳಲ್ಲಿ ಶ್ರೀಲಂಕಾದ ಮೇಲೆ ಬಹಳಷ್ಟು ಜನಾಂಗಗಳ ದಾಳಿ ನಡೆಯಿತು. ಮೂಲ ದ್ರಾವಿಡರು ಶ್ರೀಲಂಕಾದಿಂದ ಉತ್ತರದ ಕಡೆ ಅಂದರೆ ತಿರುವಾಂಕೂರು ಹಾಗೂ ಪಶ್ಚಿಮ ಕರಾವಳಿಯ ಕಡೆ ವಲಸೆ ಬಂದರು. ತೀವರ್ ಅಥವಾ ಇರುವರ್ ಎಂದಾದರು. ನಂತರ ಇವರೇ 'ತೀಯರ್' ಅಥವಾ 'ಇಲವಾರ್' ಎಂದಾದರು. ಅನಂತರದಲ್ಲಿ ಇವರು ಉತ್ತರ ಜಿಲ್ಲೆ ಉತ್ತರ ಕರಾವಳಿಯಲ್ಲಿ ನೆಲೆಸಿದರು. ನಂತರ ಘಟ್ಟದ ಮೇಲೆ ಅಂದರೆ ಸಹ್ಯಾದ್ರಿ ಪರ್ವತಗಳ ಕಡೆಗೆ ವಲಸೆ ಬಂದ ಇವರು ದೀವರು ಅಥವಾ ಹಳೆಪೈಕದವರಾದರು. ಘಟ್ಟದ ಮೇಲಿನ ಪ್ರದೇಶವು 'ಹುಂಚಾ' ಕುಟುಂಬದವರಿಂದ ಆಳಲ್ಪಡುತ್ತಿತ್ತು. ಇವರೇ ನಂತರ ಕಾರ್ಕಳದ ಬಕ್ಕಿರಸು ಒಡೆಯರು, ಎಂದು ಖ್ಯಾತಿ ಗಳಿಸಿದರು. ಇವರು ಮುಂದೆ ದೇವರ ಮಕ್ಕಳು ಎಂದು ಕರೆಯಿಸಿ ಕೊಂಡರು. ದೀವರ ಮಕ್ಕಳು ಎಂಬುದು ದ್ವೀಪದ ಮಕ್ಕಳು ಎಂಬ ಪದದ ಅಪಭ್ರಂಶವಾಗಿದೆ ಎಂದು ಎಲ್.ಕೆ.ಅನಂತಕೃಷ್ಣ ಅಯ್ಯಂಗಾರ್‌ರವರು ತಮ್ಮ 'ದಿ ಮೈಸೂರು ಟ್ರೈಬ್ಸ್ ಅಂಡ್ ಕ್ಯಾಸ್ಟ್' ಎಂಬ ಗ್ರಂಥದಲ್ಲಿ (ಮೂರನೆ ಸಂಪುಟ)ನಮೂದಿಸಿದ್ದಾರೆ.

ಶ್ರೀಮತಸ್ಥರಲ್ಲಿ ಒಬ್ಬರಾದ ಶ್ರೀ ರಾಮಾನುಜಾಚಾರ್ಯರು ಕರ್ನಾಟಕದಲ್ಲಿ ತಮ್ಮ ಬೋಧನೆಯಿಂದ ಅನೇಕ ಹಿಂದುಳಿದ ಸಮೂಹವನ್ನು ತಮ್ಮ ಅನುಯಾಯಿಗಳನ್ನಾಗಿ ಆಕರ್ಷಿಸಿದರು. ಶೂದ್ರರಿಗೂ ಗಾಯಿತ್ರಿ ಮಂತ್ರವನ್ನು ಉಚ್ಚರಿಸುವ ಹಕ್ಕು ಇದೆ ಎಂದು ಸಾರಿದರು.

ಕರಾವಳಿಯ ತೆಂಗಿನ ದೀವರಲ್ಲಿ ಎರಡು ಗುಂಪುಗಳಾದವು. ನಾಮಧಾರಿಗಳು, ತ್ರಿನಾಮಧಾರಿಗಳು ಎಂದು ಶ್ರೀರಾಮಾನುಜಾಚಾರ್ಯರಿಂದ ಪ್ರಭಾವಕ್ಕೆ ಒಳಗಾದ ಹಳೆಪೈಕರು ನಾಮಧಾರಿಗಳಾದರು. ಇವರು ತಮ್ಮ ಹಣೆಯಲ್ಲಿ ಒಂದೇ ನಾಮಹಾಕಿಕೊಳ್ಳುವರು. ತ್ರಿನಾಮಧಾರಿಗಳು ಮೂರು ನಾಮಧಾರಣೆ ಮಾಡಿಕೊಳ್ಳುವರು.

ಮಲೆನಾಡಿನ ದೀವರಲ್ಲಿಯು ಸಹ ಇವರ ಪ್ರಭಾವ ಗುರುತಿಸಬಹುದು. ಶ್ರೀತಿರುಪತಿ ತಿಮ್ಮಪ್ಪ, ಶ್ರೀಹುಚ್ಚುರಾಯ ಸ್ವಾಮಿಯ (ಶಿಕಾರಿಪುರ) ಒಕ್ಕಲು (ಮನೆದೇವರು) ಎಂದು ಹೇಳಿಕೊಳ್ಳುವ ದೀವರು, ಮತ್ತು ಮೂಲ ಸಂಸ್ಕೃತಿಯನ್ನು ಬಿಡದ ಚಂದ್ರಗುತ್ತಿಯ ರೇಣುಕಮ್ಮನ ಒಕ್ಕಲು ಎಂದು ಹೇಳಿಕೊಳ್ಳುವ ದೀವರು ಮಲೆನಾಡಿನ ಭಾಗದಲ್ಲಿ ಇರುವರು.

ಈಡಿಗರು ಆಂಧ್ರದಿಂದ ಮೈಸೂರಿಗೆ ವಲಸೆ ಬಂದವರು. ರಾಜಮಹೇಂದ್ರಿಯಿಂದ ಬಂದವರು ಎಂದು ಕೆಲವರು ಹೇಳಿದರೆ, ಮತ್ತೆ ಕೆಲವರು ಪೆನುಕೊಂಡದಿಂದ ಬಂದವರೆನ್ನುತ್ತಾರೆ. ಈಡಿಗ ಎಂಬ ಪದವು 'ಇಡಚು' ಎನ್ನುವ ತೆಲುಗುಪದದಿಂದ ಬಂದಿದೆ. ಈಡ+ಇಗ >ಈಡಿಗ, ತಮಿಳಿನ 'ಇಳಿ' 'ಪಲಿ' ಎಂಬ ಪದದ ಅರ್ಥ ಹೆಂಡ ಎಂಬರ್ಥವನ್ನು ಕೊಡುತ್ತದೆ. ಆದರೆ ಏನೆಲ್ಲಾ ವ್ಯತ್ಯಾಸಗಳಿದ್ದರೂ ೧೯೫೮ರಲ್ಲಿ ಬೆಂಗಳೂರಿನಲ್ಲಿ ಪ್ರಥಮವಾಗಿ ನಡೆದ ಆರ್ಯ ಈಡಿಗ ಮಹಾಸಮ್ಮೇಳನದಲ್ಲಿ ಈ ಎಲ್ಲಾ ಜನಾಂಗವನ್ನು ಸೇರಿಸಿ 'ಆರ್ಯ ಈಡಿಗರು' ಎಂದು ಕರೆಯಬೇಕೆಂದು ಎಲ್ಲಾ ಮುಖಂಡರು ನಿರ್ಣಯಿಸಿದರು. ಕರ್ನಾಟಕದ ಸರ್ಕಾರಿ ಮೀಸಲಾತಿಯಲ್ಲಿ ಈಡಿಗರು ಯಾವ ಯಾವ ಪ್ರದೇಶದಲ್ಲಿ ಏನೆಂದು ಕರೆಯಿಸಿಕೊಳ್ಳುತ್ತಿದ್ದರು ಎಂಬುದನ್ನು ತಿಳಿಸಲಾಗಿದೆ.

ರಾಜ್ಯದ ವಿವಿಧ ಭಾಗದಲ್ಲಿರುವ ವಿವಿಧ ಹೆಸರುಗಳಿಂದ ಕರೆಯಿಸಿಕೊಳ್ಳುವ ಜನಾಂಗ:

| | | | |
|---|---|---|---|
| ೧. | ಮೈಸೂರು ಪ್ರದೇಶದಲ್ಲಿ | - | ಈಡಿಗ, ಹಳೆಪೈಕ |
| ೨. | ಕೊಡುಗು ಪ್ರದೇಶದಲ್ಲಿ | - | ಬಿಲ್ಲವ, ಈಡಿಗ, ತಿಯ್ಯಾ, ದೀವರ ಮಕ್ಕಳು |
| ೩. | ಮಂಗಳೂರು ಹಾಗೂ ಕೊಳ್ಳೇಗಾಲ ಪ್ರದೇಶದಲ್ಲಿ | - | ಬಿಲ್ಲವ, ಮಲಯಾಳಿ ಬಿಲ್ಲವ, ಈಳಿಗ, ಇಳ್ಳಿಗ, ದೇವರು |
| ೪. | ಶಿವಮೊಗ್ಗ ಪ್ರದೇಶ | - | ದೀವರು (ಹಳೆಪೈಕ) ತೆಂಗಿನ ದೀವರು. |
| ೫. | ಬೆಳಗಾಂ ಪ್ರದೇಶದಲ್ಲಿ | - | ಹಳೇಪೈಕ, ನಾಮಧಾರಿ, ಕೊಮಾರ ಪೈಕ |
| ೬. | ಗುಲ್ಬರ್ಗ ಪ್ರದೇಶದಲ್ಲಿ | - | ಕಲಾಲ್, ಈಡಿಗ, ಗೌಂಡಾಲ, ಗೂಂಡ್ಲ |

ಈ ಎಲ್ಲಾ ಜಾತಿಗಳನ್ನು ಒಂದೇ ಸೂರಿನಡಿಯಲ್ಲಿ ತಂದರೂ ಸಹ ಪ್ರಾದೇಶಿಕ, ನೈಸರ್ಗಿಕ ಭಿನ್ನತೆ ಮುಂತಾದ ಕಾರಣಗಳಿಂದ ಕೆಲ ಆಚರಣೆ ಸಂಪ್ರದಾಯದಲ್ಲಿ ಕೆಲ ವಿಶೇಷತೆ ಇದೆ.

### ೩.೫. ನ್ಯಾಯ ಪದ್ಧತಿ

ಮನುಷ್ಯ ಅಲೆಮಾರಿ ಜೀವನ ಪದ್ಧತಿಯಿಂದ ಸಂಘ ಜೀವನ ಪ್ರಾರಂಭಿಸಿದ ಮೇಲೆ ಅನೇಕ ಮಾರ್ಪಾಟುಗಳು, ನಿಬಂಧನೆಗಳು, ಬದುಕಿನಲ್ಲಿ ಕಾಣಿಸಿಕೊಂಡವು. ಹಲವಾರು ಕುಟುಂಬವು ಒಂದೇ ಕಡೆ ಸೇರಿ ಕೇರಿ ಇಲ್ಲವೆ ಊರು ಎಂದು ಕರೆಯಿಸಿಕೊಂಡಿತ್ತು. 'ಊರು' ಎಂದು ಕರೆಯಿಸಿಕೊಂಡ ಮೇಲೆ ತಂಟೆ ತಕರಾರುಗಳು ಸರ್ವೇಸಾಮಾನ್ಯ. ಇಂತಹ ತಕರಾರುಗಳಿದ್ದರೆ 'ಪಂಚಾಯಿತಿ' ಎಂಬ ನ್ಯಾಯ ವ್ಯವಸ್ಥೆಯ

ಮುಂದೆ ತರಲಾಗುತ್ತದೆ. ಒಂದು ಕಟ್ಟೆ ಅಥವಾ ಊರಿನ ಮಧ್ಯದಲ್ಲಿರುವ ದೇವಸ್ಥಾನದಲ್ಲಿ ಊರಿನ ಹಿರಿಯರು ಸೇರುವರು. ಈ ಎಲ್ಲಾ ಮುಖಂಡರನ್ನು ಸೇರಿಸುವವನು ಕೋಲಕಾರನಾಗಿರುತ್ತಾನೆ. ಎಲ್ಲರು ಸಮಸ್ಯೆ ತಂಟೆಯ ಬಗ್ಗೆ ಚರ್ಚಿಸಿ, ನಂತರದಲ್ಲಿ ಗೌಡ ಎನ್ನುವ ಗ್ರಾಮದ ಮುಖ್ಯಸ್ಥ ಕೊನೆಯ ತೀರ್ಮಾನ ಕೊಡುವರು. ನ್ಯಾಯದ ಕಟ್ಟೆಯ ಮುಂದೆ ಎಲ್ಲರೂ ಸಮಾನರು, ಇದೊಂದು ಸಾಮಾಜಿಕ ಆಡಳಿತ ವ್ಯವಸ್ಥೆಯಾಗಿದೆ. ಈ ರೀತಿಯ ವ್ಯವಸ್ಥೆ ಗ್ರಾಮಮಟ್ಟದಲ್ಲಿ ಇನ್ನೂ ಜೀವಂತವಾಗಿದೆ. ಈ ನ್ಯಾಯ ವ್ಯವಸ್ಥೆಯಲ್ಲಿ ಎರಡು ವಿಭಾಗ ಗಳಿವೆ. ಒಂದು ಎಲ್ಲಾ ಜಾತಿಯ ಮತ್ತು ಎಲ್ಲಾ ಧರ್ಮೀಯರೊಳಗೊಂಡ ನ್ಯಾಯ ವ್ಯವಸ್ಥೆ. ಇನ್ನೊಂದು ಆಯಾ ಜಾತಿಗೆ ಸಂಬಂಧಿಸಿದಂತೆ ನ್ಯಾಯವ್ಯವಸ್ಥೆ ಇದೆ.

ದೀವರು ತಮ್ಮ ಸಮುದಾಯದಲ್ಲಿ ತಲೆದೋರಿದ ಸಮಸ್ಯೆಗಳನ್ನು ಜಾತಿಯ ಮುಖಂಡರಲ್ಲಿ ಬಗೆಹರಿಸಿ ಕೊಳ್ಳುವರು. ಇಲ್ಲಿ ಸಮಸ್ಯೆಗೆ ಪರಿಹಾರ ಸಿಗದೆ ಇದ್ದಾಗ ಗ್ರಾಮ ಮಟ್ಟದಲ್ಲಿ ತೀರ್ಮಾನ ತಲೆ ಬಾಗುವರು. ಸಮುದಾಯದಲ್ಲಿ 'ಹಿರಿಯ' ಎಂದು ಕರೆಯಿಸಿಕೊಳ್ಳುವ ವ್ಯಕ್ತಿ ನ್ಯಾಯವಾದಿಯಾಗಿರುವನು. ಜಾತಿಯ ಇನ್ನುಳಿದ ಮುಖಂಡರು ಅಂದರೆ 'ನಾಯಕ'ರೆಂದು ಕರೆಯಿಸಿಕೊಳ್ಳುವ ಮನೆಯ ಹಿರಿಯಾತ, ಹಾಗೂ ಬುದ್ಧಿವಂತ ಸೇರಿ ಚರ್ಚೆನಡೆಸಿ ನ್ಯಾಯ ತೀರ್ಮಾನ ಕೈಗೊಳ್ಳುತ್ತಾರೆ. 'ನಾಯಕ' ಎಂದು ಕರೆಯಿಸಿಕೊಳ್ಳುವ ವರನ್ನು ಪಂಚಾಯಿತಿ ಕಟ್ಟೆಗೆ ಸೇರಿಸುವಾತನಿಗೆ ಕೋಲಕಾರ ಎಂದು ಕರೆಯುವರು. ಈ ವ್ಯವಸ್ಥೆ ಜಾತಿ ಮತ್ತು ಗ್ರಾಮಮಟ್ಟದಲ್ಲಿಯು ಇದೇ ರೀತಿ ಇರುತ್ತದೆ.

ಆದರೆ ಇತ್ತೀಚಿಗೆ ಈ ರೀತಿಯ ಪದ್ಧತಿ ಸ್ವಲ್ಪ ಬದಲಾಗಿದೆ. ಗ್ರಾಮದಲ್ಲೀಗ 'ನಾಗರೀಕ ಹಿತರಕ್ಷಣ' ಸಮಿತಿಯೊಂದನ್ನು ರಚಿಸುವರು. ಊರಿನ ಜಾತಿಯ ಆಧಾರದ ಮೇಲೆ ಸದಸ್ಯರನ್ನು ಆಯ್ಕೆ ಮಾಡುವರು. ಈ ಸದಸ್ಯರೆಲ್ಲಾ ಸೂಚಿಸಿದ ವ್ಯಕ್ತಿ ಅಧ್ಯಕ್ಷನಾಗುತ್ತಾನೆ. ಇದರಲ್ಲಿ ಒಬ್ಬ ಕಾರ್ಯದರ್ಶಿ ಎಂದು ಆಯ್ಕೆ ಮಾಡುವರು. ಊರಿನಲ್ಲಿ ಮೊದಲಿನಿಂದಲು ಕೋಲಕಾರ ಅಥವಾ ಸಾರುವವ, ಇಂದಿಗೂ ಅದನ್ನೇ ಮುಂದು ವರಿಸಿ ಕೊಂಡು ಬಂದಿದ್ದಾರೆ. ಈ ಸದಸ್ಯ ಮತ್ತು ಅಧ್ಯಕ್ಷರಾದವರು ಬಹಳ ಹಿರಿಯರಾಗಿರಬೇಕು ಎಂದೇನಿಲ್ಲ, ವಯಸ್ಕರಾದರು ನಡೆಯುತ್ತದೆ. ಅಧ್ಯಕ್ಷನಾದವನು ವಾದ ವಿವಾದವನ್ನು ಕೇಳಿ ಪರಾಂಬರಿಸಿ. ಸದಸ್ಯರೊಡನೆ ಚರ್ಚಿಸಿ ದಂಡ ವಿಧಿಸುತ್ತಾನೆ. ದಂಡದ ಹಣ ಕಟ್ಟಿಸಿಕೊಳ್ಳುವವ ಕಾರ್ಯದರ್ಶಿ ಆಗಿರುತ್ತಾನೆ. ಊರಿನ ದೇವಸ್ಥಾನ ಅಥವಾ ಅರಳಿಕಟ್ಟೆಯ ಮೇಲೆ ತೀರ್ಪುಗಾರರು ಕುಳಿತಿದ್ದರೆ, ಕಟ್ಟೆಯ ಕೆಳಗೆ ವಾದಿ ಮತ್ತು ಪ್ರತಿವಾದಿ ಇಬ್ಬರು ನಿಂತಿರಬೇಕು. ಸಾಕ್ಷಿ ಹೇಳುವವರು ಕೂತಿರಬಹುದು. ಮೊದಲು ಫಿರ್ಯಾದಿ ಕೊಟ್ಟ ವ್ಯಕ್ತಿ ನ್ಯಾಯ ಪಂಚಾಯಿತಿಯ ಎದುರು ನಿಂತು ಹೇಳಿಕೆ ಮಂಡಿಸುತ್ತಾನೆ. ನಂತರ ಪಂಚಾಯಿತಿಯ ಮುಖಂಡ ಆಪಾದನೆಗೆ ಗುರಿಯಾದ ವ್ಯಕ್ತಿಯನ್ನು ವಿಚಾರಣೆಗೆ ಒಳಪಡಿಸಿ, ಸಾಕ್ಷಿಗಳ ವಿಚಾರ ಮಾಡಲಾಗುತ್ತದೆ. ಎಲ್ಲಾ ಸದಸ್ಯರು ಅಥವಾ ಹಿರಿಯರೊಡನೆ ಸಮಾಲೋಚಿಸಿ ತೀರ್ಮಾನ ಹೇಳಿ ತಪ್ಪು ಮಾಡಿದವನಿಗೆ ದಂಡ ವಿಧಿಸಲಾಗು ತ್ತದೆ. ಕೆಲವೊಮ್ಮೆ ಇಬ್ಬರು ತಪ್ಪು ಮಾಡಿದರೆ ಇಬ್ಬರಿಗು ದಂಡ ವಿಧಿಸಲಾಗುತ್ತದೆ.

ಕೆಲವೊಮ್ಮೆ ದಂಡದ ಸ್ವರೂಪ ಛಡಿ ಏಟಿನ ಶಿಕ್ಷೆಯು ಆಗಿರುತ್ತದೆ. ಲೈಂಗಿಕ ಕಿರುಕುಳ ನೀಡಿದ ಗಂಡನಿಗೆ, ವ್ಯಭಿಚಾರ ಮಾಡಿದ ಸ್ತ್ರೀಗೆ, ಮದುವೆಯಾಗದೆ ಗರ್ಭಿಣಿಯಾದ ಹೆಂಗಸು ಮತ್ತು ಕಾರಣೀಭೂತನಾದ ವ್ಯಕ್ತಿಗೆ,

ಪಂಚಾಯಿತಿ ನಡೆಯುವಾಗ ಅತಿಯಾದ ತಲೆಹರಟೆ, ವಾಚಾಳಿತನ ಪ್ರದರ್ಶಿಸಿದರೂ ಧರ್ಮದೇಟುಗಳನ್ನು ತಿನ್ನಬೇಕಾಗುತ್ತದೆ. ಲೈಂಗಿಕ ಪ್ರಕರಣಗಳು ಪಂಚಾಯಿತಿ ಕಟ್ಟೆಗೆ ಹೆಚ್ಚಿನದಾಗಿ ಬರುವುದಿಲ್ಲ. ಜಾತಿಯ ಹಿರಿಯರು ತೊಂದರೆಗೊಳಗಾದ ಹೆಣ್ಣು ಅಥವಾ ಗಂಡಿನ ಮನೆಯಲ್ಲಿ ವಿಚಾರಣೆ ಮಾಡಿ ತೀರ್ಮಾನ ಹೇಳುವರು.

ಪಂಚಾಯಿತಿ ಕಟ್ಟೆಗೆ ಬರುವ ಎಲ್ಲಾ ಜಗಳ ತಂಟೆತಕರಾರುಗಳಿಗೂ ತೀರ್ಮಾನ ಕೊಡಲು ಸಾಧ್ಯವಿಲ್ಲ. ಕೆಲವೊಮ್ಮೆ ಕ್ಲಿಷ್ಟ ಪರಿಸ್ಥಿತಿ ನಿರ್ಮಾಣವಾದಾಗ, ಅಂದರೆ ಅಪರಾಧ ಕಂಡು ಹಿಡಿಯಲು ಸಾಧ್ಯವಿಲ್ಲ ಎಂದಾಗ ಮುಖಂಡನು ದೇವರ ಗಂಟೆ ಹೊಡೆಯುವ ಅಥವಾ ದೀಪ ಹಚ್ಚುವ ಕೆಲಸವನ್ನು ಇಬ್ಬರಿಗು ಹೇಳುತ್ತಾನೆ. ದೈವಕ್ಕೆ ಹೆದರಿದ ಅಪರಾಧಿ ನಿಜ ಒಪ್ಪಿಕೊಳ್ಳುವನು. ಈ ರೀತಿ ಸತ್ಯವನ್ನು ಕಂಡು ಹಿಡಿಯುವರು. ಒಂದೊಂದು ಸಾರಿ ಪಂಚಾಯಿತಿ ತೀರ್ಮಾನದಲ್ಲಿ ತಪ್ಪು ಸಂಭವಿಸಬಹುದು. ನಿರಪರಾಧಿಯೇ ಅಪರಾಧಿಯಾಗಿ ದಂಡ ಕಟ್ಟುವ ಸ್ಥಿತಿ ಉಂಟಾದಾಗ ಆ ವ್ಯಕ್ತಿ ಮುಖಂಡರಿಗೆ ನನ್ನದೇನು ತಪ್ಪಿಲ್ಲ, ಸಾಕ್ಷಿ ಮತ್ತಿತರ ಕಾರಣಗಳಿಂದ ನಾನು ಅಪರಾಧಿಯಾಗಬೇಕಾಯಿತು, ನಿಮ್ಮ ಬಗ್ಗೆ ಗೌರವವಿದೆ. ಆದರೆ ನಾನು ದೈವಕ್ಕೆ 'ಹೂಯಿಲು'[೪] ಕೊಡುತ್ತೇನೆ ಎಂದು ಹೇಳಿ, ದೈವಕ್ಕೇ 'ಹೂಯಿಲು' ಕೊಡುವನು. ನಿಜವಾದ ಅಪರಾಧಿಯ ಮನೆಯಲ್ಲಿ ಕಷ್ಟಗಳು ತಲೆದೋರಿದಾಗ, ದೈವ ಕೋಪಗೊಂಡಿದೆ ಎಂದು ಮುಖಂಡರ ಹತ್ತಿರ ಬಂದು ತಪ್ಪೊಪ್ಪಿಕೊಳ್ಳುವನು. ಮುಖಂಡರು ಇಬ್ಬರನು ಕರೆಯಿಸಿ ದೈವದ ಹುಯಿಲು ತೆಗೆಯಲು ಹೇಳಿ ದೈವಕ್ಕೆ ದಂಡ ಕಟ್ಟಿಸಿ, ಇಬ್ಬರನ್ನು ರಾಜಿ ಮಾಡುವನು. ಇದೊಂದು ನ್ಯಾಯವ್ಯವಸ್ಥೆಯ ಇನ್ನೊಂದು ಮುಖವಾಗಿದೆ. ಸಾಮಾಜಿಕ ನ್ಯಾಯ ಕ್ಲಿಷ್ಟವಾದಾಗ ಅಥವಾ ನ್ಯಾಯ ದೊರಕದೆ ಇದ್ದಾಗ ಇಂತಹ ಪದ್ಧತಿ ಅನುಸರಿಸುತ್ತಾನೆ. ನ್ಯಾಯವಂತನಾದವನು ಮಾತ್ರ ಹೂಯಿಲು ಹಾಕುವನು. ದೇವರು ಪೂಜಾರಿ, ಗಾಡಿಗ, ಮಂತ್ರವಾದಿ, ಮೊಕ್ತೇಸರ ಅಥವಾ ಧರ್ಮಾಧಿಕಾರಿಗಳ ಮುಖಾಂತರ ಹೂಯಿಲು ಸ್ವೀಕರಿಸುತ್ತದೆ. ನ್ಯಾಯ ದೊರೆತಾದ ಮೇಲೆ ದಂಡವನ್ನು ಸಹ ಇವರಿಂದಲೇ ಸ್ವೀಕರಿಸಲಾಗುತ್ತದೆ. ತನ್ನ ವಿರೋಧಿಗೆ ಕೇಡಾಗಲಿ ಎಂಬ ಅಭಿಲಾಶೆ ಇವನಿಗೆ ಇರುವುದಿಲ್ಲ. ನ್ಯಾಯ ದೊರಕಲಿ ಮತ್ತು ಸರಿಕರ ಎದುರಲ್ಲಿ ಅಪರಾಧಿ ಎಂದೆನಿಸಿಕೊಂಡೆನಲ್ಲ ಎಂಬ ವ್ಯಥೆ ಇಲ್ಲಿ ಪ್ರಧಾನ ವಾಗಿರುತ್ತದೆ. ಈ ಪದ್ಧತಿಯು ನ್ಯಾಯ ವ್ಯವಸ್ಥೆಯಲ್ಲಿ ಪ್ರಮುಖ ಪಾತ್ರವಹಿಸುತ್ತದೆ.

ನಾಗರಿಕ ಹಿತರಕ್ಷಣ ಸಮಿತಿ ಅಥವಾ ಪಂಚಾಯಿತಿ ಮುಖಂಡರು ಬರಿ ನ್ಯಾಯ ತೀರ್ಮಾನಗಳನ್ನಲ್ಲದೆ ಅನೇಕ ಜನೋಪಯೋಗಿ ಕೆಲಸದಲ್ಲಿಯು ನ್ಯಾಯ ಮಂಡಳಿಯನ್ನು ಬಳಸಿಕೊಳ್ಳುವರು. ಊರಿನ ರಸ್ತೆ, ದೇವಸ್ಥಾನದ ರಿಪೇರಿ, ಕೆರೆ ರಿಪೇರಿ ಮತ್ತು ಜಾತ್ರೆ, ಹಬ್ಬದ ದಿನಾಂಕ, ಪೂರ್ವ ತಯಾರಿಯ ಬಗ್ಗೆ, ಅನೇಕ ವಿಷಯಗಳ ಬಗ್ಗೆ ಊರಿನ ಮುಖಂಡರು ಮತ್ತು ಜನರನ್ನು ನ್ಯಾಯದ ಕಟ್ಟೆಗೆ ಊರುಸಾರುವವನ ಮುಖಾಂತರ ಕರೆಸುವರು. ಇಲ್ಲಿ ಗ್ರಾಮದ ರಸ್ತೆ ಕೆಲಸ, ಕೆರೆ ಕೆಲಸಕ್ಕೆ ಇಂತಿಷ್ಟು ಆಳು ಒಂದೊಂದು ಮನೆಯಿಂದ ಬರಬೇಕು, ಜಾತ್ರೆ, ಹಬ್ಬದ ವಿಷಯವಾದರೆ ಮನೆಗೆ ಇಷ್ಟು ಹಣ, ವರಾಡ ವಿಧಿಸುವರು. ವರಾಡದ ಹಣದ ಪ್ರಮಾಣ, ಪ್ರತಿಯೊಂದು ಮನೆಯ ಆರ್ಥಿಕ ಸ್ಥಿತಿಗತಿ, ಜನಸಂಖ್ಯೆಯನ್ನು ಅವಲಂಬಿಸಿರುತ್ತದೆ. ಊರಿನ ಕೆಲಸ ಎಂದ ಮೇಲೆ ಎಲ್ಲಾ ಜಾತಿಯ ಹಿರಿಯರು ಸೇರಿ ತೀರ್ಮಾನ ತೆಗೆದುಕೊಳ್ಳುವರು. ಇತ್ತೀಚಿನ ದಿನಗಳಲ್ಲಿ ಹೆಚ್ಚಿನ

ಪಂಚಾಯಿತಿಗಳೆಲ್ಲಾ 'ಗ್ರಾಮ ಮಂಡಳಿ' ಅಥವಾ ನಾಗರಿಕ ಹಿತರಕ್ಷಣ ಸಮಿತಿಯ ತೀರ್ಮಾನಕ್ಕೆ ಬದ್ಧವಾಗಿರುತ್ತದೆ. ಈ ಮಂಡಳಿಯಲ್ಲಿ ಊರಿನಲ್ಲಿರುವ ದೀವರು, ಲಿಂಗಾಯಿತರು, ಹರಿಜನ, ಬೋವಿ ಹೀಗೆ ಆಯಾ ಊರನ್ನು ಅವಲಂಬಿಸಿರುತ್ತದೆ. ಮಂಡಳಿಯ ಸದಸ್ಯರು ಮತ್ತು ಅಧ್ಯಕ್ಷ ವಯಸ್ಕರು, ಮಧ್ಯವಯಸ್ಕರು, ಹಿರಿಯರಾದವರು ಇರಬಹುದು. ನ್ಯಾಯ ತೀರ್ಮಾನದ ಸಂದರ್ಭದಲ್ಲಿ ಅಥವಾ ಗ್ರಾಮದ ಕೆಲಸ ಕಾರ್ಯದಲ್ಲಿ ಸರಿಯಾಗಿ ಸ್ಪಂದಿಸದ ವ್ಯಕ್ತಿಗೆ ದಂಡ ಹಾಕಬಹುದು. ಆತ ಇದನ್ನು ಧಿಕ್ಕರಿಸಿದರೆ ಇದಕ್ಕೆ ಕೊನೆಯ ತೀರ್ಮಾನ ಬಹಿಷ್ಕಾರದಂತಹ ಕಠಿಣಕ್ರಮ ಜರುಗಿಸುವರು. ಈ ಶಿಕ್ಷೆಯು ದೀವರಲ್ಲಿ ವಿವಾದಕ್ಕೆಡೆ ಮಾಡಿದೆ ಹಾಗು ಆಧುನೀಕರಣದ ಓಟದಲ್ಲಿ ಜನರು ಕೋರ್ಟ್, ಕಛೇರಿ, ಪೋಲೀಸು ಎಂದು ಹೋಗುವುದರಿಂದ ಪಂಚಾಯಿತಿ ವ್ಯವಸ್ಥೆಯು ಸಮಾಜದಲ್ಲಿ ತನ್ನ ಹಿಡಿತವನ್ನು ಕಳೆದುಕೊಳ್ಳುತ್ತಿದೆ. ಆದರೆ ಮಲೆನಾಡಿನ ಭಾಗದಲ್ಲಿ ಈ ಪದ್ಧತಿ ಇನ್ನೂ ಇದೆ. ನಾನು ಗಮನಿಸಿದಂತೆ ಕೆಲವೊಂದು ಗ್ರಾಮದ ಪಂಚಾಯಿತಿ ಕಟ್ಟೆ ಅಥವಾ ಗ್ರಾಮ ಮಂಡಳಿಯು ಕ್ರಿಯಾಶೀಲ ಚಟುವಟಿಕೆ ಮತ್ತು ಸಮಾಜವಾದಿ ಚಿಂತನೆಯ ನೆಲೆಯಲ್ಲಿರುವುದನ್ನು ಕಾಣುತ್ತೇವೆ. ಇದಕ್ಕೆ ಒಳ್ಳೆ ಉದಾಹರಣೆ, ಹಿರೆನೆಲ್ಲೂರು ಗ್ರಾಮ ಮಂಡಳಿ, ಸತತ ಮೂರು ವರ್ಷದಲ್ಲಿ ಕನಿಷ್ಠ ವರಾಡವನ್ನು ಮನೆಗೆ ಒಂದರಂತೆ ಹಾಕಿ, ವಸೂಲು ಮಾಡಿ 'ಐದು ಲಕ್ಷ ರೂಪಾಯಿಯ' ಮಾರಿಗುಡಿಯನ್ನು ಕಟ್ಟಿರುವುದು ಹಾಗೂ ಕಾಗೋಡು ಗ್ರಾಮಮಂಡಳಿ 'ಮಾರಿಜಾತ್ರೆಯಲ್ಲಿ ಪಾನ ನಿಷೇಧ' ಜಾರಿಗೊಳಿಸಿರುವುದು, ಗ್ರಾಮದಲ್ಲಿ ಯಾರೂ ಸರಾಯಿ ತಯಾರಿಸಬಾರದು, ತಯಾರಿಸಿದರೆ ದಂಡ ಎಂಬ ಪದ್ಧತಿ ಸರ್ಕಾರಕ್ಕೆ ಒಂದು ಮಾದರಿ. ಮೊನ್ನೆಯ ಗ್ರಾಮ ಮಂಡಳಿ ಕೆಲ ತೀರ್ಮಾನ ನನಗೆ ಅಚ್ಚರಿ ತಂದಿತು. ಅದು ಇಂತಿದೆ.

೧. ಕಾಡನ್ನು ಸಂರಕ್ಷಿಸುವುದು

೨. ಮನೆಗೆ ಒಬ್ಬರಂತೆ ಕಾವಲು ಕಾಯುವುದು

೩. ಕಾಡಿನಲ್ಲಿ ಒಣಗಿದ ಕಟ್ಟಿಗೆಯನ್ನು ಊರಿನವರೆಲ್ಲಾ ಸೇರಿ (ಮನೆಗೆ ಇಬ್ಬರಿಗೆ ಕಾಡಿಗೆ ಪ್ರವೇಶ) ತರುವುದು

೪. ಕಾಡಿನಲ್ಲಿ ದೊರಕುವ ದರಕಲು (ಒಣಗಿದ ಎಲೆ) ಮನೆಯವರು ಮಾತ್ರ ತರಬೇಕು

೫. ದರಕಲು ಮತ್ತು ಕಟ್ಟಿಗೆಯನ್ನು ಗಾಡಿ ಅಥವಾ ಟ್ರ್ಯಾಕ್ಟರ್‌ನಲ್ಲಿ ಸಾಗಿಸುವಂತಿಲ್ಲ.

೬. ದರಕಲು ಮತ್ತು ಕಟ್ಟಿಗೆಯನ್ನು ತರಲು ಕೂಲಿಯವರನ್ನು ನೇಮಿಸುವಂತಿಲ್ಲ.

೭. ದರಕಲನ್ನು ತೋಟಕ್ಕೆ ಹಾಕುವಂತಿಲ್ಲ. (ದರಕಲು ಒಣಗಿದ ಎಲೆ)

ಇಲ್ಲಿ ಗಮನಿಸಬೇಕಾದ್ದು ಕಾಡಿನ ಪರಿಕರಗಳು ಮನುಷ್ಯನಿಗೆ ಅವಶ್ಯಕ ಆದರೆ ಅತಿಯಾದ ಬಳಕೆಯಿಂದ ಕಾಡು ನಾಶವಾಗಬಾರದು ಮತ್ತು ಭೂಮಿಯ ಫಲವತ್ತತೆಯನ್ನು ಜೀವಂತವಾಗಿಡುವ ಕಳಕಳಿ, ನೈಜ ಕಾಳಜಿ ಇಲ್ಲದೆ, ಈ ರೀತಿಯ ಪದ್ಧತಿಯು ಸಾಗರ, ಸೊರಬ, ಹೊಸನಗರ ತಾಲ್ಲೂಕುಗಳಲ್ಲಿ ಇತ್ತೀಚೆಗೆ ಕಾಣಬಹುದು. ಇದರಿಂದಾಗಿ ಒಂದು ಹಂತದಲ್ಲಿ ಬೋಳಾದ ಗುಡ್ಡಗಳಲ್ಲಿ ಇಂದು ಚಿಗುರೆಲೆ ಮೂಡಲು ಕಾರಣ ಜನರಲ್ಲಿಯ ಜಾಗೃತಿಯಾಗಿದೆ. ಇದಕ್ಕೆ ಮಾಸೂರು, ಕಾಗೋಡು, ಹಿರೇನೆಲ್ಲೂರು, ಮಂಡಗಳಲೆ, ಮಾಗಡಿ, ಗುಡವಿ, ಬಟ್ಟೆಮಲ್ಲಪ್ಪ, ಚಂದ್ರಗುತ್ತಿ, ತಾಳಗುಪ್ಪ, ಕೆರೆಹಳ್ಳಿ ಮುಂತಾದ ಗ್ರಾಮಗಳು ಮುನ್ನುಡಿಯಾಗಿವೆ.

## ಬಹಿಷ್ಕಾರ

ಬಹಿಷ್ಕಾರ ಎಂದರೆ ಸಮಾಜದಿಂದ ಹೊರಹಾಕು ಎಂಬರ್ಥವನ್ನು ಕೊಡುತ್ತದೆ. ಬಹಿಷ್ಕಾರಗೊಂಡ ವ್ಯಕ್ತಿ ಜನಾಂಗ ಅಥವಾ ಸಮಾಜದಿಂದ ದೂರವಿರಬೇಕು. ಎಲ್ಲರೊಡನೆ ಇದ್ದರು ಏಕಾಂಗಿ ಜೀವನ ನಡೆಸಬೇಕಾಗುತ್ತದೆ. ದೀವರಲ್ಲಿ ಬಹಿಷ್ಕಾರ ಪದ್ಧತಿಯು ರಾಜ್ಯ ಪ್ರಮುಖ ಪತ್ರಿಕೆಗಳಲ್ಲಿ ಪ್ರಕಟವಾಗಿ, ವಿಧಾನಸೌದದಲ್ಲಿಯು ಚರ್ಚೆಗೆ ದಾರಿಮಾಡಿಕೊಟ್ಟಿತು. ಅದರಲ್ಲೂ ಬಹಿಷ್ಕಾರಗೊಂಡ ವ್ಯಕ್ತಿ ದೀವರ ಕಾಗೋಡು ಹೋರಾಟದ ನೇತಾರ ಗಣಪತಿಯಪ್ಪ ಹೆಚ್. ಬಹಿಷ್ಕಾರ ಹಾಕಿದವರು ದೀವರು, ಈ ಘಟನೆಯ ಹಿನ್ನೆಲೆ ಏನೇ ಇರಲಿ ಇದೊಂದು ದುರಂತ ಎಂದು ಹೇಳಬಹುದು.

ಸಮಾಜ ಕಂಡುಕೊಂಡ ನ್ಯಾಯ ವ್ಯವಸ್ಥೆಯಲ್ಲಿ ಅಪರಾಧಿಯಾದವನು ತಪ್ಪೊಪ್ಪಿಕೊಂಡು ದಂಡ ಕಟ್ಟಿದರೆ ವ್ಯವಸ್ಥೆಗೆ ಒಂದು ಮರ್ಯಾದೆ ಇಲ್ಲದಿದ್ದರೆ ವ್ಯವಸ್ಥೆಯೇ ನಗೆ ಪಾಟಲಿಗೆ ಇಡಾಗುತ್ತದೆ. ಅಪರಾಧಿಯಾದವ ತಪ್ಪು ಒಪ್ಪಿಕೊಳ್ಳದೆ, ದಂಡವನ್ನು ಕಟ್ಟದೆ ಪಂಚಾಯಿತಿ ತೀರ್ಮಾನವನ್ನೆ ಧಿಕ್ಕರಿಸಿ ನಡೆದರೆ ಮುಖಂಡರು ಕೊನೆಯ ಅಸ್ತ್ರವಾದ 'ಬಹಿಷ್ಕಾರ'ವನ್ನು ಅಪರಾಧಿಗೆ ವಿಧಿಸುವರು. ಬಹಿಷ್ಕಾರವೆಂದರೆ 'ಬಹಿಷ್ಕಾರಕ್ಕೆ ಒಳಗಾದ ವ್ಯಕ್ತಿ ಊರು ಬಿಟ್ಟು ಹೋಗುವಂತೇನು ಇಲ್ಲ. ಆತ ಊರಿನಲ್ಲಿಯೇ ಇರುತ್ತಾನೆ. ಈತನನ್ನು ಯಾರು ಮಾತನಾಡಿಸಬಾರದು. ಗ್ರಾಮದ ಕೆರೆಯ ನೀರನ್ನು ಗದ್ದೆಗೆ ಬಿಟ್ಟುಕೊಳ್ಳುವಂತಿಲ್ಲ. ಈತನ ಮನೆಗೆ ಯಾರು ಹೋಗುವಂತಿಲ್ಲ. ಯಾವುದೇ ಮಂಗಳ ಕಾರ್ಯ ಅಥವಾ ಶವ ಸಂಸ್ಕಾರಕ್ಕೂ ಯಾರು ಹೋಗದೆ ಇರುವುದು.' ಈ ಪದ್ಧತಿಗೆ ದೀವರಲ್ಲಿ 'ಕಟ್ಟುಕೊಡುವುದು' ಎಂದು ಹೇಳುವರು.

ಹಿಂದಿನ ಜನಪದರು ದೈವಕ್ಕೆ, ಹಿರಿಯರಿಗೆ, ಗೌರವಕೊಡುತ್ತಿದ್ದರು. ಶ್ರದ್ಧೆ, ಶಿಸ್ತು, ವಿನಯ ಮುಂತಾದ ಗುಣಗಳು ಜನರಲ್ಲಿತ್ತು. ಇಂದು ನಾಗರೀಕತೆ ಬೆಳೆದಂತೆ ಇವುಗಳೆಲ್ಲಾ ಮಾಯವಾಗಿದೆ. ಪಂಚಾಯತಿಯಲ್ಲಿ ತೀರ್ಮಾನಗಳನ್ನು ಧಿಕ್ಕರಿಸಿ ನಡೆಯುವ ಪ್ರವೃತ್ತಿ ಹೆಚ್ಚುತ್ತಿದೆ. ಇದರಿಂದ 'ಬಹಿಷ್ಕಾರ'ದಂತಹ ಕಠಿಣ ನಿರ್ಧಾರಗಳನ್ನು ತೆಗೆದುಕೊಳ್ಳಬೇಕಾದ ಪರಿಸ್ಥಿತಿ ನಿರ್ಮಾಣವಾಗುತ್ತಿದೆ. ಒಂದೊಂದು ಸಾರಿ ತೀರ್ಮಾನ ಕೊಡುವುದು ಕಷ್ಟವಾದಾಗ ದೈವದ ಮೊರೆ ಹೋಗುತ್ತಿದ್ದರು. ದೇವರ ದೀಪ ಆರಿಸಲು, ಅಥವಾ ದೇವರಗಂಟೆ ಹೊಡೆಯಲು ವಾದಿ ಮತ್ತು ಪ್ರತಿವಾದಿಗಳಿಗೆ ಹೇಳುತ್ತಿದ್ದರು. ಇಂದು ಜನರಲ್ಲಿ ವೈಚಾರಿಕ ಪ್ರಜ್ಞೆ ಬೆಳೆದು ದೀಪ ಆರಿಸುವ, ಗಂಟೆ ಹೊಡೆಯುವ ಅಪರಾಧಿಗಳು ಇದ್ದಾರೆ. ಇದರಿಂದ ನ್ಯಾಯ ವ್ಯವಸ್ಥೆಗೆ ದಕ್ಕೆಯಾಗಿದೆ.

'ಬಹಿಷ್ಕಾರ' ಪದ್ಧತಿ ಇಂದು ಚರ್ಚೆಗೆ ಕಾರಣವಾಗಿದೆ. ಇದೊಂದು ಅನಿಷ್ಟ ಪದ್ಧತಿ ಎನ್ನುವಂತೆ ನಂಬಿಸಲಾಗುತ್ತಿದೆ. ಗ್ರಾಮ ಮಟ್ಟದಲ್ಲಿ ಜರುಗುವ ಈ ಶಿಕ್ಷೆಗೆ ರಾಜ್ಯಮಟ್ಟದ ಪತ್ರಿಕೆಗಳು ಕಾರಣವಿಲ್ಲದೆ ಅನೇಕ ಮುಖಂಡರ ಹೆಸರನ್ನು ಸೇರಿಸಿ ಜನರಲ್ಲಿ ಅನೇಕ ದ್ವಂದ್ವಗಳು ಸೃಷ್ಟಿಯಾಗಲು ಕಾರಣವಾದವು.

'ಬಹಿಷ್ಕಾರಕ್ಕೆ ಒಳಗಾದ ವ್ಯಕ್ತಿ ಅಥವಾ ಕುಟುಂಬದವರ ಮನಸ್ಸಿನ ಮೇಲೆ ಪರಕೀಯರೇನೊ ಎನ್ನುವ ಭಾವನೆ ಉಂಟಾಗಿ ಮನೋವೇದನೆಯಿಂದ ನರಳುವುದು ಸಹಜವೇ ಆಗಿದೆ. ನಾನು ಗಮನಿಸಿದಂತೆ ನ್ಯಾಯ ತೀರ್ಮಾನದಲ್ಲಿ ಕಟ್ಟಕಡೆಯ ಶಿಕ್ಷೆ ಇದಾಗಿದೆ. ಇಲ್ಲಿ ಯಾವುದಾದರೊಂದು ಕಡೆ ತಪ್ಪು ಸಂಭವಿಸಿದಾಗ ತಿದ್ದಿಕೊಂಡರೆ ಸ್ವಾಭಿಮನಕ್ಕೆ, ಮನೆತನದ ಮರ್ಯಾದೆಗೆ ಧಕ್ಕೆಯಾಗುತ್ತದೆ ಎಂದು ನ್ಯಾಯವನ್ನು ಪ್ರಶ್ನಿಸುವ

ಕ್ರಿಯೆ ನಡೆಯುತ್ತದೆ. ಒಂದೊಂದು ಸಾರಿ ನ್ಯಾಯವಿರುವವನ ಕಡೆಗೆ ಶಿಕ್ಷೆ ಬರುವ ಸಾಧ್ಯತೆಗಳಿವೆ. ಇದಕ್ಕೆ ಕಾರಣ ಹಲವಾರು, ಊರಿನಲ್ಲಿಯ ಎಂದೋ ಸಂಭವಿಸಿದ ಘಟನೆ ಸೇಡಿಗೆ ತಿರುಗಿರಬಹುದು. ನ್ಯಾಯ ತೀರ್ಮಾನದಂತಹ ಮಹತ್ತರದ ಸ್ಥಾನದಲ್ಲಿ ಅತ್ಯಂತ ಕಿರಿಯ ವ್ಯಕ್ತಿ ಅಧ್ಯಕ್ಷನಾದಾಗ, ಆತ ದುಡುಕುವ ಸಾಧ್ಯತೆಗಳಿರುತ್ತವೆ. ಕೆಲವೊಮ್ಮೆ ನ್ಯಾಯ ಕೊಡುವ ವ್ಯಕ್ತಿಗಳೆ ಅದಕ್ಷರಾದರೆ ಇಂತಹ ಘಟನೆ ಸಂಭವಿಸುತ್ತದೆ. ಹೆಚ್.ಗಣಪತಿಯಪ್ಪನವರ ಊರಿನಲ್ಲಿಯು ಇಂತಹ ಸಾಧ್ಯತೆಗಳು ಇದ್ದಿರಬಹುದು. ಅಲ್ಲಿಗೆ ಹೋಗಿ ಗಮನಿಸಿದಾಗ ಇವರಿಗೆ 'ಬಹಿಷ್ಕಾರ' ಹಾಕಿರಲಿಲ್ಲ. ಬಹಿಷ್ಕಾರಕ್ಕೆ ಒಳಗಾದ ಕುಟುಂಬದ ಮಂಗಳಕಾರ್ಯಕ್ಕೆ ಇವರು ಹೋಗಿದ್ದರಿಂದ, ಅಲ್ಲಿಯ ಪದ್ಧತಿಯಂತೆ ಇವರಿಗೂ ಬಹಿಷ್ಕಾರ ಹಾಕಲಾಯಿತು. ಇದೊಂದು ದುಃಖಕರವಾದ ವಿಷಯ. ಹೊರಗಿನ ನಮ್ಮಂತವರಿಗೆ ಆಗುವುದು ಸಹಜ, ಆದರೆ ನ್ಯಾಯದ ಕಟ್ಟೆಯ ಮುಂದೆ ಎಲ್ಲರು ಸಮಾನರು ಎಂಬ ಅಂಶ ಇಲ್ಲಿ ಕೆಲಸ ಮಾಡಿದೆ.' ಬಹಿಷ್ಕಾರ ಹಾಕುವಾಗ ನ್ಯಾಯದ ಕಟ್ಟೆಯ ಮುಂದೆ ಸ್ವಲ್ಪ ಆಲೋಚಿಸಿ ಅಮಾನವೀಯವಾದ ಈ ಪದ್ಧತಿಯನ್ನು ಕೈಬಿಟ್ಟರೆ ಒಳ್ಳೆಯದು ಎಂದು ಕೆಲ ಊರುಗಳ ಜನರನ್ನು ಕೇಳಿದಾಗ ತೀರ್ಮಾನಗಳನ್ನು ಧಿಕ್ಕರಿಸಿ ನಡೆದರೆ ಈ ವ್ಯವಸ್ಥೆಯೇ ಬುಡಮೇಲಾಗುತ್ತದೆ ಎಂದು ಹೇಳಿದರು. ಆದರೆ ಸಾಗರದ ದೀವ ಮುಖಂಡರಾದ ಕಾಗೋಡು ತಿಮ್ಮಪ್ಪನವರು ತಮ್ಮ ಕುಲಬಾಂಧವರಲ್ಲಿ ಈ ಬಹಿಷ್ಕಾರವನ್ನು ಬಿಟ್ಟುಬಿಡಿ, ಆಲೋಚನೆ ಮಾಡಿ ತೀರ್ಮಾನಗಳನ್ನು ಕೊಡಿ ಎಂದು ಸಲಹೆ ಮಾಡಿದರು. ಮೊನ್ನೆ ಹಿರೇನೆಲ್ಲೂರಿನ ಮಾರಿಗುಡಿ ದೇವಸ್ಥಾನದ (೧೨-೨-೨೦೦೬) ಉದ್ಘಾಟನೆಯ ಭಾಷಣದಲ್ಲಿ "ಇಂತಹ ಅದ್ಭುತವಾದ ಗುಡಿಯನ್ನು ನೆಲ್ಲೂರಿನ ಸಮಾಜದವರೆಲ್ಲರು ಸೇರಿ ಕಟ್ಟಿದ್ದೀರಿ ಇಂತಹ ಮಹತ್ಕಾರ್ಯ ಮಾಡುವಾಗ ಹಣ ಸಂಗ್ರಹಣೆಯಲ್ಲಿ ಎಲ್ಲರು ತಮ್ಮ ಕೈಲಾದ ಹಣವನ್ನು ಕೊಟ್ಟಿರುವಿರಿ, ಕೆಲ ಬೆರಳೆಣಿಕೆಯ ಮಂದಿ ಹಣ ಕೊಡದೆ ಇದ್ದರೆ ಅವರಿಗೆ ಯಾವುದೇ ತರದ ಶಿಕ್ಷೆ ವಿಧಿಸಬಾರದು ಎಂದು ಮನವಿ ಮಾಡಿ ಕೊಂಡುರು.' ಒಂದೆರಡು ಜನ ಹಣ ಸಂದಾಯ ಮಾಡಿರಲೇ ಇಲ್ಲ. ಕೆಲವೊಂದು ಊರಿನಲ್ಲಿ ಇಂತಹ ಘಟನೆ ಸಂಭವಿಸಿದರೆ ಕಟ್ಟುಕೊಡುವ (ಬಹಿಷ್ಕಾರ) ಪದ್ಧತಿಯನ್ನು ಅನುಸರಿಸುತ್ತಿದ್ದರೇನೊ ಆದರೆ ನೆಲ್ಲೂರಿನಲ್ಲಿ ಈತರದ ತೀರ್ಮಾನ ತೆಗೆದುಕೊಳ್ಳದೆ ಮಾದರಿ ಗ್ರಾಮವಾಯಿತು ಎಂದರೆ ತಪ್ಪಾಗಲಾರದು.

ನ್ಯಾಯದ ಕಟ್ಟೆಯ ಮುಂದೆ ಎಲ್ಲರು ಸಮಾನರು, ಊರ ಮುಖಂಡ ತಪ್ಪು ಮಾಡಿದರು ದಂಡ ಕೊಡಲೇ ಬೇಕು, ತಕರಾರುಗಳನ್ನು ಬಗೆಹರಿಸಿ ನ್ಯಾಯ ಕೊಡುವಾಗ ಮಂಡಳಿಯ ಎಲ್ಲಾ ಸದಸ್ಯರೊಡನೆ ಚರ್ಚಿಸಿ ನಿರ್ಣಯ ಕೈಗೊಳ್ಳುವರು. ಈ ನಿರ್ಣಯ ಯಾರದೊ ಹಿತಾಸಕ್ತಿಗೊಳಪಟ್ಟಿರುವುದಿಲ್ಲ. ಈ ನ್ಯಾಯ ನಿರ್ಣಯ ದಲ್ಲಿ ಅಪರಾಧಿ ನುಣುಚಿಕೊಳ್ಳುವುದು ಅಪರೂಪವಾಗಿರುತ್ತದೆ. ಸಾಮಾಜಿಕ ಈ ವ್ಯವಸ್ಥೆ ಪ್ರಜಾ ಪ್ರಭುತ್ವದ ವ್ಯವಸ್ಥೆಗಿಂತ ಕೆಳಮಟ್ಟದ್ದಂತೂ ಅಲ್ಲವೇ ಅಲ್ಲ. ಇಷ್ಟೆಲ್ಲಾ ರೀತಿನೀತಿಗಳಿದ್ದರು ಒಮ್ಮೊಮ್ಮೆ 'ಬಹಿಷ್ಕಾರ' ಪದ್ಧತಿ ಚರ್ಚೆಗೆ ಒಳಪಟ್ಟಿರುವುದರಿಂದ ಈ ವ್ಯವಸ್ಥೆಗೆ ಕಪ್ಪು ಚುಕ್ಕಿ ಇದ್ದಂತೆ ಎನ್ನಬಹುದು. ಈ ಘಟನೆ ಜರುಗದಂತೆ ಗ್ರಾಮದ ಹಿರಿಯರು ಸಲಹೆ ಸಹಕಾರ ಕೊಟ್ಟರೆ ವ್ಯವಸ್ಥೆಗೆ ಮಹತ್ವದ ಸ್ಥಾನ ಲಭಿಸುತ್ತದೆ. ಇಂದಿನ ಯುವಕರು ಮನಗಾಣಬೇಕು. ಜನಪದರಿಗೆ ನಾಗರೀಕ ಜಗತ್ತಿನ ಪೋಲೀಸು, ಕೋರ್ಟ್ ಖರ್ಚಿನ ಮತ್ತು ಕಾಲವ್ಯಯದ ಮಾರ್ಗಗಳಾಗಿವೆ. ಕೃಷಿಕ ವೃತ್ತಿಯನ್ನು ಅವಲಂಬಿಸಿದ ಈ ಜನಾಂಗಕ್ಕೆ ವರ್ಷವಿಡಿ ಕೆಲಸವಿರುವುದರಿಂದ, ನಾವೇ ಸೃಷ್ಟಿಸಿಕೊಂಡ ನ್ಯಾಯದ ವ್ಯವಸ್ಥೆಯನ್ನು ಗೌರವಿಸಬೇಕು. ಈ ವ್ಯವಸ್ಥೆಯು

ಬಹಿಷ್ಕಾರ ಪದ್ಧತಿ ಬಿಟ್ಟರೆ ಒಳ್ಳೆಯದು 'ಚಪ್ಪಾಳೆ ಎರಡು ಕೈ ಸೇರಿದರೆ' ಮಾತ್ರ ಎಂಬ ಅಂಶವನ್ನು ಜನಪದರು ಮನಗಾಣಬೇಕು.

## ೩.೬. ಉಡುಗೆ-ತೊಡುಗೆಗಳು

ಉಡುಗೆ, ಪೋಷಾಕು, ಬಟ್ಟೆ-ಬರೆ, ಅರಿವೆ ಮುಂತಾದವು ಒಂದೇ ಅರ್ಥ ಧ್ವನಿಸುವ ಪದಗಳು. ಶರೀರದ ಮೇಲೆ ಮೆರೆಯುವ ಈ ಸಾಧನಗಳು ಮನುಷ್ಯನಿಗೆ ಮಾತ್ರ ಮೀಸಲು ಅನ್ಯ ಪ್ರಾಣಿಗಳಿಂದ ಆತನನ್ನು ಪ್ರತ್ಯೇಕಿಸುವ ಪರಿಕರಗಳಲ್ಲಿ ಇವೂ ಸೇರುತ್ತವೆ. ಸುಮಾರು ೧೦,೦೦೦ ವರ್ಷಗಳ ಹಿಂದಿನಿಂದಲು ಬಟ್ಟೆ ಬಳಕೆಯ ಸಾಕ್ಷ್ಯಾಧಾರಗಳಿವೆ. ಪರಿಸರದಲ್ಲಿ ದೊರೆಯುವ ವಸ್ತುಗಳನ್ನೆ ಸಂಸ್ಕರಿಸಿ ವಿವಿಧ ವಿನ್ಯಾಸಗಳೊಂದಿಗೆ ಕಲಾತ್ಮಕವಾಗಿ ಬಳಸಿಕೊಳ್ಳುವುದರಲ್ಲಿ ಮಾನವ ಅದ್ವಿತೀಯ. ಆದಿಮಾನವ ಚೆತ್ರಲೆಯ ನಂತರ ಮುಜುಗರ ಕ್ಕೊಳಗಾಗಿ ಎಲೆಯನ್ನು ಸೊಪ್ಪಿನ ಕೋಲನ್ನು ದೇಹದ ಕೆಲಭಾಗ ಮುಚ್ಚಿಕೊಳ್ಳಲು ಹವಣಿಸಿದ ನಂತರ ಪ್ರಾಣಿಗಳ ಚರ್ಮದ ಬಳಕೆ, ನಾರಿನ ಉಡುಗೆಗಳ ಬಳಕೆ ನಂತರದಲ್ಲಿ ಬಟ್ಟೆಯ ಬಳಕೆ ಹೀಗೆ ಉಡುಗೆ ಯಲ್ಲಿಯು ವಿಕಾಸವಾಗುತ್ತಾ ಸಾಗಿದೆ. ಸಮಾಜ ವರ್ಗೀಕೃತಗೊಂಡ ನಂತರ ಅದಕ್ಕೆ ತಕ್ಕಂತೆ ಉಡುಗೆತೊಡಿಗೆ ಗಳು ನಿಗದಿ ಗೊಂಡಿದ್ದುಂಟು. ಮೊದಲಿಗೆ ರಾಜ ಮಹಾರಾಜರು ಹಾಗೂ ಭಾರೀ ಉಳ್ಳವರ ಹೊರತಾಗಿ ಇನ್ನೆಲ್ಲ ಸಾಮಾನ್ಯರಿಗೆ ಹತ್ತಿ ಬಟ್ಟೆಯೇ ಸುಲಭ ಲಭ್ಯವಾಗಿತ್ತು.

ಆಭರಣ ಎಂದರೆ ಕನ್ನಡ ರತ್ನಕೋಶದಲ್ಲಿ ಒಡವೆ ಎಂಬರ್ಥವಿದೆ. ಹಾಗೆಯೇ ಕರಕುಶಲ ಕಲೆಗಳು (ಕ.ವಿ.ಹಂ) ಕೋಶದಲ್ಲಿ ಒಡುವೆ ಎಂಬುದಕ್ಕೆ ದಾಗೀನು ಎಂದು ಹೆಸರಿದೆ. ಶಿಲಾಯುಗದ ಮಾನವ ಕಲ್ಲಿನಲ್ಲಿ ಸರಗಳನ್ನು ಧರಿಸಿದರೆ, ಲೋಹಯುಗದವರು ಚಿನ್ನ ಬೆಳ್ಳಿ ಹಿತ್ತಾಳೆಗಳನ್ನು ಒಡವೆ ವಸ್ತುಗಳಾಗಿ ಬಳಸಿದರು. 'ಮನುಷ್ಯನ ಬದುಕಿನಲ್ಲಿ ಆದ ಸಾಂಸ್ಕೃತಿಕ ಸಾರ್ವಜನಿಕ, ಬದಲಾವಣೆ ವಿಕಾಸಗಳು ಒಡವೆ ತಯಾರಿಕೆ ಹಾಗೂ ಧರಿಸುವಿಕೆಯೊಂದಿಗೆ ನಿರಂತರ ಸಂಬಂಧ ಹೊಂದಿವೆ' (ಕಮಲಾ ಹೆಮ್ಮಿಗೆ, ೧೯೯೪, ಪುಟ ೧೦೪). ಆಭರಣಗಳು ಹೇಗೆ ರೂಪತಾಳಿದವು ಅವುಗಳ ಹಿಂದಿನ ಉದ್ದೇಶ ಏನು ಎಂಬುದರ ಬಗ್ಗೆ ಕಮಲಾ ಹೆಮ್ಮಿಗೆಯವರು 'ಆಭರಣಗಳ ಬಳಕೆ ಮೊದಲು ಭಯದಿಂದ ಬಳಕೆಯಾಗ ಲ್ಪಟ್ಟಿತು. ಪ್ರವಾಹ, ಸಿಡಿಲು, ಭೂಕಂಪನಗಳಿಂದ ರಕ್ಷಣೆ ಹೊಂದಲು ತಾಯಿತ, ಹುಲಿಯುಗುರು, ರುಂಡ ಮಾಲೆ, ಕವಡೆಸರಗಳು ಬಳಸತೊಡಗಿದ. ಮೊದಲಿಗೆ ಒರಟು ಸ್ವರೂಪದಲ್ಲಿದ್ದ ಇವು ಕ್ರಮೇಣ ಪರಿಷ್ಕರಣಗೊಂಡವು' ಎಂದು ತಿಳಿಸಿದ್ದಾರೆ. ಅಲಂಕಾರದ ಸಾಧನಗಳು ಪೂರ್ವ ಇತಿಹಾಸ ಕಾಲದಿಂದ ಸಂಸ್ಕೃತಿಯಲ್ಲಿ ಹುದುಗಿವೆ. 'ಸರಳ ಮಾದರಿಯ ಮಣಿಗಳು ಮತ್ತು ಬಳೆಗಳು ಜನರ ಮುಖ್ಯಾಲಂಕಾರಿಕ ಆಭರಣಗಳಾಗಿದ್ದವು. ಅಗೆಟ್ ಚಾಲ್ಸಿ ಡಾನಿ, ಕಾರ್ನೀಲಿಯ, ಶಂಖ, ಸುಟ್ಟಮಣ್ಣಿನ ಗೋಲಾಕಾರದ ಸಾಮಾನ್ಯ ಚಂದೋಳಿ ಮುಂತಾದ ಸರಳ ವಸ್ತುಗಳನ್ನು ಧರಿಸುತ್ತಿದ್ದರು. ತಾಮ್ರಯುಗದ ಒಂದು ಶವಗುಣಿಯಲ್ಲಿ ಒಂದು ಮಗುವಿನ ಅಸ್ಥಿಪಂಜರದ ಕತ್ತಿನಲ್ಲಿ ಸಿಲ್ಕ್‌ದಾರದಲ್ಲಿ ಪೋಣಿಸಿದ ತಾಮ್ರದ ಮಣಿಗಳ ಸರವಿದ್ದಿತು. ತಾಮ್ರದ ದಪ್ಪ ತಂತಿಯಲ್ಲಿ ಮಾಡಿದ ತುದಿಯಲ್ಲಿ ಸೇರಿಸಿದ ಬಳೆಗಳು ಸರ್ವೇಸಾಮಾನ್ಯ. ಬ್ರಹ್ಮಗಿರಿ ಮತ್ತು ತೇರದಾಳಗಳಲ್ಲಿ ಇಂಥ ಬಳೆಗಳು

ದೊರೆತಿವೆ. ಅಪರೂಪವಾಗಿ ಎದುರು ಬದರು ದಿಕ್ಕಿನಲ್ಲಿ ಮುಂಚಾಚಿದ ತುದಿಗಳುಳ್ಳ ಸರಳ ಸುತ್ತೋಲೆಯು ಕಿವಿಯ ಆಭರಣವಾಗಿತ್ತೆಂದು ತೋರುತ್ತದೆ'(ಅ.ಸುಂದರ ೧೯೯೭, ಪುಟ ೧೬೩).

ಶಿವಮೊಗ್ಗ ಜಿಲ್ಲೆ ಮಲೆನಾಡು ಮತ್ತು ಅರೆಮಲೆನಾಡು ಲಕ್ಷಣಗಳನ್ನು ಹೊಂದಿದೆ. 'ಮಲೆನಾಡು' ಎಂಬ ಪದವೇ ಎರಡು ಅರ್ಥಗಳನ್ನು ನೀಡುತ್ತದೆ. ಬೆಟ್ಟಗಳ ನಾಡು ಮತ್ತು ಕಾಡಿನ ನಾಡು. ಈ ಮಲೆನಾಡು ಪರಿಸರ ಮತ್ತು ಭೌಗೋಳಿಕ ಲಕ್ಷಣಕ್ಕೆ ಅನುಗುಣವಾಗಿ ವೇಷ ಭೂಷಣಗಳಲ್ಲಿಯು ವಿಶಿಷ್ಟತೆಯನ್ನು ಪಡೆದು ಕೊಂಡಿದೆ. ದಟ್ಟವಾದ ಕಾಡು ಮತ್ತು ಎತ್ತರವಾದ ಗುಡ್ಡಗಳು, ತುಂಬಿ ಹರಿಯುವ ನದಿಗಳು, ಸದಾ ಹಸಿರನ್ನು ತುಂಬಿಕೊಂಡಿರುವ ಪ್ರಾಕೃತಿಕ ಪರಿಸರ ಅತೀ ಹೆಚ್ಚು ಮಳೆ ಬೀಳುವ ಪ್ರದೇಶವು ಹೌದು. ಅದರೊಂದಿಗೆ ಸದಾಕಾಲವೂ ಚಳಿಯಿಂದ ಆವೃತವಾದ ಪ್ರದೇಶ ಈ ಹಿನ್ನೆಲೆಯಲ್ಲಿಯೇ ಮಲೆನಾಡಿನ ಉಡುಗೆಗಳನ್ನು ಗಮನಿಸುವುದು ಪ್ರಸ್ತುತವಾಗಿದೆ.

ಮಲೆನಾಡಿನಲ್ಲಿ ವಿಭಿನ್ನ ಶೈಲಿಯ ಆಭರಣಗಳನ್ನು ಧರಿಸುತ್ತಾರೆ. 'ತಲೆ ಮುಳ್ಳು ತಿರುಪಿನ ಹೂ, ಕಟ್ಟಣಿಸರ, ಕೊತ್ತುಂಬರಿ ಸರ, ಮಂಗಳ ಗೌರಿಸರ, ನೆಲ್ಲಿಕಾಯಿಸರ, ಕಾಫಿಬೀಜದ ಸರ, ಗೆಜ್ಜೆಸರ, ಪುತ್ತಳಿಸರ ಮುಂತಾದವು ಗಳನ್ನು ಧರಿಸುತ್ತಾರೆ. ಕಾಲಂದಿಗೆ, ಗೆಜ್ಜೆಡಾಬು, ಗಂಡಿನ ಸರ, ಕಡಗ, ಕಾಲುಂಗುರ ಕಾಲಿಗೆ ಧರಿಸುವರು. ಜಡೆಬಿಲ್ಲೆ ತಲೆಗೆ ಧರಿಸುವ ಆಭರಣವಾಗಿದೆ. ದ.ಕ.ಜಿಲ್ಲೆಗಳಲ್ಲಿ ನತ್ತು, ಜೊಟ್ಟು, ವಂಕಿ, ಉಂಗುರ ಕಮಲದ ಓಲೆ, ಜೋಮಾಲೆಸರ, ಪುತ್ಲಿಸರ, ಗಿಳಿ ಓಲೆ, ಬಿಂದಿಗೆ, ಕಿವಿಗೆ ಬಂಡಿ ಮುಂತಾದ ಆಭರಣಗಳನ್ನು ಧರಿಸುವರು. ಉ.ಕ. ಜಿಲ್ಲೆಗಳಲ್ಲಿ ಗೊಣಸಿನ ಉಡುದಾರ, ಪಣಿನೂಲು ಚೌಕ, ಕಿವಿಯ ಕಾನ್ ಬಾವ್ಲಿ, ಮೀನ್ ಬಾವುಲಿ, ಗವರಿ ಬಾವಲಿ, ಜಮಕಿಗಂಡೆ, ಮುತ್ತಿನ ಮೂಗುತಿ, ಮುತ್ತಿನ ಬುಗುಡಿ, ನಾಗರಹಾವು, ಹರಳಿನ ಪದಕದ ಹಾರ ಮುಂತಾದ ಆಭರಣಗಳನ್ನು ಬಳಸುತ್ತಾರೆ.

ನಿಸರ್ಗ ಮಾನವ ಬೆಳವಣಿಗೆಗೆ, ಆಲೋಚನೆಗೆ ಪೂರಕ ವಾತಾವರಣ ಕಲ್ಪಿಸುತ್ತಲೆ ಬಂದಿದೆ. ಮಾನವ ನಿಸರ್ಗವನ್ನು ಅನುಕರಿಸಿ ಮುಂದುವರೆದವನು. ನಿಸರ್ಗದಲ್ಲಿ ಕಾಣಬರುವ ಪ್ರಾಣಿ-ಪಕ್ಷಿ, ಮರ-ಗಿಡಗಳ ಚೆಲುವನ್ನು ನೋಡಿ ಮರುಳಾಗಿ, ಅವುಗಳಿಂದ ದೊರೆತ ಕೆಲ ಪರಿಕರಗಳನ್ನು ಧರಿಸಿ ಆನಂದಿಸಿರಬೇಕು. 'ತನ್ನ ಜೀವನದ ಅಸ್ತಿತ್ವಕ್ಕೆ ಅವಶ್ಯಕವಾದ ಕೆಲವು ವಸ್ತುಗಳಲ್ಲಿ ಮಾಂತ್ರಿಕ ಗುಣವಿದೆ ಎಂದು ಬಗೆದು ಅವುಗಳನ್ನು ಯಾವಾಗಲೂ ತನ್ನೊಡನೆಯೇ ಹೊತ್ತುಕೊಂಡು ತಿರುಗಾಡಲು ತೊಡಗಿದನು. ಇದಕ್ಕೆ ಅನುಕೂಲವಾಗುವಂತೆ ಅವುಗಳ ಆಕಾರ-ಆಕೃತಿಗಳನ್ನು ನಿರ್ಮಿಸಿಕೊಂಡು ತಿರುಗಾಡಲು ತೊಡಗಿದನು. ಇದಕ್ಕೆ ಅನುಕೂಲವಾಗುವಂತೆ ಅವುಗಳ ಆಕಾರ ಆಕೃತಿಗಳನ್ನು ನಿರ್ಮಿಸಿಕೊಂಡನು. ಇಂದಿಗೂ ಮಾನವನ ಹಲವಾರು ಆಭರಣಗಳಲ್ಲಿ ಮಾಂತ್ರಿಕ ಶಕ್ತಿ ಇದೆಯೆಂಬ ನಂಬುಗೆಯನ್ನು ಕಂಡುಕೊಳ್ಳಬಹುದು' (ದಿನೇಶ್ ಎ.ಜೆಕ್ಕಿ, ೧೯೯೪, ಪುಟ ೪).

ಭಾರತದಲ್ಲಿ ಆಭರಣಗಳ ಬಳಕೆ ಹರಪ್ಪಾ-ಮಹೆಂಜೋದಾರೋ ಮತ್ತು ವೇದಗಳ ಕಾಲದಿಂದಲೆ ಪ್ರಚಲಿತ ದಲ್ಲಿದೆ.'ಮಹರ್ಷಿ ಕರ್ಕಿವರ್ತನ ಪ್ರಕಾರ ಋಗ್ವೇದ ಪ್ರಯಾಸಗಳಲ್ಲಿ ಆತನು ಈ ರೀತಿ ಹೇಳುತ್ತಾನೆ. ಅವನಿಗೆ ಬಂಗಾರದ ಕಿವಿ ಓಲೆಗಳ ಕಂಠಹಾರವಿತ್ತೆಂದು ಹೇಳುತ್ತಾನೆ'(Rama Dhamija, Page.11).

ಆದಿ ಧರ್ಮ ಗ್ರಂಥಗಳಲ್ಲಿ ಆಭರಣಗಳ ಉಲ್ಲೇಖವಿದೆ. ರಾಮಾಯಣ, ಮಹಾಭಾರತದಲ್ಲಿ ರಾಜ ಮಹಾರಾಜರು ಆಭರಣಗಳನ್ನು ಧರಿಸುತ್ತಿದ್ದರು. ಕರ್ನಾಟಕದಲ್ಲಿ ಚಿತ್ರದುರ್ಗ ಪರಿಸರದ ಚಂದ್ರವಳ್ಳಿಯಲ್ಲಿ ವಿವಿಧ ಒಡವೆ ವಸ್ತುಗಳು ದೊರೆತಿವೆ. ತಾಮ್ರದ ಉಂಗುರ, ಪಂಚಲೋಹದ ಹಾಗೂ ಕಬ್ಬಿಣದ ಉಂಗುರಗಳು, ಎಲುಬಿನಲ್ಲಿ ಕೊರೆದು ಮಾಡಿದ ಸರ ಇತ್ಯಾದಿಗಳು ಸಿಕ್ಕಿವೆ. ಬಹುಶಃ ಇವು ಮಾಂತ್ರಿಕ ಮೂಲವಾಗಿರಬೇಕು'' (ಕಮಲಾ ಹೆಮ್ಮಿಗೆ, ೧೯೯೪, ಪುಟ ೧೦೫). ನಮ್ಮಲ್ಲಿ ದೇವತೆಗಳು, ಮಾರಮ್ಮ, ಹುಲಿಗೆಮ್ಮ, ರೇಣುಕಮ್ಮ ಮುಂತಾದ ಗ್ರಾಮ ದೇವತೆಗಳ ಆಭರಣಗಳು, ಚಕ್ರಸರ, ಗಿಳಿ ಹಚ್ಚಿದ ಮುಳ್ಳು ಕಂಕಣ, ಸತ್ತು, ಜೋಡೇಜೋಡು, ಹರಡೆ ಜೋಡು, ಕೊಪ್ಪಜೋಡು, ಬಂದಿಸರಿಗೆ, ಗೆಜ್ಜೆಟೀಕೆ, ಕರ್ಣಪೂವು, ನೆಲ್ಲಿ ಕಾಯಿಸರ, ನಾಗಭೂಷಣ, ಪುತ್ಲಿಸರ, ಸವರನ್ ಸರ, ನಾಗಸಂಪಿಗೆ ಸರ, ಜೋಮಾಲೆ ಸರ, ಮುತ್ತಿನ ಕಂಠಿ, ಕಠಾಣಿಸರ, ಶೃಂಗಾರ ಮಣಿಸರ, ಗಿಜಿ ಬಿಜಿ ಸರ, ಛತ್ರಚಾಮರ ಪ್ರಭಾವಳಿ ಇವೆಲ್ಲವೂ ದೇವರುಗಳಿಗೆ ಧರಿಸುವ ಆಭರಣಗಳು. ಇವು ಬೆಳ್ಳಿ, ಬಂಗಾರ, ಹಿತ್ತಾಳೆ, ಲೋಹದಿಂದ ಅಕ್ಕಸಾಲಿಗ ರಚನೆ ಮಾಡುತ್ತಾನೆ (ಪಿ.ಆರ್.ತಿಪ್ಪೇಸ್ವಾಮಿ, ೧೯೯೮, ಪುಟ ೧೯೭). ಗ್ರಾಮದೇವತೆಗಳಿಗೆ ನಮ್ಮ ಜನಪದರು ವೈವಿಧ್ಯಮಯ ಆಭರಣಗಳನ್ನು ಧರಿಸಿ ಭಕ್ತಿ ಭಾವದಿಂದ ತಲ್ಲೀನರಾಗುತ್ತಿದ್ದರು.

ಎಲ್ಲಾ ಜನಾಂಗದಲ್ಲೂ ಆಭರಣ ಧರಿಸುವುದು ಅವರ ಅಭಿರುಚಿ ಮತ್ತು ರಸಿಕತೆಯ ಕುರುಹಾಗಿಯೂ ಮೂಡಿ ಬಂದಿದೆ. ಪ್ರಾಣಿಗಳ ಉಗುರು, ಕಪ್ಪೆಯ ಚಿಪ್ಪು, ಕಪ್ಪುದಾರ, ಲೋಹದ ಬಳೆ, ಉಂಗುರ ಯಾವುದಾದರು ಕೆಲವನ್ನು ಅಭಿರುಚಿಗೆ ತಕ್ಕಂತೆ ಧರಿಸಲೇಬೇಕು. ಇದೊಂದು ಅತಿರೇಕದ ಆಸೆ, ಹೆಣ್ಣು ತತ್‌ಕ್ಷಣ ಹೂವನ್ನು ಕಂಡರೆ ಮುಡಿಗೆ ಧರಿಸಲೇ ಬೇಕೆಂಬಾಸೆ, ಹಾಗೆಯೇ ತಲೆ, ತುರುಬು, ಕಿವಿ, ಮೂಗು, ಕೊರಳು, ಕೈ, ಸೊಂಟ, ಕಾಲ್ಬೆರಳು, ಕಾಲು ಮುಂತಾದ ಅವಯವಗಳ ರಚನೆಗೆ ತಕ್ಕಂತೆ ಆಭರಣಗಳನ್ನು ಧರಿಸುವುದು ಒಂದು ವಿಶೇಷವಾಗಿದೆ. 'ನಯ ನಾಜೂಕಿನ ಆಭರಣಗಳನ್ನು ಭಗವಂತನಿಗೆ ತೊಡಿಸಿ ಭಕ್ತಿ ಪರವಶರಾಗುವ ಜನಪದರಿಗೆ ತಮ್ಮ ಸ್ವಂತ ಜೀವನದಲ್ಲಿ ಒಡವೆ ಎನ್ನುವುದು ಕೇವಲ ಒಂದು ಅಲಂಕಾರ ಸಾಧನವಾಗಿರದೆ ಜೀವನದ ಮೌಲ್ಯಗಳಿಗೆ ಸಂಕೇತವಾಗಿರುವ ಒಂದು ಪವಿತ್ರ ವಸ್ತುವೂ ಆಗಿದೆ'(ವತ್ಸಲಾ ಅಯ್ಯಂಗಾರ್, ೧೯೯೫, ಪುಟ ೮೩). ಕೆಲವು ಆಭರಣಗಳನ್ನು ಧರಿಸುವುದರಿಂದ ಆರೋಗ್ಯ ವೃದ್ಧಿಯಾಗುವುದಲ್ಲದೆ, ಕೆಲವು ಕ್ಷುದ್ರಗ್ರಹಗಳು ಹೀನ ದೃಷ್ಟಿಯನ್ನು ತಮ್ಮ ಮೇಲೆ ಬೀಳುವುದನ್ನು ತಪ್ಪಿಸುತ್ತವೆ ಎಂಬ ನಂಬಿಕೆ ಇದೆ. ಇದಕ್ಕೆ ತಕ್ಕನಾದ ಆಭರಣ ಎಂದರೆ ನವರತ್ನ ಹಾರ ಅಥವಾ ನವರತ್ನ ಉಂಗುರ. ಉಡುಗೆ ತೊಡುಗೆಗಳ ಕಾರ್ಯಗಳ ರೂಪಗಳನ್ನು ಜನಾಂಗಿಕ, ಧಾರ್ಮಿಕ, ಸಾಮಾಜಿಕ, ವೃತ್ತಿಪರ ದೇಶೀಯ, ಪ್ರಾಯೋಗಿಕ, ಲಿಂಗಭೇದಾತ್ಮಕ, ಮಕ್ಕಳ ಸೌಂದರ್ಯಕ್ಕೆ ಹಾಗೂ ಆಧುನಿಕತೆಗೆ ಎಂದು ಹಿ.ಶಿ.ರಾಮಚಂದ್ರೇ ಗೌಡರವರು ವಿಂಗಡಿಸಿದ್ದಾರೆ. ಇದು ಎಲ್ಲ ಭಾಗಕ್ಕೂ ಅನ್ವಯಿ ಸುತ್ತದೆ. ಕೆಲವು ತೊಡುಗೆಗಳು ನಿಸರ್ಗದ ನಿಕಟ ಸಂಪರ್ಕದಿಂದ ಬಂದಿರುತ್ತವೆ. ಮತ್ತೆ ಕೆಲವು ಧಾರ್ಮಿಕ ಮುಖಂಡರಿಂದ ಹೇರಲ್ಪಟ್ಟಿರುತ್ತವೆ. ಈಗ ಮಲೆನಾಡಿನ ಭಾಗದ ತೊಡುಗೆಗಳು ಇಂದಿನಂತಿಲ್ಲ. ಕಾರಣ ಸಾಮಾಜಿಕ, ರಾಜಕೀಯ, ಧಾರ್ಮಿಕ ಮೌಲ್ಯಗಳು ಬದಲಾದಂತೆಲ್ಲಾ ಜನಾಂಗ ಸಾಮಾಜಿಕ ಪರಿವರ್ತನೆಗೆ ಒಳಪಟ್ಟಂತೆಲ್ಲಾ ಪ್ರತಿಯೊಂದು ಸಮೂಹ ತನ್ನ

ನೀತಿ ನಿಯಮಗಳಲ್ಲಿ ಬದಲಾಗುತ್ತದೆ. ಆದರೆ ಕೆಲವು ಬುಡಕಟ್ಟು ಜನಾಂಗಗಳಲ್ಲಿ ಯಾವುದೇ ಬದಲಾವಣೆ ಕಾಣದೆ ಹಾಗೆಯೇ ಉಳಿದು ಬಂದಿದೆ. ಈಗಲೂ ಹಳೆಯ ಕಾಲದ ಸ್ತ್ರೀಯರ ಕಿವಿ, ಮೂಗುಗಳನ್ನು ಪರೀಕ್ಷಿಸಿದರೆ ಎಷ್ಟೋ ರಂಧ್ರಗಳಿವೆ. ಅವರು ಎಷ್ಟು ಬಗೆಯ ಚಿನ್ನ, ಬೆಳ್ಳಿ, ತಾಮ್ರದ ಒಡವೆಗಳನ್ನು ತಮ್ಮ ಮೈಮೇಲೆ ಹೊರುತ್ತಿದ್ದರು, ಅವುಗಳನ್ನು ತೊಟ್ಟ ಅವರ ವಿಜೃಂಭಣೆ ಏನು ಎಂಬುದನ್ನು ಕಲ್ಪಿಸಿಕೊಳ್ಳಲು ಸಾಧ್ಯವಾಗುವುದಿಲ್ಲ ಎಂಬ ಮಾತನ್ನು ಜೀ.ಶಂ.ಪ.ರವರು ವ್ಯಕ್ತಪಡಿಸುತ್ತಾರೆ. ಹಳೆಯ ತಲೆಮಾರಿನ ಅಜ್ಜಿಯರಲ್ಲಿ ಮಾತ್ರ ಇಂಥ ಒಡವೆಗಳನ್ನು ಕಾಣಬಹುದು. ಅವರ ನಂತರದ ಈಗಿನವರು ಅವರ ಒಡವೆಗಳನ್ನು ಮುರಿಸಿ ಬೇರೆಯೇ ವಿನ್ಯಾಸದವುಗಳನ್ನು ಮಾಡಿಸಿಕೊಂಡಿದ್ದಾರೆ. ಹೀಗಾಗಿ ಹಿಂದಿನ ಒಡವೆಗಳು ಮಾಯವಾಗುತ್ತಿದೆ.

ಮಲೆನಾಡಿಗೆ ಏಕತ್ರವಾದ ಉಡುಗೆ ಸಂಪ್ರದಾಯವಿಲ್ಲ. ಇಲ್ಲಿಯ ಉಡುಗೆಯ ಪರಿಚಯವನ್ನು ವಿವಿಧ ಜಾತಿ/ಬುಡಕಟ್ಟುಗಳ ಮುಖಾಂತರ ಮಾಡಿಕೊಳ್ಳಬೇಕಾಗುತ್ತದೆ. ಮಲೆನಾಡಿನ ವಿವಿಧ ಜಾತಿಗಳನ್ನು ವೃತ್ತಿಯ ಮೇಲೆ ಕೂಲಿಯ ವರ್ಗ, ರೈತಾಪಿ ಜನಾಂಗ ಪುರೋಹಿತ ವರ್ಗ ಎಂದು ವಿಂಗಡಿಸಿ ನೋಡಿದರೆ ಮಾತ್ರ ಒಂದು ಉಡುಗೆ-ತೊಡುಗೆಗಳ ನಿಖರವಾದ ವ್ಯತ್ಯಾಸ ದೊರೆಯುತ್ತದೆ. ಇಲ್ಲಿಯ ಭೌಗೋಳಿಕ ಮತ್ತು ಹವಾಮಾನದ ಹಿನ್ನೆಲೆಯಲ್ಲಿ ಅವರ ವೃತ್ತಿ ಮತ್ತು ಮೂಲಸ್ಥಾನಗಳ ಹಿನ್ನೆಲೆಯಲ್ಲಿ ಗಮನಿಸಬೇಕಾಗುತ್ತದೆ.

### ಪರಿಸರ ಮತ್ತು ಉಡುಪು

ಭೌಗೋಳಿಕ ಪರಿಸರ ಮತ್ತು ಹವಾಮಾನಕ್ಕೆ ಅನುಗುಣವಾಗಿ ಆಯಾ ಪ್ರದೇಶದ ವೇಷ-ಭೂಷಣಗಳು ಇರುತ್ತವೆ. ತುಂಬಾ ಶೀತ ಪ್ರದೇಶಗಳಲ್ಲಿ ಶೀತದಿಂದ ರಕ್ಷಿಸಿಕೊಳ್ಳಲು ಮೈಯನ್ನು ಪೂರ್ತಿಯಾಗಿ ಮುಚ್ಚುವ ವೇಷ-ಭೂಷಣಗಳನ್ನು ಕಾಣುತ್ತೇವೆ. ಉದಾಹರಣೆಗೆ ಉತ್ತರ ಭಾರತದ ರಾಜ್ಯಗಳು. ಮಲೆನಾಡು ಪ್ರದೇಶದಲ್ಲಿ ಮಳೆ ಹೆಚ್ಚಾಗಿ ಬೀಳುವುದರಿಂದ, ಕೃಷಿ ಚಟುವಟಿಕೆಗಳು ಮಳೆಗಾಲದಲ್ಲಿ ಪ್ರಾರಂಭವಾಗುವುದರಿಂದ ಕಂಬಳಿಯ ಬಳಕೆ ಹೆಚ್ಚಾಗಿ ಕಂಡುಬರುತ್ತದೆ. ಅಂಟಿಕೆ-ಪಂಟಿಕೆಗೆ ಹೋಗುವವರು ಹೆಗಲ ಮೇಲೆ ಕಂಬಳಿಯನ್ನು ಹಾಕಿಕೊಂಡಿರುತ್ತಾರೆ. ಡೊಳ್ಳು ಕುಣಿಯುವವರು ಕಂಬಳಿಯನ್ನು ಸೊಂಟಕ್ಕೆ ಸುತ್ತಿಕೊಂಡು, ಡೊಳ್ಳು ಕಟ್ಟಿ ಕುಣಿಯುವರು. 'ಕಂಬಳಿ' ಈ ಪರಿಸರಕ್ಕೆ, ವಾತಾವರಣಕ್ಕೆ ಸರಿಯಾಗಿ ಹೊಂದುತ್ತದೆ. ಇದು ಯಾವುದೇ ಒಂದು ಜಾತಿಗೆ ಸೀಮಿತವಾಗಿಲ್ಲ. ಕೂಲಿವರ್ಗ, ರೈತಾಪಿ ವರ್ಗದ ಜನರೆಲ್ಲರು ಕಂಬಳಿಯ ಬಳಕೆ ಮಾಡುವರು. ಕಂಬಳಿ ಇಲ್ಲಿ ಉಡುಗೆಯ ವ್ಯಾಪ್ತಿಯಲ್ಲಿ ಬಂದರೂ ರೈತರ ಆರೋಗ್ಯದ ರಕ್ಷಣೆಯಲ್ಲಿ ರಕ್ಷಣಾ ಕವಚವಾಗಿದೆ ಎಂದರೆ ತಪ್ಪಾಗಲಾರದು.

### ವೃತ್ತಿ ಮತ್ತು ಉಡುಪು

ಬಹುತೇಕ ಉಡುಗೆಗಳು ವೃತ್ತಿಗೆ ಅನುಗುಣವಾಗಿ ವಿನ್ಯಾಸಗೊಂಡಿರುತ್ತವೆ. ವೃತ್ತಿಯ ಹಿನ್ನೆಲೆಯಲ್ಲಿ ದೀವರ ಉಡುಗೆಗಳನ್ನು ಗಮನಿಸಿದಾಗ ಅನೇಕ ವಿಷಯಗಳು ಕಂಡುಬರುತ್ತವೆ. ದೀವರು ಕೃಷಿಯನ್ನು ಹೆಚ್ಚಾಗಿ ಅವಲಂಬಿಸಿದ್ದಾರೆ, ತೋಟಗಾರಿಕಾ ಬೆಳೆಯನ್ನು ಹೆಚ್ಚಾಗಿ ಬೆಳೆಯುವುದಿಲ್ಲ. ಭತ್ತ, ಕಬ್ಬು, ಜೋಳ

ಪ್ರಮುಖ ಬೆಳೆಯಾಗಿದೆ. ಚಳಿಗಾಲ ಮತ್ತು ಮಳೆಗಾಲದಲ್ಲಿ ಗದ್ದೆಯನ್ನು ಉಳುಮೆ ಮಾಡಿ ಮೇ ಒಳಗಾಗಿ ನೆಲವನ್ನು ಹದವಾಗಿ ಇಟ್ಟಿರಬೇಕು. ಎತ್ತಿನ ಹಿಂದೆ ಓಡಾಡಲು ಕೋರೆಪಂಚೆ[8] ಬಹಳ ಸಹಾಯಕವಾಗುತ್ತದೆ. ಕೋರೆ ಪಂಚೆಯನ್ನು ಸೊಂಟಕ್ಕೆ ಸುತ್ತಿ, ಅದರಲ್ಲಿ ಕತ್ತಿ ಸಿಕ್ಕಿಸುವ ಕೊಕ್ಕೆಯನ್ನು ಕಟ್ಟುವರು. ಕತ್ತಿಕೊಕ್ಕೆ ಕತ್ತಿ ಸಿಕ್ಕಿಸಲು ಆಯಿತು. ಪಂಚೆ ಭದ್ರವಾಗಿ ಸೊಂಟದಲ್ಲಿ ಇರುವಂತೆಯು ಮಾಡುತ್ತದೆ. ಸೊಂಟಕ್ಕೆ ಬಿಗಿಯಾಗಿ ಕೊಕ್ಕೆ ಕಟ್ಟಿರುವುದರಿಂದ ಸೊಂಟದ ನೋವು ಬರುವುದಿಲ್ಲ. ಕತ್ತಿಕೊಕ್ಕೆ ಬಹುಪಯೋಗಿ ವಸ್ತುವಾಗಿದೆ. ಹಾಗಾಗಿ ಗಂಡಸರು ಕೋರೆ ಪಂಚೆ, ಅರ್ಧ ತೋಳಿನ ಅಂಗಿ, ತಲೆಗೆ ಬಿಸಿಲಿನ ಜಳ ತಪ್ಪಿಸಲು ಮುಂಡಾಸ ಧರಿಸುವರು.

ಹೆಂಗಸರೂ ಕೃಷಿ ಮತ್ತು ಹೈನುಗಾರಿಕೆ, ಮನೆಕೆಲಸದಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡಿರುವುದರಿಂದ ನೂಲಿನ ಜಡ್ಡು ಸೀರೆಯನ್ನು ಧರಿಸುತ್ತಿದ್ದರು. ಇದಕ್ಕೆ ದುಂಡಿನ ಸೀರೆ, ತೋಪಿನ ಮುಸುಕಿನ ಸೀರೆ ಎಂತಲು ಕರೆಯುತ್ತಾರೆ. ವಿಶಿಷ್ಟ ರೀತಿಯ ಕುಪ್ಪಸವನ್ನು ಮೇಲುಡುಗೆಯಾಗಿ ಧರಿಸುತ್ತಾರೆ. 'ಕಣ' ಎಂದು ಕರೆಯುವ ಬಟ್ಟೆಯಿಂದ ವಿಶೇಷ ವಿನ್ಯಾಸದಿಂದ ಕುಪ್ಪಸ ಹೋಲಿಸುತ್ತಾರೆ. ಇದಕ್ಕೆ ಗುಂಡಿ ಇರುವುದಿಲ್ಲ ಕಟ್ಟಲು ಕಸೆ ಇರುತ್ತದೆ. ಆದರೆ ಇತ್ತೀಚಿನ ದಿನಗಳಲ್ಲಿ ಕೋರೆ ಪಂಚೆ, ಮುಂಡಾಸ, ಹೆಂಗಸರ ಉಡುಗೆಗಳು ಕಣ್ಮರೆಯಾಗಿ ಆಧುನಿಕ ಉಡುಪುಗಳು ಎಲ್ಲೆಲ್ಲಿಯು ರಾರಾಜಿಸುತ್ತಿವೆ. ಹತ್ತು ವರ್ಷದ ಹಿಂದೆ ಉಡುಪುಗಳನ್ನು ನೋಡಿಯೇ ದೀವರು ಎಂದು ಗುರುತಿಸಬಹುದಿತ್ತು. ಈ ರೀತಿಯ ಉಡುಗೆಗಳನ್ನು ಊರಿನಲ್ಲಿ ವಯಸ್ಸಾದ ಒಂದಿಬ್ಬರು ಮಾತ್ರ ಧರಿಸುತ್ತಿದ್ದಾರೆ. ಇತ್ತೀಚಿಗೆ ಸ್ತ್ರೀಯರು ಗದ್ದೆ ಕೆಲಸ ಮಾಡುವಾಗ ಗಂಡಸರ ಅಂಗಿಯನ್ನು ಧರಿಸುವರು. ತಲೆಗೆ ವಸ್ತ್ರವನ್ನು 'ಕುಲಾಯಿ'[9] ರೀತಿ ಕಟ್ಟುವರು. ವೃತ್ತಿಗೆ ಅನುಗುಣವಾಗಿ ಉಡುಗೆಗಳು ವಿನ್ಯಾಸಗೊಂಡಿರುತ್ತವೆ.

ಆಭರಣಗಳನ್ನು ಪರಿಸರ ಮತ್ತು ವ್ಯಕ್ತಿಯ ಆಧಾರದ ಮೇಲೆ ಗಮನಿಸುವುದು ಸಮಂಜಸವಲ್ಲ. ಆಭರಣ ಶೃಂಗಾರ ಸಾಧನಗಳಾಗಿ ಜನಪದರಲ್ಲಿ ಬಳಕೆಗೊಳ್ಳುತ್ತಿವೆ. ಆಭರಣಗಳನ್ನು ಗಂಡಸರ ಆಭರಣಗಳು, ಹೆಂಗಸರ ಆಭರಣಗಳು, ಮಕ್ಕಳ ಆಭರಣಗಳು ಎಂದು ವಿಭಾಗಿಸಿ ನೋಡಬಹುದಾದರೂ ಹೆಂಗಸರ ಆಭರಣಗಳಷ್ಟು ವೈವಿಧ್ಯತೆ ಗಂಡಸರ ಮತ್ತು ಮಕ್ಕಳ ಆಭರಣಗಳಲ್ಲಿ ಇರದ ಕಾರಣ ವಿವಿಧ ದೃಷ್ಟಿಕೋನಗಳ ಹಿನ್ನೆಲೆಯಲ್ಲಿ ಅವುಗಳು ಹುಟ್ಟಿಕೊಂಡ ಬಗೆಗಳನ್ನು ಗುರುತಿಸಬಹುದು.

### ಧಾರ್ಮಿಕ ಹಿನ್ನೆಲೆ

ಜನಪದರಲ್ಲಿ ಮನುಷ್ಯನ ಕಣ್ಣು ಸಹ ಕೆಟ್ಟದಾಗಿ ಕೆಲವೊಮ್ಮೆ ಕಂಡುಬರುತ್ತದೆ. ಇದಕ್ಕೆ ದೃಷ್ಟಿ ದೋಷ ಎಂದು ಕರೆಯುವರು. ದೈಹಿಕವಾಗಿ ಆಕರ್ಷಕವಾಗಿರುವ ಗಂಡು ಅಥವಾ ಹೆಣ್ಣು, ಮಗು ಅಥವಾ ವಯಸ್ಕರ ಮೇಲೆ ಕೆಟ್ಟ ಕಣ್ಣು ಬೀಳಬಾರದು. ಇದರ ದೋಷನಿವಾರಣೆಗೆ ಕೊರಳಿಗೆ ಕರಿದಾರ ಕಟ್ಟುವ, ಕೈಗೆ ಕರಿದಾರ ಕಟ್ಟುವ ಪದ್ಧತಿ ಇದೆ. ದೃಷ್ಟಿದೋಷಕ್ಕಾಗಿ ದೃಷ್ಟಿಮಣಿ, ಹವಳದ ಬಳೆ, ಬೆಳ್ಳಿ ಉಡುದಾರ ಹಾಕುವುದು, ಕಣ್ಣಂಚಿಗೆ ಕಾಡಿಗೆ (ಮಗು ಮತ್ತು ಸ್ತ್ರೀ) ಕಾಲಿಗೆ ಕಾಲ್ಗಡಗ ಹಾಕುವುದು. ಚೇಳು ಕಚ್ಚಬಾರದೆಂದು ಕಿವಿಗೆ ಮುರ, ಮುಟ್ಟು ಚಟ್ಟು ಆಗಬಾರದೆಂದು ತೊಟ್ಟಿಗೆ ಕರಡಿ ಕೂದಲು ಕಟ್ಟುವುದು, ಹುಲಿಯುಗುರು

ಹೊಂದಿರುವ ಸರವನ್ನು ಕೊರಳಿಗೆ ಹಾಕುವುದು. ಇತ್ಯಾದಿಗಳಲ್ಲಿ ಆಚರಣೆ, ವಿಧಿ ನಿಷೇಧಗಳ ಹಿನ್ನೆಲೆಯಲ್ಲಿರುವ ತೊಡುಗೆಗಳ ಪಾತ್ರ ಗಮನಾರ್ಹವಾದುದು. ಹಾಗೆಯೇ ಮಕ್ಕಳಾಗದಿದ್ದರೆ, ಮನೆದೇವರಿಗೆ ಹೇಳಿದ್ದು ಮಾಡಿಸುವುದು. ಹಿರೇನೆಲ್ಲೂರು ಕೆರೆಯಮ್ಮನಿಗೆ ಮದುವೆಯಾಗದ, ಮಕ್ಕಳಾಗದ ಹೆಣ್ಣುಮಕ್ಕಳು ಹರಕೆ ಹೊತ್ತುಕೊಂಡು ಬೆಳ್ಳಿ ತೊಟ್ಟಿಲು ಮಾಡಿಸಿಕೊಡುವುದಾಗಿ ಹರಕೆ ಹೊರುತ್ತಾರೆ. ಇಲ್ಲಿ ವರ್ಷಕ್ಕೊಂದು ಬಾರಿ ಅಂದರೆ ಶಿವರಾತ್ರಿಯ ದಿವಸ ಜಾತ್ರೆ ನಡೆಯುತ್ತದೆ. ಮಾಟ, ಮಂತ್ರಗಳಿಗಾಗಿ ದೈವದ ಸಮ್ಮುಖದಲ್ಲಿ ಭೂತದ ಹೆಸರು ಹೇಳಿ, ತಾಯಿತ, ಚೀಟು ಮಾಡಿಸುವುದು, ಈ ಯಂತ್ರ ತಾಯತಗಳನ್ನು ಕೊರಳ ಸರಕ್ಕೆ ಹಾಕಿಕೊಳ್ಳುವರು. ಇಂತಹ ಆಚರಣಾತ್ಮಕವಾದ ಆಭರಣಗಳು ಇವೆ.

### ಆರೋಗ್ಯದ ಹಿನ್ನೆಲೆ

ದೇಹದಲ್ಲಿ ಕಾಣಿಸಿಕೊಳ್ಳುವ ಕೆಲ ಕಾಯಿಲೆಗಳಿಗೆ ಆಭರಣಗಳು ಪರಿಹಾರ ಸೂಚಿಸುತ್ತವೆ. ಮೂರ್ಛೆರೋಗ ಬರುವ ವ್ಯಕ್ತಿಗೆ ಪಂಚಲೋಹದ ಬಳೆಯನ್ನು ಕೈಗೆ ಹಾಕುತ್ತಾರೆ. ಈ ಬಳೆ ಹಾಕಿಕೊಂಡರೆ ದೇಹದ ಉಷ್ಣ ವ್ಯತ್ಯಾಸವಾಗದಂತೆ ಸಮವಾಗಿ ಇಟ್ಟಿರುತ್ತದೆಂಬ ನಂಬಿಕೆ ಇದೆ. ಬೆಳ್ಳಿಯ ಕಡಗವನ್ನು ಹಾಕುವರು. ಕಾಮಾಲೆ ರೋಗ ಬಂದಿರುವ ವ್ಯಕ್ತಿಗೆ ಕಿವಿಗೆ ಪಂಚಲೋಹದ ತಂತಿಯನ್ನು ಬೆಂಡೋಲೆ ರೀತಿ ಹಾಕಿದರೆ ರೋಗ ಗುಣವಾಗುತ್ತದೆ. ವ್ಯಕ್ತಿ ಏನೋ ಚಿಂತೆ ಅಥವಾ ದೈಹಿಕ ಕಾರಣಗಳಿಂದ ಸೊರಗಿದ್ದರೆ ಕೊರಳಿಗೆ ಕಪ್ಪು ದಾರ ಹಾಕುವರು. ಕಿವಿಗೆ ಓಲೆ, ಮೂಗಿಗೆ ಆಭರಣ ಧರಿಸುವುದರಿಂದ ನರದೌರ್ಬಲ್ಯ ಆಗುವುದಿಲ್ಲ ಎಂಬ ನಂಬಿಕೆ ಜನಪದರಲ್ಲಿದೆ.

### ಶೃಂಗಾರದ ಹಿನ್ನೆಲೆ

ಆಭರಣಗಳ ಸೃಷ್ಟಿ ಮತ್ತು ವಿನ್ಯಾಸವೇ ಸೌಂದರ್ಯವರ್ಧಕ ಎಂಬ ನಂಬಿಕೆ ಜನರಲ್ಲಿದೆ. ವೈವಿಧ್ಯಮಯವಾದ, ವಿಶೇಷವಾದ ಆಭರಣಗಳನ್ನು ಧರಿಸಿಕೊಂಡು ಓಡಾಡಿದರೆ ಜನರ ಲಕ್ಷ್ಯ ತಮ್ಮೆಡೆಗೆ ಸೆಳೆಯುತ್ತದೆ. ಇದರಿಂದ ಲೈಂಗಿಕ ಮತ್ತು ಮಾನಸಿಕ ತೃಪ್ತಿ ಹೊಂದುವುದೂ ಮುಖ್ಯವಾಗಿ ಕಂಡು ಬರುತ್ತದೆ. ಇತರರಿಗಿಂತ ಭಿನ್ನವಾಗಿ ಕಾಣಬೇಕೆಂಬ ಮನೋಭಿಲಾಷೆಯೇ ಅನೇಕ ವಿನ್ಯಾಸದ ಒಡವೆಗಳ ಸೃಷ್ಟಿಗೆ ಕಾರಣವಾಗಿದೆ. ತಾನು ಸುಂದರವಾಗಿ ಕಾಣಬೇಕಾದರೆ ಆಭರಣವಿರಬೇಕು ಎಂಬ ಆಲೋಚನೆ ಉಂಟಾದ ಕ್ಷಣದಲ್ಲಿ ಆಭರಣಗಳು ಜನ್ಮ ತಾಳಿದವು. ಮನುಷ್ಯ ಶೃಂಗರಿಸಿಕೊಂಡು ಮಾನಸಿಕ ತೃಪ್ತಿ ಹೊಂದುವುದು ಇಲ್ಲಿ ಮುಖ್ಯವಾಗುತ್ತದೆ.

ಸಂಪ್ರದಾಯಕ್ಕನುಗುಣವಾಗಿ ಎಲ್ಲ ಜನಾಂಗದವರು ಅವರವರ ಅಭಿರುಚಿಗೆ ತಕ್ಕಂತೆ ಆಭರಣಗಳನ್ನು ಧರಿಸುತ್ತಾ ಬಂದಿದ್ದಾರೆ. ದೀವರಲ್ಲಿ ಓಲೆ, ಮೂಗು ಬೊಟ್ಟು, ಸುತ್ತಾ ಕಾಲುಂಗುರ, ಕುಂಕುಮ ಮುತ್ತೈದೆ ಆಭರಣಗಳೆಂದು ಕರೆಯಿಸಿಕೊಳ್ಳುತ್ತವೆ. ಪುರುಷರು ಕಿವಿಗೆ ವಂಕಿ, ಕೈಗೆ ಬೆಳ್ಳಿಯ ಕಡಗ ಧರಿಸುವರು. ಈಗ ವಿರಳ ಸಂಖ್ಯೆಯಲ್ಲಿ ಕಂಡುಬರುವರು. ಹೆಣ್ಣುಮಕ್ಕಳು ಬೆಂಡೋಲೆ, ಬುಗುದಿ, ಬುಗುಡಿ ಸರಪಳಿಯನ್ನು ಕಿವಿಗೆ ಧರಿಸುವರು. ತಲೆಗೆ ಮುಂದಲೆ ಬಟ್ಟು, ನೆತ್ತಿ ನಾಗರ, ಕೇದಿಗೆ ಚವಲಿ, ಕುಣಿಕೆ, ತಿರುಪಿನ ಹೂವುಗಳನ್ನು

ಜಡೆಗೆ ಸಂಪಿಗೆದಂಡೆ ಜಡೆ ಗೊಂಡೇವು ಹಾಕುವರು. ತುರುಬಿಗೆ ತುರುಬಿನ ಮುತ್ತಿನ ಕಡ್ಡಿ, ಹೊನ್ನಿನ ಕಡ್ಡಿ ಹಾಕಿರುತ್ತಾರೆ. ಕುತ್ತಿಗೆಗೆ ಪವನಿನ ಸರ, ಗುಂಡಿನ ಸರ, ತೋಳಿಗೆ ತೋಳು ಬಂದಿ, ಎಡಗೈ ಬಂದಿ, ಬಲಗೈ ಬಂದಿ, ಸೊಂಟಕ್ಕೆ ಗೆಜ್ಜೆಪಟ್ಟಿ, ಸಾದಾಪಟ್ಟಿ ಬೆಳ್ಳಿಯದು ಮಾಡಿಸಿಕೊಂಡು ಧರಿಸುವರು. ಮದುವೆಯಾದವರು ಕಾಲಿನ ಬೆರಳಿಗೆ ಕಾಲುಂಗುರ, ಕಾಲ್ ಪಿಲ್ಲಿ, ಮೀನು ಪಿಲ್ಲಿ, ಕಾಲ್ಗಡಗ, ಕಾಲಂಧಿಗೆ, ಮೂಗಿಗೆ ರಂಧ್ರ ಮಾಡಿಸಿ ಎರಡುಕಡೆ ಮೂಗುತಿ, ಮೂಗಿನ ಕೆಳಗೆ ಬುಲಾಕನ್ನು ಸಾಮಾನ್ಯವಾಗಿ ಧರಿಸಿರುತ್ತಾರೆ. ಹೆಣ್ಣು ಮಗುವಿಗೆ ಹುಟ್ಟಿದ ನಾಲ್ಕು ವರ್ಷಗಳ ನಂತರ ಮೂಗು ಚುಚ್ಚುವರು. ಹುಟ್ಟಿದ ನಾಲ್ಕು ತಿಂಗಳ ಮಗುವಿಗೆ ಕಿವಿ ಚುಚ್ಚಿಸುವರು. ಊರಿನ ಜಾತ್ರೆ ಸಂದರ್ಭದಲ್ಲಿ ಈ ಕಾರ್ಯಕ್ರಮ ಮಾಡುತ್ತಾರೆ.

ನಿತ್ಯ ಬದುಕಿನ ದಿನಗಳಲ್ಲಿ ಸರಳವಾಗಿರುವ ಆಭರಣಗಳನ್ನು ಧರಿಸುವರು. ಹಬ್ಬ, ಮದುವೆ ಮುಂತಾದ ಮಂಗಳ ಕಾರ್ಯದಲ್ಲಿ ಮೇಲೆ ಹೇಳಿದ ಆಭರಣಗಳನ್ನು ಅವರವರ ಶಕ್ತಿಗನುಸಾರವಾಗಿ ಧರಿಸುವುದನ್ನು ಕಾಣಬಹುದು. ಮಾಂಗಲ್ಯಸರದ ವಿನ್ಯಾಸ ಬಹಳ ಸರಳವಾಗಿರುತ್ತದೆ. ಒಂದು ತಾಳಿ ಇದ್ದು ಅದರ ಅಕ್ಕಪಕ್ಕ ಹವಳದ ಮಣಿ ನಂತರ ಕರಿಮಣಿಸರದಿಂದ ಕಂಗೊಳಿಸುತ್ತದೆ. 'ಆಭರಣಗಳು ಸೌಂದರ್ಯ ಹೆಚ್ಚಿಸುವುದರ ಜೊತೆಗೆ ದುಷ್ಟ ಶಕ್ತಿಗಳಿಂದ ರಕ್ಷಿಸುತ್ತದೆ. ಅಲ್ಲದೆ ಅದೃಷ್ಟವನ್ನು ತರುತ್ತದೆಂದು ಜನರು ನಂಬಿದ್ದರು. ಈಗ ಅದು ಮಾಯವಾಗಿ ಸೌಂದರ್ಯವಷ್ಟೆ ಉಳಿದಿದೆ' (ಭಗವಾನ ಉದ್ಧೃತ). ಮಲೆನಾಡಿನಲ್ಲಿ ಗಂಡಾಗಲೀ, ಹೆಣ್ಣಾಗಲೀ ಚಿಕ್ಕ ಮಗುವಾಗಿರುವಾಗಲೇ ಕಿವಿ, ಮೂಗು ಚುಚ್ಚಲೇಬೇಕು. ಓಲೆ, ಬಳೆ, ಕಾಲುಂಗುರ ಇವುಗಳಿಗೆಲ್ಲಾ ಪಾವಿತ್ರ್ಯತೆ ಇದೆ. ಒಡವೆಗಳ ಹುಟ್ಟು ಮತ್ತು ಬೆಳವಣಿಗೆಯನ್ನು ಡಾ.ಸುಶೀಲಾ ನೆಲ್ಲಿಸರರವರು ಈ ರೀತಿ ವಿಭಜಿಸಿದ್ದಾರೆ.

೧. ಪರರನ್ನು ಆಕರ್ಷಿಸಿ ಮಾನಸಿಕ ಮತ್ತು ಲೈಂಗಿಕ ತೃಪ್ತಿ ಪಡೆಯುವುದಕ್ಕಾಗಿ

೨. ಧಾರ್ಮಿಕ ನಂಬಿಕೆಗಳಿಂದಾಗಿ

೩. ಆರೋಗರಕ್ಷಣೆಗಾಗಿ

೪. ಪ್ರತಿಷ್ಠೆಗಾಗಿ

೫. ಮಾಟ ಮಂತ್ರಗಳಿಂದ ರಕ್ಷಿಸಿಕೊಳ್ಳುವುದಕ್ಕಾಗಿ

೬. ಸಂಪತ್ತನ್ನು ಕಾಯ್ದಿರಿಸಿಕೊಳ್ಳುವುದಕ್ಕಾಗಿ

೭. ಶ್ರೀಮಂತಿಕೆಯ ದ್ಯೋತಕವಾಗಿ

ಹೀಗೆ ಶೃಂಗಾರ ಸಾಧನವಾಗಿ, ಗಂಡು ಹೆಣ್ಣಿನ ರೂಪವನ್ನು ಹೆಚ್ಚಿಸುವುದಕ್ಕಾಗಿ ಉಡುಗೆ-ತೊಡುಗೆಗಳ ಆವಿಷ್ಕಾರವಾಗಿರಬೇಕು. ಕಾಲದಿಂದ ಕಾಲಕ್ಕೆ ಹೊಸಹೊಸ ರೂಪ, ಆಕಾರ, ವಿನ್ಯಾಸವನ್ನು ಪಡೆಯುತ್ತಾ, ಬದಲಾಗುತ್ತಾ ಅಳಿಯದೆ ಉಳಿದು ಬಂದಿದೆ.

## ಹಚ್ಚೆ

ಹಚ್ಚೆ ಎಂದು ಕರೆಯಲ್ಪಡುವ ಜಾನಪದ ಕಲೆಯು ರೂಢ ಮೂಲ ಸಂಪ್ರದಾಯಗಳಲ್ಲಿ ಬಹಳ ಪ್ರಮುಖ ವಾದುದು. ಜಗತ್ತಿನ ಎಲ್ಲಾ ಕಡೆ ಇದು ಕಂಡುಬರುತ್ತದೆ. ಹಚ್ಚು ಸಂಪ್ರದಾಯವು ಯಾವುದೇ ಒಂದು ಜನಾಂಗಕ್ಕೆ ಸೀಮಿತವಾಗಿಲ್ಲ. ಜಗತ್ತಿನಲ್ಲಿ ಕಾಣಬರುವ ಹಚ್ಚಿನ ಜನಾಂಗಗಳಲ್ಲಿ ಇನ್ನೂ ಜೀವಂತ ವಾಗಿದೆ. ಹಚ್ಚೆಯ ಬಗ್ಗೆ ಜನಪದರು ಅತ್ಯಂತ ಬಾವುಕರಾಗಿ ಮಾತನಾಡುವರು.



'ಸತ್ತಾರೆ ನಮಕೂಡೆ ಮತ್ತೇನು ಬರಬಹುದು?
ಹಚ್ಚೆಯ ಬಟ್ಟು ಸುಲಿಹಲ್ಲು
ಕಟ್ಟಿರೋ ತುರುಬು' ॥

ಬದುಕಿದ್ದಾಗ ಹಾಗೂ ಸತ್ತನಂತರ ನಮ್ಮ ದೇಹದ ಜೊತೆಗೆ ಯಾರು ಬರಲಾರರು ಬಂದರೆ ಹಚ್ಚೆ ಚಿತ್ತಾರ ನಮ್ಮೊಟ್ಟಿಗೆ ಬರುತ್ತದೆ ಎಂದು ನಂಬಿದ್ದಾರೆ. ಹಚ್ಚೆಯನ್ನು ಹಾಕಿಸಿಕೊಳ್ಳುವುದು ಗರತಿತನದ, ಸೌಭಾಗ್ಯದ, ಮುತ್ತೈದೆ ಸಂಕೇತವೆಂದು ಸೌಂದರ್ಯವನ್ನು ಸಿರಿತನವನ್ನು ಕಾಯ್ದುಕೊಳ್ಳುತ್ತದೆ ಎಂದು ತಿಳಿದಿದ್ದರು. 'ಹಚ್ಚೆ ಇಟ್ಟುಕೊಳ್ಳದ ಹೆಣ್ಣು ಮಗಳು ಕೇಲಿಗೆ' ಕೈ ಹಾಕಿದರೆ ಬರಕಾತ್' ಬರುತ್ತದೆ ಎಂಬ ನಂಬಿಕೆ ಇದೆ. (ಕ್ಷೇತ್ರಕಾರ್ಯ ಸಂದರ್ಭದಲ್ಲಿ ಕೂಡ್ಲಿಕನ್ನಮ್ಮನವರು ಹೇಳಿದ ಮಾತು)

ಹಚ್ಚೆ ಎಂಬ ಪದಕ್ಕೆ ಸಮಾನಾರ್ಥಕ ಪದವಾಗಿ ಇಂಗ್ಲೀಷಿನಲ್ಲಿ Tattoo ಎಂಬ ಪದವಿದೆ. ಕನ್ನಡದಲ್ಲಿ ಪ್ರಾದೇಶಿಕ ವ್ಯತ್ಯಾಸಗಳಿಂದಾಗಿ ಹಚ್ಚೆ'ಯನ್ನು ಅಚ್ಚೆ, ಹಂಚೆ, ಅಣಚೆ, ಹಣಚೆ ಎಂದು ಕರೆಯುವರು. ಹಚ್ಚೆ ಪಚ್ಚೆ ಎಂಬ ಪದದಿಂದ ಬಂದಿದ್ದು ಪಚ್ಚೆ ಎಂದರೆ ಹಸಿರು, ಹಚ್ಚೆ ಚಿತ್ತಾರವನ್ನು ಹಸಿರು ಗಿಡದ ಮೂಲಿಕೆಯಿಂದ ಹಸಿರು ರಸ ತಯಾರಿಸಿ ಸೂಜಿಯಿಂದ ದೇಹವನ್ನು ರಸದಲ್ಲಿ ಅದ್ದಿ ಚುಚ್ಚುವುದರಿಂದ ದೇಹದ ಮೇಲಿನ ಚಿತ್ತಾರವು ಹಳದಿ ಮಿಶ್ರಿತ ಹಸಿರು ರೂಪವನ್ನು ಕೊಡುತ್ತದೆ. ಚರ್ಮದ ಮೇಲೆ ಶಾಶ್ವತವಾಗಿ ಇರಬಲ್ಲ ಹಸಿರು ಬಣ್ಣ ಗುರುತೆ ಹಚ್ಚೆಯಾಗಿದೆ. ಕಿಟಲ್ ಕೋಶದಲ್ಲಿ ಹಚ್ಚೆಗೆ- ಅಚ್ಚೆ, ಪಚ್ಚೆ, ಹಚ್ಚೆ ಎಂಬರ್ಥಗಳಿವೆ. ಮಲಯಾಳಂನಲ್ಲಿ ಹಚ್ಚೆಗೆ ಪಚ್ಚ ಕುತ್ತುಗ (ಹಚ್ಚೆ ಕುಕ್ಕುವುದು) ಎನ್ನುತ್ತಾರೆ. ತಮಿಳಿನಲ್ಲಿ ಪಚ, ಪಚ್ಚೆ ಎಂಬ ರೂಪಗಳಿವೆ. ಮರಾಠಿಯಲ್ಲಿ ಗೊಂದನ್, ತೆಲುಗಿನಲ್ಲಿ ಮುಚ್ಚಾ, ತುಳುನಲ್ಲಿ ಕೈಕಾ ಪಾಡ್ಲಾ, ಕೊಂಕಣಿಯಲ್ಲಿ ಹಚ್ಚೆ, ಬೊಟ್ಟಾ, ಹಿಂದಿ ಮತ್ತು ಉರ್ದುವಿನಲ್ಲಿ ಗೋದನ್ ಎಂದು ಕರೆಯು ಲಾಗುತ್ತದೆ(ಪಿ.ಆರ್.ತಿಪ್ಪೇಸ್ವಾಮಿ, ೧೯೯೪, ಪುಟ ೩೬೫).



ಉಡುಗೆ-ತೊಡುಗೆಗಳು ದೇಹವನ್ನು ಬಿಸಿಲು, ಮಳೆ, ಗಾಳಿ, ಚಳಿಗೆ ರಕ್ಷಿಸಲು, ಆಕರ್ಷಕವಾಗಿ ಕಾಣಿಸಿ ಕೊಳ್ಳಲು ಬಳಸಿದರೆ ಹಚ್ಚೆ ಗುರುತಿಸಿಕೊಳ್ಳಲು ಮಾನವ ಮೊದಲು ಬಳಸಿರಬೇಕು. ಅಲ್ಲದೆ ಪ್ರಕೃತಿಯಲ್ಲಿ ಕಾಣುವ ಪ್ರಾಣಿ ಪಕ್ಷಿಗಳ ಚಿತ್ತಾರದ ಬಣ್ಣವನ್ನು ಗಮನಿಸಿ ಅದರಂತೆ ಕಾಣಲು ಶಾಶ್ವತವಾಗಿರುವ ಹಚ್ಚೆ ಸಂಪ್ರದಾಯ ಉಗಮವಾಗಿರಬಹುದು. ಹರ್ಬಟ್ ಸ್ಪೆನ್ಸರ್ ಎನ್ನುವ ವಿದ್ವಾಂಸ, ಆದಿಮಾನವರು ಭೂತ ಪ್ರೇತಗಳಿಗೆ ಮತ್ತು ಸತ್ತ ನಾಯಕನಿಗೆ ರಕ್ತತರ್ಪಣ ಮಾಡಲೋಸುಗ ಈ ಸಂಪ್ರದಾಯ ಬೆಳೆದು ಬಂದಿರ

ಬಹುದು ಎಂದು ಅಭಿಪ್ರಾಯ ಪಡುತ್ತಾರೆ. ಕರ್ನಾಟಕದಲ್ಲಿ ಹಚ್ಚೆಯು ೧೨ನೇ ಶತಮಾನಕ್ಕಿಂತಲೂ ಹಿಂದೆಯೇ ಪ್ರಚಲಿತದಲ್ಲಿತ್ತು. ಲಿಖಿತವಾಗಿ ಕೆಲವು ವಚನಗಳಲ್ಲಿ ಇದರ ಪ್ರಸ್ತಾಪ ಕಾಣಬಹುದು.

'ಐದೆ ಅಣಾಚಿಯಿಲ್ಲದವಳಿಗೆ ಸೌಭಾಗ್ಯದ ಹೂವಿನ ಬೊಟ್ಟೇಕೆ' ಎಂಬ ನುಡಿ ಬಸವಣ್ಣನವರ ವಚನದಲ್ಲಿ ಬರುತ್ತದೆ. ಇಲ್ಲಿ ಅಣಾಚಿ ಎಂಬ ಪದದ ಅರ್ಥ ಹಚ್ಚೆ ಎಂದು. ಹಚ್ಚೆ ಸೌಭಾಗ್ಯದ ಸಂಕೇತ ಎಂದು ಬಸವಣ್ಣನವರು ಹೇಳಿದರೆ, ಚೆನ್ನಬಸವಣ್ಣನವರು ಹಚ್ಚೆ ಹಾಕಿಸಿಕೊಳ್ಳುವುದು, ಹಾಕಿಸಿಕೊಂಡವರಲ್ಲಿ ಊಟ ಮಾಡಿದರೆ ತಪ್ಪು ಎನ್ನುವರು.

'ಹಚ್ಚೆ ಹಾಕಿಸಿಕೊಂಡ ಹರಭಕ್ತೆಯ ಕೈಯಿಂದ ಕೊಂಬ ಪ್ರಸಾದ ಪ್ರಸಾದವಲ್ಲ. ಅದು ನರಮಾಂಸ, ಹೆಂಡ ಹಾಗೂ ನಾಯಿಯ ರಕ್ತಕ್ಕೆ ಸಮಾನ' ಎಂದು ಕಟಕಿಯಾಡಿದ್ದಾರೆ. ಕ್ರಿ.ಶ. ೧೨ನೇ ಶತಮಾನದ ಸಾಹಿತ್ಯ ಕೃತಿಯಾದ ಮಲ್ಲಿಕಾರ್ಜುನ ಸೂಕ್ತಿ ಸುವರ್ಣದಲ್ಲಿ 'ಅಣಾಚಿತನವಂ ಕೈಕೊಳ ನಿನ್ನೊಳೆ ಭಾಗ್ಯದ ಭದ್ರ ಲಕ್ಷಣದ ಪದದೊಳ್ ಸಂದೀ ಸೌಭಾಗ್ಯದಿಂ ಸ್ವಜನಗಳಿಂ ತಣಿಸಿ' ಎಂಬ ವಾಕ್ಯದಲ್ಲಿ 'ಅಣಾಚಿ'ಯಿಂದ ಸ್ತ್ರೀಯ ಸೌಭಾಗ್ಯದ ಲಕ್ಷಣವನ್ನು ತಿಳಿಸುತ್ತದೆ. ಹೀಗೆ ಹಚ್ಚೆಯು ಕರ್ನಾಟಕದಲ್ಲಿ ೧೨ನೇ ಶತಮಾನದಲ್ಲಿ ತನ್ನ ನಿಖರ ದಾಖಲೆಯನ್ನು ಒದಗಿಸುತ್ತದೆ. ಇದಕ್ಕಿಂತ ಹಿಂದಿನಿಂದಲೂ ಈ ಕಲೆ ಪ್ರಚಾರದಲ್ಲಿತ್ತು.

## ಹಚ್ಚೆ ಹಾಕುವ ವಿಧಾನ

'ಗ್ರಾಮೀಣ ಬದುಕಿನಲ್ಲಿ ಹಚ್ಚೆ ಹೊಯ್ಯಿಸುವ ಪದ್ಧತಿ ಹಿಂದಿನಿಂದಲೂ ರೂಢಿಯಲ್ಲಿದೆ. ಆಪ್ತರು ತಮಗೆ ಬೇಕಾದವರಿಗೆ ವಿಶ್ವಾಸ ಪ್ರೀತಿಯ ಸಂಕೇತವಾಗಿ ಹಚ್ಚೆಯನ್ನು ಹಾಕಿಸುವುದು ಉಂಟು. ಹಚ್ಚೆ ಹಾಕುವ ಕಲೆ ಕೆಲವೇ ಜನಾಂಗಗಳಲ್ಲಿ ಉಳಿದಿದೆ. ಸಾಮಾನ್ಯವಾಗಿ ಬುಂಡೇ ಬೆಸ್ತರು ಅಥವಾ ಕೊರಮ ಶೆಟ್ಟರ ವನಿತೆಯರು ಹಚ್ಚೆ ಹೊಯ್ಯುವ ಕಲೆಯಲ್ಲಿ ಹೆಸರು ಗಳಿಸಿದ ಜನಾಂಗ'(ಪಿ.ಆರ್.ತಿಪ್ಪೇಸ್ವಾಮಿ, ೧೯೯೪, ಪುಟ ೧೭೭). ಅನೇಕ ಜನಾಂಗಗಳು 'ಹಚ್ಚೆ' ಹೊಯ್ಯುವ ಕಲೆಯಲ್ಲಿ ನಿಷ್ಣಾತರು. ಕೊರಮ ಜನಾಂಗದ ಸ್ತ್ರೀ ಹಚ್ಚೆ ಹಾಕುವಾಗ ಮೊದಲು ಕಡ್ಡಿಯಿಂದ ಯಾವ ಚಿತ್ತಾರಬೇಕು ಆ ಚಿತ್ತಾರವನ್ನು ಕೇಳಿ ತಿಳಿದುಕೊಂಡು, ಕೈ, ಗಲ್ಲ, ಮುಂಗೈ ಮೇಲೆ ಚಿತ್ತಾರ ಬರೆಯುವರು. ನಂತರ ಹಸಿರೆಲೆಯಿಂದ ಮಾಡಿದ ರಸವನ್ನು ತೆಗೆದು ಇಟ್ಟುಕೊಳ್ಳುವರು. ಸೂಜಿಯನ್ನು ತೆಗೆದುಕೊಂಡು ರಸದಲ್ಲಿ ಚರ್ಮದ ಮೇಲೆ ಬರೆದ ಚಿತ್ತಾರದುದ್ದಕ್ಕೂ ಚುಚ್ಚುತ್ತಾ ಹೋಗುವರು. ನಂತರ ರಕ್ತವನ್ನು ಒಣ ಬಟ್ಟೆ ಅಥವಾ ತಣ್ಣೀರಿನಿಂದ ತೊಳೆದು ಹಸಿರು ರಸವನ್ನು ಚಿತ್ತಾರದ ಮೇಲೆ ಸವರುವರು. ಹಚ್ಚೆ ಹಾಕುವಾಗ ನೋವಿನ ಉಪಶಮನಕ್ಕೆ ಅವರ ಗಮನ ಬೇರೆಡೆಗೆ ಸೆಳೆಯಲು ಸುಶ್ರಾವ್ಯವಾಗಿ ಹಾಡುತ್ತಾರೆ. ಹಚ್ಚೆ ಹಾಕಿಸಿಕೊಳ್ಳುವ ಹೆಣ್ಣು ಹಾಡಿನ ಪರಿಣಿತಕ್ಕೆ ಮಾರು ಹೋಗಿ ನೋವನ್ನು ಮರೆಯುತ್ತಾಳೆ.

"ಅತ್ತೆ ಬೈದರೆ ಒಪ್ಪು। ಮಾವ ಬೈದರೆ ಒಪ್ಪು।<br>
ಹಚ್ಚೆಯ ಬೊಟ್ಟು ಹಣೆಗೊಪ್ಪು ತಂಗೆವ್ವ।<br>
ಚೊಚ್ಚಲ ಬಸರು ನಿನಗೊಪ್ಪು॥

"ಹಂಚಿನ ಬಟ್ಟಿನ ಗರತಿ ಹಾದ್ಹೋಗು ನನ್ನ ಓಣ್ಯಾಗ
ಚೊಚ್ಚಲ ಬಸರು ನನ ಮಗಳು ।
ಚೊಚ್ಚಲ ಬಸರು ನನ ಮಗಳು ಕೈಯಾಗ
ಕೆಳದಿಯ ತೇರ ಬರಿ ಬಾರೆ ।"

ಈ ರೀತಿಯಾಗಿ ಹಾಡುವರು.

ಹಚ್ಚೆಯ ಮಸಿಯನ್ನು ಗುಡ್ಡೆ ಗೇರು ಬೀಜದ ರಸದಲ್ಲಿ ಸೀಮೆ ಎಣ್ಣೆ ದೀಪದ ಕಾಡಿಗೆಯನ್ನು ಕಲಸುವರು. ಅಥವಾ ಉರಿಯುವ ಸೀಮೆ ಎಣ್ಣೆ ಬುಡ್ಡಿಯಿಂದ ಮಸಿಯನ್ನು ಎದೆಹಾಲಿನಲ್ಲಿ ಕಲಸಿ ಹಚ್ಚೆಯ ರಸ ತಯಾರಿಸುವರು. ಈ ರೀತಿ ಎರಡು ವಿಧಾನದಲ್ಲಿ ಮಸಿ ತಯಾರಿಸುವರು.(ಹೆಚ್.ಎಂ.ಮಹೇಶ್ವರಯ್ಯ, ೧೯೯೮, ಪುಟ ೩೨). ಹಚ್ಚೆಯ ಮಸಿಯನ್ನು ಹಲವು ವಿಧಾನ ಬಳಸಿ ತಯಾರಿಸ ಬಹುದು. 'ಅರಿಸಿಣ, ಔಡಲೆಣ್ಣೆಯನ್ನು ಬಳಸಿ ಕೆಲವು ಹಳದಿ ಮಿಶ್ರಿತ ಬಣ್ಣವನ್ನು ತಯಾರು ಮಾಡಿಕೊಳ್ಳುತ್ತಾರೆ. ಹಸಿರು ಮಿಶ್ರಿತ ಹಳದಿಬಣ್ಣ, ನೀಲಿ ಮಿಶ್ರಿತ ಕಪ್ಪು ಬಣ್ಣದ ರಸವನ್ನು ತಯಾರಿಸುವರು. "ವೀಳ್ಯದೆಲೆಗೆ ಸಗಣಿಯನ್ನು ಸವರಿ, ಹರಳೆಣ್ಣೆ ದೀಪಕ್ಕೆ ಹಿಡಿದಾಗ ಕಪ್ಪು ಶೇಖರಗೊಳ್ಳುತ್ತದೆ. ಹಚ್ಚೆಯ ಸೊಪ್ಪೆಂದು ಒಂದು ಬಗೆಯ ಸೊಪ್ಪಿದೆ ಇದರ ರಸಕ್ಕೆ ಇದ್ದಿಲು ಪುಡಿಯನ್ನು ಸೇರಿಸಿದರೆ ಆಯಿತು'(ಎಸ್.ಸಿ.ಪಾಟೀಲ,೧೯೯೫, ಪುಟ ೮) ಎಂದು ರಸ ತಯಾರಿಕೆಯ ಬಗೆಯನ್ನು ವಿವರಿಸಿದ್ದಾರೆ. ಅಲ್ಲದೆ ಹೊನಗನ್ನೆ, ಎಲೆಹಾಲು, ಅವರೆ, ತುಂಬೆ, ಹಾಗಲಕಾಯಿ, ಎಲೆರಸ (ವೀಳ್ಯದ ಎಲೆ) ಚಪ್ಪರದ ಅವರೆರಸ, ಕಿರುಗೋಣಿ ಸೊಪ್ಪು ಇತ್ಯಾದಿ ವಸ್ತುಗಳಿಂದಲೂ ರಸ ತಯಾರಿಸಬಹುದು. ಈ ರೀತಿ ರಸದಲ್ಲಿ ಜೇವಿನ ಕಡ್ಡಿ, ತಾಳೇ ಮರದ ಕಡ್ಡಿಯಿಂದ ಅದ್ದಿ ಚಿತ್ರ ಬರೆದು ನಂತರ ಸೂಜಿಯನ್ನು ಚುಚ್ಚುತ್ತಾ ಹೋಗುತ್ತಾರೆ. ಈ ರೀತಿ ಹಚ್ಚೆ ಹುಯ್ಯುವರು.

ಹಚ್ಚೆಯನ್ನು ದೇಹದ ಕೆಲಭಾಗದಲ್ಲಿ ಹಾಕಿಸಿಕೊಳ್ಳುವುದರಿಂದ ನೋವು. ಜ್ವರ ಕಾಣಿಸಿಕೊಳ್ಳುತ್ತದೆ. ಅದಕ್ಕಾಗಿ ಹಚ್ಚೆ ಹಾಕಿದ ಭಾಗಕ್ಕೆ ಕೊಬ್ಬರಿ ಎಣ್ಣೆ ಸವರುವರು. ಗಂಧದ ಕೊರಡಿನ ಮೇಲೆ ಅರಿಷಿಣ ಕೊಂಬನ್ನು ತೇಯ್ದು ಸವರುವುದರಿಂದ ನಂಜಾಗುವುದಿಲ್ಲ. ಮೂರು ದಿನದವರೆಗೆ ಇದೇ ರೀತಿ ಮಾಡಿದರೆ ನೋವು ಮಾಯವಾಗುತ್ತದೆ. ಯಾವುದೇ ಕಾರಣಕ್ಕೂ ನೀರನ್ನು ಮುಟ್ಟಿಸಬಾರದು. ಹಚ್ಚೆ ಹಾಕಿಸಿಕೊಂಡ ದಿನದಿಂದ ಒಂದು ವಾರದವರೆಗೆ ನೋವು ಇರುತ್ತದೆ. ಹಚ್ಚೆ ಹಾಕಿದ ದಿನ ಆಹಾರ ಪದಾರ್ಥಗಳಿಗೆ ಇಂಗನ್ನು ಹಾಕು ವಂತಿಲ್ಲ. ನಂಜಿನ ತರಕಾರಿಗಳಾದ, ಬದನೆ, ತೆಂಗಿನ ಕಾಯಿ, ಎಣ್ಣೆಯಲ್ಲಿ ಕರಿದ ತಿಂಡಿಗಳನ್ನು ತಿನ್ನುವಂತಿಲ್ಲ. ಹಚ್ಚೆ ಹಾಕಿಸಿಕೊಂಡೆನೆಂದು ಮಲಗಿದರೆ ನೋವು ಜಾಸ್ತಿ ನರ ಗಂಟಾಗುವ ಸಾಧ್ಯತೆ ಇರುತ್ತದೆ. ಅದಕ್ಕಾಗಿ ಓಡಾಡು ವುದು, ಬೀಸುವುದು, ಕುಟ್ಟುವುದು ಮುಂತಾದ ಸರಳ ಕೆಲಸವನ್ನು ಮಾಡುವುದರಿಂದ ನರ ಗಂಟಾಗು ವುದಿಲ್ಲ. ಅಲ್ಲದೆ ನೋವು ಮರೆತು ಹೋಗುವ ಸಾಧ್ಯತೆ ಇರುತ್ತದೆ. ಅಂದರೆ ಲಕ್ಷ್ಯ ಬೇರೆಡೆಗೆ ಹೋಗುವುದರಿಂದ ನೋವು ಕಡಿಮೆಯಾಗುವುದು.

## ದೀವರು ಬಳಸುವ ಹಚ್ಚೆಯ ಕೆಲ ವಿನ್ಯಾಸಗಳು

### ಹಣೆ ಹಚ್ಚೆಯ ವಿನ್ಯಾಸಗಳು



೧



೨



೩



೪



೫



೬



೭



೮



೯



೧೦

೧. ಬಟ್ಟು ೨. ಜರಡಿ ೩. ರೆಕ್ಕೆಗಳು ೪. ತುಳಸಿ ಗಿಡ ೫. ಚಂದ್ರ ೬. ಹುಂಜ ೭. ಚೇಳು ೮. ಸೂರ್ಯ ೯. ನತ್ತು ೧೦. ನಾಗಪ್ಪ



೧



೨



೩



೪



೫



೬



೭



೮



೯



೧೦



೧೧

೧ ಮತ್ತು ೨ ಜೋಗಿ ಜಡೆ ೩. ತೊಂಡೆ ಚಪ್ಪರ ೪. ಗೌರಿ ಕಣ್ಣು ೫. ಹೊನ್ನೆ ಮರ ೬. ಮರ ೭. ತೇರು ೮. ಹೂವು ೯. ಜಿಂಕೆ ೧೦. ಮುತ್ತಿನ ತೇರು ೧೧. ರಾಮನ ತೊಟ್ಟಿಲು

### ದೀವರ ನಂಬಿಕೆ

* ಹಚ್ಚೆ ಹಾಕಿಸಿಕೊಂಡರೆ ಮಾಟ, ಮಂತ್ರ ಮದ್ದಿನಿಂದ ತಪ್ಪಿಸಿಕೊಳ್ಳಬಹುದು.
* ಹಚ್ಚೆ ಗುರುತು ಇದ್ದರೆ ಗರ್ಭಪಾತವಾಗುವುದಿಲ್ಲ.
* ಚೇಳು, ಹಾವು ಮುಂತಾದ ಚಿತ್ರ ಹಾಕಿಸಿಕೊಂಡರೆ ಅವುಗಳಿಂದ ಭಯವಿಲ್ಲ.
* ಅಡುಗೆ ಹಾಳಾಗುವುದಿಲ್ಲ.
* ಧಾನ್ಯಗಳು ಕಣದಲ್ಲಿ ಹೆಚ್ಚಾಗುತ್ತದೆ.
* ಅಣ್ಣ-ತಮ್ಮನನ್ನು ನೋಡಬಾರದು.
* ಗಲ್ಲದ ಮೇಲೆ ಹಾಕಿಸಿಕೊಂಡರೆ ದೃಷ್ಟಿ ತಾಕುವುದಿಲ್ಲ.
* ಹಣೆಯ ಮಧ್ಯಭಾಗದಲ್ಲಿ ಹಾಕಿಸಿಕೊಂಡರೆ ಮುತ್ತೈದೆತನ ಶಾಶ್ವತವಾಗಿರುತ್ತದೆ.
* ಭೂತ ಪ್ರೇತಗಳಿಂದ ರಕ್ಷಿಸಿಕೊಳ್ಳಬಹುದು.
* ಹಚ್ಚೆ ಹಾಕಿಸಿಕೊಂಡ ಕೈಯಿಂದ ಅಕ್ಕಿಯ ಕೊಲಸ್ಸು ಮುಟ್ಟಿದರೆ ಅಕ್ಕಿಯು ಒದಗುತ್ತದೆ (ಹೆಚ್ಚಾಗುತ್ತದೆ)
* ನರರೋಗ, ವಾತ, ತಲೆಶೂಲೆ, ನರಗಳ ಗಂಟುಕಟ್ಟುವಿಕೆಯಿಂದ ಪಾರಾಗಬಹುದು.

ಇಷ್ಟೆಲ್ಲಾ ಮಹತ್ವ ಪಡೆದುಕೊಂಡ ಈ ಕಲೆ ಇಂದು ಕಣ್ಮರೆಯಾಗುತ್ತಿದೆ. ಹಚ್ಚೆ ಹಾಕಿಸಿಕೊಳ್ಳುವವರ ಒಲವು ಕಡಿಮೆಯಾಗುತ್ತಿದೆ. ಹಚ್ಚೆ ಹಾಕಿಸಿಕೊಂಡರೆ ವಿದ್ಯಾವಂತರಾದ ನಾವು ಸಂಪ್ರದಾಯದವರಂತೆ ಕಾಣುತ್ತೇವೆಂಬ ಕೀಳರಿಮೆ, ಅಪನಂಬಿಕೆ ಯುವ ಜನಾಂಗದಲ್ಲಿ ಬೆಳೆಯುತ್ತಿದೆ. ಈ ಎಲ್ಲಾ ಬೆಳವಣಿಗೆ ಯಿಂದಾಗಿ ಹಚ್ಚೆ ಹಾಕುವುದನ್ನು ಉಪಕಸುಬಾಗಿ ಅವಲಂಬಿಸಿದ ಜನಾಂಗಕ್ಕೆ ತೊಂದರೆಯಾಗಿದೆ. ಇವರು ಬೇರೆ ಕಸುಬುಗಳನ್ನು ಅವಲಂಬಿಸುತ್ತಿದ್ದಾರೆ. ಈ ಜನಾಂಗದ ವಿಶಿಷ್ಟ ರೀತಿಯ ಹಚ್ಚೆಯ ಚಿತ್ತಾರಗಳು[೨೨] ಬಾಗಶಃ ಮಾಯವಾಗುತ್ತಿರುವುದು ದುಃಖದ ಸಂಗತಿಯಾಗಿದೆ. ಒಟ್ಟಿನಲ್ಲಿ ಈ ಕಲೆ ಮುಂದಿನ ಪೀಳಿಗೆಗೆ ಲಿಖಿತ ರೂಪದಲ್ಲಿ[೨೩] ದೊರೆಯಬಹುದು ಅಷ್ಟೆ.

## ೩.೨. ದೀವರ ಮನೆಗಳ ಸ್ವರೂಪ

ಈ ಜನಾಂಗ ವಾಸಿಸುವ ನೆಲೆದಾಣವನ್ನು ದೀವ್‌ಗೇರಿ ಎಂದು ಕರೆಯಲಾಗುತ್ತದೆ. ಊರುಗಳ ಮಧ್ಯ ಭಾಗದಲ್ಲಿ ದೀವರ ಮನೆಗಳು ಒತ್ತಟ್ಟಿಗೆ (ಗುಂಪಾಗಿ) ಇಕ್ಕಟ್ಟಾದ ಜಾಗೆಯಲ್ಲಿ ಇರುತ್ತವೆ. ಚೌಕಾಕಾರದ ಚಿತ್ರವನ್ನೆ ಊರು ಎಂದು ತೆಗೆದುಕೊಂಡರೆ ಕಾಡು ಒಂದು ಭಾಗವನ್ನು, ಗದ್ದೆಗಳು ಇನ್ನೊಂದು ಭಾಗವನ್ನು ಆವರಿಸಿರುತ್ತವೆ. ಮಧ್ಯದಲ್ಲಿ ಮನೆಗಳಿರುತ್ತವೆ. ಕಾಡು, ಹುಲ್ಲುಗಾವಲು, ಮನೆಗಳು, ಜಮೀನು ಎಂಬ ಇಳಿಕೆಯ ಕ್ರಮದಲ್ಲಿ ಊರು ಇರುತ್ತದೆ. ಮನೆಗಳನ್ನು ಅರಣ್ಯದಲ್ಲಿ ಸಿಗುವ ಮರ ಮಟ್ಟುಗಳನ್ನು ಬಳಸಿಕೊಂಡು




ತಮ್ಮ ಕುಟುಂಬದ ಜನಸಂಖ್ಯೆಯನ್ನು ಆದರಿಸಿ ಮನೆಗಳ ಅಡಿಪಾಯ ಹಾಕಿ ನಿರ್ಮಿಸುವರು. ಮನೆಯ ಪಕ್ಕದಲ್ಲಿ ಬಚ್ಚಲು, ಕೊಟ್ಟಿಗೆ, ಕೋಳಿಗೂಡು ಇರುತ್ತದೆ.




ಚಡಿ, ಕಟ್ಟೆ (ಅಂದಾಜು ೩ ಅಡಿ ಎತ್ತರ ೨.೫ ಅಡಿ ಅಗಲ)

ಮೊದಲು ಮನೆಗಳು ಹುಲ್ಲಿನ ಗುಡಿಸಲುಗಳು ಆಗಿದ್ದವು. ಒಂದೆರಡು ನಾಡ ಹೆಂಚಿನ, ಕೆಂಪು ಹೆಂಚಿನ ಮನೆಗಳು ಇರುತ್ತಿದ್ದವು. ಈ ಹೆಂಚಿನ ಮನೆಯವರಿಗೆ ಸ್ವಂತ ಸಾಗುವಳಿ ಜಮೀನು ಇತ್ತೆಂಬುದು ಇಲ್ಲಿ ವಿಶೇಷ. ಹೆಚ್ಚಿನವರೆಲ್ಲಾ ಗೇಣಿರೈತರು. ಮನೆಯನ್ನು ಕಟ್ಟುವ ಮೊದಲು ಜಾಗ ಮನೆ ಕಟ್ಟಲು ಯೋಗ್ಯವೆ, ಚೌಡಿ, ಬೂತಪ್ಪ, ನಾಗರ ಹರವು[೧೩] ಇದೆಯೆ ಎಂಬುದನ್ನು ಗಾಡಿಗರಲ್ಲಿ ಕೇಳಿ ಆತನ ಅಣತಿಯ ಮೇರೆಗೆ ಮನೆ ಕಟ್ಟಲಾಗುತ್ತದೆ. ಮೇಲ್ಕಾಣಿಸಿದ ಚಿತ್ರದಲ್ಲಿ, ಬಲಗಡೆಯಲ್ಲಿ ಎಲ್ಲಾದರು ಚೌಡಮ್ಮ, ಭೂತ, ನಾಗರ ಹರವು ಇದ್ದರೆ ಕೊಟ್ಟಿಗೆ, ಬಚ್ಚಲು ಎಡಗಡೆಗೆ ಸ್ಥಳಾಂತರಗೊಳ್ಳುತ್ತದೆ. ಮನೆ ಕಟ್ಟುವ ಜಾಗವನ್ನು ಅಗೆದು

ತುಳಿದು ನೀರು ಹಾಕಿ ಮನೆಯ ತಳಪಾಯವನ್ನು ಗಟ್ಟಿಗೊಳಿಸಲಾಗುತ್ತದೆ. ನಂತರ ಮನೆಯ ದೂರದಲ್ಲಿರುವ ಮಣ್ಣನ್ನು ಇದೇ ರೀತಿ ನೀರು ಹಾಕಿ ತುಳಿದು ಒಂದೆರಡು ದಿನ ಬಿಟ್ಟು ಮಣ್ಣು ಜಿಗುಟಾದ ನಂತರದಲ್ಲಿ ಮನೆಕಟ್ಟುವ ಜಾಗಕ್ಕೆ ಮಣ್ಣಿನ ಉಂಡೆಗಳನ್ನು ಮಾಡಿ ಬೆತ್ತದ ಬುಟ್ಟಿಯಲ್ಲಿ ತರಲಾಗುತ್ತದೆ. ಗೋಡೆಹಾಕಿ ಅನುಭವವಿದ್ದ ವ್ಯಕ್ತಿ ಮಣ್ಣಿನ ಉಂಡೆಯನ್ನು ಒಡೆದು ರಪ್ಪನೆ ನೆಲಕ್ಕೆ ಹೊಡೆದು ಚೌಕಾಕಾರದ ಗುರುತಿನ ಸುತ್ತಲೂ ಒಂದು ಅಡಿ ಅಥವಾ ಎರಡು ಅಡಿ ಅಗಲ ಎಂಟು ಅಡಿ ಎತ್ತರದ ಗೋಡೆ ನಿರ್ಮಿಸುತ್ತಾನೆ. ಒಂದೆರಡು ದಿನದಲ್ಲಿ ಗೋಡೆ ಏರಿಸುವಂತಿಲ್ಲ. ದಿನಕ್ಕೊಂದರಂತೆ ಒಂದು ಕಚ್ಚು ಗೋಡೆ ಹಾಕಿ ಒಂದೆರಡು ದಿನ ಬಿಟ್ಟು ಮತ್ತೊಂದು ಕಚ್ಚು ಗೋಡೆ ಹಾಕಬೇಕು. ಹೀಗೆ ಗೋಡೆ ಹಾಕುವಾಗ ಬಾಗಿಲು, ಕಿಟಕಿ, ದೀಪದ ಗೂಡು, ಕಪಾಟು ಮುಂತಾದವುಗಳಿಗೆ ಜಾಗ ಬಿಡಬೇಕು. ದೀಪದ ಗೂಡು ಮತ್ತು ಕಪಾಟುಗಳಿಗೆ ಗೋಡೆಯಲ್ಲಿ ಸ್ವಲ್ಪ ಮಣ್ಣನ್ನು ತೆಗೆದು ಹಲಗೆ ಹಾಕಿರುವರು. ಹಕ್ಕಿಯ ಗೂಡಿನಂತೆ ಗೋಡೆಯಲ್ಲಿ ಮಣ್ಣು ತೆಗೆದು ದೀಪದ ಗೂಡು ನಿರ್ಮಿಸಲಾಗುತ್ತದೆ. ಎಂಟು ಅಡಿ ಗೋಡೆಯಾದ ನಂತರದಲ್ಲಿ ಗೋಡೆಯ ಮೇಲೆ ಮಧ್ಯದಲ್ಲಿ ಎರಡು ತೊಲೆಯನ್ನು ಬಿಡಿ ಬಿಡಿಯಾಗಿ ಹಾಕಲಾಗುತ್ತದೆ. ತೊಲೆಯ ಮೇಲೆ ಕಂಬ (ಐದು ಅಡಿ ಅಥವಾ ಆರು) ನಿಲ್ಲಿಸಿ ಇದರ ಮೇಲೆ ಕೋಳು ಹೇರಲಾಗುತ್ತದೆ. ಕೋಳುವಿನ ಕುದಿಗೆ V ಆಕಾರದಲ್ಲಿ ಮೂಲೆ ಎಳೆಯನ್ನು ಕಟ್ಟುವರು. ನಂತರ ಅಡಿಗೊಂದರಂತೆ ಬಿದಿರಿನ, ಮರದ 'ಗಳ' ಕಟ್ಟುವರು. ಗಳದ ಮೇಲೆ ಅಡ್ಡಲಾಗಿ ಸೀಬು ಅಥವಾ ದಬ್ಬೆಗಳನ್ನು ಗೇಣಿಗೊಂದರಂತೆ ಬಿಗಿಯಲಾಗುತ್ತದೆ. ಇವುಗಳನ್ನೆಲ್ಲಾ ಕಟ್ಟಲು ಬಳಸುವ ಬಳ್ಳಿಗಳು ಬಗನೆ ಬಳ್ಳಿ, ಕೊಟ್ಟೆ ಬಳ್ಳಿ, ಬಚ್ಚಲು ಬಳ್ಳಿ, ಕರಿಕೆ ಪಟ್ಟೆ, ನೊರ್ಲೆ ಬಳ್ಳಿ, ಬೆತ್ತದ ಸೀಕು, ಯಾವುದಾದರು ಕೆಲವನ್ನು ಬಳಸುವರು. ನಂತರ ಕರಡ(ಹುಲ್ಲು)ದ ಕಟ್ಟು ಸೊಕ್ಕಿ ಬೆಳೆದ ಹೊಳೆಯ ದಂಡೆಯ ಹುಲ್ಲು ಕೆದ್ದ ಸೂಡುಕಟ್ಟಿ ಹೊದಿಸಲಾಗುತ್ತದೆ. ಅಡಿಕೆಯ ಸೋಗೆಯನ್ನು ಬಳಸುವರು. ಮನೆಯ ಕೋಳು ಏರಿಸಿದ ನಂತರ ಕೋಳುಗೆ ಪೂಜೆ ಮಾಡಿ ತೆಂಗಿನಕಾಯಿ, ಕಂಬಳಿಯಲ್ಲಿ ಲೋಳೆ ಸರವನ್ನು ಹಾಕಿ ಕಟ್ಟಲಾಗುತ್ತದೆ. ಮನೆ ಹೊಚ್ಚಿದ ಜನರಿಗೆ ಸಿಹಿ ಊಟ ಮಾಡುವರು.

ಮನೆಯ ಉದ್ದ ಸಾಮಾನ್ಯವಾಗಿ ೨೦ ಅಥವಾ ೧೫ ಅಡಿ, ಅಗಲ ೧೫ ಅಡಿ ಅಥವಾ ೧೨ ಅಡಿ ಇದ್ದು ಮಧ್ಯಭಾಗದಲ್ಲಿ ಅಡ್ಡಲಾಗಿ ಗೋಡೆ ಇರುವುದು. ಈ ಗೋಡೆಯೇ ಹಸೆಗೋಡೆ ಎಂದು ಕರೆಯಿಸಿಕೊಳ್ಳುವುದು. ಮನೆಯ ಗೋಡೆಗೆಲ್ಲಾ ಹೆಂಗಸರು ಮಣ್ಣು ಮೆತ್ತಿ ಹೊಳೆಕಲ್ಲಿನಿಂದ ತಿಕ್ಕುವರು. ಇದರಿಂದಾಗಿ ಗೋಡೆ ನುಣುಪಾಗಿರುತ್ತದೆ. ಒಣಗಿದಂತೆಲ್ಲಾ ಕಲ್ಲಿನಿಂದ ನೀರು ಚಿಮುಕಿಸಿ ವರೆಯುವುದರಿಂದ ಗೋಡೆ ಬಿರಿ ಬಿಡದೆ ಗಟ್ಟಿಯಾಗಿರುತ್ತದೆ. ಗೋಡೆಗೆ ಸುಣ್ಣ, ಕೆಮ್ಮಣ್ಣು, ಜೇಡಿಯನ್ನು ಬಣ್ಣದಂತೆ ಉಪಯೋಗಿಸುವರು. ಬಾಗಿಲ ಅಂಚಿನಲ್ಲಿ ಹಸೆ ಚಿತ್ತಾರದ ಪಟ್ಟಿಯನ್ನು ಬಿಡಿಸುವರು. ನಡುಮನೆಯ ಗೋಡೆಯ ಮಧ್ಯದಲ್ಲಿ ಚಚ್ಚೌಕದ ಹಸೆ ಚಿತ್ತಾರವನ್ನು ಬಿಡಿಸುತ್ತಾರೆ. ಮನೆಯ ನೆಲವನ್ನು ಅಗೆದು ಕೆಂಪು ಕಲ್ಲಿನ ಪುಡಿಯನ್ನು ಹಾಕಿ ಪೆಟ್ಟಿಗೆ ಮಣೆಯಿಂದ ಬಡಿದು ನೀರು ಹಾಕಿ, ಕಲ್ಲಿನಿಂದ ಒರೆಯುವರು. ಕೆಲವರು ಈ ನೆಲಕ್ಕೆ ಸುಣ್ಣ-ಬೆಲ್ಲ-ಮಣ್ಣು ಕಾವಿ ಬಣ್ಣ ಮಿಶ್ರಣ ಮಾಡಿ ನೆಲದೊಂದಿಗೆ ಹಾಕಿ ಒರೆಯುವರು. ಇದು ಸಿಮೆಂಟಿನ ನೆಲದಂತೆ ಫಳ ಫಳ ಹೊಳೆಯುತ್ತದೆ ಮತ್ತು ನುಣುಪಾಗಿರುತ್ತದೆ. ಮನೆಯ ಸುತ್ತ ಎತ್ತರವಾದ ಕಟ್ಟೆಯನ್ನು ಕಟ್ಟುವರು. ಇದು ಗೋಡೆಗೆ ಭದ್ರತೆಯನ್ನು ಒದಗಿಸುವುದರ ಜೊತೆಗೆ, ಮನೆಯೊಳಗೆ ಹಾವು ಚೇಳು ಬರದಂತೆ

ತಡೆಯುತ್ತದೆ. ಇದು ಅಗಲವಾಗಿರುವುದರಿಂದ ಕೂರಲು, ಮಲಗಲು ಬರುವುದು. ಇದಕ್ಕೆ ದೀವರು 'ಚಡಿ' ಎಂದು ಕರೆಯುವರು. ಈಗ ಇಂತಹ ಮನೆಗಳು ಅಪರೂಪವಾಗಿ ಊರಿನಲ್ಲಿ ಒಂದೆರಡು ಇರಬಹುದು.

ಈ ಮನೆಗಳ ಮೇಲ್ಛಾವಣಿ ನಾಲ್ಕು ದಿಕ್ಕಿಗೂ ಬಾಗಿರುವುದರ ಉದ್ದೇಶ ಈ ಭಾಗದಲ್ಲಿ ಮಳೆ ಜಾಸ್ತಿ, ನಾಲ್ಕು ದಿಕ್ಕಿನಿಂದಲೂ ರಭಸವಾಗಿ ಮಳೆ ಆಗುವುದರಿಂದ ವಿನ್ಯಾಸದ ಮನೆಗಳು ಇಲ್ಲಿ ಸಾಮಾನ್ಯವಾಗಿವೆ. ಭತ್ತವನ್ನು ಸಂಗ್ರಹಿಸಿಡಲು ಮನೆಯ ಒಂದುಮೂಲೆಯಲ್ಲಿ ಕಣಜ ಕಟ್ಟುವರು. ಕಣಜ-ಬಿದಿರು ತಟ್ಟಿಗೆ ಸಗಣಿ ಸಾರಿಸಿ ವೃತ್ತಾಕಾರವಾಗಿ ಕಟ್ಟುವರು. ಮನೆಗಳು ಗುಂಪಾಗಿ ಕಟ್ಟಿಕೊಂಡಿರುವುದರಿಂದ ಬೇಲಿಯ ಅವಶ್ಯಕತೆ ಇರಲಿಲ್ಲ. ಇತ್ತೀಚಿನ ವರ್ಷಗಳಲ್ಲಿ ದೀವರ ಮನೆಗಳು ನಗರದ ರಸ್ತೆ, ಸೈಟುಗಳ ವಿನ್ಯಾಸದ ಮಾದರಿಯಲ್ಲಿ, ಸಾಲಾಗಿ ಮನೆ ಕಟ್ಟುತ್ತಿದ್ದಾರೆ. ಹೆಚ್ಚಿನ ಮನೆಗಳೆಲ್ಲಾ ಸಿಮೆಂಟು, ಕಲ್ಲು, ಹೆಂಚು, ಪಕಾಸಿ, ಮುಂತಾದ ಪರಿಕರಗಳನ್ನು ಉಪಯೋಗಿಸುವರು. ತಾರಸಿಯ ಮನೆಗಳು ಸಹ ಇವೆ. ಆಧುನಿಕ ಸಿಂಚನ ಇವರ ಮನೆಗೆ ಆಗುತ್ತಿದೆ.

**ಆಧುನಿಕ ಮನೆಯ ನಕಾಶೆ**




(ಐದು ಅಂಕಣದ ಹೆಂಚಿನ ಮನೆ, ತಾರಸಿ ಮನೆಯನ್ನು ಇತ್ತೀಚಿಗೆ ಕಟ್ಟಲಾಗುತ್ತಿದೆ)

## ೩.೮. ಆಹಾರ ಪದ್ಧತಿ

ಮನುಷ್ಯ ಬದುಕಿನ ಪ್ರಾರಂಭದಿಂದಲೂ ಇಲ್ಲಿಯವರೆಗೆ ಆಹಾರ ಪದ್ಧತಿ, ಜೀವನ ಕ್ರಮದಲ್ಲಿ ಅನೇಕ ಬದಲಾವಣೆ ಜರುಗುತ್ತಲೆ ಇದೆ. ಆದಿಯಲ್ಲಿ ಮಾನವ ಹಸಿಮಾಂಸ, ಹಸಿಗೆಡ್ಡೆ-ಗೆಣಸು, ಕಾಯಿಗಳನ್ನೆಲ್ಲಾ ತಿನ್ನುತ್ತಾ ಬಂದ. ಬೆಂಕಿಯ ಉಪಯೋಗದೊಂದಿಗೆ ಮಾನವನ ಜೀವನ ಕ್ರಮವೇ ಸಂಪೂರ್ಣವಾಗಿ ಬದಲಾಗುವ ಕ್ರಿಯೆಗೆ ತೊಡಗಿತು. ಆಹಾರ ಕ್ರಮದಲ್ಲಂತೂ ಮನುಷ್ಯ ನಾಲಿಗೆಯ ಚಪಲಕ್ಕೆ ತಕ್ಕಂತೆ ಹೊಸಹೊಸ ತಿನಿಸುಗಳ ಸೃಷ್ಟಿಗೆ ಕಾರಣನಾದ. ನಮ್ಮಲ್ಲಿ ಎರಡು ರೀತಿಯ ಆಹಾರ ಕ್ರಮವಿದೆ. ಮಾಂಸಾಹಾರ, ಸಸ್ಯಾಹಾರ. ದೀವರು ಈ ಎರಡು ಆಹಾರ ಪದ್ಧತಿಯನ್ನು ಬಳಸುವರು.

ಆಹಾರ ಕ್ರಮದಲ್ಲಿಯು ಸಂಪ್ರದಾಯ ಮತ್ತು ಆರ್ಥಿಕ ಏರು ಪೇರುಗಳನ್ನು ಸೂಕ್ಷ್ಮವಾಗಿ ಗಮನಿಸಬಹುದು. ಪೌಷ್ಟಿಕ ಆಹಾರ ಮನುಷ್ಯನಿಗೆ ದೊರೆಯದೆ ಇರುವುದು ಹಾಗು ಆಹಾರ ಪಡೆಯುವುದೇ ಮನುಷ್ಯನಿಗೆ ದುಸ್ತರವಾಗುವುದು. ಭೂಮಿಯ ಮೇಲಿನ ಆರ್ಥಿಕ ಅಸಮಾನತೆಯ ಹಂಚಿಕೆಯಿಂದಾಗಿ ಎಂಬುದಂತು ಸತ್ಯ. ಕೆಲ ದಶಕದ ಹಿಂದೆ ಇವರ ಆಹಾರಕ್ರಮ ಅಷ್ಟೇನು ಸುಧಾರಿಸಿರಲಿಲ್ಲ. ಭೂಮಿಯನ್ನು ಯಾವಾಗ ಪಡೆದರೊ ಆಹಾರದಲ್ಲಿ ವ್ಯತ್ಯಾಸ ಸ್ಪಷ್ಟವಾಗಿ ಗೋಚರಿಸಿತು.

೧೯೫೦ ರಲ್ಲಿ ಇವರ ಹೆಚ್ಚಿನ ಮನೆಗಳಲ್ಲಿ ಗಂಜಿ ಅನ್ನ, ಅನ್ನ, ಅಕ್ಕಿ ರೊಟ್ಟಿ, ರಾಗಿ ಅಂಬಲಿ ನೆಂಚಿಕೊಳ್ಳಲು ಮೆಣಸಿಕಾಯಿ ಚಟ್ನಿ, ಒಣ ಮೀನು, ಬೆಳಗಿನ ಉಪಹಾರ ಮುಗಿದಂತೆ. ಮಧ್ಯಾಹ್ನ ಇದೇ ಮುಂದುವರಿಯುತ್ತಿತ್ತು. ಹಬ್ಬ-ಹರಿದಿನಗಳಲ್ಲಿ ಮಾಂಸದ ಅಡುಗೆಯೇ ವಿಶೇಷವಾಗಿರುತ್ತಿತ್ತು.

ಇತ್ತೀಚಿನ ದಿನಗಳಲ್ಲಿ ಆರ್ಥಿಕವಾಗಿ ಸ್ವಾವಲಂಬನೆಯನ್ನು ಸಾಧಿಸಿದ ಇವರು ಬಗೆಬಗೆಯ ತಿಂಡಿಗಳನ್ನು ಮಾಡುವರು. ಇವರಿಗೆ ಪ್ರಿಯವಾದ ಆಹಾರ ಮಾಂಸ, ಮೀನು, ಕೋಳಿ, ಏಡಿ, ದಿನವು ಒಣಮೀನು ಊಟದ ಜೊತೆಗೆ ಬೇಕೆಬೇಕು. ಕೋಳಿ ಮಾಂಸ, ಕುರಿ ಮಾಂಸ, ಹಬ್ಬಕ್ಕೆ ವಿಶೇಷ ಸಂದರ್ಭದಲ್ಲಿ ಬಳಸುವರು. ಮಾಂಸ, ತರಕಾರಿ ಜೊತೆಗೆ ಹಾಲು-ತುಪ್ಪ-ಮೊಸರು ಸಹ ಉಪಯೋಗಿಸುವರು. ಹೈನುಗಾರಿಕೆಯಲ್ಲಿ ದೀವರ ಆಸಕ್ತಿ ಬಹಳ ದೊಡ್ಡದು. ಹಾಗಾಗಿ ಹಾಲು ಮೊಸರಿಗೆ ಬರ ಇಲ್ಲ. ಇವುಗಳ ಜೊತೆಯಲ್ಲಿ ಸಂಜೆಯಾಗುತ್ತಲೆ ಹೆಂಡ ಕುಡಿಯುವುದು ದೀವರಿಗೆ ಬಹಳ ಪ್ರಿಯವಾದ ಸಂಗತಿ. ಆರ್ಥಿಕ ಬದಲಾವಣೆಯ ಗಾಳಿ ಬೀಸುತ್ತಿರುವುದರಿಂದ ಬಾಗಶಃ ಗಂಜಿಯನ್ನು ಕುಡಿಯುತ್ತಿಲ್ಲ. ಅನೇಕ ಬಗೆಯ ತಿಂಡಿ ತಿನಿಸು ಮಾಡುವುದನ್ನು ಕಲಿತಿದ್ದಾರೆ. ರೊಟ್ಟಿ, ದೋಸೆ, ಇಡ್ಲಿ, ಕಡುಬು (ಎಲೆ ಕಡುಬು, ಮುಷ್ಟಿ ಕಡುಬು) ಕೊಟ್ಟೆಕಡುಬು, ಚಪಾತಿ ಇದಕ್ಕೆ ಖಾರದ ಚಟ್ನಿ, ಎಳ್ಳಿನ ಚಟ್ನಿ, ಸೊಪ್ಪಿನ ಪಲ್ಯ ಬಗೆಬಗೆಯ ತಿಂಡಿಗಳನ್ನು ತಯಾರಿಸುತ್ತಾರೆ. ಸಿಹಿಯಡುಗೆ ಎಂದರೆ ಬರಿ ಪಾಯಸ ಮಾಡುತ್ತಿದ್ದ ಇವರು ಇಂದು ಹೋಳಿಗೆ, ಕರಿಗಡಬು, ಶಾವಿಗೆ, ಬೂಂದಿ, ಕಜ್ಜಾಯ ಮುಂತಾದವುಗಳನ್ನು ಮಾಡುವರು. ಕೆಲವರು ಮದ್ಯಪಾನ ಬಿಟ್ಟರೆ ಕೆಲವರು ಕುಡಿಯುವವರು ಇದ್ದಾರೆ. ಈ ರೀತಿ ವೈವಿಧ್ಯಮಯವಾದ ಆಹಾರ ಪದ್ಧತಿ ಇದೆ.

## ೩.೯. ವೈದ್ಯ ಪದ್ಧತಿ

ವೈದ್ಯ ಪದ್ಧತಿಯಲ್ಲಿ ಮೂರು ರೀತಿಯ ಪದ್ಧತಿಗಳಿವೆ. ೧. ಹಳ್ಳಿ ಪದ್ಧತಿ (ನಾಟಿ ವೈದ್ಯ) ೨. ಆಯುರ್ವೇದ ವೈದ್ಯ ೩. ಇಂಗ್ಲಿಷ್ ವೈದ್ಯ ಪದ್ಧತಿ. ನಮ್ಮ ಪೂರ್ವಜರು ಮೊದಲ ಪದ್ಧತಿಯನ್ನು ಅಳವಡಿಸಿಕೊಂಡವರು. ನಮ್ಮ ಸುತ್ತ ಮುತ್ತಲ ಗಿಡಗಳಲ್ಲಿ ಅಪೂರ್ವವಾದ ಶಕ್ತಿ ಇದೆ ಎಂದು ನಂಬಿದವರು. ಮೊದಲ ಪದ್ಧತಿ ಈಗ ಅಸಡ್ಡೆಗೆ ಗುರಿಯಾಗಿದೆ. ಕಾರಣ ಈ ಪದ್ಧತಿಯು ನಿಗೂಢತೆಯನ್ನು ತನ್ನಲ್ಲಿಟ್ಟು ಕೊಂಡಿದೆ. ಯಾವುದೇ ಕಾರಣಕ್ಕೂ ಬೇರೆಯವರಿಗೆ ತಿಳಿಯಬಾರದೆಂಬ ಜನಪದರ ನಂಬಿಕೆಯೇ ಓೀಗಾಗಿ ಅಸಡ್ಡೆಗೆ, ಅಪಹಾಸ್ಯಕ್ಕೆ ಗುರಿಯಾಗಿದೆ. ಇನ್ನುಳಿದ ಎರಡು ಪದ್ಧತಿಗಳು ಔಷಧಿಯಲ್ಲಿ ಬಳಸುವ ವಸ್ತುಗಳನ್ನು ನಿಖರವಾಗಿ ತೋರಿಸುವುದರಿಂದ ವೈಜ್ಞಾನಿಕ ಮಾನ್ಯತೆ ಪಡೆದಿವೆ. ಹಳ್ಳಿ ವೈದ್ಯ ಸಂಪ್ರದಾಯವನ್ನು ಗೊಡ್ಡು ಸಂಪ್ರದಾಯ ಎಂಬಂತೆ ಚಿತ್ರಿಸಲಾಗುತ್ತಿದೆ. ಉಳಿದೆರಡು ಪದ್ಧತಿಗಳ ಹುಟ್ಟಿಗೆ, ಮೂಲ ಹಳ್ಳಿ ವೈದ್ಯ ಪದ್ಧತಿ ಎಂಬುದಂತು ಸತ್ಯ.

ದೀವರು ಆರೋಗ್ಯದ ಬಗ್ಗೆ ತಿಳುವಳಿಕೆ ಇರುವ ಜನಾಂಗ. ಮಲೆನಾಡಿನಲ್ಲಿ ಬರುವ ಹೆಚ್ಚಿನ ಖಾಯಿಲೆಗಳಿಗೆ ಮನೆಯಲ್ಲಿಯೇ ಮದ್ದು ತಯಾರಾಗುತ್ತದೆ. ಮನೆಯ ಹಿರಿಯರೆ ಕೆಲವು ಖಾಯಿಲೆಗಳಿಗೆ ಔಷಧಿ ತಯಾರಿಸಿ ಕೊಡುವರು. ಇವರಿಂದಾಗದೆ ಇದ್ದಾಗ ಹಳ್ಳಿ ವೈದ್ಯನಲ್ಲಿಗೆ ಹೋಗುವರು. ಶೀತ, ಚಳಿಜ್ವರ, ಹೊಟ್ಟೆ ನೋವು, ಕಜ್ಜಿ, ಪಿತ್ತ, ಕಾಲುಹುಣ್ಣು ಮುಂತಾದ ಖಾಯಿಲೆಗಳಿಗೆ ಔಷಧಿ ಮನೆಯಲ್ಲಿಯೇ ತಯಾರಾಗುತ್ತದೆ. ಮನುಷ್ಯರಿಗಲ್ಲದೆ ಪಶುಪ್ರಾಣಿಗಳಿಗೂ ಔಷಧಿ ಕೊಡುವವರೂ ಊರಿಗೊಬ್ಬರಂತೆ ಇರುವರು.

## ಪಶುರೋಗ ಚಿಕಿತ್ಸೆ

ಯಾವುದೇ ಹಳ್ಳಿವೈದ್ಯ ಔಷಧಿಗೆ ಬಳಸಿದ ವಸ್ತುಗಳನ್ನು ಯಾವ ಕಾರಣಕ್ಕೂ ಯಾರಿಗೂ ಹೇಳುವುದಿಲ್ಲ. ನಾನು ಸೂಕ್ಷ್ಮವಾಗಿ ಗಮನಿಸಿರುವುದರಿಂದ ಗಿಡಗಳ ಹೆಸರು ಗೊತ್ತಿರುವುದರಿಂದ ಕೆಲವನ್ನು ಮಾತ್ರ ಪ್ರಸ್ತಾಪಿಸಿದ್ದೇನೆ. ಹೈನುಗಾರಿಕೆಯು ದೀವರ ಆರ್ಥಿಕ ಬೆನ್ನೆಲುಬು. ಎತ್ತುಗಳು ಕೃಷಿಯಲ್ಲಿ ಪ್ರಮುಖ ಯಂತ್ರ ಗಳಾಗಿವೆ. ಇವುಗಳಿಗೆ ಹೆಚ್ಚಾಗಿ ಬರುವಂತ ಕಾಯಿಲೆ ಬಾಯಿ ಪಡೆ, ಹಲಿಗೆ, ಕಿವಿ ಹುಳಿಯುವುದು, ಕಣ್ಣಿಗೆ ಪೆಟ್ಟು ಮಾಡಿಕೊಳ್ಳುವುದು, ಕಾಲುನೋವು, ಕಾದಾಡಿ ಕೋಡು ಮುರಿದುಕೊಳ್ಳುವುದು ಮುಂತಾದವು. ದನಕರುಗಳ ಖಾಯಿಲೆಗೆ ಸಂಬಂಧಿಸಿದಂತೆ ಹಿರೆನೆಲ್ಲೂರಿನ 'ಸಿದ್ದಣ್ಣ ಬರಸಿನ'[~] ಇವರನ್ನು ಹಳ್ಳಿ ವೈದ್ಯ ಪದ್ಧತಿಯಲ್ಲಿ ಬಳಸುವ ಔಷಧಿಗೆ ಯಾವ ಗಿಡಮೂಲಿಕೆಗಳನ್ನು ಬಳಸುತ್ತೀರಿ ಎಂದು ಕೇಳಿದಾಗ, 'ಗಿಡಮೂಲಿಕೆಯ ಹೆಸರು ಹೇಳ ಬಾರದು, ಇದರ ಬಗ್ಗೆ ಆಸಕ್ತಿ ಇರುವ ವ್ಯಕ್ತಿಗೆ ಹೇಳಬಹುದು. ನಮ್ಮ ಮನೆಯವರಾಗಿರಬಹುದು ಅಥವಾ ಬೇರೆ ಯಾವ ವ್ಯಕ್ತಿಯಾದರು ಪರವಾಗಿಲ್ಲ. ವೈದ್ಯ ಪದ್ಧತಿಯನ್ನು ಮುಂದುವರಿಸಿಕೊಂಡು ಹೋಗಬೇಕು.' ಹಳ್ಳಿಯ ವೈದ್ಯರು ಗಿಡಮೂಲಿಕೆಯನ್ನು ಕಂಡ ಕಂಡವರಿಗೆಲ್ಲಾ ಹೇಳಿದರೆ ತಲೆಮಾರಿನಿಂದ ಬಂದ ವೈದ್ಯ ಸಂಪ್ರದಾಯಕ್ಕೆ ದಕ್ಕೆ ಬರುತ್ತದೆ. ಇನ್ನೊಂದು ಕಾರಣ ಪರಿಸರದಲ್ಲಿ ಕಂಡು ಬರುವ ಅಗಾಧ ಗಿಡಮೂಲಿಕೆಗಳ ಔಷಧಿ ಗುಣ ನೆನಪಿಟ್ಟುಕೊಳ್ಳದೆ, ಯಾವುದನ್ನು ಯಾವುದಾದರು ಕಾಯಿಲೆಗೆ ಕೊಟ್ಟು, ಔಷಧಿ ಮಹತ್ವ ಹಾಳು ಮಾಡುವರು ಎಂಬ ಕಾರಣವು ಇದೆ. ಕೆಲವು ಸರಳವಾಗಿರುವ ಗಿಡಮೂಲಿಕೆಯ ವಿಶೇಷವೇನು? ದನಕರುಗಳ ಕಣ್ಣಿಗೆ ಪೆಟ್ಟಾದರೆ, ಉಪ್ಪು ನೀರು ಕಲಕಿ ಕಣ್ಣಿಗೆ ಚಿಮುಕಿಸುವುದು, ಕಣ್ಣಿನ ಗುಡ್ಡೆಯ ಮೇಲೆ ಹೂವು (ಗುಡ್ಡೆ ಬಿಳಿಯಾದರೆ) ಕುಳಿತರೆ ಉಪ್ಪು, ಕಾಳಮೆಣಸು (ಬೋಳುಕಾಳು) ಬಾಯಲ್ಲಿ ಅಗೆದು ಕಣ್ಣಿಗೆ ನೇರವಾಗಿ ಬೀಳುವಂತೆ ಉಗಿಯಬೇಕು. ಅಥವಾ ಸುಗ್ಗೆಸೊಪ್ಪು, ಉಪ್ಪು ಕಿವುಚಿ, ಹಿಂಡಿ, ರಸ ತೆಗೆದು ಕಿವಿಗೆ ಬಿಡಬೇಕು. ಕೋಡು ಮುರಿದುಕೊಂಡರೆ ಕೆಮ್ಮಣ್ಣು ನೀರಿನಲ್ಲಿ ಬಿಳಿಬಟ್ಟೆ ಅದ್ದಿ ಕಟ್ಟಬೇಕು. ಕಾಲು ಉಳುಕಿದರೆ, ಮುಂಗಾಲಿನ ಸಂದಿಗೆ ಗುಡ್ಡೆಗೇರು ರಸ ತೆಗೆದು ಹಚ್ಚಿದರೆ ಆಯಿತು. ಸಾಮಾನ್ಯವಾಗಿ ಗೊತ್ತಿರುವ ಕೆಲ ಔಷಧಿಗಳನ್ನು ಹೇಳುತ್ತಾರೆ. ಕ್ಲಿಷ್ಟವಾಗಿರುವ ಗಿಡಮೂಲಿಕೆಗಳ ರಹಸ್ಯ ಬಿಟ್ಟುಕೊಡುವುದಿಲ್ಲ. ಕಾರಣ ಸ್ಪಷ್ಟ ಔಷಧಿಯ ಗುಣಲಕ್ಷಣ ಹಾಳು ಮಾಡಿಯಾರು ಎಂಬ ಕಾಳಜಿ.

## ವೈದ್ಯ ಪದ್ಧತಿ

ಈ ಜನಾಂಗದ ಮನೆಯಲ್ಲಿ ಪ್ರತಿಯೊಬ್ಬ ಹಿರಿಯ ಮಹಿಳೆ ಅಥವಾ ಯಜಮಾನ ವೈದ್ಯನೆ ಆಗಿರುವುದು ವಿಶೇಷ. ಸರಳವಾಗಿರುವ, ಪದೆ ಪದೆ ಬರುವ ಹವಾಮಾನದ ವೈಪರಿತ್ಯ ಖಾಯಿಲೆಗಳಿಗೆ ಮನೆಯಲ್ಲಿಯೇ

ಔಷಧಿ ತಯಾರಾಗುತ್ತದೆ. ಇವರಿಂದ ಸಾಧ್ಯವಿಲ್ಲದಾಗ ಊರಿನಲ್ಲಿರುವ ಪ್ರಮುಖ ನಾಟಿವೈದ್ಯನೆಂದು ಗುರುತಿಸಿದ ವ್ಯಕ್ತಿಯಲ್ಲಿಗೆ ಹೋಗಿ ಔಷಧಿ ಪಡೆದು ಬರುವರು. ಮಲೆನಾಡಿನ ಭಾಗದಲ್ಲಿ ಅತಿ ಹೆಚ್ಚು ಕಾಡುವ ಖಾಯಿಲೆ ಶೀತ, ನೆಗಡಿ, ಮಗುವಿಗೆ ಶೀತವಾದರೆ ಜೋಳ್‌ಕಾಳನ್ನು ಹಾಲಿನಲ್ಲಿ ತೇಯ್ದು ನೆಕ್ಕಿಸುವರು. ಅಡು ಮುತ್ತಲ ಎಲೆಯನ್ನು ತಲೆಗೆ ಹಾಕಿ ಕುಲಾಯಿ ಕಟ್ಟುವರು. ದೊಡ್ಡವರಿಗೆ ಶೀತವಾದರೆ ಜೋಳ್‌ಕಾಳ್ ನೀರು, ಕಷಾಯ ಮಾಡಿ ಕುಡಿಯಲು ಕೊಡುವರು. ಜೀರಿಗೆ ಕಷಾಯ ಶೀತಕ್ಕೆ ಬಹಳ ಒಳ್ಳೆಯ ಔಷಧಿ. ಮೈಯಲ್ಲಿ ತುರಿಕೆ, ಕಜ್ಜಿ ಕಾಣಿಸಿಕೊಂಡರೆ ಬಿಸಬೇವು ಸಪ್ಪಿನ ರಸ ಅಥವಾ ಉಪ್ಪು, ಅರಿಶಿನ ಹಚ್ಚಿದರೆ ಆಯಿತು. ಗದ್ದೆಯಲ್ಲಿ ಕೆಲಸ ಮಾಡುವುದರಿಂದ, ಪ್ರತಿದಿನ ನೀರಿನಲ್ಲಿ ಓಡಾಡುವುದರಿಂದ (ಮಳೆಗಾಲ) ಕಾಲಿನ ಬೆರಳ ಸಂದಿ ಕೊಳೆಯುತ್ತವೆ. ಇದಕ್ಕೆ ಗುಡ್ಡೆಗೇರು ರಸ, ಕೊಬ್ಬರಿ ಎಣ್ಣೆಯೊಂದಿಗೆ ಬೆರೆಸಿ ಬೆರಳ ಸಂಧಿಗೆ ಸವರುವರು. ಬೆರಳು ಸುತ್ತು ಎನ್ನುವ ಖಾಯಿಲೆ ಬಂದರೆ ಕಂಚಿಕಾಯಿಯಲ್ಲಿ ಬೆರಳು ತೂರಿಸಿ ಇಟ್ಟುಕೊಳ್ಳುವುದು ಒಳ್ಳೆಯದು. ಅನೇಕ ಖಾಯಿಲೆಗಳಿಗೆ ಔಷಧಿ ಕೊಡುವ ನಾಟಿ ವೈದ್ಯರು ಈ ಜನಾಂಗದಲ್ಲಿ ಇನ್ನೂ ಇದ್ದಾರೆ.

## ಮಂತ್ರ ವೈದ್ಯ

ಮನುಷ್ಯ ಯಾವುದೆ ಖಾಯಿಲೆ ಗುಣಮುಖವಾಗುವುದಾದರೆ ನಂಬಿಕೆ ಇರಬೇಕು ಎಂಬ ಮಾತು ವೈದ್ಯ ಪದ್ಧತಿಯಲ್ಲಿದೆ. 'ನಂಬಿಕೆಟ್ಟವರಿಲ್ಲವೋ' ಎಂಬ ದಾಸರ ಪದ ನೆನಪಿಗೆ ಬರುತ್ತದೆ. ನಂಬಿಕೆಯೇ ರೋಗಿಯ ರೋಗವನ್ನು ವಾಸಿಮಾಡುವ ಅವಕಾಶವು ಇದೆ. ರೋಗದ ಲಕ್ಷಣ ಎರಡು ರೀತಿಯದು. ದೇಹದ ಮೇಲಾಗುವ ಖಾಯಿಲೆ, ಮನಸ್ಸಿನ ಮೇಲಾಗುವ ಖಾಯಿಲೆ. ಈ ಮಂತ್ರವೈದ್ಯ ಮನಸ್ಸಿಗೆ ಸಂಬಂಧಿಸಿದ್ದು. ನಂಬಿಕೆಗೆ ಸಂಬಂಧಿಸಿದ್ದು, ಮಂತ್ರವೈದ್ಯದಲ್ಲಿ ದೈವದ ಸಮೀಪವರ್ತಿಗಳಾದ ಗಾಡಿಗ, ಪೂಜಾರಿ, ವೈದ್ಯರಾಗಿರುವರು. ಕೆಲವೊಂದು ಕಾಯಿಲೆಗಳಿಗೆ ಕೇರಿಯಲ್ಲಿರುವ ಕೆಲವು ಹಿರಿಯರು ಮಂತ್ರಿಸಿ ಖಾಯಿಲೆ ಗುಣಪಡಿಸುವರು. ಮನೆಯಲ್ಲಿ ಇದಕ್ಕಿದಂತೆ ಹೆದರುವುದು, ಮನೋ ಭಯ, ಆಲಸ್ಯ, ಇದರಿಂದಾಗಿ ಜ್ವರ. ಈ ಸಂದರ್ಭದಲ್ಲಿ ಮನೆಯ ಹಿರಿಯರು ಗಾಡಿಗರ, ಪೂಜಾರಿಯ ಹತ್ತಿರ ಹೋಗಿ ಪ್ರಶ್ನೆ ಕೇಳುವರು. ಅಲ್ಲಿಯ ಪ್ರಮುಖ ದೈವಗಳಾದ ಚೌಡಮ್ಮ, ಭೂತಪ್ಪ, ಅಮ್ಮ, ಮೈಯ ಮೇಲೆ ಬಂದು ಹೇಳಿಕೆ ಕೊಡುತ್ತದೆ. ಕುಕ್ಕರಗಾಲಿನಲ್ಲಿ ಕುಳಿತು ಇಡಿ ದೇಹವನ್ನು ತೂಗಿಸುತ್ತಾ, ಗಾಡಿಗನು ಹಾಡು ಹಠ್ ಎನ್ನುತ್ತಿದಂತೆ ಧ್ವನಿ ಬದಲಾಗಿ ಗಡಸಾಗುತ್ತದೆ. ಬಾಲ ಮಗುವೆ ಎಂದು ಹೂಂಕರಿಸಿ ಅಕ್ಕಿಯನ್ನು, ನಿಂಬೆಹಣ್ಣನ್ನು ಮಂತ್ರಿಸಿ ಕೊಡುವರು. ಇದಕ್ಕೂ ಖಾಯಿಲೆ ಬಗೆಹರಿಯದಿದ್ದಾಗ, ತಾಯಿತ, ದಾರ ಮಂತ್ರಿಸಿ, ದೈವಗಳಿಗೆ ಕೋಳಿ ಪೂಜೆ ಏರ್ಪಡಿಸಿ ಕೋಳಿಯನ್ನು ಕೊಯಿದು ತಲೆಯನ್ನು ಗಾಡಿಗ ತೆಗೆದುಕೊಂಡರೆ ಉಳಿದ ಭಾಗವನ್ನು ಕೆಲ ಹಿರಿಯರು ತೆಗೆದು ಕೊಳ್ಳುವರು. ಮಂತ್ರಿಸಿದ, ತಾಯಿತ, ದಾರವನ್ನು ರೋಗಿಯ ತೋಳಿಗೆ ಕಟ್ಟಿದರೆ ರೋಗಿ ಗುಣಮುಖನಾಗುತ್ತಾನೆ. ಕೆಲವು ಸಂದರ್ಭದಲ್ಲಿ ಹುಚ್ಚು ಹುಚ್ಚಾಗಿ ಆಡುವ ರೋಗಿಯನ್ನು ಗಾಡಿಗರು ಮೈಯ ಮೇಲೆ ದೈವ ಬಂದಾಗ ಕೋಲಿನಿಂದ ಹೊಡೆಯುವುದು ಇದೆ. ಮಲೆನಾಡಿನ ದೀವರ ಪ್ರಮುಖ ಗಾಡಿಗರು ಸಿದ್ದಾಪುರದ ಕೊಂಡ್ಲಿ ಅಜ್ಜಯ್ಯ, ಚಿಕ್ಕನೆಲ್ಲೂರಿನ ಗಾಡಿಗರು, ಸಾಗರ (ತಾ). ಮಣಗದ್ದೆಯ ಗಾಡಿಗರು, ಸಾಗೋಡು, ಸಾಗರ (ತಾ) ಮುಂತಾದವರು ಇರುವರು.

ಕೈಕಾಲು ಉಳುಕುವುದು, ದೃಷ್ಟಿಯಾದರೆ ಹಿರಿಯ ಹೆಂಗಸರು ಬಾಯಲ್ಲಿ ಮಿಟಿಮಿಟಿ ಮಂತ್ರ ಹೇಳುತ್ತಾ ಕುಡುಗೋಲ ತುದಿಯನ್ನು ಕೈಕಾಲು ಮೇಲೆ ಹರಿದಾಡಿಸಿ ಥೂ ಎಂದು ಉಗಿದು ಲಟಿಕೆ ತೆಗೆಯುವರು. ದೃಷ್ಟಿಯಾದರೆ ಉಪ್ಪು, ಎಲೆ, ಕಡ್ಡಿ ಹಿಡಿದು ಮುಖಕ್ಕೆ ಮೂರು ಸುತ್ತು ತಿರುಗಿಸಿ ಥೂ ಎಂದು ಒಲೆಗೆ ಹಾಕುವರು ಚಟಪಟ ಸದ್ದು ಮಾಡಿದಾಗ ಬಹಳ ಕಣ್ಣು ಆಗಿದ್ದವು ಎಂದು ಹೇಳುವರು. ಕೆಲವು ಕಾಯಿಲೆಗಳಿಗೆ ಮನೆಯ ದೈವ ಮುನಿದಿದೆ ಎಂದು ಹರಕೆ ಹೊರುವರು. ಈ ರೀತಿ ಎರಡು ವೈದ್ಯಪದ್ಧತಿ ಬಳಕೆಯಲ್ಲಿದೆ. ಒಂದರಲ್ಲಿ ಔಷಧಿಯ ಗುಣವಿರುವ ನಾಟಿ ವೈದ್ಯ ಪದ್ಧತಿ ಮತ್ತೊಂದು ಮಂತ್ರ ವೈದ್ಯ ಪದ್ಧತಿ. ಮಂತ್ರ ವೈದ್ಯದಲ್ಲಿ ಮಾನಸಿಕ ತೊಂದರೆಗೆ ಪರಿಹಾರ ಸಿಗುವಂತೆ ಮಾಡಲಾಗುತ್ತದೆ. 'ಮನಸ್ಸು' ಸರಿಯಾಗಿದ್ದರೆ ಯಾವ ಕಾಯಿಲೆ ಬರುವುದಿಲ್ಲ ಎಂಬ ಮಾತು ಸತ್ಯವಾದುದು. ಇದು ಮೂಢನಂಬಿಕೆ ಎಂದು ನಮಗನಿಸಿದರೂ ಅಲ್ಲಿಗೆ ಹೋಗಿ ಬಂದ ರೋಗಿ, ಅವರು ಮಂತ್ರಿಸಿಕೊಟ್ಟಿದ್ದರಿಂದ ಕಾಯಿಲೆ ಗುಣವಾಯಿತು ಎಂದು ನಂಬಿರುವುದರಿಂದ ನಂಬಿಕೆಯೇ ಕಾಯಿಲೆ ಗುಣಪಡಿಸುತ್ತದೆ. ಮನುಷ್ಯ ಭಯ ಬಿದ್ದಂತೆಲ್ಲಾ ಯಾವುದೋ ಅಗೋಚರ ಶಕ್ತಿಯನ್ನು ನಂಬಿ ಮುನ್ನಡೆಯುತ್ತಿದ್ದಾನೆ. ಹಾಗಾಗಿ ಇದನ್ನು ಪ್ರಶ್ನಿಸುವಂತಿಲ್ಲ.

## ಅಡಿಟಿಪ್ಪಣಿಗಳು

೧. ಸೋಮವಾರ-ಶನಿವಾರದಂದು-ಮನೆಯವರೆಲ್ಲ ಸ್ನಾನ ಮಾಡಿ ದೇವರಿಗೆ ದೀಪ ಹಚ್ಚುವರು.

೨. ಹೆಗ್ಗೋಡಿನ ಗೀಜಗದ ಭದ್ರಯ್ಯಗೌಡರವರು 'ಒರೇಂದಮರ' ಎಂದು ದೀವರ ಮರವಿತ್ತು. ಅದು ಈಗ ಮುಳಗಡೆಯಾಗಿದೆ ಎಂದು ಕ್ಷೇತ್ರಕಾರ್ಯದಲ್ಲಿ ಸ್ಪಷ್ಟಪಡಿಸಿದ್ದಾರೆ.

೩. ಮಾಹಿತಿ: ಮಧು ಗಣಪತಿರಾವ್, ಮಡೆನೂರು (ಶಿವಮೊಗ್ಗದಲ್ಲಿ ವಾಸವಾಗಿದ್ದಾರೆ)

೪. ಹೊಯ್ಲು > ಹೂಯಿಲು > ಪೊಯ್ಯುಲು. ಹುಯ್ಲು. ಹಾಯ್ಯುಲು. ಹೊಯ್ಯುಲು = ದೈವಕ್ಕೆ ಮೊರೆಯಿಡುವುದು. ಅಮ್ಮ, ಚೌಡಿ, ಭೂತಗಳು ಹೊಯ್ಲು ಸ್ವೀಕರಿಸುತ್ತವೆ

೫. ಕೋರೆಪಂಚೆ - ಕಚ್ಚೆಹಾಕಿ. ಮೊಣಕಾಲ ಮೇಲೆ ಬರುವಂತೆ ಬಿಳಿಯ ಪಂಚೆಯನ್ನು ಒಂದು ಭಾಗದ ಪೃಷ್ಠ ಕಾಣುವಂತೆ ಉಡುವುದು

೬. ಕುಲಾಯಿ - ಮಗುವಿನ ತಲೆ ಮತ್ತು ಕಿವಿ ಮುಚ್ಚುವ ಟೋಪಿಯಂತಹದು

೭. ಕೇಲು - ಅಕ್ಕಿಯನ್ನು ಹಾಕಿ ಇಡುವ ದೊಡ್ಡ ಮಣ್ಣಿನ ಗಡಿಗೆ

೮. ಬರಕಾತ - ಬರಗಾಲ, ಕ್ಷಾಮ

೯. ಹಚ್ಚೆಗೆ ತಮಿಳು, ಮಲಯಾಳಂ ಭಾಷೆಯಲ್ಲಿ ಪಚ್ಚೆ, ಪಚ್ಚ, ಪಚ ಎಂದು ಕರೆಯುವರು.

೧೦. ಕೊರಮರು ಅಲ್ಲದೆ ಕರೆಗಾರರು. ಜೆಸ್ತರು. ಕೊರವಂಜಿ. ಬ್ಯಾಡರು. ಗೊಲ್ಲರು. ಗೊಂಬೆಯಾಟದವರು. ದೊಂಬರು. ಹಚ್ಚೆ ಹುಯ್ಯುವವರು

೧೧. ದೀವರಲ್ಲಿ ಹಚ್ಚೆಯ ಚಿತ್ತಾರಗಳು, ಜೋಗಿ ಜಡೆ, ರಾಮನ ತೊಟ್ಟಿಲು, ಕೃಷ್ಣನ ತೊಟ್ಟಿಲು, ಅತ್ತುಗಿಂಡಿ, ಮುಂಗೈಹಚ್ಚೆ, ಗೊಂಬೆಸಾಲು, ಮಲ್ಲಿಗೆದಂಡೆ, ಸೀತೆಮುಡಿ, ಮುತ್ತಿನಸಾಲು, ಚೇಳು, ಹಾವು ಮುಂತಾದ ವಿನ್ಯಾಸ ಹೊಂದಿವೆ.

೧೨. ದೆಹಲಿಯ ಕಾರ್ವ ಚೌತ್ ಉತ್ಸವದಲ್ಲಿ ಮೆಹಂದಿಯನ್ನು ಕೈಗೆ ಹುಡುಗಿಯರು ಹಾಕಿಸಿಕೊಳ್ಳುತ್ತಾರೆ. ಉದ್ದೇಶ ಒಳ್ಳೆಯ ಗಂಡನನ್ನು ಕೊಡು ಶಿವನೆ ಎಂದು ದೇವರಲ್ಲಿ ಬೇಡಿಕೆ ಸಲ್ಲಿಸುತ್ತಾರೆ. (ಪ್ರಜಾವಾಣಿ, ೨೫-೧೦-೨೦೦೨)

೧೩. ಹರವು = ದಾರಿ

೧೪. ಕಚ್ಚು - ಎರಡು ಅಡಿ ಅಗಲ ಒಂದು ಅಡಿ ಎತ್ತರ

೧೫. ಒರೆ - ತೀಡು, ಉಜ್ಜು

೧೬. ಬರಸಿನ ಸಿದ್ದಣ್ಣ ನಾಟಿವೈದ್ಯ - ಹಿರೇನೆಲ್ಲೂರು, ಸಾಗರ (ತಾ) ಶಿವಮೊಗ್ಗ (ಜಿಲ್ಲಾ) ಜಾತಿ-ದೀವರು, ವಯಸ್ಸು-೬೨

## ಅಧ್ಯಾಯ ೪

# ಜೀವನಾವರ್ತನದ ಆಚರಣೆಗಳು

### ೪.೧. ಜನನ ಮತ್ತು ಬಾಣಂತನ

ಅನೇಕ ಜನಾಂಗಗಳ (ಬುಡಕಟ್ಟು) ಜನನ ಸಂಸ್ಕಾರಗಳು ಸ್ತ್ರೀ ಗರ್ಭಿಣಿಯಾದ ದಿವಸದಿಂದಲೇ ಪ್ರಾರಂಭ ವಾಗುತ್ತದೆ. ಅನೇಕ ಆಚರಣೆಗಳು ಬದುಕಿನುದ್ದಕ್ಕೂ ಜರುಗುತ್ತವೆ. ಸೂತಕ, ಮುಟ್ಟು, ಮೈಲಿಗೆಯನ್ನು ಜನಪದರು ಕಟ್ಟುನಿಟ್ಟಿನಿಂದ ಪಾಲಿಸುತ್ತಾ ಬಂದಿದ್ದಾರೆ.

ಮಾನವನ ಬದುಕಿನಲ್ಲಿ ಜನನ ಬಹಳ ಮುಖ್ಯವಾದದ್ದು. ಮಗು ಯಾವುದಾದರು ಸರಿ ತಮಗೆ ಒಳ್ಳೆಯ ಮಗು ಜನಿಸಬೇಕು ಹೆರಿಗೆ ಸುಸೂತ್ರವಾಗಿ ಆಗಬೇಕು, ಎಂಬುದು ದಂಪತಿಗಳ ಕುಟುಂಬದ ಆಸೆ-ಆಕಾಂಕ್ಷೆ ಯಾಗಿರುತ್ತದೆ.

ಜನಪದರಲ್ಲಿ ಗರ್ಭಿಣಿ ಸ್ತ್ರೀಯನ್ನು ವಿಶೇಷ ರೀತಿಯಲ್ಲಿ ನೋಡಿಕೊಳ್ಳಲಾಗುತ್ತದೆ. ಆದರೆ ದೀವ ಜನಾಂಗದಲ್ಲಿ ಮಹಿಳೆಯೇ ಕುಟುಂಬದ ಆಧಾರ ಸ್ತಂಭವಾಗಿರುವುದರಿಂದ ಹೆರಿಗೆಯ ಹಿಂದಿನ ದಿನದವರೆಗೆ ಕುಟುಂಬದ ನಿರ್ವಹಣೆಯಲ್ಲಿ ತೊಡಗಿರುತ್ತಾಳೆ. ಎಲ್ಲಾ ಜವಾಬ್ದಾರಿ ಮಹಿಳೆಯದೆ ಆಗಿರುತ್ತದೆ. ಹೀಗೆ ಕೆಲಸ ಮಾಡುವುದರಿಂದ ಹೆರಿಗೆ ಸುಲಭವಾಗಿ ಆಗುತ್ತದೆ. ಇದು ನಾಗರಿಕ ಮತ್ತು ವೈದ್ಯಕೀಯ ಪ್ರಪಂಚಕ್ಕೆ ಅಚ್ಚರಿ. ಅಲ್ಲಿಯ ನಾರಮಲ್ ಮತ್ತು ಆಪರೇಶನ್ ಡೆಲವರಿ ಎಂಬ ಪದಗಳು ಇಲ್ಲಿ ಕಾಣಬರುವುದಿಲ್ಲ. ಹೆಚ್ಚಿನ ಹೆರಿಗೆಯನ್ನು ಹಿರಿಯ ಸೂಲಗಿತ್ತಿಯರು ಮಾಡಿ ಮುಗಿಸುತ್ತಾರೆ. ಆದರೆ ಈಗ ನಾಗರೀಕತೆ ಪ್ರವೇಶ ದಿಂದಾಗಿ ಆಸ್ಪತ್ರೆಯನ್ನು ಮತ್ತು ದಾದಿಯರನ್ನು ಅವಲಂಬಿಸಿದ್ದಾರೆ.

ಜನಪದರು ಒಂಬತ್ತು ತಿಂಗಳಿಗೆ ಹೊಟ್ಟೆನೋವು ಕಾಣಿಸಿಕೊಂಡು, ಹೆರಿಗೆಯಾಗುತ್ತದೆ ಎಂದು ತಿಳಿದಿದ್ದಾರೆ. ದೀವ ಜನಾಂಗದ ಹೆಣ್ಣು ಗರ್ಭಿಣಿಯಾದಾಗ ಗಂಡನ ಮನೆಯಲ್ಲಿ ಮತ್ತು ತವರು ಮನೆಯಲ್ಲಿ ಸಂಭ್ರಮ ಪಡುತ್ತಾರೆ. ಗರ್ಭಿಣಿ ಸ್ತ್ರೀ ಆಸೆ ಪಡುವ ಎಲ್ಲಾ ಬಗೆಯ ತಿಂಡಿ ತಿನಿಸುಗಳನ್ನು ಮಾಡಿ ಬಡಿಸುತ್ತಾರೆ. ಏಳನೆಯ ತಿಂಗಳಿಗೆ ಅಥವಾ ಎಂಟನೆಯ ತಿಂಗಳಿಗೆ ತವರು ಮನೆಯವರು ಕರೆದುಕೊಂಡು ಹೋಗುತ್ತಾರೆ. ತವರು ಮನೆಯಲ್ಲಿ ಹೆರಿಗೆಯಾಗುತ್ತದೆ. ಇಂಥ ಸಮಯದಲ್ಲಿ ತಾಯಿಯ ಮನೆಯಲ್ಲಿದ್ದರೆ ಹೆಣ್ಣಿಗೆ ಆನಂದ. ಹೆಚ್ಚಿನ ಹೆರಿಗೆಗಳು ತವರುಮನೆಯಲ್ಲಿ ಆಗುತ್ತವೆ.

ಒಂಬತ್ತು ತಿಂಗಳು ಒಂಬತ್ತನೆಯ ದಿನಕ್ಕೆ ಹೆರಿಗೆ ಹೊಟ್ಟೆನೋವು ಕಾಣಿಸಿಕೊಳ್ಳುತ್ತದೆ. ನೋವು ಅಡಗಲು ಕೈ ಕಾಲು ಆಡಿಸಲು ತೊಲೆಗೆ ಹಗ್ಗ ಕಟ್ಟಿರುತ್ತಾರೆ. ಈ ಹಗ್ಗವನ್ನು ಹಿಡಿದುಕೊಂಡು ತೂಗಿದರೆ ಬೇನೆ ಸ್ವಲ್ಪ ಮಾಯವಾಗುತ್ತದೆ ಎಂಬ ಜನಪದರ ನಂಬಿಕೆಯಿದೆ. ಆಕೆಯ ಮುಖವನ್ನು ನೋಡಿ ಹೆರಿಗೆ ಇಂತಿಷ್ಟೆ ಹೊತ್ತಿಗೆ

ಆಗುತ್ತದೆ ಎಂದು ಹೇಳುತ್ತಾರೆ. ಹೊಟ್ಟೆ ಮತ್ತು ಗರ್ಭಿಣಿಯ ದಿನಚರಿಯನ್ನು ಗಮನಿಸಿ ಗಂಡು, ಹೆಣ್ಣು ಎಂಬುದನ್ನು ಹೇಳುವವರು ಇದ್ದಾರೆ. ಹೆರಿಗೆ ತೀರ ಕಷ್ಟವಾದರೆ ಆಕೆಯ ಹೊಕ್ಕಳು, ಹೊಟ್ಟೆಯ ಭಾಗ ಪೂರ್ತಿ ಹರಳೆಣ್ಣೆಯನ್ನು ಹಚ್ಚಿ ನಿಧಾನವಾಗಿ ಸವರುತ್ತಾ ಇರುತ್ತಾರೆ. ಹೀಗೆ ಮಾಡುವುದರಿಂದ ನೋವು ಕಡಿಮೆಯಾಗುತ್ತದೆ. ಹೆರಿಗೆ ಸುಲಭವಾಗಿ ಆಗಲು ಸಹಕಾರಿಯಾಗುತ್ತದೆ ಮತ್ತು ಮಗು ಅಡ್ಡವಿದ್ದರೆ ಅದು ತಿರುಗಲು ಅವಕಾಶ ಮಾಡಿಕೊಡುತ್ತದೆ.

ಹೆರಿಗೆ ಹತ್ತಿರವಾಗುತ್ತಿದ್ದಂತೆ ಆಕೆಯನ್ನು ಮನೆಯ ನೀರು ಕಾಯಿಸುವ ಜಾಗದಲ್ಲಿ ಅಥವಾ ಮನೆಯ ಒಂದು ಬೆಚ್ಚನೆಯ ಜಾಗದಲ್ಲಿ ಬಸುರಿಯನ್ನು ಕರೆತಂದು ಹೆರಿಗೆಗೆ ವ್ಯವಸ್ಥೆ ಮಾಡಲಾಗುತ್ತದೆ. ಬಸುರಿಯ ಸುತ್ತ ನಾಲ್ಕು ಅಥವಾ ಐದು ಜನ ಹೆಂಗಳೆಯರು ಕೂರಲು ಅವಕಾಶವಿದ್ದು, ಆಕೆಯ ಸುತ್ತ ಕಂಬಳಿ ಅಥವಾ ಕಣಜದ ತಟ್ಟಿಯನ್ನು ಮರೆಮಾಡಿರುತ್ತಾರೆ. ಸೂಲಗಿತ್ತಿಯರ ಹತ್ತಿರ ಮೊರ, ಕುಡಗೋಲು, ಸ್ವಚ್ಛವಾದ ಬಟ್ಟೆ ಮುಂತಾದ ಅಗತ್ಯವಸ್ತುಗಳನ್ನು ಇಟ್ಟುಕೊಂಡಿರುತ್ತಾರೆ.

ಸೂಲಗಿತ್ತಿಯರು ಹೆರುವವಳನ್ನು ಸಮಾಧಾನ ಮಾಡುತ್ತಾ ಧೈರ್ಯ ತುಂಬುತ್ತಾರೆ. ಪ್ರಮುಖ ಸೂಲಗಿತ್ತಿ ಹೊರ ಬರುತ್ತಿರುವ ಮಗುವನ್ನು ಹಿಡಿದುಕೊಂಡಿರುತ್ತಾಳೆ. ಮಗು ಹೊರ ಬಂದ ತಕ್ಷಣ ಹೊಕ್ಕಳು ಬಳ್ಳಿಯನ್ನು ಬೆರಳಿನಿಂದ ಒತ್ತಿ ಹಿಡಿದುಕೊಂಡು ಕುಡಗೋಲಿನಿಂದ[೨] ಕೊಯ್ದು ನೂಲಿನಿಂದ ಹೊಕ್ಕಳ ಬಳ್ಳಿಯನ್ನು ಕಟ್ಟಿ ಮಗುವಿನ 'ನತ್ ನೀರೊಡೆದ' ಮೇಲೆ ಮಗುವನ್ನು ಮೃದುವಾದ, ಸ್ವಚ್ಛವಾದ ಬಟ್ಟೆಯಿಂದ ಒರೆಸಿ, ಮೊರದಲ್ಲಿರುವ ಮೆತ್ತನೆಯ ಬಟ್ಟೆಯ ಮೇಲೆ ಮಲಗಿಸಲಾಗುತ್ತದೆ.[೩] ಮಗುವಿನ ಬಾಯಿಗೆ ಜೇನು ತುಪ್ಪ, ಅಥವಾ ಬತ್ತಿಸಿದ ಜೀರಿಗೆ ನೀರು, ಜೋಳ್‌ಕಾಳ್ ನೀರು, ಎಳ್ಳೆಣ್ಣೆ ಯಾವುದಾದರು ಒಂದನ್ನು ಬೆರಳಿಗೆ ಅದ್ದಿಕೊಂಡು ಮಗುವಿಗೆ ಚೀಪಿಸುತ್ತಾರೆ. ಮೂರು ದಿನದವರೆಗೆ ತಾಯಿಗೆ ಎದೆ ಹಾಲು ಬರುವುದಿಲ್ಲ ಅಲ್ಲಿಯವರೆಗೆ ಚೀಪಿಸುತ್ತಾರೆ. ಮಗುವಿನ ಹೊಕ್ಕಳಿಗೆ ಎಣ್ಣೆ ಹಚ್ಚುತ್ತಾರೆ. ತಾಯಿಯ ಹೊಕ್ಕುಳಿಗೆ ಎಣ್ಣೆಯನ್ನು ಹಚ್ಚುವರು. ಹೀಗೆ ಮಾಡುವುದರಿಂದ 'ಮಾಸ'[೪] ಬೀಳುತ್ತದೆ. ಈ ಮಾಸ(ಕಸ)ವನ್ನು ಯಾವ ಪ್ರಾಣಿ ತಿನ್ನಬಾರದೆಂದು ಬಚ್ಚಲು ಹರಿಯುವ ನೀರಿನ ಜಾಗದಲ್ಲಿ ಅಥವಾ ಪಾತ್ರೆ ತೊಳೆಯುವ ಜಾಗದಲ್ಲಿ ಒಂದು ಮಡಕೆಗೆ ತುಂಬಿ ಹುಗಿಯುತ್ತಾರೆ.

ತಾಯಿಗೆ ಬಿಸಿ ನೀರಿನ ಸ್ನಾನವನ್ನು ದಿನಕ್ಕೆರಡು ಬಾರಿ ಎರೆಯಲಾಗುತ್ತದೆ. ಮಗುವಿನ ಹೊಕ್ಕಳು ಏಳೆಂಟು ದಿನಗಳಲ್ಲಿ ಒಣಗಿ ಬೀಳುತ್ತದೆ. ಇದನ್ನು ಒಂದು ಸಣ್ಣ ಮಣ್ಣಿನ ಕುಡಿಕೆಗೆ ಹಾಕಿ ಗದ್ದೆಯಲ್ಲಿ ಅಥವಾ ಅಡಿಕೆ ತೋಟದಲ್ಲಿ ಅಥವಾ ತೆಂಗಿನ ಮರದ ಬುಡದ ಕೆಳಗೆ ಹುಗಿಯುವರು.

ಮೂರನೆಯ ದಿನ ತಾಯಿ ಮಗುವಿಗೆ ಎರಡನೆಯ ಬಿಸಿ ನೀರಿನ ಸ್ನಾನ ಮಾಡಿಸುತ್ತಾರೆ. ಬಾಣಂತಿಗೆ ಒಂದು ಹಂಡೆ ಬಿಸಿ ನೀರನ್ನು ಎರೆಯಲಾಗುತ್ತದೆ. ಮಗುವಿಗೆ ಉಗುರು ಬೆಚ್ಚನೆಯ ನೀರನ್ನು ಸ್ನಾನಕ್ಕೆ ಬಳಸಲಾಗುತ್ತದೆ. ಮಗುವಿಗೆ ಎಣ್ಣೆಯನ್ನು ಕಿವಿ, ತಲೆಗೆ, ಇಡಿ ದೇಹಕ್ಕೆ ಹಚ್ಚಿ ಸ್ನಾನ ಮಾಡಿಸಲಾಗುತ್ತದೆ. ಎಣ್ಣೆ ಸ್ನಾನ ಮಗುವಿನ ಆರೋಗ್ಯದಾಯಕ ಬೆಳವಣಿಗೆಗೆ ಸಹಕಾರಿ.

ಹೆರಿಗೆಯಾದ ಸ್ಥಳವನ್ನು ಸಾರಿಸಿ ರಂಗೋಲಿ ಇಟ್ಟು ಮೊರ-ಕುಡಗೋಲನ್ನು ಇಟ್ಟು ಪೂಜೆ ಮಾಡುತ್ತಾರೆ. ಮಗುವಿಗೆ ಜೇನು ತುಪ್ಪ, ಜೀರಿಗೆ ಕಾಯಿಸಿದ ಬತ್ತಿದ ನೀರು, ಎಳ್ಳೆಣ್ಣೆ ಯಾವುದಾದರು ಒಂದನ್ನು ಚೀಪಿಸಲಾಗುತ್ತದೆ. ತಾಯಿಗೆ ಮೊಲೆಹಾಲು ಬಂದಿದರೆ ಅದನ್ನು ಕೊಡಲಾಗುತ್ತದೆ. ಬಾಣಂತಿಗೆ, ಅನ್ನ, ಜೋಳಕಾಳ್ ಮೆಣಸಿನ ಸಾರು, (ಕಾಳಮೆಣಸು, ಕರಿಮೆಣಸು) ಒಣಕೊಬ್ಬರಿ, ಕಾದಾರಿದ ನೀರು ಕೊಡಲಾಗುತ್ತದೆ. ಜೋಳಕಾಳ್ ಮೆಣಸಿನ ಸಾರು ಬಾಣಂತಿಗೆ ಸುಸ್ತನ್ನು ಹೋಗಲಾಡಿಸುತ್ತದೆ. ಸಾರಿಗೆ ಸ್ವಲ್ಪ ಉಪ್ಪನ್ನು ಹಾಕಿಕೊಳ್ಳಬಹುದು. ತಣ್ಣೀರನ್ನು ಬಾಣಂತಿ ಮುಟ್ಟುವಂತೆ ಇರಲಿಲ್ಲ.

ಹನ್ನೊಂದನೆಯ ದಿನ ಸೂತಕ ಕಳೆಯುತ್ತಾರೆ. ನಂತರ ಬಾಣಂತಿಗೆ ಎಲ್ಲಾ ತರಹದ ತರಕಾರಿ, ಕಾಳು, ಮುಂತಾದವುಗಳಿಂದ ಮಾಡಿದ ಪದಾರ್ಥ ತಿನ್ನಬಹುದು. ಬಾಣಂತಿಯು ಮಗುವಿಗೆ ಹಾಲು ಕೊಡುವಾಗ ಒಣ ಕೊಬ್ಬರಿ, ಎಲೆ ಅಡಿಕೆ ಮೆಲ್ಲುತ್ತಿರುತ್ತಾಳೆ." ಹಾಲು ಸರಾಗವಾಗಿ ಮಗು ಕುಡಿಯಲು ತೊಡಗುತ್ತದೆ. ಸೂತಕ ಕಳೆಯುವ ದಿನ ಎರಡು ಕಡೆಯ ಸಂಬಂಧಿಕರನ್ನು ಕರೆಯಲಾಗಿರುತ್ತದೆ. ಮಗುವನ್ನು ಅಂದೆ ತೊಟ್ಟಿಲಿಗೆ ಹಾಕಲಾಗುತ್ತದೆ. ಬೆತ್ತದ ತೊಟ್ಟಿಲಿಗೆ ಹಾಕುತ್ತಾರೆ. ನಂತರ ಮರದ ತೊಟ್ಟಿಲು, ಕಬ್ಬಿಣದ ತೊಟ್ಟಿಲು ಯಾವುದಾದರು ಒಂದು ಬಳಸಬಹುದು. ಇದಕ್ಕೆ ತೊಟ್ಟಿಲು ಶಾಸ್ತ್ರ. ಹನ್ನೊಂದನೆಯ ನಂತರ ಕೋಳಿ, ಆಡು ಮಾಂಸ ಮಾತ್ರ ತಿನ್ನಬಹುದು. ಉಳಿದ ಯಾವ ಪ್ರಾಣಿಯ ಮಾಂಸ ತಿನ್ನುವಂತೆ ಇಲ್ಲ. ಕಾರಣ ಉಳಿದ ಪ್ರಾಣಿಯ ಮಾಂಸ ಶೀತವಾಗುತ್ತದೆ ಎಂದು.

ಮಗುವಿಗೆ ಶೀತವಾದರೆ ಕಾಳ್ ಮೆಣಸಿನ ಕಾಳು, ಬಜೆ, ಜಾಯಿಕಾಯಿ, ಜೀರಿಗೆ, ಯಾಲಕ್ಕಿ, ಲವಂಗ, ವೀಳ್ಯದೆಲೆ ರಸ, ಯಾವುದಾದರೊಂದು ತೆಗೆದುಕೊಂಡು ಎದೆಹಾಲನ್ನು ತೆಗೆದುಕೊಂಡು ಅರೆದು ವಳ್ಳೆಯಲ್ಲಿ ಕುಡಿಸಲಾಗುತ್ತದೆ. ತಾಯಿ ಮಗುವಿಗೆ ಸಂಜೆ ಒಟಳೆ ತೆಗೆಯಲಾಗುತ್ತದೆ. ದೃಷ್ಟಿ ತೆಗೆಯುವ ಹಿರಿಯಜ್ಜಿಗಳಿಂದ ದೃಷ್ಟಿ ತೆಗೆಯಿಸುತ್ತಾರೆ. ವೀಳ್ಯದೆಲೆ, ಕುಡಗೋಲು ಮುಖಾಂತರ ದೃಷ್ಟಿ ತೆಗೆದು ನಟಿಕೆ (ತಲೆಗೆ ಬೆರಳುಗಳನ್ನು ಒತ್ತುವುದು) ತೆಗೆಯುತ್ತಾರೆ. ಬೆರಳು ಒತ್ತುವಾಗ ಶಬ್ದವಾದರೆ ಬಹಳ ದೃಷ್ಟಿ ತಾಕಿದೆ ಎಂದರ್ಥ.

ಮಗುವಿಗೆ ಥಂಡಿ (ಶೀತ) ಅಥವಾ ಜ್ವರ, ನಂಜು ಆದರೆ ಆಡುಮುತ್ತಲ ಎಲೆ ಕಾಯಿಸಿ ನೆತ್ತಿಗೆ ಇಡಲಾಗುತ್ತದೆ. ಅರಸಿನ ಪುಡಿಯನ್ನು ಬಿಸಿ ಮಾಡಿ ನೆತ್ತಿಗೆ ಹಾಕುತ್ತಾರೆ. ಬಜೆಯನ್ನು ಕಲ್ಲಿನ ಮೇಲೆ ತೆಯ್ದು ವೀಳ್ಯದೆಲೆಗೆ ಹಾಕಿಕೊಂಡು ಕೈಯೆಣ್ಣೆ ದೀಪದ ಕುಡಿಯಿಂದ ಎಲೆಯ ಅಡಿಯನ್ನು ಕಾಯಿಸಿ, ಹೀಗೆ ಕಾಯಿಸಿದ ಬಿಸಿ ಬಿಸಿ ಬಜೆಯನ್ನು ಮಗುವಿನ ನೆತ್ತಿ ಮತ್ತು ಹಣೆಗೆ ಹಚ್ಚುತ್ತಾರೆ. ಸಂಜೆ ಬೆಳಗ್ಗೆ ಕವಡಿ ಲೋಬಾನವನ್ನು ತೊಟ್ಟಿಲ ಕೆಳಭಾಗದಲ್ಲಿ ಹೊಗೆ ಹಿಡಿಯಲಾಗುತ್ತದೆ. ಸೊಳ್ಳೆ, ನುಸಿ, ಮುಂತಾದವು ಇದರಿಂದ ಕಂಚಿ ಕೀಳುತ್ತವೆ. ಕವಡಿ ಲೋಬಾನ ಹಾಕುವ ಹಿತ್ತಾಳೆ, ಅಥವಾ ಕಂಚಿನ ಧೂಪಾರತಿ ಮಲೆನಾಡಿನ ಎಲ್ಲಾ ಮನೆಯಲ್ಲೂ ಕಾಣಬಹುದು.

ಬಾಣಂತಿ ಎಲೆ ಅಡಿಕೆಯೊಡನೆ ಯಾಲಕ್ಕಿ, ಪಾದಕ್ಕಿ, ಲವಂಗ, ಪತ್ರೆ ಹಾಕಿಕೊಂಡು ಅಗಿಯುತ್ತಾಳೆ. ಹೀಗೆ ಮಾಡುವುದರಿಂದ ಬಾಣಂತಿಗೆ ಶೀತವನ್ನು ಹೋಗಲಾಡಿಸುತ್ತದೆ. ತಲೆಗೆ ಬಟ್ಟೆ ಕಟ್ಟಿಕೊಳ್ಳುವುದು ಎಳೆ

ಬಿಸಿಲು ಕಾಯಿಸುವುದು. ಮೈಕೈಗೆ ಅರಸಿನ ಹಚ್ಚಿಕೊಳ್ಳುವುದು. ಮಗುವಿನ ಬಟ್ಟೆ ಬದಲಾಯಿಸುತ್ತಾ ಇರಬೇಕು. ಮಳೆಗಾಲದಲ್ಲಿ ಹೆರಿಗೆಯಾಗುವುದನ್ನು ತಪ್ಪಿಸಲು ಆಷಾಢ ಮಾಸದ ನೆಪ ನವ ದಂಪತಿಗಳಿಗೆ ಹಿರಿಯರು ಕಡ್ಡಾಯ ಮಾಡಿರುವುದು. ಬಾಣಂತಿಯೊಂದಿಗೆ ಸಂಬಂಧ ಹೊಂದಬಾರದು ಎಂದು ಗಂಡನನ್ನು ಹೆಂಡತಿಯಿಂದ ದೂರ ಇಟ್ಟಿರುತ್ತಾರೆ. ಹೆರಿಗೆಯಾದ ತರುಣದಲ್ಲಿ ಗಂಡ-ಹೆಂಡತಿ ಒಂದುಗೂಡಿದರೆ 'ಬಾಣಂತಿಸನ್ನಿ' ಆಗುತ್ತದೆ ಆದ್ದರಿಂದ ಸೂತಕದ ನೆಪ ಹೇಳಿ ಗಂಡನನ್ನು ದೂರ ಇಟ್ಟಿರುತ್ತಾರೆ.

ಆದರೆ ಜಾನಪದರಲ್ಲಿ ಈಗ ನಾಗರಿಕತೆಯ ಪ್ರವೇಶದಿಂದಾಗಿ ಹೆರಿಗೆ ಎಂಬುದು ಆಸ್ಪತ್ರೆಯ ನಾಲ್ಕು ಗೋಡೆಯ ಮಧ್ಯೆ ನಡೆಯುತ್ತದೆ. ವೈದ್ಯರ ಸಲಹೆಯನ್ನು ಬಾಣಂತಿ ಮತ್ತು ಮಗುವಿನ ಆರೈಕೆಯಲ್ಲಿ ಪಡೆಯ ಲಾಗುತ್ತಿದೆ. ಮೊದಲು ವೈದ್ಯಕೀಯ ಭಾಷೆಯ 'ನಾರ್ಮಲ್ ಡೆಲಿವರಿ' ಜಾನಪದರಲ್ಲಿ ನಡೆಯುತ್ತಿತ್ತು. ಇದಕ್ಕೆ ಗರ್ಭಿಣಿ ಸ್ತ್ರೀ ಶ್ರಮದ ಕೆಲಸವನ್ನು ಮಾಡುತ್ತಿದ್ದರಿಂದ ಈಗ ಆಸ್ಪತ್ರೆಯಲ್ಲಿ ಹೆರಿಗೆಯಾಗುವುದರಿಂದ ಸಣ್ಣ ಸಣ್ಣ ಕಾಯಿಲೆಗೆ ಬಳಸುತ್ತಿದ್ದ ಮನೆಯ ವೈದ್ಯ ಪದ್ಧತಿ ಮಾಯವಾಗುತ್ತಿದೆ. ಈ ಬದಲಾವಣೆ ಜನಪದರ ಬದುಕಿನಲ್ಲಿ ಆಗುತ್ತಿರುವುದು ಒಂದು ರೀತಿಯಲ್ಲಿ ಇವರು ಪರಾವಲಂಬಿಯಾಗುತ್ತಿದ್ದಾರೆ ಎನಿಸದಿರದು.

## ಸೂತಕ

ದೀವ ಜನಾಂಗದಲ್ಲಿ ಜನನ ಮತ್ತು ಮರಣಗಳಿಗೆ ಸಂಬಂಧಿಸಿದಂತೆ ಸೂತಕ ಕಳೆಯಲಾಗುತ್ತದೆ. ಒಂದು ಶುಭ ಸೂತಕವಾದರೆ ಇನ್ನೊಂದು ಅಶುಭ ಸೂತಕ. ಮೈನೆರೆಯುವುದು, ಹೆರುವುದು ಶುಭ ಸೂತಕವಾದರೆ, ಮರಣ ಅಶುಭ ಸೂತಕ. ಜನನದ ಸೂತಕ ಗಂಡನ ಮನೆಯಲ್ಲಿ ಮತ್ತು ಹೆರಿಗೆಯಾದ ಸೂತಕ ತವರು ಮನೆಯಲ್ಲಿ ಆಚರಿಸಲಾಗುತ್ತದೆ. ಹೆರಿಗೆಯಾದ ಮಾರನೆಯ ದಿನ ಇಡಿಮನೆಯನ್ನು ಸಾರಿಸಿ, ಬಟ್ಟೆ ಬರಿ ತೊಳೆದು ಸ್ನಾನಾದಿಗಳನ್ನು ಮಾಡಿ ಮನೆಯ ದೇವರಿಗೆ, ಊರಿನಲ್ಲಿರುವ ಚೌಡಿ ಮುಂತಾದ ದೇವರುಗಳಿಗೆ ಹಣ್ಣುಕಾಯಿ ಒಡೆಸಲಾಗುತ್ತದೆ. ಸೂತಕವನ್ನು ಮಾರನೆಯ ದಿನ ಅಥವಾ ಹನ್ನೊಂದನೆಯ ದಿನ ಆಚರಿಸ ಲಾಗುತ್ತದೆ. ಹಳೆಯ ಮಡಕೆ, ಹರಿದ ಚಾಪೆಗಳನ್ನು ಎಸೆಯಲಾಗುತ್ತದೆ. ಯಥಾ ಪ್ರಕಾರ ದಿನನಿತ್ಯದಂತೆ ಅಡುಗೆ ಮಾಡಲಾಗುತ್ತದೆ. ಇಲ್ಲಿ ಊಟ ಮುಖ್ಯವಲ್ಲ. ಸ್ವಚ್ಛತೆ ಮುಖ್ಯ.

ಅವಿಭಕ್ತ ಕುಟುಂಬಗಳು ವಿಭಕ್ತ ಕುಟುಂಬಗಳಾಗುತ್ತಿರುವುದರಿಂದ ಈ ದಾಯಾದಿ ಕುಟುಂಬಗಳಿಗೆಲ್ಲ ಸೂತಕ ಬರುತ್ತದೆ. ಹಬ್ಬಹರಿದಿನಗಳಿದ್ದರೆ ನಿಲ್ಲಿಸಿ ಬೇರೆ ದಿನ ಆಚರಿಸಬೇಕು. ಗ್ರಾಮ ದೇವತೆಗಳ ಹಬ್ಬದಲ್ಲಿ ಮೆರವಣಿಗೆ ಬಾಗಿಲ ಹತ್ತಿರ ಹಾದು ಹೋಗುವಾಗ ಹಣ್ಣುಕಾಯಿ ಒಡೆಯಿಸುವುದಿಲ್ಲ. ದೇವರ ಮೆರವಣಿಗೆ ಯಲ್ಲಿರುವವರು ಈ ಮನೆಗಳ ಮುಂದೆ ನಿಲ್ಲಿಸುವುದಿಲ್ಲ. ಸೂತಕವಿರುವ ಮನೆಯಿಂದ ಶುಭಕಾರ್ಯಗಳು ದೂರ ಉಳಿಯುತ್ತವೆ.

## ಮಗು ಹೊಸಲು ದಾಟುವುದು

ಮಗುವಿನ ಪ್ರತಿಯೊಂದು ಬೆಳವಣಿಗೆಯನ್ನು ಜನಪದರನ್ನು ಗಮನಿಸುತ್ತಾರೆ. ಮಗು ಮೊದಲು ಮಗ್ಗು ಲಾಗಿ ಹೊರಳುತ್ತದೆ. ಸ್ವಲ್ಪ ದಿನಗಳ ನಂತರ ಹೊಟ್ಟೆಯನ್ನು ನೆಲಕ್ಕೆ ಹಾಕಿ ಜೀಕುತ್ತದೆ. ಹೀಗೆ ಬದಲಾವಣೆ

ಹೊಂದುತ್ತಾ ಅಂಬೆಗಾಲು ಹಾಕಿ ಅತ್ತಿಂದಿತ್ತ ಸರಿದಾಡುತ್ತದೆ. ನಂತರ ಗೋಡೆಯನ್ನು ಹಿಡಿದುಕೊಂಡು ಅತ್ತಿಂದಿತ್ತ ಓಡಾಡುತ್ತಾ, ಪುಟ್ಟ ಪುಟ್ಟ ಹೆಜ್ಜೆಯನ್ನು ಇಡಲು ಶುರುಮಾಡುತ್ತದೆ. ಈ ಎಲ್ಲಾ ಹಂತಗಳ ಬದಲಾವಣೆ ತಾಯಿಗೆ ಸಂತೋಷ ಕೊಡುತ್ತದೆ. ಮನೆ ಮಂದಿಯಲ್ಲ ಈ ಬೆಳವಣಿಗೆಯನ್ನು ಸಂತಸದಿಂದ ಗಮನಿಸುತ್ತಾರೆ.

ಮಗು ಅಂಬೆಗಾಲಿಕ್ಕುತ ನಡೆದಾಡುವ ಚೈತನ್ಯ ಪಡೆದಾಗ ಮಗು ಬಾಣಂತಿ ಕೋಣೆಯಿಂದ ಈಚೆಗೆ ಬಂದು ಹೊಸಲು ದಾಟುತ್ತದೆ. ಹೀಗೆ ಮೊದಲ ಸಲ ಹೊಸಲು ದಾಟಿದಾಗ ಹೊಸಲಿಗೆ ಕಾಯಿ ಒಡೆದು, ಪೂಜೆ ಮಾಡಲಾಗುತ್ತದೆ. ಮಗು ಅತ್ತಿಂದಿತ್ತ ಓಡಾಡುವಾಗ ತೊಂದರೆ ಆಗದಿರಲೆಂದು ಪೂಜೆ ಮಾಡುತ್ತಾಳೆ. ಹೊಸಲಿನ ಎದುರು ಮಗುವನ್ನು ಕೂರಿಸಿ ಓಕುಳಿ ತೆಗೆಯಲಾಗುತ್ತದೆ. ದೃಷ್ಟಿ ತಾಕದಿರಲೆಂದು ದೃಷ್ಟಿ ತೆಗೆಯಲಾಗುವುದು. ಜನಪದರಲ್ಲಿ ಹೊಸಲಿಗೆ ಮಹತ್ವದ ಸ್ಥಾನವಿದೆ. ಹಬ್ಬ ಹರಿದಿನಗಳಲ್ಲಿ ಹೊಸಲಿಗೆ ವಿಶೇಷ ಪೂಜೆ ಮಾಡಲಾಗುತ್ತದೆ. ದಿನಃಪ್ರತಿ ಮುಂಜಾನೆ ಬಾಗಿಲ ಹೊಸಲನ್ನು ಒದ್ದೆ ಬಟ್ಟೆಯಿಂದ ಸಾರಿಸಿ, ರಂಗೋಲಿ ಇಟ್ಟು, ಅರಿಸಿನ ಕುಂಕುಮ ಹಚ್ಚಿ ಹೂವನ್ನು ಆಕಡೆ ಈ ಕಡೆ ಇಡಲಾಗುತ್ತದೆ. ಹಬ್ಬಗಳಲ್ಲಿ ಎರಡು ಕಡೆ ಒಂದೊಂದು ಹಣತೆ ದೀಪವನ್ನು ಹಚ್ಚಿಡುತ್ತಾರೆ.

ಮನೆಯೊಳಗಿಂದ ಯಾರಾದರೂ ಹೊರಗೆ ಹೊರಡುವ ಸಂದರ್ಭದಲ್ಲಿ ಹೊಸಲು ಎಡವಿದರೆ, ಬಾಗಿಲ ಪಟ್ಟಿ ತಲೆಗೆ ತಾಗಿದರೆ, ಕೂತು ಹೊರಡುತ್ತಾರೆ. ಶುಭ ಕಾರ್ಯವಾಗಿದ್ದರೆ ಅದು ನೆರವೇರುವುದಿಲ್ಲ ಎಂಬ ನಂಬಿಕೆ ಇದೆ. ಕೆಲವರು ಪ್ರಯಾಣ ರದ್ದು ಮಾಡುವುದು ಇದೆ. ಮನೆಯ ಸೊಸೆ ಮೊದಲ ಸಲ ಬರುವಾಗ ಹೊಸಲು ಪೂಜೆ ಮಾಡಿಸಿ ಬಲಗಾಲನ್ನು ಒಳಹಾಕಿ ಬರಬೇಕೆಂದು ಹೇಳುತ್ತಾರೆ. ಹೊಸಲು ಮೇಲೆ ನಿಲ್ಲುವುದಾಗಲಿ, ಕೂರುವುದಾಗಲಿ ಮಾಡುವುದನ್ನು ತೀವ್ರವಾಗಿ ಆಕ್ಷೇಪಿಸಲಾಗುತ್ತದೆ.

ಆದರೆ ಹಳ್ಳಿಗಳಲ್ಲೂ ನಗರದ ತಾರಸಿ ಮನೆಯ ಅನುಕರಣೆ ಹೆಚ್ಚಾಗಿದ್ದು, ಇವುಗಳಿಗೆ ಬಹುತೇಕ ಮನೆಗಳ ಬಾಗಿಲು ಚೌಕಟ್ಟುಗಳಿಗೆ ಹೊಸಲು ಇರುವುದಿಲ್ಲ. ಇಂದು ಹೊಸಲಿನ ಪವಿತ್ರತೆಯನ್ನು ಕಳೆದು ಕೊಳ್ಳುವತ್ತ ಸಾಗುತ್ತಿದೆ.

### ತೊಟ್ಟಿಲು ಶಾಸ್ತ್ರ

ಮಗು ಹುಟ್ಟಿದ ಒಂದು ತಿಂಗಳಿಗೆ ಸರಿಯಾಗಿ ತೊಟ್ಟಿಲು ಹಾಕುವ ಶಾಸ್ತ್ರ ಮಾಡಲಾಗುತ್ತದೆ. ತವರು ಮನೆಯವರು ಚಿತ್ತಾರದ ಹೊಸ ತೊಟ್ಟಿಲನ್ನು ತರುತ್ತಾರೆ. ಜೀಗರನ್ನು ಕರೆಯಲಾಗುತ್ತದೆ. ಎರಡು ಕಡೆ ಹೊಸಬಟ್ಟೆಗಳನ್ನು ಮಗುವಿಗೆ ತರಲಾಗುತ್ತದೆ. ಕಾಲಿಗೆ ಕಾಲ್ಗಡಗ, ಸೊಂಟಕ್ಕೆ ಚೈನು ಮುಂತಾದವುಗಳನ್ನು ತರುತ್ತಾರೆ. ಊರಿನಲ್ಲಿರುವ ಪುರೋಹಿತರನ್ನು ಕೇಳಿ ದಿನ ನಿಗದಿ ಮಾಡಲಾಗಿರುತ್ತದೆ. ಇದೇ ದಿನ ನಾಮಕರಣವನ್ನು ಇಟ್ಟುಕೊಂಡಿರುತ್ತಾರೆ. ದೀವರ ಜನಾಂಗದವರ ಹೆಚ್ಚಿನ ಹೆಸರುಗಳು ಮನೆದೇವರುಗಳ ಹೆಸರನ್ನು ಒಳಗೊಂಡಿರುತ್ತದೆ. ಶಿಕಾರಿಪುರದ ಹುಚ್ಚುರಾಯ, ಚಂದ್ರಗುತ್ತಿಯ ರೇಣುಕಮ್ಮ, ತಿರುಪತಿಯ ತಿಮ್ಮಪ್ಪ, ಇನ್ನಿತರ ದೇವರುಗಳಾದ ಚೌಡಮ್ಮ, ಭೂತಪ್ಪ, ಧರ್ಮಸ್ಥಳದ ಮಂಜುನಾಥ, ಅಣ್ಣಪ್ಪ ಹೀಗೆ ಪುರೋಹಿತರು ಸೂಚಿಸಿದ

ಅಕ್ಷರ ಮತ್ತು ಮನೆಯ ದೇವರನ್ನು ನೋಡಿ ಹೆಸರಿಡಲಾಗುತ್ತದೆ. ಮನೆಯ ದೇವರಿಗೆ ಹರಕೆ ಕೂಡ ಹೊರಲಾಗುತ್ತದೆ.

ನಂತರ ಸ್ವಲ್ಪ ದಿನಗಳಾದ ಮೇಲೆ ತೊಟ್ಟಿಲು ತವರು ಮನೆಯಿಂದ ಗಂಡನ ಮನೆಗೆ ಬರುತ್ತದೆ. ಬರುವಾಗ ಬಣ್ಣದ ತೊಟ್ಟಿಲು, (ಶೃಂಗಾರ ಮಾಡಿದ ಗಾಡಿಯಲ್ಲಿ) ಮಗು, ತಾಯಿ, ಅಜ್ಜಿ, ಸೋದರಮಾವ ಎಲ್ಲರು ಗಂಡನ ಮನೆಗೆ ಬರುತ್ತಾರೆ. ತೊಟ್ಟಿಲನ್ನು ಬಾಗಿಲಿನ ಹತ್ತಿರ ಪೂಜೆ ಮಾಡಿ ಒಳಗಡೆ ತಗೆದುಕೊಂಡು ಹೋಗಿ ದೇವರ ಮುಂದಿಟ್ಟು ಪೂಜಿಸಿ ಮಧ್ಯಮನೆಯ ಒಂದು ಭಾಗದಲ್ಲಿ ತೊಟ್ಟಿಲು ಕಟ್ಟಲಾಗುತ್ತದೆ. ಮಗುವಿನ ತಾಯಿಗು ಅಲ್ಲೆ ಮಲಗುವ ವ್ಯವಸ್ಥೆ ಮಾಡಲಾಗುತ್ತದೆ. ಗಂಡಿನ ಮನೆಯವರು ತೊಟ್ಟಿಲು ಹೊತ್ತುಕೊಂಡು ಬಂದ ಸಹೋದರ ಮಾವನಿಗೆ ಬಟ್ಟೆ, ಟವಲು ಕೊಡಲಾಗುತ್ತದೆ. ಇದು ಅವರವರ ಶಕ್ತಿಯನ್ನು ಅವಲಂಬಿಸಿರುತ್ತದೆ. ಒಂದು ಹಬ್ಬದ ವಾತಾವರಣ ನಿರ್ಮಾಣವಾಗಿರುತ್ತದೆ.

### ಚೌವಳ

ಮಗುವಿಗೆ ಒಂದು ವರ್ಷ ಅಥವಾ ಮೂರು ವರ್ಷ ತುಂಬುವುದರ ಒಳಗೆ ಅವರವರ ಕುಲದೇವರಿಗೆ ಹರಕೆ ಹೊತ್ತಿರುವಂತೆ ಮಾಡಿ ಕೊಡುತ್ತಾರೆ. ಆಯಾ ಊರಿನ ಸಮೀಪ ನಡೆಯುವ ಪ್ರಮುಖ ಜಾತ್ರೆಯಲ್ಲಿ ಬಂದು ಚೌವಳ್ ಮಾಡಿಸುತ್ತಾರೆ. ಸೊರಬದಲ್ಲಿ ಹೊಳೆಜಾತ್ರೆ, ಚಂದ್ರಗುತ್ತಿ ಅಮ್ಮನ ಜಾತ್ರೆ, ಶಿಕಾರಿಪುರದ ಹುಚ್ಚುರಾಯನ ತೇರು, ಹಿರೇಸೆಲ್ಲೂರು ಕೆರೆ ಜಾತ್ರೆ, ಮುಂತಾದ ಕಡೆಯಲ್ಲಿ ದೇವರಿಗೆ ಮುಡಿ ಒಪ್ಪಿಸುತ್ತಾರೆ. ಇತ್ತೀಚಿನ ಒಂದೆರಡು ದಶಕಗಳಲ್ಲಿ ಧರ್ಮಸ್ಥಳದ ಮಂಜುನಾಥ ಸ್ವಾಮಿಯ ಸನ್ನಿಧಿಯಲ್ಲಿ ಮುಡಿ ಒಪ್ಪಿಸು ವುದು ಉಂಟು. ಹಾಗು ಕ್ಷೌರಿಕನನ್ನು ಮನೆಗೆ ಕರೆಯಿಸಿ ದೇವರಿಗೆ ಹರಕೆ ಹೊತ್ತು ಮನೆಯಲ್ಲಿಯೇ ಚೌವಳ ಮಾಡಿಸುತ್ತಾರೆ. ಕುಲದೇವರಿರುವ ಊರಿಗೆ, ಜಾತ್ರೆಗೆ ಅಥವಾ ಮನೆಗೆ ಅನುಕೂಲವಾದ ದಿನದಂದು ಮಗುವನ್ನು ಗಂಡ, ಹೆಂಡತಿ, ಸಹೋದರ ಮಾವ ಎಲ್ಲರು ದೇವಸ್ಥಾನಕ್ಕೆ ಬರುತ್ತಾರೆ. ದೇವಸ್ಥಾನದ ವತಿಯಿಂದ ಕ್ಷೌರಿಕ ನೇಮಿಸಲ್ಪಟ್ಟಿರುತ್ತಾನೆ. ಮಗುವನ್ನು ಒಂದೆಡೆ ಕೂರಿಸಿ, ಅದರ ತಲೆಯ ಕೂದಲಿಗೆ ನೀರು ಸವರಿ ನುಣ್ಣಗೆ ಬೋಳಿಸಲಾಗುತ್ತದೆ. ಕ್ಷೌರಿಕನಿಗೆ ಎಲೆ ಅಡಿಕೆ, ಹೊಸ ಬಟ್ಟೆ ಕೊಡಲಾಗುತ್ತದೆ. ದೇವಸ್ಥಾನದ ಸಮೀಪ ನೀರಿನ ವ್ಯವಸ್ಥೆಯಿದ್ದರೆ ಸ್ನಾನ ಮಾಡಿಸಿ, ಹೊಸ ಬಟ್ಟೆ ತೊಡಿಸಿ, ಮಗುವಿನ ಕೈಯಿಂದ ದೇವರಿಗೆ ಹರಕೆ ಒಪ್ಪಿಸಿ ಊರಿಗೆ ಬಂದು ಬಂಧುಬಳಗ ಎಲ್ಲಾ ಸೇರಿ ಮಗುವನ್ನು ಕೂರಿಸಿ ಆರತಿ ತೆಗೆಯುತ್ತಾರೆ. ಅಂದು ಸಿಹಿ ಊಟ ಇರುತ್ತದೆ. ಚೌಡಮ್ಮ, ಭೂತಪ್ಪ ಮುಂತಾದ ಶಕ್ತಿದೇವತೆಗೆ ಹರಕೆ ಹೊತ್ತವರು ಅಂದು ಕೋಳಿ ಮಾಂಸದ ಊಟವು ಇರುತ್ತದೆ. ಹೆಚ್ಚಾಗಿ ಶುಭಕಾರ್ಯದಲ್ಲಿ ಮಾಂಸದೂಟಮಾಡುವುದಿಲ್ಲ. ಹರಕೆಯನ್ನು ಕಟ್ಟಿದ್ದರೆ ಮಾತ್ರ ಮಾಂಸದೂಟವಿರುತ್ತದೆ.

### ಮಗುವಿಗೆ ದೃಷ್ಟಿ ದೋಷ ತೆಗೆಯುವುದು

ಮಗು ಹುಟ್ಟಿದಾಗಿನಿಂದ ಪ್ರಾಯಕ್ಕೆ ಬರುವವರೆಗೂ ದೃಷ್ಟಿ ತೆಗೆಯುವುದು ದೀವರಲ್ಲಿ ವಾಡಿಕೆಯಾಗಿದೆ. ಜಾನಪದರಲ್ಲಿ ಎಲ್ಲಾ ಕಡೆ ಕಂಡು ಬಂದರು ಇವರು ದೃಷ್ಟಿ ತೆಗೆಯುವುದು ವಿಶೇಷವಾಗಿದೆ. ದೃಷ್ಟಿ ತೆಗೆಯುವ

ಅಕ್ಷರ ಮತ್ತು ಮನೆಯ ದೇವರನ್ನು ನೋಡಿ ಹೆಸರಿಡಲಾಗುತ್ತದೆ. ಮನೆಯ ದೇವರಿಗೆ ಹರಕೆ ಕೂಡ ಹೊರಲಾಗುತ್ತದೆ.

ನಂತರ ಸ್ವಲ್ಪ ದಿನಗಳಾದ ಮೇಲೆ ತೊಟ್ಟಿಲು ತವರು ಮನೆಯಿಂದ ಗಂಡನ ಮನೆಗೆ ಬರುತ್ತದೆ. ಬರುವಾಗ ಬಣ್ಣದ ತೊಟ್ಟಿಲು, (ಶೃಂಗಾರ ಮಾಡಿದ ಗಾಡಿಯಲ್ಲಿ) ಮಗು, ತಾಯಿ, ಅಜ್ಜಿ, ಸೋದರಮಾವ ಎಲ್ಲರು ಗಂಡನ ಮನೆಗೆ ಬರುತ್ತಾರೆ. ತೊಟ್ಟಿಲನ್ನು ಬಾಗಿಲಿನ ಹತ್ತಿರ ಪೂಜೆ ಮಾಡಿ ಒಳಗಡೆ ತಗೆದುಕೊಂಡು ಹೋಗಿ ದೇವರ ಮುಂದಿಟ್ಟು ಪೂಜಿಸಿ ಮಧ್ಯಮನೆಯ ಒಂದು ಭಾಗದಲ್ಲಿ ತೊಟ್ಟಿಲು ಕಟ್ಟಲಾಗುತ್ತದೆ. ಮಗುವಿನ ತಾಯಿಗು ಅಲ್ಲೆ ಮಲಗುವ ವ್ಯವಸ್ಥೆ ಮಾಡಲಾಗುತ್ತದೆ. ಗಂಡಿನ ಮನೆಯವರು ತೊಟ್ಟಿಲು ಹೊತ್ತುಕೊಂಡು ಬಂದ ಸಹೋದರ ಮಾವನಿಗೆ ಬಟ್ಟೆ, ಟವಲು ಕೊಡಲಾಗುತ್ತದೆ. ಇದು ಅವರವರ ಶಕ್ತಿಯನ್ನು ಅವಲಂಬಿಸಿರುತ್ತದೆ. ಒಂದು ಹಬ್ಬದ ವಾತಾವರಣ ನಿರ್ಮಾಣವಾಗಿರುತ್ತದೆ.

## ಚೌವಳ

ಮಗುವಿಗೆ ಒಂದು ವರ್ಷ ಅಥವಾ ಮೂರು ವರ್ಷ ತುಂಬುವುದರ ಒಳಗೆ ಅವರವರ ಕುಲದೇವರಿಗೆ ಹರಕೆ ಹೊತ್ತಿರುವಂತೆ ಮಾಡಿ ಕೊಡುತ್ತಾರೆ. ಆಯಾ ಊರಿನ ಸಮೀಪ ನಡೆಯುವ ಪ್ರಮುಖ ಜಾತ್ರೆಯಲ್ಲಿ ಬಂದು ಚೌವಳ್ ಮಾಡಿಸುತ್ತಾರೆ. ಸೊರಬದಲ್ಲಿ ಹೊಳೆಜಾತ್ರೆ, ಚಂದ್ರಗುತ್ತಿ ಅಮ್ಮನ ಜಾತ್ರೆ, ಶಿಕಾರಿಪುರದ ಹುಚ್ಚುರಾಯನ ತೇರು, ಹಿರೇನೆಲ್ಲೂರು ಕೆರೆ ಜಾತ್ರೆ, ಮುಂತಾದ ಕಡೆಯಲ್ಲಿ ದೇವರಿಗೆ ಮುಡಿ ಒಪ್ಪಿಸುತ್ತಾರೆ. ಇತ್ತೀಚಿನ ಒಂದೆರಡು ದಶಕಗಳಲ್ಲಿ ಧರ್ಮಸ್ಥಳದ ಮಂಜುನಾಥ ಸ್ವಾಮಿಯ ಸನ್ನಿಧಿಯಲ್ಲಿ ಮುಡಿ ಒಪ್ಪಿಸು ವುದು ಉಂಟು. ಹಾಗು ಕ್ಷೌರಿಕನನ್ನು ಮನೆಗೆ ಕರೆಯಿಸಿ ದೇವರಿಗೆ ಹರಕೆ ಹೊತ್ತು ಮನೆಯಲ್ಲಿಯೇ ಚೌವಳ ಮಾಡಿಸುತ್ತಾರೆ. ಕುಲದೇವರಿರುವ ಊರಿಗೆ, ಜಾತ್ರೆಗೆ ಅಥವಾ ಮನೆಗೆ ಅನುಕೂಲವಾದ ದಿನದಂದು ಮಗುವನ್ನು ಗಂಡ, ಹೆಂಡತಿ, ಸಹೋದರ ಮಾವ ಎಲ್ಲರು ದೇವಸ್ಥಾನಕ್ಕೆ ಬರುತ್ತಾರೆ. ದೇವಸ್ಥಾನದ ವತಿಯಿಂದ ಕ್ಷೌರಿಕ ನೇಮಿಸಲ್ಪಟ್ಟಿರುತ್ತಾನೆ. ಮಗುವನ್ನು ಒಂದೆಡೆ ಕೂರಿಸಿ, ಅದರ ತಲೆಯ ಕೂದಲಿಗೆ ನೀರು ಸವರಿ ನುಣ್ಣಗೆ ಬೋಳಿಸಲಾಗುತ್ತದೆ. ಕ್ಷೌರಿಕನಿಗೆ ಎಲೆ ಅಡಿಕೆ, ಹೊಸ ಬಟ್ಟೆ ಕೊಡಲಾಗುತ್ತದೆ. ದೇವಸ್ಥಾನದ ಸಮೀಪ ನೀರಿನ ವ್ಯವಸ್ಥೆಯಿದ್ದರೆ ಸ್ನಾನ ಮಾಡಿಸಿ, ಹೊಸ ಬಟ್ಟೆ ತೊಡಿಸಿ, ಮಗುವಿನ ಕೈಯಿಂದ ದೇವರಿಗೆ ಹರಕೆ ಒಪ್ಪಿಸಿ ಊರಿಗೆ ಬಂದು ಬಂದುಬಳಗ ಎಲ್ಲಾ ಸೇರಿ ಮಗುವನ್ನು ಕೂರಿಸಿ ಆರತಿ ತೆಗೆಯುತ್ತಾರೆ. ಅಂದು ಸಿಹಿ ಊಟ ಇರುತ್ತದೆ. ಚೌಡಮ್ಮ, ಭೂತಪ್ಪ ಮುಂತಾದ ಶಕ್ತಿದೇವತೆಗೆ ಹರಕೆ ಹೊತ್ತವರು ಅಂದು ಕೋಳಿ ಮಾಂಸದ ಊಟವು ಇರುತ್ತದೆ. ಹೆಚ್ಚಾಗಿ ಶುಭಕಾರ್ಯದಲ್ಲಿ ಮಾಂಸದೂಟಮಾಡುವುದಿಲ್ಲ. ಹರಕೆಯನ್ನು ಕಟ್ಟಿದ್ದರೆ ಮಾತ್ರ ಮಾಂಸದೂಟವಿರುತ್ತದೆ.

## ಮಗುವಿಗೆ ದೃಷ್ಟಿ ದೋಷ ತೆಗೆಯುವುದು

ಮಗು ಹುಟ್ಟಿದಾಗಿನಿಂದ ಪ್ರಾಯಕ್ಕೆ ಬರುವವರೆಗೂ ದೃಷ್ಟಿ ತೆಗೆಯುವುದು ದೀವರಲ್ಲಿ ವಾಡಿಕೆಯಾಗಿದೆ. ಜಾನಪದರಲ್ಲಿ ಎಲ್ಲಾ ಕಡೆ ಕಂಡು ಬಂದರು ಇವರು ದೃಷ್ಟಿ ತೆಗೆಯುವುದು ವಿಶೇಷವಾಗಿದೆ. ದೃಷ್ಟಿ ತೆಗೆಯುವ

ವಯಸ್ಸಾದ ಹೆಂಗಸರು ಈ ಜನಾಂಗದಲ್ಲಿರುತ್ತಾರೆ. ಮಗುವು ಹೆದರಿದ ಸಂದರ್ಭದಲ್ಲಿ ರಾತ್ರಿಯಿಡಿ ಅಳುತ್ತದೆ. ಇಂತಹ ಸಂದರ್ಭದಲ್ಲಿ ಇವರಿಗೆ ಹೇಳಲಾಗುತ್ತದೆ. ಇವರು ವೀಳ್ಯದೆಲೆಯನ್ನು ತೆಗೆದುಕೊಂಡು ಮೂರು ಸುತ್ತು ಮುಖದ ಸುತ್ತ ನಿವಾಳಿಸಿ ಕೆಂಡದ ಮೇಲೆ ಹಾಕುತ್ತಾರೆ. ಅದು ಚಟಪಟ ಸದ್ದು ಮಾಡುತ್ತದೆ. ಜಾಸ್ತಿ ಸದ್ದು ಮಾಡಿದರೆ ಯಾರದೋ ಕೆಟ್ಟ ಕಣ್ಣು ತಾಕಿದೆ ಎಂದು ತಿಳಿಯಲಾಗುತ್ತದೆ. ಇನ್ನೊಂದು ಎಲೆಯನ್ನು ತೆಗೆದುಕೊಂಡು ಹಣತೆ ದೀಪದ ಸುಳಿಗೆ ಎಲೆಯ ಒಂದು ಭಾಗವನ್ನು ಸ್ವಲ್ಪ ಹೊತ್ತು ಹಿಡಿದಾಗ ಎಲೆಯ ಒಂದು ಭಾಗದಲ್ಲಿ ಕಪ್ಪು ಶೇಖರಣೆಯಾಗುತ್ತದೆ. ಈ ಕಪ್ಪನ್ನು ಮಗುವಿನ ಹಣೆಗೆ, ಗಲ್ಲಕ್ಕೆ ಇಡಲಾಗುತ್ತದೆ. ನಂತರ ದೃಷ್ಟಿ ತೆಗೆದವರಿಗೆ ನೆತ್ತಿಗೆ ಎಣ್ಣೆ ಹಾಕಿ, ಎಲೆ ಅಡಿಕೆ ಕೊಡಲಾಗುತ್ತದೆ. ಸಂಜೆ ಮಗುವನ್ನು ಹೊಸ್ತಿಲ ಮುಂಭಾಗದಲ್ಲಿ ಕೂರಿಸಿ ಓಕುಳಿ ಆರತಿ ಮಾಡಿ, ಓಕುಳಿಯನ್ನು ಹಾದಿಯ ಬದಿಗೆ ಚೆಲ್ಲಲಾಗುತ್ತದೆ. (ಓಕುಳಿ-ಅರಸಿಣ ಕುಂಕುಮ, ಸುಣ್ಣ, ಮಿಶ್ರಿತ ನೀರು, ವೀಳ್ಯದೆಲೆ ಅಡಿಕೆ, ಹೂ ಮುಂತಾದವುಗಳನ್ನು ಒಳಗೊಂಡಿರುತ್ತದೆ).

ಮಗುವು ಆಟ ಆಡುವಾಗ ಏತಕ್ಕಾಗಿಯೋ ಭಯಗೊಂಡು ಬೆಚ್ಚಿ ಬೀಳುತ್ತಿರುತ್ತವೆ. ಜ್ವರ ಬಂದು ಅಳಲು ಆರಂಭಿಸುತ್ತವೆ. ಇಂತ ಸಂದರ್ಭದಲ್ಲಿ ರಂಜು (ರಂಜು) ತೆಗೆಯುತ್ತಾರೆ. ಮಗುವು ಊಟ ಮಾಡಿದ ತಟ್ಟೆಗೆ, ಕಂಚಿನ ಲೋಟ ಅಥವಾ ತಂಬಿಗೆಗೆ ಕೆಂಡ, ಮೆಣಸಿನಕಾಯಿ, ಉಪ್ಪು ಹಾಕಿ ಲೋಟವನ್ನು ಊಟದ ತಟ್ಟೆಗೆ ಜೋರಲಾಗಿ ಹಾಕಲಾಗುತ್ತದೆ. ತಟ್ಟೆಯಲ್ಲಿರುವ ನೀರು ಗೊಡಗೊಡ ಶಬ್ದ ಮಾಡಿ ಲೋಟ ತಟ್ಟೆಯನ್ನು ಬಿಗಿಯಾಗಿ ಹಿಡಿದಿರುತ್ತದೆ. ಮಾರನೆಯ ದಿನ ಅದನ್ನು ತೆಂಗಿನ ಮರಕ್ಕೆ ಚೆಲ್ಲಿ ತೊಳೆಯಲಾಗುತ್ತದೆ. 'ಶಬ್ದ ಮಾಡಿ ತಟ್ಟೆಯನ್ನು ಬಿಗಿಯಾಗಿ' ಹಿಡಿದುಕೊಂಡರೆ ಮಗು ಬಹಳ ಹೆದರಿದೆ, ಎಂದು ನೀರನ್ನು ಮುಖಕ್ಕೆ ಚಿಮುಕಿಸಿ ಸಮಾಧಾನಿಸಲಾಗುತ್ತದೆ. ನಂತರ ಮೆಣಸಿನಕಾಯಿ, ಕಸಪೊರಕೆಯ ಕಡ್ಡಿ, ಉಪ್ಪು ಕೈಯಲ್ಲಿ ಹಿಡಿದುಕೊಂಡು ಮುಖದ ಸುತ್ತ ನಿವಾಳಿಸಿ ಒಲೆಗೆ ಹಾಕಲಾಗುತ್ತದೆ. ಅದು ಚಟಪಟ ಸದ್ದು ಮಾಡುತ್ತದೆ. ಇದನ್ನೆಲ್ಲ ಪಿಳಿಪಿಳಿ ಕಣ್ಣು ಬಿಡುತ್ತಾ ನೋಡುತ್ತಿರುವ ಮಗು ಭಯದ ಆಘಾತವನ್ನು ಬಿಟ್ಟು ಈ ವಾತಾವರಣಕ್ಕೆ ಹೊಂದಿಕೊಳ್ಳುತ್ತದೆ.

ಸಂಜೆಯಾಗಿ ರಾತ್ರಿ ಸಮೀಪಿಸುತ್ತಿದ್ದಂತೆ ಮಗುವು ಅಳುತ್ತಿದ್ದರೆ ಬೆಂಕಿ ಕೆಂಡಗಳನ್ನು ಹೆಂಚಿಗೆ ಅಥವಾ ತಾಟಿಗೆ ಹಾಕಿಕೊಂಡು ಮಗುವನ್ನು ಬಾಗಿಲಲ್ಲಿ ಕೂರಿಸಿ ಮೂರು ಸುತ್ತು ನಿವಾಳಿಸಿ ಕೆಂಡ ಆರಿದ ಮೇಲೆ ಅದನ್ನು ತೆಗೆದು ಕೊಂಡು ಹೋಗಿ ಮೂರು ಹಾದಿ ಕೂಡಿದ ಜಾಗದಲ್ಲಿ ಹಾಕುತ್ತಾರೆ.

ಮಗುವಿಗೆ ದೃಷ್ಟಿಯಾಗದರಲೆಂದು ಕಪ್ಪು ದಾರವನ್ನು ಕೈಯಿಗೆ, ಕುತ್ತಿಗೆಗೆ ಕಟ್ಟುತ್ತಾರೆ. ಕಪ್ಪು ಮಣಿ, ಹವಳದ ಮಣಿಯನ್ನು ಪೋಣಿಸಿ ಕೈಯಿಗೆ ಕಟ್ಟುವರು. ಚೇಳನ್ನು ಹಿಡಿದು ಸಾಯಿಸಿ ಅದು ಒಂದೆರಡು ದಿನ ಆದ ಮೇಲೆ ಚೇಳಿನ ಬಾಲದ ಕೊಂಡಿಯಲ್ಲಿ ತೂತುಗಳಿರುವ ಕಪ್ಪು ಮಣಿಗಳಿರುತ್ತವೆ. ಇದನ್ನು ದಾರಕ್ಕೆ ಪೋಣಿಸಿ ಕಟ್ಟುವರು. ಪುರೋಹಿತರು ಮಂತ್ರಿಸಿದ ಚೀಟಿ, ದೀವರ ಗಾಡಿಗರು ಮಂತ್ರಿಸಿದ ಬೂದಿ, ತಾಯಿತವನ್ನು ಕೊರಳಿಗೆ ಕಟ್ಟುತ್ತಾರೆ. ಮಗುವಿಗೆ ಬರುವ ಭಯದ ಜ್ವರಕ್ಕೆ ಬೆಚ್ಚಿ ಬೀಳುವುದಕ್ಕೆ, ದೀವರ ಜನಾಂಗದಲ್ಲಿ ಈ ರೀತಿಯಾಗಿ ದೃಷ್ಟಿ ತೆಗೆಯಲಾಗುತ್ತದೆ.

ವರ್ಷದ ನಂತರ ಗಂಡು-ಹೆಣ್ಣು ಮಗುವಿಗೆ ಕಿವಿ ಚುಚ್ಚಲಾಗುತ್ತದೆ. ಜಾತ್ರೆಯ ಸಂದರ್ಭದಲ್ಲಿ ಕ್ಷೌರಿಕರಂತೆ ಅಕ್ಕಸಾಲಿಗರು ಬಂದಿರುತ್ತಾರೆ. ಗಂಡು ಮಕ್ಕಳಿಗೆ ಕಿವಿ ಚುಚ್ಚಿದರೆ, ಹೆಣ್ಣು ಮಕ್ಕಳಿಗೆ ಕಿವಿ ಚುಚ್ಚುವುದರ ಜೊತೆಗೆ ಮೂಗು ಚುಚ್ಚಲಾಗುತ್ತದೆ. ಹಿಂದೆ ಗಂಡು ಮಗುವಿಗೆ ನಕ್ಷತ್ರಕಡ್ಡಿಯನ್ನು ಹಾಕುತ್ತಿದ್ದರು. ಗಂಡಸರ ಕಿವಿಯಲ್ಲಿಯು ಓಲೆಗಳಿರುತ್ತಿದ್ದವು. ಇವು ಹೆಂಗಸರು ಧರಿಸುವ ಬೆಂಡೋಲೆಯಂತಿರದೆ, 'ಒಂಟಿ' ಎಂದು ಕರೆಯುವ ಈ ವಿಶೇಷ ಓಲೆ ಗಂಡಸರ ಆಭರಣವಾಗಿತ್ತು. ಇದು ಈಗ ಕಣ್ಮರೆಯಾಗುತ್ತಿದೆ. ಕಿವಿ ಚುಚ್ಚಿದ ಅಕ್ಕಸಾಲಿಗರಿಗೆ ಅಕ್ಕಿ, ಎಲೆ, ಅಡಿಕೆ, ದುಡ್ಡು ಕೊಡಲಾಗುತ್ತದೆ.

## ೪.೨. ಋತುಮತಿಯಾಗುವುದು

ಸಾಮಾನ್ಯವಾಗಿ ಹೆಣ್ಣು ಮಕ್ಕಳು ಹನ್ನೆರಡರಿಂದ ಹದಿನೈದು ವರ್ಷದೊಳಗೆ ಮೈನೆರೆಯುತ್ತಾರೆ. ಈ ದೈಹಿಕವಾದ ಬೆಳವಣಿಗೆ ಆ ಹೆಣ್ಣು ಮಗುವಿಗೆ ಅನಿರೀಕ್ಷಿತವಾಗಿರುತ್ತದೆ. ಒಂದು ರೀತಿಯ ಭಯ, ನಾಚಿಕೆ, ಕಳವಳ ಉಂಟಾಗುತ್ತದೆ. ಸಮಾಜದಲ್ಲಿ ಇಂತಹ ಬೆಳವಣಿಗೆಯನ್ನು ಆಕೆ ಗಮನಿಸಿರುವುದರಿಂದ ಮನೆಯ ಹೊರಗೆ ಬಚ್ಚಲು ಮನೆಯಲ್ಲೊ, ಕಟ್ಟೆಯ ತುದಿಯಲ್ಲೊ ಬಂದು ಕುಳಿತಾಗ, ಈ ಸೂಕ್ಷ್ಮವೆಲ್ಲಾ ಆ ಹೆತ್ತ ತಾಯಿಗೆ ಗೊತ್ತಾಗುತ್ತದೆ. ಜನಪದರು ಈ ರೀತಿಯ ಘಟನೆಯನ್ನು ಮೈಲಿಗೆ ಎಂದು ತಿಳಿಯುತ್ತಾರೆ.

ಹೆತ್ತ ತಾಯಿ ಅಕ್ಕಪಕ್ಕದ ಹೆಂಗಳೆಯರನ್ನು ಕರೆದು ಬಿಸಿನೀರಿನ ಸ್ನಾನ ಮಾಡಿಸಿ, ಸಂಜೆ ಶಾಸ್ತ್ರ ಮಾಡುತ್ತಾರೆ. ಮೂರು ದಿನಗಳಾದ ಮೇಲೆ ಹೊಸ ಬಟ್ಟೆ ತಂದು ಮನೆಯೆಲ್ಲಾ ಸಾರಿಸಿ ಪಾತ್ರೆ ಪಗಡ ತೊಳೆದು ಸ್ನಾನ ಮಾಡಿಸಿ, ಹಸೆಗೋಡೆಯ ಕೆಳಗೆ ಕೂರಿಸಿ ಪದಹೇಳಿ ಆಕೆಗೆ ಧೈರ್ಯ ತುಂಬುವ ಕಸಿವಿಸಿ ಮಾಯಮಾಡುವ ಹಾಡುಗಳನ್ನು ಹೇಳಲಾಗುತ್ತದೆ. ಮೈ ನೆರೆದ ಹುಡುಗಿಗೆ ಪೌಷ್ಟಿಕ ಆಹಾರ ಕೊಡಲಾಗುತ್ತದೆ. ಈಗ ಮೂರು ದಿನಗಳ ಶಾಸ್ತ್ರ ಮಾಡುವುದಿಲ್ಲ. ಮುಟ್ಟಾದ ದಿನ ಬಿಸಿನೀರಿನ ಸ್ನಾನ ಮಾಡಿಸಿ ಮನೆಯಲ್ಲ ಸಾರಿಸಿ ಮಗಳನ್ನು ಒಳಗೆ ಕರೆದು ಕೊಳ್ಳಲಾಗುತ್ತದೆ. ಮಗಳು ಕಸಿವಿಸಿಕೊಳ್ಳುತ್ತಾಳೆ ಎಂದು ಕೆಲವು ಭಾಗದಲ್ಲಿ ಅಕ್ಕಪಕ್ಕದವರನ್ನು ಕರೆಯಲು ಹೋಗುವುದಿಲ್ಲ.

ಅಲ್ಲದೆ ದೀವರ ಮಹಿಳೆ ಕೃಷಿ, ಹೈನುಗಾರಿಕೆ, ಮನೆವಾರ್ತೆ ಮುಂತಾದ ಎಲ್ಲಾ ಕೆಲಸದಲ್ಲಿಯು ಈಕೆಯ ಪಾತ್ರ ಬಹಳ ದೊಡ್ಡದು. ಹಾಗಾಗಿ ಇಂತಹ ಶಾಸ್ತ್ರಗಳನ್ನು ಸಂಕ್ಷಿಪ್ತವಾಗಿ ಮಾಡಲಾಗುತ್ತದೆ.

ಕೆಲವೊಂದು ಪ್ರದೇಶಗಳಲ್ಲಿ 'ಸೊಪ್ಪು ಹಾಕುವುದು' 'ಗುಡ್ಲು ಕೊಡುವುದು' ಎಂದು ಕರೆಯುತ್ತಾರೆ. (ಒಕ್ಕಲಿಗ, ಹಿಂದುಳಿದ ಜನಾಂಗದಲ್ಲಿ ಮೈಸೂರು, ಮಂಡ್ಯ) ಮನೆಯ ಹೊರಗೆ ಐದು ಬಗೆಯ ಸೊಪ್ಪಿನ ಸಣ್ಣ ಗುಡಿಸಲನ್ನು ನಿರ್ಮಿಸಿಕೊಂಡು ಅದರಲ್ಲಿ ಕೂರಿಸಲಾಗುತ್ತದೆ. ತೆಂಗಿನ ಗರಿಯ ಚಪ್ಪರ ಹಾಕಿ ಐದು ಬಗೆಯ ಸೊಪ್ಪು ಸಿಗಿಸಲಾಗುತ್ತದೆ. ಈ ರೀತಿಯ ಸಂಪ್ರದಾಯ ಮಾಯವಾಗಿ ಮನೆಯ ಒಂದು ಮೂಲೆಯಲ್ಲಿ ಪ್ರತ್ಯೇಕವಾಗಿ ಹೆಣ್ಣನ್ನು ಮಲಗಿಸಲಾಗುತ್ತದೆ. ಈ ಪದ್ಧತಿ ಹೆಚ್ಚು ಕಡಿಮೆ ಎಲ್ಲಾ ಜನಪದರಲ್ಲಿಯು ಇದೆ.

"ನಿಂಬಿಯ ಮರದಡಿಗೆ ರಂಭೆ ಮೈ ನೆರೆದಾಳೊ
ನಿಂಬಿಯ ಸೊಪ್ಪು ಬರಬೇಕು ನಮ್ಮನೆಯ
ಕಂದ ಮೈನೆರೆದ ಗುಡಲೀಗೆ "

ಎಂದು ಸಂದರ್ಭಕ್ಕೆ ತಕ್ಕಂತೆ ಹಾಡುತ್ತಾರೆ.

ಕೆಲಭಾಗದ ಹಳ್ಳಿಯ ದೀವರು ಋತುಮತಿ ಕಾರ್ಯವನ್ನು ಆಚರಿಸುವುದಿಲ್ಲ. ಯಾರಿಗೂ ಗೊತ್ತು ಕೊಡುವುದಿಲ್ಲ. ನಗರ ಮತ್ತು ನಗರ ಸಮೀಪ ಇರುವ ಹಳ್ಳಿಗಳಲ್ಲಿ ಆಚರಿಸುತ್ತಾರೆ. ಹೆಣ್ಣಿನ ಜೀವನದಲ್ಲಿ ಬುದ್ಧಿ ತಿಳಿದ ಮೇಲೆ ಆಚರಿಸುವ ಮೊಟ್ಟಮೊದಲ ಶಾಸ್ತ್ರ ಇದಾಗಿದೆ. ಹುಡುಗಾಟಿಕೆಯಿಂದ ಬೆಳೆದ ಆಕೆಗೆ ಪ್ರೌಢಕಳೆ ಒದಗಿದಂತಹ ಘಟನೆ ಹೆಣ್ಣಿಗೆ ಜವಾಬ್ದಾರಿಯ ಮೊದಲ ತಿರುವು ಇದಾಗಿದೆ. ಸ್ವತಂತ್ರಕ್ಕೆ ಧಕ್ಕೆಯಾಗಿ ಕಟ್ಟು ಪಾಡುಗಳಿಗೆ ಒಳಗಾಗುತ್ತಾಳೆ. ಮಾತನಾಡುವಾಗ ನಯ ನಾಜೂಕು ಬಳಸಬೇಕಾಗುತ್ತದೆ. ಆಕೆಯ ಬದುಕಿನಲ್ಲಿ ಮೊದಲ ಬಾರಿಗೆ ಅಂಜಿಕೆ, ನಯನಾಜೂಕು ಅವಳನ್ನು ಆವರಿಸುತ್ತದೆ. ನಗರ ಪ್ರದೇಶಗಳ ದೀವರು ಋತುಮತಿ ಯಾದ ಹುಡುಗಿಯನ್ನು ಕೂರಿಸಿ ಆರತಿ ಎತ್ತುತ್ತಾರೆ. ನೆಂಟರನ್ನು, ಸ್ನೇಹಿತರನ್ನು ಕರೆದು ಊಟ ಹಾಕಿಸುತ್ತಾರೆ. ಆದರೆ ಎಷ್ಟೋ ರೈತ ಕುಟುಂಬದಲ್ಲಿ ಮೈನೆರೆದ ಹೆಣ್ಣು ಮಕ್ಕಳನ್ನು ಶಾಲಾ ಕಾಲೇಜುಗಳಿಂದ ಬಿಡಿಸಿಬಿಡುತ್ತಾರೆ. ಈಗ ನಾಗರೀಕ ಜಗತ್ತಿಗೆ ಹೊಂದಿಕೊಳ್ಳುವುದರಿಂದ ಈ ರೀತಿ ಮಾಡುವುದಿಲ್ಲ.

## ೪.೩. ವಿವಾಹ

### ಹೆಣ್ಣು ನೋಡುವುದು

ಪ್ರತಿಯೊಂದು ಜನಾಂಗಗಳು ತಮ್ಮದೇ ಆದ ಸಂಪ್ರದಾಯ ಆಚರಣೆಗಳ ಮೂಲಕ ಮದುವೆ ಮಾಡುವುದನ್ನು ಪ್ರಾಚೀನ ಕಾಲದಿಂದಲೂ ಮುಂದುವರಿಸಿಕೊಂಡು ಬಂದಿವೆ. ಮದುವೆ ಎಂಬುದು ಸ್ವರ್ಗದಲ್ಲಿ ನಿರ್ಧಾರವಾಗಿರುತ್ತದೆ ಎಂಬ ಕಲ್ಪನೆ ಇದೆ. ಲೋಕದಲ್ಲಿ ಒಂದು ಗಂಡಿಗೆ ಒಂದು ಹೆಣ್ಣು ಎಂದು ಸೃಷ್ಟಿಯಾಗಿರುತ್ತದೆ. ಮದುವೆಯಾಗಿ ಮಕ್ಕಳನ್ನು ಪಡೆದರೆ ಮುಕ್ತಿ ದೊರಕುತ್ತದೆ. ಜನ್ಮ ಸಾರ್ಥಕವಾಯಿತು ಎಂಬ ನಂಬಿಕೆ ಇದೆ. ಗಂಡು ಹೆಣ್ಣಿನ ವಿವಾಹ ಅನುಬಂಧವನ್ನು ಸಂಸಾರ ಎಂಬ 'ರಥ'ಕ್ಕೆ ಹೋಲಿಸಲಾಗಿದೆ. ರಥ-ಸಂಸಾರ-ಬದುಕು ಆದರೆ ಅದು ಮುಂದುವರಿಯಬೇಕಾದರೆ ಗಂಡು-ಹೆಣ್ಣು ಎಂಬ ಗಾಲಿಗಳ ಅವಶ್ಯಕತೆ ಇದೆ. ಹೀಗೆ ಗಂಡು-ಹೆಣ್ಣು ಇಬ್ಬರು ಸಮಾನರು ಎಂಬ ನಂಬಿಕೆ ಜನಪದರಲ್ಲಿದೆ. ಬುಡಕಟ್ಟು ಸಮುದಾಯಗಳಲ್ಲಿ ಕುಲ, ಗೋತ್ರ ಅಥವಾ ಬಳಿಗಳನ್ನು ಗಮನಿಸಿ ವಿವಾಹ ಸಂಬಂಧಗಳು ಏರ್ಪಡುತ್ತವೆ. ತಂದೆಯ ಸೋದರಿ-ಸೋದರತ್ತೆಯ ಮಕ್ಕಳಲ್ಲಿ ವಿವಾಹ ಸಂಬಂಧ ಏರ್ಪಡುತ್ತದೆ. ತಾಯಿಯ ಸಹೋದರ ಮಕ್ಕಳಲ್ಲಿ ವಿವಾಹ ಸಂಬಂಧ ನಡೆಯುತ್ತದೆ. ಒಂದೇ ಕುಲದವರ ಜೊತೆಗಿನ ವಿವಾಹ ಸಂಬಂಧವನ್ನು ಯಾವ ಬುಡಕಟ್ಟುಗಳಲ್ಲಿಯು ಒಪ್ಪುವುದಿಲ್ಲ. ಬುಡಕಟ್ಟು ಜನಾಂಗಗಳಲ್ಲಿ ಅನೇಕ ನಮೂನೆಯ ವಿವಾಹ ಸಂಬಂಧಗಳಿವೆ.

ಬಾಲ್ಯವಿವಾಹ, ತೊಟ್ಟಿಲು ಮದುವೆ, ಅಳಿಯ ಸಂತಾನ, ಸೀರುಡಿಕೆ (ಕೂಡಿಕೆ) ಮುಂತಾದ ವಿವಾಹ ಸಂಬಂಧಗಳಿವೆ. ಸಾಮಾನ್ಯವಾಗಿ ಹೆಣ್ಣು ಕೇಳಲು ಗಂಡಿನವರು ಹೋಗುವ ಪದ್ಧತಿ ಇದೆ.[೬]

ವಿವಾಹದ ಮೊದಲ ಘಟ್ಟ ಹೆಣ್ಣು ನೋಡುವುದು ಹುಡುಗ (ವರ) ಹುಡುಗಿಯನ್ನು ಮನೆಯಲ್ಲಿ ಹೋಗಿ ನೋಡುವಂತಿರಲಿಲ್ಲ. ಹಿರಿಯರು ನೋಡಿದ ಹುಡುಗಿಯನ್ನು ವರಿಸಬೇಕಾಗಿತ್ತು.[೭] ಅಥವಾ ಅಕ್ಕನ ಮಗಳು, ಸಂಬಂಧಿಕರ ಮಗಳನ್ನು ಸೊಸೆಯಾಗಿ ತರುವ ಪರಿಪಾಠ ಈ ಜನಾಂಗದ್ದು. ಹೆಣ್ಣನ್ನು ನೋಡಲೇಬೇಕು ಎಂದಾದರೆ ಹಿರಿಯ ಬಂಧುವಿನೊಟ್ಟಿಗೆ ವರ ಹೆಣ್ಣಿನ ಊರಿಗೆ ಹೋಗಿ ಆಕೆ ನೀರು ತರುತ್ತಿದ್ದರೆ ದೂರದಿಂದ ನೋಡಲಾಗುತ್ತಿತ್ತು. ಅಥವಾ ಆಕೆ ಗದ್ದೆಯಲ್ಲಿ ಕೆಲಸ ಮಾಡುತ್ತಿದ್ದರೆ ಅಲ್ಲಿಗೆ ಎಮ್ಮೆ ಕಳೆದುಹೋಗಿದೆ ಎಂಬ ನೆಪ ಒಡ್ಡಿ ಮಾತನಾಡಿಸಲಾಗುತ್ತಿತ್ತು. ಆದರೆ ಹುಡುಗಿಯ ಜೊತೆಗಿರುವ ತಾಯಿ, ಮತ್ತು ಜೊತೆಯಲ್ಲಿರುವ ಕೆಲಸಗಾರರನ್ನು ಬಹಳ ಕಟ್ಟುನಿಟ್ಟಿನ ನಿಲುವುಗಳಿದ್ದವು.[೮] ಹೆಣ್ಣಿಗೆ ಬಹಳ ಗೌರವವನ್ನು ಈ ಜನಾಂಗ ಕೊಡುತ್ತದೆ. ಹಾಗೆಯೆ ಹೆಣ್ಣಿನ ಮನೆಯವರು, ಗಂಡಿನ ಊರಿಗೆ ಬಂದು ಅವನ ಮನೆ, ಮನೆ ಎದುರಿಗೆ ಕಾಣುವ ಹುಲ್ಲಿನ ಗೊಣಬೆ, ಎತ್ತು ಗಾಡಿ ಮುಂತಾದವುಗಳನ್ನು ಸೂಕ್ಷ್ಮವಾಗಿ ಗಮನಿಸಲಾಗುತ್ತಿತ್ತು. ಗಂಡಿನ ಸ್ಥಿತಿ ಹೇಗಿದೆ, ಮಗಳು ಸುಖವಾಗಿರಬಹುದೆ ಎಂಬ ಅಂಶವಿರಬಹುದು. ಗಂಡಿನ ಮನೆಯವರು ಹೆಣ್ಣು ಕೆಲಸದಲ್ಲಿ ಹೇಗೆ ಏನು ಎಂಬುದನ್ನು ನೋಡಲು ಗದ್ದೆಗೆ ಹೋಗಿರಬಹುದು. ತೆರೆಮರೆಯ ಚಟುವಟಿಕೆಗಳು ಮುಗಿದ ಮೇಲೆ ಎರಡು ಕಡೆಯವರು ಒಪ್ಪಿದ ಮೇಲೆ, ಪುರೋಹಿತರ ಹತ್ತಿರ ಹೋಗಿ ಗಂಡು ಹೆಣ್ಣಿನ ಹೆಸರಿನ ಬಲಾಬಲವನ್ನು ಪುರೋಹಿತರಲ್ಲಿ ಕೇಳಲಾಗುತ್ತಿತ್ತು. ಅವರು ಗುಣಿಸಿ ಭಾಗಿಸಿ ಆ ಹೆಸರಿಗೆ ಈ ಹೆಸರು ಹೊಂದುವುದೋ ಹೇಗೆ ಎಂಬುದನ್ನು ವಾರ ತಿಥಿ ನೋಡಿ ಲೆಕ್ಕ ಹಾಕಿ ಹೇಳುತ್ತಿದ್ದರು. ಹೆಸರಿನ ಬಲ ಬರದಿದ್ದರೆ, ಹೆಣ್ಣಿಗೆ ಮತ್ತೊಂದು ಹೆಸರು ಸೂಚಿಸಿ ನೋಡಿಸುತ್ತಿದ್ದರು. ಇದು ಸರಿ ಬರದಿದ್ದರೆ, ಯಾವುದಾದರೊಂದು ಸಂಖ್ಯೆಯನ್ನು ಪ್ರಶ್ನೆ ಕೇಳುವವರು ಹೇಳುತ್ತಿದ್ದರು. ಅದನ್ನು ಗುಣಿಸಿ ಮದುವೆಯ ಬಲವನ್ನು ನೋಡುತ್ತಿದ್ದರು. ಪುರೋಹಿತರು ಬಲವಿದೆ ಎಂದರೆ ಮಾತ್ರ ಮದುವೆ ಇಲ್ಲವಿದ್ದರೆ ಇಲ್ಲ.

ಕೆಲವರು ದೇವಸ್ಥಾನದಲ್ಲಿ ಗಣಪತಿ ದೇವರಿಗೆ ಪ್ರಸಾದ ಕಟ್ಟುತ್ತಾರೆ. ದೇವರಿಗೆ ಮಹಾಪೂಜೆ ಮಾಡಿಸಿ ವಧೂವರರ ಕಡೆಯವರಿಂದ ಹೂವು ಮುಡಿಸಿ ಮಹಾಮಂಗಳಾರತಿ ಆದ ತಕ್ಷಣ ಹೂವು ಯಾವ ಭಾಗಕ್ಕೆ ಬೀಳುತ್ತದೆ ಎಂಬುದನ್ನು ಗಮನಿಸಲಾಗುತ್ತದೆ. ಬಲ ಭಾಗಕ್ಕೆ ಬಿದ್ದರೆ ವಿವಾಹ ಎಡ ಭಾಗಕ್ಕೆ ಬಿದ್ದರೆ ವಿವಾಹ ವಿಲ್ಲ ಬೇರೆ ಸಂಬಂಧ ನೋಡಬೇಕು. ಪುರೋಹಿತರು ಮದುವೆ ಬಲ ಬಂದಿದೆ ಎಂದು ಹೇಳಿದಾಗ ನಿಶ್ಚಯಶಾಸ್ತ್ರದ ದಿನವನ್ನು ಗೊತ್ತು ಮಾಡಲಾಗುತ್ತಿತ್ತು.

ಹೆಣ್ಣು ಸಿಗುವುದು ಆಗಿನ ಕಾಲದಲ್ಲಿ ಬಹಳ ಕಷ್ಟ, ಅಷ್ಟೇ ಒಳ್ಳೆಯ ಗಂಡಿನ ಮನೆ ಸಿಗುವುದು ಕಷ್ಟ. ಜನಪದರು ಹೆಣ್ಣನ್ನು ಮಹಾಲಕ್ಷ್ಮಿ ಎಂದು ತಿಳಿದಿರುತ್ತಾರೆ. ಹೆಣ್ಣನ್ನು ನೋಡಲು ಹೋಗುವಾಗ ಅನೇಕ ಶಕುನಗಳನ್ನು ಗಮನಿಸಲಾಗುತ್ತದೆ. ದಾರಿಯಲ್ಲಿ ಹೋಗುವಾಗ ಶುಭ ಶಕುನಗಳಾದರೆ ಹೆಣ್ಣನ್ನು ನೋಡುತ್ತಾರೆ. ಕೆಟ್ಟ ಶಕುನಗಳಾದರೆ ನೋಡುವುದಿಲ್ಲ.

**ಒಳ್ಳೆಯ ಶಕುನಗಳು**

೧. ಕತ್ತೆ ಅರಚಿದರೆ

೨. ಮುತ್ತೈದೆಯರ ಬಳಗ ಎದುರಾದರೆ

೩. ತುಂಬಿದ ಕೊಡಪಾನ ಎದುರಿಗೆ ಸಿಕ್ಕರೆ

೪. ಹರಿಜನರು ಎದುರಿಗೆ ಬಂದರೆ

೫. ಹೆಂಡದ ಗಾಡಿ ಎದುರಾದರೆ

೬. ಪಲ್ಲಿ ಲೊಚಗುಟ್ಟಿದರೆ

೭. ನರಿ ಮುಖ ಕಂಡರೆ

**ಕೆಟ್ಟ ಶಕುನಗಳು**

೧. ಖಾಲಿ ಕೊಡಪಾನ ಎದುರಾದರೆ

೨. ಹೊಸ ಮಡಕೆ ಹೊತ್ತು ತರುವವರು ಎದುರಾದರೆ

೩. ಕಾಗೆಗಳು ಬಂದು ತಲೆಯ ಮೇಲೆ ಬಡಿಯುವುದು

೪. ಪಲ್ಲಿ ಮೈಮೇಲೆ ಬಿದ್ದರೆ

೫. ಬೆಕ್ಕು ಬಲದಿಂದ ಎಡಕ್ಕೆ ಹೋದರೆ

೬. ಹೆಣ್ಣಿನ ಮನೆಗೆ ಹೋದಾಗ ಹೆಣ್ಣು ಕಸಪೊರಕೆ ಹಿಡಿದು ನಿಂತಿದ್ದರೆ

೭. ಮನೆಯನ್ನು ಬಿಟ್ಟಿದ್ದರೆ. (ಹೋದ ಮನೆ ಹೊಟ್ಟಿಲು)

ಇಷ್ಟೆಲ್ಲಾ ಆಗಿ ಹೆಣ್ಣು ಒಪ್ಪಿಗೆಯಾದರೆ ಹೆಣ್ಣಿನ ಮನೆಗೆ ಹೋಗುತ್ತಾರೆ. ಹೋಗುವಾಗ ಗಂಡಿನ ಮನೆಯವರು ಬಾಳೆಹಣ್ಣಿನ ಚಿಪ್ಪು, ಕಾಯಿ, ಅರಿಶಿಣ, ಕುಂಕುಮ, ಎಲೆ, ಅಡಿಕೆ, ಹೂವು ಮುಂತಾದವುಗಳನ್ನು ಒಂದು ತಟ್ಟೆಯಲ್ಲಿ ಇಟ್ಟುಕೊಂಡು ಹೆಣ್ಣಿನ ಮನೆಗೆ ಹೋಗಿ ಒಪ್ಪಿಗೆಯಾಗಿರುವುದರಿಂದ ಹೂವು ಮುಡಿಸಿ ಮಾತುಕತೆಗೆ ತೊಡಗುತ್ತಾರೆ. ಹೆಣ್ಣಿಗೆ ಏನೇನು ಕೊಡಬೇಕು, ಗಂಡಿಗೆ ಏನೇನು ಕೊಡಬೇಕು ಎಂಬುದು ಮಾತನಾಡುತ್ತಾರೆ.

ಮೊದಲು ಗಂಡಿನವರೇ ಹೆಣ್ಣಿಗೆ 'ತೆರ' ಕೊಟ್ಟು ಮದುವೆಯಾಗಬೇಕಿತ್ತು. ಆದರೆ ಈಗ ವರದಕ್ಷಿಣೆ ಪದ್ಧತಿ ಚಲಾವಣೆಯಲ್ಲಿದೆ. ದಶಕದ ಹಿಂದೆ ದೀವರಲ್ಲಿ ವರದಕ್ಷಿಣೆ ಪದ್ಧತಿ ಇರಲಿಲ್ಲ. ಆದರೆ ಈಗ ವರದಕ್ಷಿಣೆ ಪದ್ಧತಿ ಇದೆ.

ಗಂಡಿಗೆ ಹಿಂದಿನ ಪದ್ಧತಿಯಲ್ಲಿ ಬಟ್ಟೆ, ಛತ್ರಿ, ಬೀಲ, ಉಂಗುರ ಮುಂತಾದ ವಸ್ತುಗಳನ್ನು ಕೊಡಬೇಕಿತ್ತು. ಹೆಣ್ಣಿಗೆ ಓಲೆ, ತಾಳಿ, ಸೀರೆ, ರವಿಕೆ ಮೂಗು ಬೊಟ್ಟು, ಧಾರೆಸೀರೆ, ಬಿಳಿ ಶಾಸ್ತ್ರದ ಸೀರೆ, ಕಾಲ್ಚೈನು,

ಕಾಲುಂಗುರ ಮುಂತಾದ ವಸ್ತುಗಳನ್ನು ಕೊಡಬೇಕು. ಇವುಗಳೆಲ್ಲಾ ಮಾಮೂಲು ವಸ್ತುಗಳಾಗಿವೆ. ಆದರೆ ಈಗ ಹೆಣ್ಣಿನ ಮನೆಯವರು ವರದಕ್ಷಿಣೆ ಕೊಡಬೇಕಾದ ಸ್ಥಿತಿ ಇದೆ.

ಈ ರೀತ ಮಾತುಕತೆಯೆಲ್ಲಾ ಮುಗಿದ ಮೇಲೆ ಒಂದು ಒಳ್ಳೆಯ ದಿನವನ್ನು ವೀಳ್ಯೇಶಾಸ್ತ್ರಕ್ಕೆ ನಿಗದಿ ಮಾಡಲಾಗುತ್ತದೆ. ಹೆಣ್ಣಿನ ಮನೆಗೆ ಬಂದವರು ಹೆಣ್ಣಿನ ಐಬುಗಳನ್ನು ಗಮನಿಸುತ್ತಾರೆ. ಐಬುಗಳಿದ್ದರೆ ಹುಡುಗಿಯನ್ನು ಸೊಸೆಯಾಗಿ ತರುವುದಿಲ್ಲ. ಒಟ್ಟಾರೆ ಹೆಣ್ಣು ಲಕ್ಷಣವಾಗಿರಬೇಕು.

## ಹೆಣ್ಣಿನ ಲಕ್ಷಣ

೧. ಕಾಲು ಚೊಟ್ಟು ಪಟ್ಟು ಇರಬಾರದು

೨. ತೊನ್ನು ಇರಬಾರದು

೩. ಬಿಲಗಣ್ಣು ಮೇಲು ಇರಬಾರದು

೪. ಮೈ ಕೈಯಲ್ಲಿ ರೋಮ ಬೆಳೆದುಕೊಂಡಿರಬಾರದು

೫. ಗಂಡು ಧ್ವನಿ ಇರಬಾರದು

೬. ತೋಳು ಕೊಕ್ಕರ ಇರಬಾರದು

೭. ಬೆನ್ನು ಗೂನು ಇರಬಾರದು

ಆದರೆ ಎಡಗಣ್ಣು ವಚ್ಚ (ಮೇಲುಗಣ್ಣು) ಇರಬಹುದು. ಕೊಡುಗಾಲು, ಬಾಪಗಾಲು ಮುಂತಾದವು ಇದ್ದರೆ ಒಳ್ಳೆಯ ಲಕ್ಷಣ ಇವುಗಳನ್ನು ಸೂಕ್ಷ್ಮವಾಗಿ ಗಮನಿಸಲಾಗುತ್ತದೆ.

## ವೀಳ್ಯೇಶಾಸ್ತ್ರ

ಹೆಣ್ಣನ್ನು ಗಂಡಿನ ಮನೆಯವರು ಒಪ್ಪಿದ ಮೇಲೆ ಹೆಣ್ಣಿನ ಮನೆಗೆ ಬಂದು ಹೋದ ನಂತರ ಹೆಣ್ಣಿನ ಮನೆಯವರು ಗಂಡಿನ ಮನೆಗೆ ಬಂದು ಹೋಗುವರು. ನಂತರ ಹಿರಿಯರ ಸಮ್ಮತಿ ದೊರಕಿದ ಮೇಲೆ ವೀಳ್ಯೇಶಾಸ್ತ್ರ ಇಟ್ಟುಕೊಳ್ಳುತ್ತಾರೆ. ಈ ಶಾಸ್ತ್ರ ಹೆಣ್ಣಿನವರ ಮನೆಯಲ್ಲಿ ನಡೆಯುತ್ತದೆ. ಜನಪದರಲ್ಲಿ ವೀಳ್ಯಕ್ಕೆ ಮಹತ್ವದ ಸ್ಥಾನಮಾನವಿದೆ. ಶುಭಕಾರ್ಯಗಳು ಜರುಗುವ ಮೊದಲು ವೀಳ್ಯವನ್ನು ಕೊಡಲಾಗುತ್ತದೆ. ಒಂದು ಒಳ್ಳೆಯ ದಿನವನ್ನು ಪುರೋಹಿತರಿಂದ ನಿಗದಿ ಮಾಡಲಾಗಿರುತ್ತದೆ. ಗಂಡು ಹೆಣ್ಣಿನವರ ಮನೆ ಯವರು ಬಂಧು ಬಳಗ ಸೇರಿರುತ್ತದೆ. ಹಾಗೂ ಗ್ರಾಮದ ಹಿರಿಯರು, ಪ್ರಮುಖರನ್ನು ಕರೆದಿರುತ್ತಾರೆ.

ಗಂಡಿನ ಮನೆಯವರು ಹೆಣ್ಣಿನ ಮನೆಗೆ ಹೋಗುವಾಗ ತೆಗೆದುಕೊಂಡು ಹೋಗುವ ಶುಭ ವಸ್ತುಗಳು.

೧. ಸೀರೆ

೨. ರವಿಕೆ ಕಣ

೩. ಬಾಳೆಹಣ್ಣುಗಳು - ೫ ಚಿಪ್ಪು

೪. ತೆಂಗಿನ ಕಾಯಿ, ಕೊಬ್ಬರಿ, ಬೆಲ್ಲ (ಪ್ರತಿಯೊಂದು ೪-೫)

೫. ಹಣ್ಣುಗಳು (ಸೇಬು, ಮೂಸಂಬಿ,...)

೬. ಕಲ್ಲುಸಕ್ಕರೆ, ಒಣದ್ರಾಕ್ಷಿ

೭. ವೀಳ್ಯದೆಲೆ - ೭ ಅಥವಾ ೯ ಕಟ್ಟು

೮. ಹೂವು

೭. ಅರಿಸಿನ ಕುಂಕುಮ

೮. ಅಡಿಕೆ (ಒಂದೆರಡು ಕೆ.ಜಿ.)

ಇವುಗಳ ಅಳತೆಯಲ್ಲಿ ವ್ಯತ್ಯಾಸವಾಗಬಹುದು. ಆರ್ಥಿಕವಾಗಿ ಚೆನ್ನಾಗಿ ಇದ್ದವರು ರೇಷ್ಮೆ ಸೀರೆಯನ್ನು ತರುತ್ತಾರೆ. ಹೆಚ್ಚಿನ ದೀವ ಜನಾಂಗದಲ್ಲಿ ಮೊದಲು ಐದು ಸೀರೆ ಕಣ ಎಂಬ ನೂಲಿನ ಸೀರೆಯನ್ನು ಧರಿಸುತ್ತಿದ್ದರಿಂದ ಇವುಗಳನ್ನು ತರಬೇಕಿತ್ತು. ಈಗ ಅವರವರ ಶಕ್ತಿಗೆ ಅನುಸಾರವಾಗಿ ಒಂದು ಒಳ್ಳೆಯ ಸೀರೆಯನ್ನು ತಂದಿರುತ್ತಾರೆ.

ಇವುಗಳನ್ನೆಲ್ಲಾ ಒಂದು ತಟ್ಟೆಯಲ್ಲಿಟ್ಟುಕೊಂಡು ಬರಬೇಕು. ಗಂಡಿನ ಮನೆಯವರನ್ನು ಕೂರಿಸಿ, ನಂತರ ಎರಡು ಕಡೆಯ ಯಜಮಾನರ ಒಪ್ಪಿಗೆ ದೊರೆತ ಮೇಲೆ ಹುಡುಗಿಯನ್ನು ಹಸೆಮಣೆಯ ಮೇಲೆ ಕೂರಿಸಲಾಗುತ್ತದೆ. ಹೆಣ್ಣಿನ ಕಡೆಯ ಯಜಮಾನರ ಹತ್ತಿರ ಒಂದು ತಟ್ಟೆಯಲ್ಲಿ ಹಣ್ಣು ಹೂವು ಮುಂತಾದವುಗಳು ಇರುತ್ತವೆ. ಮನೆಯ ದೇವರಿಗೆ ಪೂಜೆಯಾದ ನಂತರ ತಟ್ಟೆ ಅದಲು ಬದಲು ಮಾಡಿಕೊಳ್ಳುತ್ತಾರೆ. ಕಳಸ, ಕನ್ನಡಿ ಪೂಜೆ ಮಾಡಿ, ಎಲ್ಲರಿಗು ವೀಳ್ಯ ಕೊಡಲಾಗುತ್ತದೆ. (ಹಿಂದಿನ ಕಾಲದಲ್ಲಿ ಈ ರೀತಿ ಕೂರಿಸುತ್ತಿರಲಿಲ್ಲ)

ನಂತರ ಹೆಂಗಳೆಯರು ವೀಳ್ಯ ದೊರೆತ ಮೇಲೆ ತಾವು ತಂದಿದ್ದ ಸೀರೆಯನ್ನು ಉಡಿಸಿ, ಅಲಂಕಾರ ಮಾಡಿ ಮತ್ತೆ ಹಸಮಣೆಗೆ ಕರೆತಂದು ಕೂರಿಸಿ ಅಕ್ಷತೆ ಹಾಕಲಾಗುತ್ತದೆ. ಎಲ್ಲ ಮುತ್ತೈದೆಯರಿಗೆ ಅರಿಸಿನ ಕುಂಕುಮ, ತಲೆಗೆ ಎಣ್ಣೆ ಹಚ್ಚಲಾಗುತ್ತದೆ.

ಊರಿನ ಕೆಲ ಕುಟುಂಬಗಳಲ್ಲಿ ಜಗಳ ಕಿತ್ತಾಟಗಳು ಇದ್ದು ಮನಸ್ತಾಪ ಬಂದಿದ್ದರು ಕೂಡ ವೀಳ್ಯದ ಸಂದರ್ಭದಲ್ಲಿ ತಪ್ಪಿಸದೆ ಹಾಜರಾಗಿ ವೀಳ್ಯ ಸ್ವೀಕರಿಸುತ್ತಾರೆ. ಕೆಲ ಹಿಂದುಳಿದ ಜನಾಂಗಗಳಲ್ಲಿ ವೀಳ್ಯಕ್ಕೆ ಅಂತಹ ದ್ವೇಷ ಮರೆಸುವ ಗುಣ ಇದೆ. 'ಯಾರ ತಲೆ ಹೋದರು ದೀವರ ತಲೆ ಹೋಗಲ್ಲ' ಎಂಬ ಗಾದೆಯನ್ನು ವಿಸ್ತಾರವಾಗಿ ಗಮನಿಸಿದಾಗ ಬರಿ ಯುದ್ಧ ಭೂಮಿಗೆ ಸೀಮಿತವಾಗಿಲ್ಲ. ದೀವರ ಜನಾಂಗದಲ್ಲಿ ಎಷ್ಟೇ ತಂಟೆ ತಕರಾರು ಇದ್ದರೂ ಹೊಂದಿಕೊಂಡು ಬದುಕುತ್ತಾರೆ. ದ್ವೇಷ ಪ್ರಿಯರು ಅಲ್ಲ. ದೀವರ ಬಗ್ಗೆ ಕೆಲ ಜನಾಂಗಗಳು ಹೀಗೆ ಆಡಿಕೊಳ್ಳುತ್ತಾರೆ. 'ಕೋಳಿ ಕುರಿ ಊಟಕ್ಕೆ ದೀವರೆಲ್ಲಾ ಒಂದು' ಅವರನ್ನ ಕಟ್ಟಿಗೆಂಡು ಹೋದರೆ ಎಂಬ ಮಾತಿದೆ. ನಂತರ ಎಲ್ಲರು ಸಿಹಿಯೂಟ ಮಾಡುತ್ತಾರೆ. ಈ ಶಾಸ್ತ್ರ ಸಾಮಾನ್ಯವಾಗಿ ಮದುವೆಯ ದಿನಾಂಕ ಸಮೀಪ ಇರುವಾಗ ನಡೆಯುತ್ತದೆ.

ಹೆಣ್ಣು ನೋಡಿ ಒಪ್ಪಿಗೆಯಾಗಿ ಎರಡು ಮನೆಯ ಕಡೆಯವರು ಪುರೋಹಿತರ ಹತ್ತಿರ, ದೇವರ ಹತ್ತಿರ ಪ್ರಶ್ನೆ ಕೇಳಿ, ಬಲಾಬಲ ತಿಳಿದ ನಂತರ ಗಂಡು ಹೆಣ್ಣನ್ನು ತಿರಸ್ಕರಿಸುವಂತಿಲ್ಲ. ಹಾಗೇನೆ ಹೆಣ್ಣಿನ ಮನೆಯವರು ಗಂಡಿನ ಮನೆಯವರನ್ನು ಬಿಡುವಂತಿಲ್ಲ. ಹಾಗೇನಾದರು ವಿಘ್ನ ಬಂದಲ್ಲಿ ಈ ಜನಾಂಗದ ಹಿರಿಯರು ದಂಡ ವಿಧಿಸುತ್ತಾರೆ. ಇಂತಹ ವಿಷಯದಲ್ಲಿ ಕಟ್ಟುನಿಟ್ಟಿನ ನಿಯಮಗಳು ಈ ಜನಾಂಗದಲ್ಲಿದೆ.

**ಕೋರೂಟ : 'ಊರು ಒತ್ಲ'**

ವಿವಾಹದ ಹಿಂದಿನ ದಿನ ವಧೂವರರ ಊರಿನಲ್ಲಿ ಅವರವರ ಸಂಬಂಧಿಕರ, ಗೆಳೆಯರ ಮನೆಯಲ್ಲಿ ಮದುಮಗ ಅಥವಾ ಮದುವಣಗಿತ್ತಿಯನ್ನು ಸಂಜೆ ಕರೆಯಲಾಗುತ್ತದೆ. ದಾಯಾದಿ ಕುಟುಂಬದ ಮನೆಗೆ ವಧು ಅಥವಾ ವರನನ್ನು ಕರೆಯುತ್ತಾರೆ. ಈ ಕುಟುಂಬದವರೆಲ್ಲಾ ಮನೆಗು ಹೋಗಲೆಬೇಕು. ಅವರವರ ಅನುಕೂಲಕ್ಕೆ ತಕ್ಕಂತೆ ಕೋಳಿ, ಕಜ್ಜಾಯ, ಸಿಹಿ ಊಟ ಹೀಗೆ ನಾನಾ ತರಹ ಅಡುಗೆ ಮಾಡಿ ಬಡಿಸಲಾಗುತ್ತದೆ. ಎಲ್ಲರೂ ಸಕ್ರೀಯವಾಗಿ ಪಾಲ್ಗೊಳ್ಳುತ್ತಾರೆ.

ದೂರದ ಊರುಗಳಲ್ಲಿ ಸಂಬಂಧಿಕರ ಮನೆಗೆ ಕೋರೂಟಕ್ಕೆ ಒಂದೆರಡು ದಿನ ಮೊದಲೆ ಕರೆದು ಉಪಚರಿಸುತ್ತಾರೆ. ಮದುವೆಯ ಹಿಂದಿನ ದಿನ ಕರೆಯುವವರು ಮಾತ್ರ ಊರಿನ ದಾಯಾದಿಗಳು.

## ಮದುವೆ

ಮದುವೆ ಎಂಬುದು ಮನುಷ್ಯ ಬದುಕಿನ ತಿರುವುಗಳಲ್ಲಿ ಒಂದು ಅವಿಭಾಜ್ಯ ಅಂಗ. ಜನಪದರು ಆಚರಿಸುವ ಸಂಪ್ರದಾಯಗಳು ಗಂಡು ಮತ್ತು ಹೆಣ್ಣನ್ನು ಒಂದು ಜವಾಬ್ದಾರಿ ಬದುಕಿಗೆ ತರುವಾಗ ಇವರಿಬ್ಬರಲ್ಲಿ ಸಹಮತ ಬೆಳೆಯಲಿ ಎಂಬ ಆಶಯವಿದೆ. ಎಲ್ಲಾ ಜನಾಂಗಗಳು ತಮ್ಮದೆ ಆದ ರೀತಿ ರಿವಾಜುಗಳನ್ನು ಆಚರಣೆಯಲ್ಲಿ ತೊಡಗಿಸಿರುತ್ತಾರೆ. ಮೊದಲು ವಿವಾಹಗಳು ಹದಿನೈದು ದಿನಗಳವರೆಗೆ ನಡೆಯುತ್ತಿದ್ದವು. ಆದರೆ ಈಗ ಮೂರು ದಿನಗಳ ಮದುವೆ, ಐದು ದಿನಗಳ ಮದುವೆ ರೂಢಿಯಲ್ಲಿದೆ.

ಮನುಷ್ಯ ಮೊದಲು ಸಂಭ್ರಮಗಳಿಗೆ ಬಹಳ ದಿನಗಳನ್ನು ಮುಡುಪಾಗಿಟ್ಟಿರುತ್ತಿದ್ದರು. ಆಧುನಿಕತೆಯ ನಾಗಲೋಟಕ್ಕೆ, ಆರ್ಥಿಕ ಅತಂತ್ರಕ್ಕೆ ಸಿಲುಕಿದ ಜನಾಂಗಗಳ ಬದುಕು ಇಂದು ಸಡಗರಗಳಿಗೆ, ಸಂಭ್ರಮಗಳಿಗೆ, ಕತ್ತರಿ ಪ್ರಯೋಗ ನಡೆಸಿವೆ. ಮೊದಲು ಸರಳ ಜೀವನ, ಸಂತೃಪ್ತಿಯ ಬದುಕನ್ನು ಸಾಗಿಸಿದ ಜನರು ಆಧುನಿಕತೆಯ ಆಡಂಬರದ, ದುರಾಸೆಯ ಕೈಯಲ್ಲಿ ಸಿಲುಕಿ ಯಂತ್ರವಾಗುತ್ತಿದ್ದಾನೆ.

ಮದುವೆ ಎಂಬುದು ಗಂಡು ಹೆಣ್ಣುಗಳ ಜೀವನದಲ್ಲಿ ಪ್ರಮುಖವಾದ 'ಘಟ್ಟ'. ಗಂಡು ಚೌಲದ ನಂತರ ಬುದ್ಧಿ ತಿಳಿದ ಮೇಲೆ ಪ್ರಪ್ರಥಮವಾಗಿ ಮದುವೆ ಶಾಸ್ತ್ರಕ್ಕೆ ಒಳಗಾಗುತ್ತಾನೆ. ಹೆಣ್ಣು ಮೊದಲೆ ಒಂದೆರಡು ಶಾಸ್ತ್ರಗಳಿಗೆ ಒಳಗಾಗಿರುತ್ತಾಳೆ.

ಊರುಒತ್ಲ ಅಥವಾ ಕೋರೂಟದ ನಂತರ ಗಂಡಿಗೆ ಮುಖಪೆನ್ನೆ ಎಂಬ ಶಾಸ್ತ್ರ ಮಾಡಲಾಗುತ್ತದೆ. ಕ್ಷೌರಿಕನು ಬಂದು ಮದುಮಗನ ಮುಖ ಮತ್ತು ತಲೆಯ ಕೂದಲನ್ನು ಕತ್ತರಿಸುತ್ತಾನೆ. ಇದಕ್ಕೆ ಮುಖ ಪೆನ್ನೆ

ಶಾಸ್ತ್ರ ಎನ್ನಲಾಗುತ್ತದೆ. ಕ್ಷೌರಿಕನ ತಲೆಗೆ ಎಣ್ಣೆಹಾಕಿ ಹೊಸಬಟ್ಟೆ ಕೊಟ್ಟು, ಸಿಹಿ ಊಟ ಹಾಕಿ ಕಳುಹಿಸಲಾಗುತ್ತದೆ. ನಂತರ ಕವಣ ಚಪ್ಪರ ಶಾಸ್ತ್ರ, ಮಲೆನಾಡಿನ ಜನಪದರ ಮದುವೆಯಲ್ಲಿ ಮನೆಯ ಮುಂದೆ ವಿಶೇಷವಾದ ಚಪ್ಪರ ಹಾಕಲಾಗಿರುತ್ತದೆ. ಗ್ರಾಮದ ಜನರು ಸೇರಿ ನಾಲ್ಕು ಕಂಬಗಳ ಚಪ್ಪರ ಹಾಕುವರು. ಇದಕ್ಕೆ ತಳಿರು ತೋರಣ ಮಾಡಿರುತ್ತಾರೆ. ಪ್ರತಿಯೊಂದು ಚಪ್ಪರದ ಕಂಬಕ್ಕೆ ಮಾವಿನ ಸೊಪ್ಪನ್ನು ದಪ್ಪ ಹಾಕಿ ಕಟ್ಟಿರುತ್ತಾರೆ. ಚಪ್ಪರ ಮಧ್ಯೆ ಮೇಲುಗಡೆ ಬಿಳಿಯ ಪಂಚೆಯನ್ನು ಕಟ್ಟಿ ಅದರೊಳಗೆ ಅಕ್ಕಿ ಕಾಯಿ ಹಾಕಿರುವರು. ಮನೆಯ ಬಾಗಿಲ ಪಕ್ಕದ ಕಂಬದಲ್ಲಿ ಹಾಲು ಜಾತಿಯ ಮರದ ಕಂಬಗಳನ್ನು ಅಥವಾ ಕೋಲನ್ನು ಕಟ್ಟಿರುವರು. ಈ ಚಪ್ಪರಕ್ಕೆ ಕವಣದ ಚಪ್ಪರ ಎನ್ನುತ್ತಾರೆ. ಹೆಚ್ಚಿನ ಶಾಸ್ತ್ರಗಳು ಇದರ ಕೆಳಗೆ ಜರುಗುತ್ತವೆ. ಮತ್ತೊಂದು ಕಂಬದಲ್ಲಿ ಧಾರೆ ದೀಪವನ್ನು ಇಡಲು ಡಬ್ಬಿಯ ಮರಸು ಮಾಡಿರುತ್ತಾರೆ. ಈ ದೀಪ ತಿಂಗಳ ಶಾಸ್ತ್ರ ಆಗುವವರೆಗೂ ಇರಬೇಕು. ಈ ಚಪ್ಪರ ವಧೂವರರಿಬ್ಬರ ಮನೆಯಲ್ಲೂ ಹಾಕಿರುತ್ತಾರೆ. ಇದಕ್ಕೆ ಪೂಜೆ ಸಲ್ಲಿಸಲಾಗುತ್ತದೆ. ಮೂರನೆಯ ದಿನ ಬೆಳಿಗ್ಗೆ ವರನ ಮನೆಯಲ್ಲಿ ವರನಿಗೆ ಅರಿಶಿಣ, ಎಣ್ಣೆ ಹಚ್ಚುತ್ತಾರೆ. ಐದು ಜನ ಮುತ್ತೈದೆಯರು ಪದ ಹೇಳುತ್ತಾ ಈ ಶಾಸ್ತ್ರ ಮಾಡುವರು. ಇದಕ್ಕೆ ಅರಸೆಣ್ಣೆ ಶಾಸ್ತ್ರ ಎನ್ನುವರು. ವಧುವಿನ ಮನೆಯಲ್ಲೂ ಈ ಶಾಸ್ತ್ರ ಜರುಗುತ್ತದೆ. ದೀವರ ಜನಾಂಗದಲ್ಲಿ ಧಾರೆ ಹೆಚ್ಚಾಗಿ ಹೆಣ್ಣಿನವರ ಮನೆಯಲ್ಲಿ ನಡೆಯುವುದು. ಈ ಶಾಸ್ತ್ರದಲ್ಲಿ ಕಳಸದ ಆರತಿ ಬೇಕೆಬೇಕು. ಮದುವೆಯಂತಹ ಶುಭಕಾರ್ಯದಲ್ಲಿ ಕಳಸಕ್ಕೆ ಪೂಜೆ ಮಾಡಲಾಗುತ್ತದೆ. ಚಪ್ಪರಕ್ಕೆ ಪೂಜೆ ಮಾಡುವಾಗ ವಾದ್ಯದವರ ವಾದ್ಯಗಳಿಗು ಪೂಜೆ ನೆರವೇರಿಸಲಾಗುತ್ತದೆ.

ಈ ಶಾಸ್ತ್ರಗಳ ನಂತರ ದಿಬ್ಬಣ ವಧುವಿನ ಮನೆಯೆಡೆಗೆ ಹೊರಡುತ್ತದೆ. ದಿಬ್ಬಣಕ್ಕೆ ಗಾಡಿಗಳನ್ನು ಅಲಂಕರಿಸಿ, ಸಬಾರಿ ಕಟ್ಟಿ, ಸಾಲುಸಾಲಾಗಿ ದಿಬ್ಬಣದ ಗಾಡಿಗಳು ಹೊರಡುತ್ತಿದ್ದವು. ಈಗ ಬಸ್ಸು, ಲಾರಿ, ಟ್ರ್ಯಾಕ್ಟರ್ ಈ ಸ್ಥಾನವನ್ನು ತುಂಬುತ್ತಿವೆ. ದಿಬ್ಬಣ ಊರುಗಳನ್ನು ದಾಟಿ ಹೋಗುವಾಗ ಪ್ರಮುಖ ದೇವರುಗಳಿಗೆ ಸುಳಿಕಾಯಿ ಒಡೆಯಲಾಗುತ್ತದೆ. ವಧುವಿನ ಊರು ಬಂದಾಗ ಗರ್ನಾಲ್ ಹೊಡೆದು, ಓಲಗ ಊದಲಾಗುತ್ತದೆ.

ನಂತರ ವಧುವಿನ ಕಡೆಯವರು ಬೀಗರನ್ನು ಎದುರುಗೊಂಡು ಬಿಡದಿ ಮನೆಗೆ ಕರೆತರುತ್ತಾರೆ, ಬಿಡದಿ ಮನೆ ದೇವಸ್ಥಾನವಾಗಿರಬಹುದು, ಅರಳಿಕಟ್ಟೆ ಮುಂತಾದವು. ನಂತರ ವಧುವಿನ ಮನೆಗೆ ದಿಬ್ಬಣ ಬರುತ್ತದೆ. ಇಲ್ಲಿ ಮದುಮಗನಿಗೆ ಬೀಗರು ಕೈಕಾಲು ತೊಳೆಯಲು ನೀರು ಕೊಟ್ಟು ಕವಣ ಚಪ್ಪರದಲ್ಲಿ ಕೂರಿಸಲಾಗುತ್ತದೆ. ನಂತರ ಪೂರೋಹಿತರು ಹೇಳಿದ ಕಾಲಕ್ಕೆ ಇವರ ಅಣತಿಯಂತೆ ವಧೂವರರನ್ನು ಧಾರೆ ಮಂಟಪಕ್ಕೆ ಕರೆತರಲಾಗುತ್ತದೆ. ವಧುವನ್ನು ಸೋದರ ಮಾವ ಕರೆತಂದರೆ ಮದುಮಗನನ್ನು ಸಂಬಂಧಿಗಳು ಕರೆದು ತರುತ್ತಾರೆ. ಶುಭ ಮುಹೂರ್ತದಲ್ಲಿ ಮಾಂಗಲ್ಯವನ್ನು ವರ ವಧುವಿಗೆ ಮೂರು ಗಂಟುಗಳನ್ನು ಹಾಕುವ ಮೂಲಕ ತಾಳಿ ಕಟ್ಟುತ್ತಾನೆ.

ವಿವಾಹದ ನಂತರ ಊಟವಾಗಿ ದಿಬ್ಬಣ ಸಂಜೆ ವರನ ಊರಿಗೆ ಹಿಂತಿರುಗುತ್ತದೆ. ವಧೂವರರನ್ನು ಅರಳಿ ಕಟ್ಟೆಯಲ್ಲಿ ಕೂರಿಸಿ ಅಲ್ಲಿಂದ ಮೆರವಣಿಗೆ ಮುಖಾಂತರ ವರನ ಮನೆಗೆ ತೆರಳುತ್ತದೆ. ವಾದ್ಯಗಳ ಸಂಗೀತ, ಕುಣಿತದೊಂದಿಗೆ ಮನೆಗೆ ಬಂದು ಗೃಹ ಪ್ರವೇಶ ನೆರವೇರಿಸುತ್ತಾರೆ. ನಂತರ ಊಟಮಾಡಿ ಎಲ್ಲರು ಅವರವರ ಮನೆಗೆ ತೆರಳುತ್ತಾರೆ.

ಕೆಲ ಊರುಗಳಲ್ಲಿ ಮೆರವಣಿಗೆಯ ಗಾಡಿಗಳನ್ನು ತಡೆದು ನಿಲ್ಲಿಸಿ ವರನ ಕಡೆಯಿಂದ ಭಕ್ಷೀಸು ಪಡೆದು ಕೆಲ ಯುವಕರ ತಂಡ ಮೆರವಣಿಗೆಯಲ್ಲಿ ಸಾಗುತ್ತದೆ(ಸೊರಬ ತಾಲ್ಲೂಕಿನ ಕೆಲ ಭಾಗದಲ್ಲಿ ಈ ಪದ್ಧತಿ ಇದೆ).

ಗೃಹ ಪ್ರವೇಶ ಆದ ಮೇಲೆ ವಧೂವರರನ್ನು ಹಸೆಗೋಡೆಯ ಕೆಳಗೆ ಕೂರಿಸಿ ಹೆಂಗಳೆಯರು, ಉಂಗುರ ಹುಡುಕುವ ಶಾಸ್ತ್ರ, ಅಡಿಕೆ ಶಾಸ್ತ್ರ, ಕೆಲ ಹುಡುಗಾಟಗಳನ್ನು ಶಾಸ್ತ್ರದ ರೂಪದಲ್ಲಿ ಆಡಿಸುತ್ತಾರೆ. ಇವರಿಬ್ಬರಲ್ಲಿಯು ಕೈಯ ಸ್ಪರ್ಶದಿಂದ ಮುಜುಗರ ಹೊರಟು ಹೋಗುತ್ತದೆ.

**ನಾಗೋಲೆ**

ಈ ಶಾಸ್ತ್ರವನ್ನು ಮದುವೆಯ ಮರು ದಿನ ಎರಡು ಕಡೆ ಮನೆಯಲ್ಲಿ ಆಚರಿಸುತ್ತಾರೆ. ಬೆಳಗ್ಗೆ ಗಂಡಿನ ಮನೆಯಲ್ಲಿ ನಡೆದರೆ ಸಂಜೆ ಹೆಣ್ಣಿನ ಮನೆಯಲ್ಲಿ ನಡೆಯುತ್ತದೆ. ನಾಗೋಲೆ ಶಾಸ್ತ್ರಕ್ಕೆ ಅರಿಸಿಣ ನೀರಿನ ಶಾಸ್ತ್ರ ಎಂತಲೂ ಕರೆಯುತ್ತಾರೆ. ಬೆಳಿಗ್ಗೆ ಎದ್ದ ವಧೂವರರು ಕೈಕಾಲು ಮುಖ ತೊಳೆದು ಹಳೆಯ ಬಟ್ಟೆಗಳನ್ನು ಧರಿಸಿ ಕವಣ ಚಪ್ಪರಕ್ಕೆ ಕರೆತರುತ್ತಾರೆ. ಚಪ್ಪರದ ಮಧ್ಯದಲ್ಲಿ ಹಲಗೆ ಹಾಕಿ ಎರಡು ಪಾತ್ರೆಯಲ್ಲಿ ಅರಿಸಿಣದ ಓಕುಳಿಯನ್ನು ಇಟ್ಟಿರುತ್ತಾರೆ. ವಧೂವರರಿಬ್ಬರು ಹಲಗೆಯ ಮೇಲೆ ಕುಳಿತುಕೊಂಡು ಒಬ್ಬರಿಗೊಬ್ಬರು ನೀರು ಹಾಕಿಕೊಳ್ಳುತ್ತಾರೆ. ನಂತರ ಆರತಿ ಎತ್ತಿ ಇಬ್ಬರನ್ನು ಸ್ನಾನದ ಮನೆಗೆ ಕರೆತಂದು ಸ್ವಚ್ಛನೀರು ಎರೆಯುತ್ತಾರೆ. ನಂತರ ಹೊಸ ಬಟ್ಟೆ ಧರಿಸಿಕೊಂಡು ಬಂದು ಹಸೆಗೋಡೆಯ ಕೆಳಗೆ ಮದುಮಕ್ಕಳನ್ನು ಕೂರಿಸುತ್ತಾರೆ. ಬಾಸಿಂಗವನ್ನು ಕಟ್ಟಿ ನಂತರ ತೆಗೆದು ಒಂದೊಂದು ಜಿಬ್ಬಲದಲ್ಲಿ ಹಾಕಲಾಗುತ್ತದೆ. ಮದುವೆಯಲ್ಲಿ ಹಾಕಿದ ಹಾರಗಳನ್ನು ಚೆಂಡಿನಂತೆ ಮಾಡಿಕೊಂಡು ಇಬ್ಬರಿಗೂ ಒಂದೊಂದು ಕೊಡುವರು. ನಂತರ ಕೂತಲ್ಲೇ ಒಬ್ಬರಿಗೊಬ್ಬರು ಚೆಂಡಾಟ ಆಡಬೇಕು ಚೆಂಡನ್ನು ಮೊದಲು ಹೆಣ್ಣು ಗಂಡಿಗೆ ಎಸೆಯುತ್ತಾಳೆ. ಆಗ ಎರಡು ಚೆಂಡುಗಳೂ ಗಂಡಿನಲ್ಲೇ ಸೇರಿಕೊಳ್ಳುತ್ತವೆ. ಆತ ಆ ಎರಡು ಚೆಂಡುಗಳನ್ನು ತನ್ನಲ್ಲೇ ಇರಿಸಿಕೊಂಡು ಸುಮ್ಮನೆ ಕುಳಿತುಕೊಳ್ಳುವನು. ಸುತ್ತಲು ನೆರೆದಿರುವ ಹೆಂಗಸರು ಗಂಡಸರು ಮತ್ತು ಹುಡುಗರು ಹೋ...ಚೆಂಡ್ ಕೇಳಿ ಈಸ್ಕೊ...ಎನ್ನುತ್ತಾ ನಾಚಿಸುತ್ತಾರೆ. ವಿಧಿಯಿಲ್ಲದೆ ಈ ಚೆಂಡನ್ನು ಹೆಣ್ಣು ಕೇಳಬೇಕು. ಅತ್ತೆ ಮಗನೆ ಮುತ್ತಿನ್ ಚೆಂಡ್ ಚೆಂಡ್ ಕೊಡಿ...ಎನ್ನಬೇಕು. ಆತ ಎರಡು ಚೆಂಡನ್ನು ಎಸೆಯುತ್ತಾನೆ. ಹೀಗೆ ಚೆಂಡು ಅದಲು ಬದಲಾಗುತ್ತದೆ.

ನಂತರ ಅಕ್ಕಿಯಲ್ಲಿ ಉಂಗುರ ಹಾಕಿ ಹುಡುಕಿಸಲಾಗುತ್ತದೆ. ಇವರಿಬ್ಬರೂ ಅಕ್ಕಿಯೊಳಗಡೆ ಕೈ ಹಾಕಿ ಉಂಗುರ ಹುಡುಕುತ್ತಾ ಅತ್ತಿಂದಿತ್ತ ಆಡಿಸುತ್ತಾರೆ. ನಂತರ ಯಾರ ಕೈಯಿಗೆ ಬೇಕಾದರೂ ಉಂಗುರ ಸಿಗಬಹುದು.

ಮದುಮಕ್ಕಳಿಬ್ಬರ ಮಧ್ಯೆ ಮದುಮಗನ ಶಲ್ಯದಲ್ಲಿ ಒಂದು ಗುಂಡು ಕಲ್ಲನ್ನು ಇಟ್ಟು ಇಬ್ಬರಿಂದಲೂ ತೂಗಿಸುತ್ತಾರೆ. ಸ್ವಲ್ಪ ಹೊತ್ತು ತೂಗಿದ ನಂತರ ಹೆಣ್ಣು, ಮಗುವನ್ನು ನಿಧಾನವಾಗಿ ತೊಟ್ಟಿಲಿನಿಂದ ಎತ್ತಿದಂತೆ ಮಗುವನ್ನು ಎತ್ತಬೇಕು. ಮಗುವನ್ನು ಲಾಲಿಯಾಡಿಸಿ ಗಂಡನ ಕೈಯಿಗೆ ಕೊಡುತ್ತಾಳೆ. ನಂತರ ಬಲಗೊಡತಿ

ಯಾದ ಅಕ್ಕ ಅಥವಾ ತಂಗಿಯ ಮಡಿಲಿಗೆ ಹಾಕಿ ಸಂಬಂಧ ಬೆಳೆಸಬೇಕು ಎಂದು ಗಂಡ ಹೆಂಡತಿ ಕೇಳಿಕೊಳ್ಳು ತ್ತಾರೆ. ಹೀಗೆ ನಾಚಿಕೆ ತರುವ ಅನೇಕ ಪ್ರಸಂಗಗಳೂ ನಡೆಯುತ್ತವೆ. ನಂತರ ವಧೂವರರಿಬ್ಬರು ಮಧ್ಯಾಹ್ನ ವಧುವಿನ ಮನೆಗೆ ಬಂದು ಇಲ್ಲಿಯು ನಾಗೋಲೆ ಆಚರಿಸುತ್ತಾರೆ.

**ಬೀಗರೂಟ**

ಮದುವೆಯ ಗಡಿಬಿಡಿಯಲ್ಲಿ ಹೊಸದಾಗಿ ಪರಿಚಯವಾದ ಬೀಗರನ್ನು ಸರಿಯಾಗಿ ಮಾತನಾಡಿಸಲು ಆಗಿರುವುದಿಲ್ಲ. ಆದ್ದರಿಂದ ನಾಗೋಲೆಯ ನಂತರ ಬೀಗರೂಟವನ್ನು ಏರ್ಪಡಿಸುತ್ತಾರೆ. ಅಲ್ಲದೆ ಮಂಗಳ ಕಾರ್ಯದಲ್ಲಿ ಮಾಂಸದೂಟ ಮಾಡುವಂತೆ ಇಲ್ಲ. ಹಾಗಾಗಿ ಇದಕ್ಕೆಂದೆ ಒಂದು ಪ್ರತ್ಯೇಕ ದಿನ ನಿಗದಿ ಮಾಡಿ ರುತ್ತಾರೆ. ಎರಡು ಮನೆಯಲ್ಲಿಯು ಆಚರಿಸುತ್ತಾರೆ. ಹೊಸ ಬೀಗರಿಗೆ ಹೊಸ ಬಟ್ಟೆಗಳನ್ನು ಕೊಡುತ್ತಾರೆ. ಅವರನ್ನು ಆದರದಿಂದ ನೋಡಿಕೊಳ್ಳುತ್ತಾರೆ. ಇಲ್ಲಿ ಬಾಡೂಟ[೨೧]ವನ್ನು ವಿಶೇಷವಾಗಿ ಮಾಡಲಾಗಿರುತ್ತದೆ. ಎರಡು ಕಡೆಯ ಸಂಬಂಧಿಗಳು, ಸ್ನೇಹಿತರು ಸೇರಿರುತ್ತಾರೆ. ಊಟವೇ ಇಲ್ಲಿ ವಿಶೇಷತೆ ಪಡೆದಿರುತ್ತದೆ.

**ಸೋಬನ**

ಗಂಡು ಹೆಣ್ಣುಗಳ ಜೀವನದ ಬಹುಮುಖ್ಯ ಹಾಗೂ ಮನಸೆಳೆಯುವ ಕಾರ್ಯ ಇದಾಗಿದೆ. ಬದುಕಿನ ನಿಜವಾದ ತಿರುವು ಇಲ್ಲಿಂದಲೇ ಪ್ರಾರಂಭ. ಇವರಿಬ್ಬರ ಸಂಭ್ರಮದ ಘಳಿಗೆ ಎನ್ನಬಹುದು.

ಮೈ ನೆರೆದಾಗ ಹೆಣ್ಣಿಗೆ ಭಯ, ನಡುಕ, ಜವಾಬ್ದಾರಿಯ ಭೀತಿ, ಮದುವೆಯಾಗುವಾಗ ಒಮ್ಮೊಮ್ಮೆ ಸಂತೋಷವಾದರು ತವರು ಮನೆಯಿಂದ ಗಂಡನ ಮನೆಗೆ ಬರಬೇಕಾಯಿತಲ್ಲ ಎಂಬ ಕೊರಗು ಏನೇನೋ ಅನುಮಾನಗಳು, ದುಃಖ ದುಮ್ಮಾನಗಳು ಹೆಣ್ಣನ್ನು ಆವರಿಸಿರುತ್ತವೆ. ಮೊದಲ ರಾತ್ರಿಯ ಸಮಾಗಮ ದಲ್ಲಿಯೂ ಹೆಣ್ಣಿಗೆ ಒಳಗೊಳಗೆ ಹೆದರಿಕೆ, ಭಯ, ಭೀತಿ ಇಲ್ಲದಿಲ್ಲ. ಅವೆಲ್ಲಾ ಗಂಡನನ್ನು ಅರ್ಥಮಾಡಿ ಕೊಂಡ ಕ್ಷಣದಲ್ಲಿ ಮಾಯವಾಗುತ್ತದೆ.

ಸೋಬನ[೨೨] ನಡೆಯುವುದು ಮದುವೆಯಾಗಿ ಹದಿನೈದು ಅಥವಾ ತಿಂಗಳಿಗೆ, ಹಾಗಾಗಿ ಸೋಬನಕ್ಕೆ ತಿಂಗಳ ಶಾಸ್ತ್ರ ಎಂದು ಕರೆಯುತ್ತಾರೆ. ಇಷ್ಟು ದಿನಗಳವರೆಗೆ ಹೆಣ್ಣು ಗಂಡಿನ ಜೊತೆಗೆ ಒಡನಾಡಿರುವುದರಿಂದ ಸಂಕೋಚ ಭಯ ನಿವಾರಣೆಯಾಗಿರುತ್ತದೆ. ಜನಪದರು ಹೆಣ್ಣುಮಕ್ಕಳಿಗೆ ಹತ್ತು ಹನ್ನೊಂದು ವರ್ಷಗಳು ತುಂಬಿಬಿಟ್ಟರೆ ಆಕಾಶವೇ ಕಳಚಿ ಬಿದ್ದಂತೆ ವರ್ತಿಸುತ್ತಾರೆ. ಈಗಿನ ಕಾಲದಲ್ಲಿ ಬಾಲ್ಯ ವಿವಾಹ ನಿಷಿದ್ಧ. ಈ ಕಾನೂನನ್ನು ಬಿಟ್ಟು ಆಲೋಚನೆ ಮಾಡಿದರೆ, ಭಾರತೀಯರು 'ಶೀಲದ'[೨೩] ಬಗ್ಗೆ ಹೆಚ್ಚಿನ ಗಮನ ಕೊಡುತ್ತಾ ಬಂದಿದ್ದಾರೆ. ಶೀಲವೆಂಬುದು ಗಂಡು ಹೆಣ್ಣಿಗೆ ಇಬ್ಬರಿಗೂ ಅನ್ವಯಿಸುತ್ತದೆ. ಶೀಲವಂತರಾಗಿರಬೇಕು ಎಂದರೆ ಬಾಲ್ಯದಲ್ಲಿಯೇ ಹೆಣ್ಣುಗಂಡನ್ನು ಮದುವೆ ಮಾಡಿದರೆ ಲೈಂಗಿಕ ಪ್ರವೃತ್ತಿ ಹದ್ದು ಬಸ್ತಿನಲ್ಲಿರುತ್ತದೆ ಎಂಬ ಹಲವಾರು ಕಾರಣಗಳಿರಬಹುದು.

ಜನಪದರು ಹೆಚ್ಚಾಗಿ ಶ್ರಮದತ್ತವಾದ ರೈತಾಪಿ ಜೀವನ ನಡೆಸುವುದರಿಂದ, ವಯಸ್ಸಾದಂತೆ ಕೆಲಸ ಮಾಡ ಲಾಗುವುದಿಲ್ಲ. ಅಷ್ಟರಲ್ಲಿಯೇ ಮಗನನ್ನು ಮದುವೆ ಮಾಡಿದರೆ ಒಳಿತು. ಗಟ್ಟಿಯಾಗಿರುವಾಗಲೇ ಮಗ

ಕೈನೆರವಿಗೆ ಬರುತ್ತಾನೆ ಎಂಬ ಹಂಬಲವಿರಬಹುದು. ಕೆಲವು ಜನಾಂಗಗಳಲ್ಲಿ ಮೈನೆರೆದ ಮೇಲೆ ಹೆಣ್ಣು ಮಕ್ಕಳಿಗೆ ಮದುವೆ ಗೊತ್ತಾದರೆ ಮದುವೆಯ ದಿನವೇ ರಾತ್ರಿ ಸೋಬಾನ ಶಾಸ್ತ್ರವನ್ನು ಮಾಡಿಬಿಡು ತ್ತಿದ್ದರು.

ದೀವರಲ್ಲಿ ಸೋಬನದ ಶಾಸ್ತ್ರ ಗಂಡಿನ ಮನೆಯಲ್ಲಿ ನಡೆಯುತ್ತದೆ. ಗೊತ್ತಾದ ದಿನ ಹೆಣ್ಣಿನ ಮನೆಯವರು ಬಣ್ಣದ ಚಾಪೆ, ದಿಂಬು ಮುಂತಾದವುಗಳನ್ನು ತರುತ್ತಾರೆ. ಸಂಜೆ ಊಟವಾದ ಮೇಲೆ ಮದುಮಕ್ಕಳನ್ನು ಹಸೆಗೋಡೆಯ ಕೆಳಗೆ ಕುಳ್ಳಿರಿಸಿ ಮುತ್ತೈದೆಯರು ಅಕ್ಷತೆ ಹಾಕಿ ಆರತಿ ಎತ್ತುತ್ತಾರೆ. ನಂತರ ಎರಡು ಸಣ್ಣ ಮಕ್ಕಳನ್ನು ಮದುಮಕ್ಕಳಂತೆ ಬಾಸಿಂಗವನ್ನು ಕಟ್ಟಿ ಅಲಂಕರಿಸಿ ಕೂರಿಸಿ ಇವರಿಗೆ ಆರತಿ ಎತ್ತುವರು. ನಂತರ ಬಾಸಿಂಗವನ್ನು ಬಿಚ್ಚಿ ಮನೆಯ ಕೋಳುಗೆ (ತೊಲೆ) ಕಟ್ಟುವರು.

ನಂತರ ಒಂದು ಕೋಣೆಯಲ್ಲಿ ಹೆಣ್ಣಿನ ಮನೆಯವರು ತಂದ ಚಾಪೆಯನ್ನು ಹಾಸಿ ದಿಂಬನ್ನು ಹಾಕಲಾಗುತ್ತದೆ. ಆರತಿ ತಟ್ಟೆ, ನೀರು, ಹಣ್ಣು ಹಂಪಲು ಇಟ್ಟಿರುತ್ತಾರೆ. ಮದುಮಗಳು ಹಾಲನ್ನು ಹಿಡಿದುಕೊಂಡು ಮುತ್ತೈದೆಯರೊಟ್ಟಿಗೆ ಕರೆತಂದು ಕೋಣೆಯೊಳಗೆ ಕಳುಹಿಸಿ ಬಾಗಿಲು ಹಾಕಿಕೊಳ್ಳುವರು. ಮಾರನೆಯ ದಿನ ಬೆಳಿಗ್ಗೆ ಕವಣ ಚಪ್ಪರ ಇಳಿಸಲಾಗುತ್ತದೆ. ಹೀಗೆ ಮದುವೆಯ ಕಾರ್ಯಕ್ರಮ ಮುಕ್ತಾಯವಾಗುತ್ತದೆ. ಮದುವೆಯಲ್ಲಿಯು ನಾನಾ ರೀತಿಯ ವಿವಾಹಗಳಿವೆ. ಅವುಗಳು ಸಂದರ್ಭಕ್ಕೆ ತಕ್ಕಂತೆ ನಡೆಯುತ್ತವೆ.

## ಬಾಲ್ಯ ವಿವಾಹ

ಬಾಲ್ಯ ವಿವಾಹವೆಂದರೆ ಜನಪದರು ಚಿಕ್ಕ ವಯಸ್ಸಿನ ಮಕ್ಕಳನ್ನು ವಿವಾಹ ಮಾಡುತ್ತಿದ್ದರು. ಏಳೆಂಟು ವರ್ಷದ ಮಕ್ಕಳನ್ನು ಮದುವೆ ಮಾಡುತ್ತಿದ್ದರು. ಪೂರ್ವಜರಿಗೆ 'ಶೀಲದ' ಮೇಲೆ ಇರುವ ಅತಿಯಾದ ಕಾಳಜಿ ಮತ್ತು ನಾವು ಗಟ್ಟಿಯಾಗಿರುವಾಗಲೇ ಮಕ್ಕಳಿಗೆ ಮದುವೆ ಮಾಡಿದರೆ ೧೦-೧೨ ವರ್ಷಕ್ಕೆ ಹುಡುಗಿ ಮೈನೆರೆಯುತ್ತಾಳೆ. ನಂತರ ಸೋಬನ, ೧೬-೧೭ ವರ್ಷಕ್ಕೆ ಮಕ್ಕಳ ಜನನವಾಗುತ್ತದೆ. ಬೇಗ ಮೊಮ್ಮಕ್ಕಳನ್ನು ನೋಡಬಹುದು ಎಂಬ ಆಸೆ ಇರಬಹುದು. ಹೆಚ್ಚಿನ ಜನರು ಬೇಸಾಯವನ್ನು ಅವಲಂಬಿಸಿದ ರೈತ ಕುಟುಂಬದಲ್ಲಿ ತಂದೆ ಗಟ್ಟಿಯಾಗಿರುವಾಗಲೆ ಮಗ ಕೈನೆರವಿಗೆ ಬರುವಂತೆ ಇರಬೇಕು. ತಂದೆ ಮೊಮ್ಮಗನನ್ನು ನೋಡಬೇಕು ಎಂಬ ಹಂಬಲ ಬಾಲ್ಯ ವಿವಾಹಕ್ಕೆ ಪ್ರೇರಪಣೆ ಆಗಿರಬೇಕು. ಬಾಲ್ಯದಲ್ಲಿ ವಿವಾಹ ಮಾಡುವುದರಿಂದ ಇಬ್ಬರೂ ಸಕಾಲದಲ್ಲಿ ಮದುವೆಯಾಗಿ ಪ್ರಾಯಬರುತ್ತಿದಂತೆ ಲೈಂಗಿಕ ತೃಪ್ತಿ ಹೊಂದುವುದರಿಂದ ಲೈಂಗಿಕ ಪ್ರವೃತ್ತಿಯನ್ನು ಹದ್ದುಬಸ್ತಿನಲ್ಲಿಟ್ಟುಕೊಳ್ಳಲು ಸಹಾಯಕವಾಗುತ್ತದೆ ಎಂಬ ಕಾರಣಗಳಿಗೆ ಬಾಲ್ಯ ವಿವಾಹ ಮಾಡುತ್ತಿರಬಹುದು. ಬಾಲ್ಯ ವಿವಾಹವಾದ ನಂತರ ಹೆಣ್ಣು ತನ್ನ ತಾಯಿತಂದೆಯರ ಮನೆಯಲ್ಲಿಯೇ ಇರಬೇಕಾಗಿತ್ತು. ಮೈ ನೆರೆದ ತಕ್ಷಣ ತಂದೆ ತಾಯಿಯರು ಬೀಗರಿಗೆ ಸುದ್ದಿ ಮುಟ್ಟಿಸುತ್ತಿದ್ದರು. ಹುಡುಗನಿಗೆ ಹೆಂಡತಿ ಮೈ ನೆರೆದ ಸುದ್ದಿ ತಿಳಿದ ತಕ್ಷಣ ತನ್ನ ಮೈಮೇಲಿನ ಹೊಸ ಬಟ್ಟೆಗಳನ್ನು ಕಳಚಿ ಹಳೆಯ ಬಟ್ಟೆಗಳನ್ನು ತೊಡುತ್ತಿದ್ದನಂತೆ. ಕಾರಣ ಮೈನೆರೆದ ಸುದ್ದಿ ಊರಿನವರಿಗೆ ಗೊತ್ತಾದರೆ, ಗದ್ದೆಗೆ, ಹಿತ್ತಲಿಗೆ ಮುಂತಾದ ಕಡೆಯಲ್ಲಿ ಓಡಾಡುವಾಗ ಅವನ ಸಂಗಡಿಗರು, ಸಂಬಂಧಿಗಳು, ಬಣ್ಣದ ನೀರನ್ನು ತೆಗೆದುಕೊಂಡು ಹುಡುಗನಿಗೆ ಹಾಕುತ್ತಿದ್ದರು. ಈಗ ಈ ಪದ್ಧತಿ ಅಷ್ಟಾಗಿ ಕಂಡುಬರುವುದಿಲ್ಲ. ಇದನ್ನೆಲ್ಲಾ ಹಿರಿಯರು ನೆನಪಿಸಿಕೊಳ್ಳುತ್ತಾರೆ.

ಈಗಿನ ಕಾಲದಲ್ಲಿ ಬಾಲ್ಯವಿವಾಹ ನಿಷಿದ್ಧ. ಕಾನೂನು ಇದಕ್ಕೆ ಅಡ್ಡಬರುತ್ತದೆ. ಸಂವಿಧಾನಬಾಹಿರವಾಗುತ್ತದೆ. ಬಾಲ್ಯವಿವಾಹದಿಂದಾಗಿ ಅವರಿಬ್ಬರಲ್ಲಿ ಯಾವುದೇ ತಿಳುವಳಿಕೆ ಮೂಡಿರುವುದಿಲ್ಲ. ಇವರ ಇಷ್ಟಕ್ಕೆ ವಿರುದ್ಧವಾಗಿ ಹಿರಿಯರು ತೆಗೆದುಕೊಂಡ ನಿರ್ಧಾರವಾಗಿರುತ್ತದೆ ಎಂಬ ಒಂದು ಕಾರಣವಾದರೆ, ಜನಸಂಖ್ಯಾ ಸ್ಫೋಟ ಉಂಟಾಗಿ ಸರ್ಕಾರಕ್ಕೆ ತಲೆನೋವು ಬರುತ್ತದೆ ಎಂಬ ಕಾರಣವು ಇದೆ. ಒಟ್ಟಾರೆ ಈ ಪದ್ಧತಿ ಭಾಗಶಃ ಕಣ್ಮರೆಯಾಗಿದೆ.

## ತೊಟ್ಟಿಲು ಮದುವೆ

ಅಕ್ಕನ ಮಕ್ಕಳು, ಸೋದರ ಮಾವನ ಸಂಬಂಧ ಹೀಗೆ ಎರಡು ಕುಟುಂಬಗಳ ಹಿರಿಯರು ತೊಟ್ಟಿಲಲ್ಲಿ ಆಡುತ್ತಿರುವ ಮಗುವಿಗೆ ವಿವಾಹ ಸಂಬಂಧ ಕೂಡ ಬಾಲ್ಯ ವಿವಾಹವಾಗಿದೆ. ಎರಡು ಕುಟುಂಬಗಳ ಸಂಬಂಧ ಅಥವಾ ತವರು ಮನೆಯ ಸಂಬಂಧ ಎಲ್ಲಿ ನಮ್ಮ ತಲೆಮಾರಿಗೆ ಮುಕ್ತಾಯವಾಗುತ್ತದೋ ಎಂದು ತೊಟ್ಟಿಲಲ್ಲಿ ಆಡುತ್ತಿರುವ ಶಿಶುಗಳನ್ನು ಮದುವೆ ಮಾಡುತ್ತಾರೆ.

ಇದರಲ್ಲಿಯೇ 'ತೊಟ್ಟಿಲು ಗಿರಕಿ' ಮದುವೆ ಎಂಬುದು ಇದೆ. ಅಣ್ಣ ಅಥವಾ ತಮ್ಮನಿಗೆ ಗಂಡು ಮಗುವಾದರೆ, ಅಕ್ಕ ಅಥವಾ ತಂಗಿಗೆ ಹೆಣ್ಣು ಮಗುವಾದರೆ. ತೊಟ್ಟಿಲು ಶಾಸ್ತ್ರ ಮಾಡುವಾಗ. ಮಗುವನ್ನು ಮಡಿಲಿಗೆ ತೆಗೆದುಕೊಂಡು ದೊಡ್ಡವಳಾದ ಮೇಲೆ ನನ್ನ ಮಗನಿಗೆ ಕೊಡಬೇಕೆಂದು ವೀಳ್ಯ ಬದಲಾಯಿಸಲಾಗುತ್ತದೆ. ಈ ರೀತಿಯ ಮದುವೆಗಳು ಬಹಳ ವಿರಳ.

## ಅಳಿಯ ಸಂತಾನ ಪದ್ಧತಿ

ಅಳಿಯ ಸಂತಾನ ಪದ್ಧತಿಯಲ್ಲಿ ಎರಡು ರೀತಿಯ ಮದುವೆಗಳಿವೆ. ತೆಂಗಿನ ದೀವರಲ್ಲಿ (ಘಟ್ಟದ ಕೆಳಗೆ) ಗಂಡುಮಕ್ಕಳಿದ್ದು, ಹೆಣ್ಣು ಮಕ್ಕಳ ಮದುವೆ ಮಾಡಿದ ನಂತರ ಸಮಸ್ತ ಆಸ್ತಿಗೆ ಅಳಿಯ ವಾರಸುದಾರನಾಗುತ್ತಾನೆ. ಈ ಮನೆಯ ಗಂಡುಮಕ್ಕಳು ಇನ್ನೊಂದು ಮನೆಯ ಅಳಿಯ ಸಂತಾನಕ್ಕೆ ಹೋಗಬೇಕು. ಹುಟ್ಟಿದ ಮನೆಯ ಆಸ್ತಿಯಲ್ಲಿ ಯಾವುದೇ ಹಕ್ಕುಗಳಿಲ್ಲ.

ಇನ್ನೊಂದು ರೀತಿ ಅಂದರೆ ಗಂಡು ಮಕ್ಕಳು ಇಲ್ಲದೆ ಹೆಣ್ಣುಮಕ್ಕಳು ಇದ್ದಾಗ ಹಿರಿಯ ಮಗಳಿಗೆ ಮದುವೆ ಮಾಡಿ ಅಳಿಯನನ್ನು ಮನೆಯಲ್ಲಿಟ್ಟುಕೊಂಡು ಸಂಸಾರ ಜವಾಬ್ದಾರಿ ಹೊರಿಸಲಾಗುತ್ತದೆ. ಹಾಗೂ ಹೆಣ್ಣು ಮಕ್ಕಳು ಇದ್ದು ಇವರಿಗೆ ಸಣ್ಣ ವಯಸ್ಸಿನ ತಮ್ಮಂದಿರಿದ್ದು ಸಂಸಾರ ನಡೆಸುವುದಕ್ಕೋಸ್ಕರ ಹಿರಿಯ ಮಗಳ ಮದುವೆ ಮಾಡಿ ಅಳಿಯನನ್ನು ಮನೆಯಲ್ಲಿಟ್ಟುಕೊಂಡು ಜವಾಬ್ದಾರಿ ವಹಿಸಲಾಗುತ್ತಿತ್ತು. ಆದರೆ ಗಂಡು ಮಕ್ಕಳು ವಯಸ್ಸಿಗೆ ಬಂದ ಮೇಲೆ ಅವರಿಗೆ ಜವಾಬ್ದಾರಿ ವಹಿಸಿ (ಇಷ್ಟಪಟ್ಟರೆ) ಆಸ್ತಿಯಲ್ಲಿ ಸ್ವಲ್ಪ ಭಾಗ ಪಡೆದು ಬೇರೆ ಮನೆ ಮಾಡಿ ಇರುತ್ತಿದ್ದರು. ಈ ರೀತಿಯ ಅಳಿಯ ಸಂತಾನ ಪದ್ಧತಿ ದೀವರಲ್ಲಿದೆ.

## ಹೆಣ್ಣಿಗೆ ಹೆಣ್ಣು (ವಿನಿಮಯ ಪದ್ಧತಿ)

ಎರಡು ಕುಟುಂಬಗಳಲ್ಲಿ ಗಂಡು ಹೆಣ್ಣುಗಳ ಜೋಡಿ ಇದ್ದು ಆ ಮನೆಯ ಹೆಣ್ಣು ಈ ಮನೆಗೆ ಸೊಸೆಯಾಗಿ, ಈ ಮನೆಯ ಹೆಣ್ಣು ಆ ಮನೆಗೆ ಸೊಸೆಯಾಗಿ ಬರುವುದಕ್ಕೆ 'ಹೆಣ್ಣಿಗೆ ಹೆಣ್ಣು' ಎಂದು ಈ ರೀತಿಯ ಮದುವೆಗೆ

ಹಲವು ಕಾರಣಗಳಿವೆ. ಎರಡು ಕುಟುಂಬಗಳ ಸಂಬಂಧ ಚೆನ್ನಾಗಿರಲೆಂದು, ಆ ಮನೆಯ ಹೆಣ್ಣು ಈ ಮನೆಯಲ್ಲಿ, ಈ ಮನೆಯ ಹೆಣ್ಣು ಆ ಮನೆಯಲ್ಲಿ ಇರುವುದರಿಂದ ಹೆಣ್ಣಿಗೆ ತೊಂದರೆಯಾಗುವುದಿಲ್ಲ, ಕಷ್ಟ ನಷ್ಟಗಳು ಬರುವುದಿಲ್ಲ. ಮನೆಯ ಹೆಣ್ಣು ಮಕ್ಕಳಿಗೆ ಮದುವೆಯಾಗಲು ಗಂಡು ಸಿಗುತ್ತಿರುವುದಿಲ್ಲ. ಹುಡುಗಿಗೆ ಯಾವುದಾದರು ಐಬು ಇರಬಹುದು, ಇತ್ಯಾದಿ. ಇಂತಹ ಪರಿಸ್ಥಿತಿಯಲ್ಲಿ ಗಂಡು ಅಥವಾ ಹೆಣ್ಣು ತ್ಯಾಗಕ್ಕೆ ಸಿದ್ಧವಾಗಿ ಹೆಣ್ಣಿಗೆ ಹೆಣ್ಣು ಮದುವೆಗೆ ಒಪ್ಪುತ್ತಾರೆ. ಗಂಡಿಗೆ ಮನೆಯ ಸಂಸಾರದ ಜವಾಬ್ದಾರಿ ಇರುವುದರಿಂದ ಆತ ತ್ಯಾಗಕ್ಕೆ ಸಿದ್ಧವಾಗಲೇಬೇಕು.

**ಸೀರುಡಿಕೆ : (ಕೂಡಿಕೆ)**

ಮದುವೆಯಾಗಿ ಹೆಂಡತಿ ತೀರಿಕೊಂಡರೆ ಎರಡನೆಯ ಮದುವೆಯಾಗುವುದಕ್ಕೆ ಸೀರುಡಿಕೆ. ಅಂದರೆ ವಿಧುರ ಮದುವೆಯಾಗುವುದು. (ಗಂಡ ಸತ್ತ ಹೆಣ್ಣು ಮದುವೆಯಾದದ್ದು ಮಲೆನಾಡಿನ ಕೆಲಭಾಗದಲ್ಲಿದೆ) ವಿಧುರ ಮದುವೆಯಾದ ಹೆಣ್ಣಿಗೆ ಮೊದಲ ಹೆಂಡತಿಯ ಸ್ಥಾನ ಮಾನಗಳೇ ಲಭ್ಯ. ಮಂಗಳ ಕಾರ್ಯದಲ್ಲಿ ಭಾಗಿಯಾಗ ಬಹುದು. ಈ ರೀತಿಯ ಮದುವೆ ಆಡಂಬರಗಳಿಲ್ಲದೆ, ಸರಳವಾಗಿ ನಡೆಯುತ್ತವೆ. ಹೆಚ್ಚಿನ ಮದುವೆಗಳು ದೇವಸ್ಥಾನದಲ್ಲಿ ಜರುಗುತ್ತವೆ.

ಕೂಡಿಕೆಯಲ್ಲಿ ಒಬ್ಬರ ಸಾವು ಸಂಭವಿಸಬೇಕೆಂದೇನು ಇಲ್ಲ. ಹಿರಿಯ ಹೆಂಡತಿಗೆ ಮಕ್ಕಳಾಗದಿದ್ದರೆ ಈ ಸಾಧ್ಯತೆ ಕಡಿಮೆ ಇದ್ದರೆ, ಎರಡನೆಯ ಮದುವೆಯಾಗಬಹುದು. ಮೊದಲ ಹೆಂಡತಿ ತಮ್ಮ ವಂಶ ಬೆಳೆಯಲೆಂದು ಕೂಡಿಕೆಗೆ ಸಮ್ಮತಿಸುತ್ತಾಳೆ. ಮನೆಯಲ್ಲಿ ಇವರಿಬ್ಬರಿಗೂ ಗೌರವದ ಸ್ಥಾನವಿದೆ. ಕೆಲ ಜನಾಂಗಗಳಲ್ಲಿ ಬಂಜೆ ಕೈಯಲ್ಲಿ ಮಕ್ಕಳನ್ನು ಕೊಡುವುದಿಲ್ಲ. ಆದರೆ ದೀವರಲ್ಲಿ ಅಂತಹ ಭಾವನೆ ಇಲ್ಲ.

**ಬಹುಪತ್ನಿತ್ವ**

ಒಬ್ಬ ವ್ಯಕ್ತಿ ಒಂದಕ್ಕಿಂತ ಜಾಸ್ತಿ ಮದುವೆಯಾಗುವುದು 'ಬಹುಪತ್ನಿತ್ವ' ಪದ್ಧತಿ ಎನ್ನುವರು. 'ಸೀರುಡಿಕೆ' ಅಥವಾ 'ಕೂಡಿಕೆ' ಇದರ ಅಡಿಯಲ್ಲಿ ಬಂದರೂ ಇದಕ್ಕೆ ಕಾನೂನಿನ ಮತ್ತು ಹೆಂಗಳೆಯರ, ಹಿರಿಯರ, ಸಹಮತವಿರುತ್ತದೆ. ಬಹುಪತ್ನಿತ್ವ[೨೨] ಗಂಡಿನ ಬಿಗಿ ಪ್ರತಿಷ್ಠೆಯ, ಸಂಕೇತವಾದರೂ ಕೆಲವೊಂದು ಸಂದರ್ಭದಲ್ಲಿ ಪರಿಸ್ಥಿತಿಯ ಕೈಗೊಂಬೆಯಾಗಿ, ಲೈಂಗಿಕತೆಯಲ್ಲಿ ವಿಹರಿಸಿ, ಬಹುಪತ್ನಿತ್ವವನ್ನು ಗಂಡು ತನ್ನಿಂದ ತಾನೆ ಮಾಡಿಕೊಳ್ಳುತ್ತಾನೆ.

**೪.೪. ಸೀಮಂತ ಕಾರ್ಯ**

ದೀವರ ಮಹಿಳೆ ಕುಟುಂಬದ ಆರ್ಥಿಕ ಸ್ತಂಭ. ಪ್ರತಿಯೊಂದು ಕೆಲಸದ ನಿರ್ವಹಣೆಯು ಈಕೆಯದ್ದೆ. ತವರು ಮನೆಯವರು ತಿಂಗಳಿಗೊಮ್ಮೆ ಅಥವಾ ಹಬ್ಬಕ್ಕೆ ಮಗಳನ್ನು ಕರೆಯುವುದು ಕಳುಹಿಸುವುದು ಮಾಡುತ್ತಿರುತ್ತಾರೆ. ಒಂದು ಶುಭ ಘಳಿಗೆಯಲ್ಲಿ ಆಕೆಗೆ ಮುಟ್ಟು ನಿಲ್ಲುತ್ತದೆ. ಐದು, ಏಳು, ಅಥವಾ ಒಂಬತ್ತು ತಿಂಗಳು ತುಂಬುವ ಮೊದಲೆ ತನ್ನ ತಾಯಿ ಬಂದು ಮೊದಲ ಹೆರಿಗೆಗಾಗಿ ಕರೆದುಕೊಂಡು ಹೋಗಬೇಕು. ಅಪ್ಪರೊಳಗೆ ಬಸಿರಾಗಿದ್ದಾಳೆ ಎಂಬ ಸುದ್ದಿ ತಿಳಿಯುತ್ತಿದ್ದಂತೆ, ಕಜ್ಜಾಯದ ಅಡುಗೆ ಮಾಡಿಕೊಂಡು ಮಗಳನ್ನು

ಮಾತನಾಡಿಸಿಕೊಂಡು ಹೋಗಿರುತ್ತಾರೆ. ಏಳನೆಯ ತಿಂಗಳು ತುಂಬುವಾಗ ಸೀಮಂತ ಕಾರ್ಯ ಮಾಡುತ್ತಾರೆ. ಚೊಚ್ಚಲ ಹೆರಿಗೆ ಮತ್ತು ಬಾಣಂತನ ತಾಯಿಯ ಮನೆಯಲ್ಲಿಯೇ ಆಗಬೇಕು. ಅದರಲ್ಲೂ ಮೊದಲ ಹೆರಿಗೆ ಬಹಳ ಕಷ್ಟ. ತಾಯಿಯ ಸಾಮೀಪ್ಯ, ಶುಶ್ರೂಷೆ, ಧೈರ್ಯ, ಮನಸ್ಸಿಗೆ ನೋವಾಗದಂತೆ ನೋಡಿ ಕೊಳ್ಳುವುದು ಮುಂತಾದ ಜವಾಬ್ದಾರಿ ಇರುವುದು ತಾಯಿಯಲ್ಲಿ ಮಾತ್ರ. ಏಳು ತಿಂಗಳಾಗಿದೆ ಎಂಬುದನ್ನು ತಿಳಿದ ಮೇಲೆ 'ಸೀಮಂತ'ವನ್ನು ಮಾಡಿ ಕರೆದುಕೊಂಡುಹೋಗಲು ತವರು ಮನೆಗೆ (ಬೀಗರ ಮನೆಗೆ) ಹೇಳಿ ಕಳಿಸುತ್ತಾರೆ. ಈ ಸುದ್ದಿ ತಿಳಿದ ಬೀಗರು ಕೆಲ ಮುತ್ತೈದೆಯರೊಂದಿಗೆ ಮಗಳನ್ನು ಕರೆದುಕೊಂಡು ಹೋಗಲು ಒಂದು ಒಳ್ಳೆಯ ಗೊತ್ತಾದ ದಿನವನ್ನು ನೋಡಿ ಮಗಳ ಮನೆಗೆ (ಅಳಿಯನ ಮನೆ) ಬರುತ್ತಾರೆ. ಬೀಗರ ಮನೆಯಲ್ಲಿ ಅಂದು ಸಿಹಿಯೂಟದ ವ್ಯವಸ್ಥೆಯಿರುತ್ತದೆ. ಹೋದವರೆಲ್ಲರಿಗೂ ಆದರ ಸ್ವಾಗತಕೋರಿ ಅವರನ್ನು ಕುಳ್ಳಿರಿಸಿ ಕುಡಿಯಲು ನೀರು ಬೆಲ್ಲ ಕೊಟ್ಟು ಉಪಚಾರ ಮಾಡಲಾಗುತ್ತದೆ. 'ಅತಿಥ್ಯಕ್ಕೆ ಮಲೆನಾಡು ಚೆಂದ' ಎಂಬ ಮಾತು ಸತ್ಯವಾಗಿದೆ.

'ಸೀಮಂತ'ದ ಹೆಣ್ಣಿಗೆ ಗಂಡಿನ ಮನೆಯವರು ಹೊಸ ಸೀರೆ, ಕುಪ್ಪಸ ತೊಡಿಸಿ, ಹೂವು ಮುಡಿಸಿ, ಹೊಸ ಬಳೆ ತೊಡಿಸಿ ಅಲಂಕಾರ ಮಾಡಿ ಹಸೆ ಗೋಡೆಯ ಎದುರಿಗೆ ಕುಳ್ಳಿಸುತ್ತಾರೆ. ಯಥಾಪ್ರಕಾರ, ಕಳಸ, ಅಕ್ಷತೆ ಇರುತ್ತದೆ. ಒಂದು ತಟ್ಟೆಯಲ್ಲಿ ಅಕ್ಕಿ, ಹಣ್ಣು, ಹೂ, ಎಲೆ, ಅಡಿಕೆ, ಅರಿಸಿನದ ಕೊಂಬು ಮುಂತಾದವು ಇರುತ್ತವೆ. ಬಸುರಿಯ ಕೈಯಲ್ಲಿ ಇಟ್ಟು ಅಕ್ಷತೆ ಹಾಕುತ್ತಾರೆ. ಹೀಗೆ ಹೆಣ್ಣಿನ ಮನೆಯವರು ಹೊಸ ಸೀರೆ ಕುಪ್ಪಸ ತಂದು ಮಡಿಲು ತುಂಬುವರು. ಇದಕ್ಕೆ ಮಡಿಲು ತುಂಬುವಶಾಸ್ತ್ರ ಎಂದು ಕರೆಯುತ್ತಾರೆ.

ಹೀಗೆ ಸೀಮಂತ ಮಾಡಿಸಿಕೊಂಡು ಬಂದ ಹೆಣ್ಣು ಒಂದು ಮಗುವಿಗೆ ಜನ್ಮ ಕೊಟ್ಟು, ಆ ಮಗುವಿಗೆ ಸುಮಾರು ಒಂದು ವರ್ಷ ತುಂಬುವವರೆಗೆ ಇದ್ದು ಬರುತ್ತಾಳೆ. ಅಥವಾ ಮೂರು ತಿಂಗಳಿಗೆ ಗಂಡನ ಮನೆಗೆ ಬರಬೇಕು. ಇದೊಂದು ಹಿರಿಯರ ಆಶೀರ್ವಾದ ಮತ್ತು ಚೊಚ್ಚಲ ಬಸುರಿಗೆ ಧೈರ್ಯ ತುಂಬುವ ಶಾಸ್ತ್ರ ಎನ್ನಬಹುದು. ಭೂಮಿ ಹುಣ್ಣಿಮೆಯಂದು ಭೂಮಿಗೆ, ಗದ್ದೆಗೆ ಫಲವಂತಿಕೆ ಹಬ್ಬವನ್ನು ಆಚರಿಸುತ್ತಾರೆ. ಭೂಮಿಯನ್ನು ಸ್ತ್ರೀಯೆಂದು ತಿಳಿದು ಆಕೆಗೆ ಬಯಕೆ, ಸೀಮಂತ ಕಾರ್ಯ ಮಾಡುತ್ತಾರೆ.

## ೪.೫. ಶವಸಂಸ್ಕಾರ

ಮಲೆನಾಡಿನ ದೀವರ ಶವಸಂಸ್ಕಾರ ಈ ರೀತಿಯಿದೆ. ದೀವರಲ್ಲಿ ಶವವನ್ನು ಹೂಳುವ ಮತ್ತು ಸುಡುವ ಎರಡು ಪದ್ಧತಿಗಳಿವೆ. ಮದುವೆಯಾಗದ ಗಂಡು ಹೆಣ್ಣು ಮತ್ತು ಮಕ್ಕಳು ಮರಣ ಹೊಂದಿದರೆ ಹೂಳುತ್ತಾರೆ. ಮದುವೆಯಾದ ನಂತರ ಮರಣ ಹೊಂದಿದವರನ್ನು ಸುಡುತ್ತಾರೆ. ಸಾವು ಇನ್ನೇನು ಸಮೀಪಿಸುತ್ತಿದೆ ಎನ್ನುವಾಗ ಮನೆಯವರೆಲ್ಲರೂ ಮರಣಿಸುವವನ ಬಾಯಿಗೆ ತಿಳಿಗಂಜಿಯನ್ನು ಬಿಡುತ್ತಾರೆ. ಜೀವ ಹೋದ ನಂತರ ಅದೇ ಸ್ಥಳದಲ್ಲಿಯೇ ಶವವನ್ನು ಇಟ್ಟು ಗಂಡಸಾದರೆ ಪಂಚೆ, ಹೆಂಗಸಾದರೆ ಸೀರೆಯನ್ನು ಮುಚ್ಚುವರು. ಒಂದು ಎರಡು ವರ್ಷದ ಮಕ್ಕಳು ಮರಣ ಹೊಂದಿದರೆ ಕೈಯಲ್ಲಿ ಎತ್ತಿಕೊಂಡು ಹೋಗಿ ಕುಣಿ ತೆಗೆದು ಮಣ್ಣು ಮುಚ್ಚಿ ಬರುತ್ತಾರೆ. ಮದುವೆಯಾಗದವರು ಮರಣ ಹೊಂದಿದರೆ ಎಂಟು ಅಡಿ ಉದ್ದದ ಗಟ್ಟಿಜಾತಿಯ ಮರದ ಗಳವನ್ನು ತಂದು ಶವವನ್ನು ಅಂಗಾತನ ಮಲಗಿಸಿ ಶವದ ಮಧ್ಯೆ ಗಳ ಇಟ್ಟು ಚಾಪೆ ಬಟ್ಟೆ ಸಹಿತ

ಮುಚ್ಚಿ ಗಟ್ಟಿಯಾದ ಬಳ್ಳಿಯಿಂದ ಶವದ ನಡುವೆ ಇರುವ ಗಳಕ್ಕೆ ಗಟ್ಟಿಯಾಗಿ ಬಿಗಿಯುತ್ತಾರೆ. ಈ ಪದ್ಧತಿಗೆ ದಡಿಗೆ ಕಟ್ಟುವುದು ಎನ್ನುವರು. ದಡಿಗೆಯನ್ನು ಎರಡು ಜನ ಹಿಡಿದುಕೊಂಡು ಸ್ಮಶಾನಕ್ಕೆ ಹೋಗಿ ಸೊಪ್ಪು ಕಡಿದು ನೆಲದ ಮೇಲೆ ಹಾಕಿ ಶವವನ್ನು ಸೊಪ್ಪಿನ ಮೇಲೆ ಇಡುವರು. ನಂತರ ಗುಂಡಿ ತೋಡಲು ಪ್ರಾರಂಭಿಸುವರು. ನಾಲ್ಕು ಅಡಿ ಆಳ, ಆರು ಅಡಿ ಉದ್ದ, ಎರಡೂವರೆ ಅಡಿ ಅಗಲದ ಗುಂಡಿ ತೆಗೆದ ನಂತರ ಶವದ ಮೇಲಿರುವ ಬಟ್ಟೆ, ಉಡುದಾರ, ಒಡವೆಗಳನ್ನು ಬಿಚ್ಚಿ ಬೆತ್ತಲೆಗೊಳಿಸಿ ಗುಂಡಿಯಲ್ಲಿ ಇಡುವರು. ಶವದ ಮೇಲೆ ಹಸಿ ಸೊಪ್ಪು ಮುಚ್ಚಿ ಮಣ್ಣು ಮುಚ್ಚುತ್ತಾರೆ. ಶವದ ಹಿಂದೆ ಹೋದವರು ಒಂದೊಂದು ಮುಷ್ಟಿ ಮಣ್ಣು ಹಾಕುವರು. ಶವದಿಂದ ಬಿಚ್ಚಿದ ಬಟ್ಟೆ ಚಾಪೆಯನ್ನು ಗುಂಡಿಯ ಪಕ್ಕದಲ್ಲಿ ಹಾಕುತ್ತಾರೆ.

ಐದನೇ ದಿವಸ ಸೂತಕ ಆಚರಿಸುತ್ತಾರೆ. ಆ ದಿವಸ ಮನೆಯನ್ನೆಲ್ಲ ಸಗಣಿಯಿಂದ ಸಾರಿಸಿ ಸ್ವಚ್ಛಗೊಳಿಸಿದ ನಂತರ ಎಲ್ಲರು ಸ್ನಾನ ಮಾಡಿ ತುಳಸಿ ನೀರನ್ನು ಮೈಗೆ ಚುಮುಕಿಸಿಕೊಂಡು ಶುದ್ಧರಾಗುವರು. ಎರಡು ಜನ ಗಂಜಿ, ಅನ್ನ, ತಿಂಡಿ ಪದಾರ್ಥಗಳನ್ನು ಸ್ಮಶಾನಕ್ಕೆ ತೆಗೆದುಕೊಂಡು ಹೋಗಿ ಶವವನ್ನು ಹುಗಿದ ಸ್ಥಳದಲ್ಲಿ ಎಡೆ ಮಾಡಿ ಇಟ್ಟು ಬರುವರು.

ಮದುವೆಯಾದವರು ಮರಣ ಹೊಂದಿದರೆ ಸಾಯುವ ಮುಂಚೆ ಗಂಜಿಯನ್ನು ಬಾಯಿಗೆ ಕುಟುಂಬದವರೆಲ್ಲರೂ ಬಿಡುತ್ತಾರೆ. ಜೀವ ಹೋದ ನಂತರ ಶವವನ್ನು ಸತ್ತ ಸ್ಥಳದಿಂದ ಹೊರ ತಂದು ಮನೆಯ ಮುಂದಿನ ಬಾಗಿಲಲ್ಲಿ ಕೂರಿಸಿ ಹಳೇ ಬಟ್ಟೆಯನ್ನು ಬಿಚ್ಚಿ ಸ್ನಾನ ಮಾಡಿಸುವರು. ನಂತರ ಹೊಸ ಬಟ್ಟೆಯನ್ನು ತೊಡಿಸಿ ಪಂಚೆಯನ್ನು ಸೊಂಟಕ್ಕೆ, ತಲೆಗೆ ರುಮಾಲು ಸುತ್ತುವರು. ಮನೆಯ ಒಳಗಡೆ ಶವವನ್ನು ತಂದು ಗೋಡೆಗೆ ಒರಗಿಸಿ, ಕಾಲುಗಳನ್ನು ಮಡಿಚಿ ಚಕ್ಕಲು ಬಕ್ಕಲಾಗಿ ಕೂರಿಸಿ ಕುತ್ತಿಗೆಯ ಪಕ್ಕದಲ್ಲಿ ಎರಡೂ ಕಡೆ ಕುತ್ತಿಗೆ ಅಲ್ಲಾಡದಂತೆ ಗೋಡೆಗೆ ಎರಡು ಗೂಟಗಳನ್ನು ಹೊಡೆಯುವರು. ಮುಂದೆ ಶವದ ಗಂಟಲಿನ ಹತ್ತಿರ ಒಂದು ಅಡ್ಡ ಗೂಟಯಿಟ್ಟು ಎರಡೂ ಕಡೆಯಿಂದ ಗೂಟಗಳಿಗೆ ದಾರದಿಂದ ಕಟ್ಟುವರು. ಈ ಪದ್ಧತಿಗೆ ಕಟ್ಟಿ ಕೂರಿಸುವುದು ಎನ್ನುವರು. ನಂತರ ಹಿತ್ತಾಳೆ ಗಿಂಡಿಗೆ ನೀರು ಹಾಕಿ ಮಾವಿನ ತೊಳಲು ಗಿಂಡಿಯಲ್ಲಿಟ್ಟು ಶವದ ನೆತ್ತಿಯ ಮೇಲೆ ಇಡುವರು. ಗಿಂಡಿ ಬೀಳದಂತೆ ದಾರದಿಂದ ಕಟ್ಟುವರು. ಸತ್ತವನು ಗಂಡಸಾಗಿದ್ದರೆ ಹೆಂಡತಿಗೆ ಹೊಸ ಸೀರೆ ಉಡಿಸಿ ತಲೆಗೆ ಎಣ್ಣೆ ಹಾಕಿ ಕೂದಲು ಬಾಚಿ ಗಂಡನ ಶವದ ಪಕ್ಕದಲ್ಲಿ ಕೂರಿಸುವರು. ಶವದ ಮುಂದೆ ಮಡಿಲಕ್ಕಿ, ತೆಂಗಿನಕಾಯಿ, ಅಡಿಕೆ, ಎಲೆ, ಇಡುವರು. ಸಂಬಂಧಿಕರು, ಆಳಿಯಂದಿರು, ಹಿತೈಶಿಗಳು ತಾವು ತಂದ ಹೂಮಾಲೆ ಶವಕ್ಕೆ ಹಾಕಿ ತೆಂಗಿನಕಾಯಿ ಒಡೆದು ಊದಿನ ಕಡ್ಡಿ ಹಚ್ಚಿ ಅಂತಿಮ ನಮಸ್ಕಾರ ಮಾಡುವರು. ನಂತರ ಪುರೋಹಿತರ ಮನೆಗೆ ಗ್ರಾಮದವನೊಬ್ಬ ಹೋಗಿ ಮರಣಿಸಿದ ಘಳಿಗೆ ಒಳ್ಳೆಯದೆ, ಕೆಟ್ಟದ್ದೇ, ಮನೆ ಬಿಡುವುದು ಬಂದಿದೆಯೆ ಸೂತಕ ಮಾಡುವ ದಿವಸ ಇತ್ಯಾದಿ ವಿಷಯಗಳನ್ನು ಪುರೋಹಿತರಿಂದ ತಿಳಿದುಕೊಂಡು ಬರುವನು. ದೂರದ ಊರಿನ ಸಂಬಂಧಿಕರಿಗೆಲ್ಲಾ ಸುದ್ದಿ ಮುಟ್ಟಿಸಿ ಅವರೆಲ್ಲಾ ಬಂದ ನಂತರ ಶವ ಸಂಸ್ಕಾರಕ್ಕೆ ಹೆಣ ಎತ್ತುವ ಕಾರ್ಯ ಮಾಡುವರು.

ಶವ ಸಂಸ್ಕಾರ ಮಾಡುವ ಜಾಗದಲ್ಲಿ ಎರಡು ಗಾಡಿಯಷ್ಟು ಕಟ್ಟಿಗೆ ತಂದು, ಅದನ್ನು ಆರು ಅಡಿ ಉದ್ದ ಮೂರು ಅಡಿ ಅಗಲ ನಾಲ್ಕು ಅಡಿ ಎತ್ತರ ಕಟ್ಟಿಗೆಯನ್ನು ಮಂಚದ ರೀತಿ ಜೋಡಿಸಿ ಅದರ ಮೇಲೆ ಗಂಧದ ಮತ್ತು ಇತರೆ ಜಾತಿಯ ಸೊಪ್ಪು ಹಾಕುವರು. ಕಟ್ಟಿಗೆ ಜೋಡಿಸಿದ ಕೆಲವರು ಅಲ್ಲೇ ಉಳಿದು ಎಂಟು ಹತ್ತು

ಜನ ಎಂಟು ಅಡಿ ಉದ್ದದ ಎರಡು ಗಳ, ಮೂರುವರೆ ಅಡಿ ಉದ್ದ ಸಣ್ಣಸಣ್ಣ ಗಳದ ಜೊತೆಗೆ ಮನೆಗೆ ಬಂದು ಚಟ್ಟ ಕಟ್ಟುವರು. ಶವವನ್ನು ತಂದು ಚಟ್ಟದ ಮೇಲೆ ಈಚಲು ಚಾಪೆಯನ್ನು ಹಾಕಿ ಮಲಗಿಸುವರು. ಶವದ ಮೇಲೆ ಹೊಸ ಪಂಚೆಯನ್ನು ಹೊಚ್ಚಿ ಚಟ್ಟದ ಮೇಲಿಟ್ಟು ಬಳ್ಳಿಯಿಂದ ಬಿಗಿದು ಕಟ್ಟುತ್ತಾರೆ. ಚಟ್ಟದ ಹಿಂದೆ ಮುಂದೆ ನಾಲ್ಕು ಬಾಳೆಯ ಕಂದುಗಳನ್ನು ಕಟ್ಟಿ ಹೂವುಗಳಿಂದ ಸಿಂಗರಿಸುತ್ತಾರೆ. ಶವದ ಮುಂದೆ ಹಾಕಿದ್ದ ಮಡಿಲಕ್ಕಿ ಒಡೆದ ತೆಂಗಿನಕಾಯಿಯನ್ನು ಒಂದು ಬುಟ್ಟಿಯಲ್ಲಿ ತುಂಬಿಕೊಂಡು ಕುಟುಂಬದ ಮಹಿಳೆಯೊಬ್ಬಳು ಹಿಡಿದುಕೊಂಡು ಶವದ ಯಾತ್ರೆಯಲ್ಲಿ ಬರುತ್ತಾಳೆ. ಮಣ್ಣಿನ ಹೊಸ ಮೊಗೆಯಲ್ಲಿ ಹಳ್ಳದ ನೀರು ತುಂಬಿಕೊಂಡು ಗಂಡಸರಲ್ಲಿ ಒಬ್ಬ ಹಿಡಿದು ಕೊಳ್ಳುತ್ತಾನೆ. ಮಣ್ಣಿನ ಗಡಿಗೆಯಲ್ಲಿ ಬೆಂಕಿ ಕೆಂಡಗಳನ್ನು ಹಾಕಿಕೊಂಡು ಕವೆಗೋಲಿಗೆ ಕಟ್ಟಿಕೊಂಡು ಕುಟುಂಬದವರಲ್ಲೊಬ್ಬ ಹಿಡಿದುಕೊಂಡು ಶವದ ಮುಂದೆ ಹೊರಡುತ್ತಾನೆ. ಶವದ ಚಟ್ಟವನ್ನು ಮರಣ ಹೊಂದಿದಾತನ ಮಕ್ಕಳು ಅಥವಾ ಸಂಬಂಧಿಕರು ಹೊತ್ತು ಕೊಳ್ಳುತ್ತಾರೆ. ಶವವನ್ನು ಎತ್ತಿದ ಕೂಡಲೆ ಗರ್ನಾಲು ಹೊಡೆಯುವರು. ಹೀಗೆ ಶವಯಾತ್ರೆ ಸ್ಮಶಾನದತ್ತ ಸಾಗುವುದು. ಈಡಿನ ಸಮೀಪ ಇಪ್ಪತ್ತೈದು ಮಾರು ದೂರದಲ್ಲಿ ಶವವನ್ನು ಹೊತ್ತವರು ಮೂರು ಸಾರಿ ಪ್ರದಕ್ಷಿಣೆ ಹಾಕಿ ಶವವನ್ನು ನೆಲದ ಮೇಲೆ ಇಟ್ಟು ಶವಯಾತ್ರೆಯಲ್ಲಿ ಭಾಗವಹಿಸಿದ ಪ್ರತಿಯೊಬ್ಬರು ಕವಲು ಮರದ ಎಲೆಗಳ ಕೊಟ್ಟೆಯಿಂದ ಶವದ ಬಾಯಿಗೆ ಗಂಜಿ ಬಿಡುತ್ತಾರೆ. ನಂತರ ಮುಂದೆ ಹೊತ್ತವರು ಹಿಂದೆ, ಹಿಂದೆ ಹೊತ್ತವರು ಮುಂದೆ ಬಂದು ಪುನಃ ಶವವನ್ನು ಹೊತ್ತುಕೊಂಡು ಈಡಿನ ಹತ್ತಿರ ಸಾಗುತ್ತಾರೆ. ಗಂಜಿ ಗಡಿಗೆಯನ್ನು ಹಿಂಭಾಗಕ್ಕೆ ಬೀಸಿ ಒಡೆಯುತ್ತಾರೆ. ಶವ ಹೊತ್ತವರು ಈಡಿನ ಹತ್ತಿರ ಹೋದ ತಕ್ಷಣ, ಈಡಿನ ಸುತ್ತ ಶವ ಹೊತ್ತವರು ಬೆಂಕಿ ಮತ್ತು ಮಡಿಲಕ್ಕಿ ಹಿಡದವರು ಮೂರು ಬಾರಿ ಪ್ರದಕ್ಷಿಣೆ ಹಾಕುವರು. ಈಡಿನ ಮೇಲೆ ಚಟ್ಟಾ ಸಹಿತ ಶವವನ್ನು ಇಟ್ಟು ಚಟ್ಟಾದಿಂದ ಶವವನ್ನು ತೆಗೆದು ಈಡಿನ ಮೇಲೆಯಿಡುವರು. ಶವದಲ್ಲಿರುವ ಒಡವೆಗಳನ್ನು ತೆಗೆದು ಬಟ್ಟೆಯನ್ನು ಬಿಚ್ಚಿ ಶವವನ್ನು ಬೆತ್ತಲೆ ಗೊಳಿಸುವರು. ನಂತರ ಶವದ ಹಿಂದೆ ಹೋದವರು ಒಂದೊಂದು ಸೌದೆ ತುಂಡು ಶವದ ಮೇಲೆ ಹಾಕುವರು. ಚಟ್ಟಾ ತೆಗೆದು ಸ್ವಲ್ಪ ದೂರ ಹಾಕುವರು. ಹಿರಿಯ ಮಗ ಕಿಚ್ಚಿನ ಗಡಿಗೆಯನ್ನು ಹಿಡಿದು ಈಡಿನ ಸುತ್ತ ಮುರು ಬಾರಿ ಪ್ರದಕ್ಷಿಣೆ ಹಾಕುವನು. ನಂತರ ಶವದ ತಲೆಯ ಕಡೆ, ಮಧ್ಯಭಾಗ ಮತ್ತು ಕಾಲುಗಳಿರುವ ಭಾಗಕ್ಕೆ ಬೆಂಕಿ ಹಚ್ಚುವನು. ಬೆಂಕಿ ಹತ್ತಿದ ನಂತರ ಹಿರಿಯ ಮಗ ನೀರಿನ ಬಿಂದಿಗೆಯನ್ನು ಹೆಗಲ ಮೇಲೆ ಹೊತ್ತು ಉರಿಯುತ್ತಿರುವ ಈಡಿನ ಸುತ್ತ ಮೂರು ಸಾರಿ ಪ್ರದಕ್ಷಿಣೆ ಹಾಕುತ್ತಾನೆ. ಹೀಗೆ ಪ್ರದಕ್ಷಿಣೆ ಮಾಡುವಾಗ ಒಂದೊಂದು ಸುತ್ತಿಗೂ ಬಿಂದಿಗೆಯನ್ನು ಕತ್ತಿಯಿಂದ ಕುಕ್ಕಿ ತೂತು ಮಾಡುತ್ತಾರೆ. ಮೂರನೇ ಸುತ್ತಿಗೆ ಬಿಂದಿಗೆಯನ್ನು ಪೂರ್ವದ ಕಡೆ ಬೆನ್ನು ಮಾಡಿ ಮಡಿಕೆಯನ್ನು ಒಡೆಯುತ್ತಾರೆ. ಮರಣ ಹೊಂದಿದವನ ಪತ್ನಿಯ ಬಳೆಗಳನ್ನು ಒಡೆಯುತ್ತಾರೆ. ಮೂಗುತಿ, ತಾಳಿ, ಬುಗುಡಿ, ಆಭರಣಗಳನ್ನು ತೆಗೆಯುತ್ತಾರೆ. ಬೆಂಕಿ ಹತ್ತಿ ಉರಿಯುವಾಗ ಕಂದಲಿ ಮತ್ತು ಕೊಡಲಿಯನ್ನು ಹಿಂದೆ ಮುಂದೆ ಮಾಡಿ ಈಡಿನ ಆಚೆ ಈಚೆ ಮೂರು ಸಾರಿ ಎಸೆಯುತ್ತಾರೆ. ಚೆನ್ನಾಗಿ ಬೆಂಕಿ ಹತ್ತಿದ ನಂತರ ಎಲ್ಲರೂ ಮನೆಗೆ ವಾಪಾಸು ಬರುತ್ತಾರೆ. ಕುಟುಂಬದವರು ಮನೆಗೆ ಬಂದು ಗೋಮಯ ಮತ್ತು ತುಳಸಿ ನೀರು ಪ್ರೋಕ್ಷಣೆ ಮಾಡಿಕೊಂಡು ಒಳ ಸೇರುತ್ತಾರೆ. ಸ್ನಾನ ಮಾಡುವುದಿಲ್ಲ. ಉಳಿದವರು ಸ್ನಾನ ಮಾಡಿ ಅವರವರ ಮನೆ ಸೇರುತ್ತಾರೆ. ಅದೇ ದಿವಸ ಸ್ವಲ್ಪ ಹೊತ್ತಿನ ನಂತರ ಶವ ಸಂಸ್ಕಾರದಲ್ಲಿ ಭಾಗವಹಿಸಿದವರಿಬ್ಬರು

ಪುನಃ ಸ್ಮಶಾನಕ್ಕೆ ಹೋಗಿ ಹೆಣ ಸುಟ್ಟಿದೆಯೇ ಇಲ್ಲವೇ ಎಂದು ನೋಡಿ ಅಚೆ ಈಚೆ ಬಿದ್ದಿರುವ ಸೌದೆಯನ್ನು ಚಾಚಿ ಬರುತ್ತಾರೆ. ರಾತ್ರಿ ಮರಣ ಹೊಂದಿದ ಜಾಗದಲ್ಲಿ ಒಂದು ಮಣೆಯನ್ನಿಟ್ಟು ಅದರ ಮೇಲೆ ದೀಪವನ್ನು ಇಡುತ್ತಾರೆ.

ಮೂರು ಅಥವಾ ಐದನೇ ದಿವಸಕ್ಕೆ ಸೂತಕ ಆಚರಿಸುತ್ತಾರೆ. ಮನೆಯನ್ನೆಲ್ಲಾ ಸಗಣಿಯಿಂದ ಸಾರಿಸಿ ಸ್ವಚ್ಛಮಾಡುತ್ತಾರೆ. ಮನೆಯವರೆಲ್ಲ ಸ್ನಾನ ಮಾಡಿ ಶುಚಿಯಾಗುವರು. ಹತ್ತಿರದ ಸಂಬಂಧಿಗಳು ಆ ದಿನ ಬರುತ್ತಾರೆ. ಊರಿನವರು ಕೆಲವರು ಸೇರಿಕೊಳ್ಳುತ್ತಾರೆ. ನೀರು ಕಡುಬು ಖಾರದ ಮತ್ತು ಸಿಹಿತಿಂಡಿ, ಕೋಳಿ ಮಾಂಸದ ಸಾರು ತಯಾರಿಸುವರು. ಕುಟುಂಬದ ಯಜಮಾನ ಪುರೋಹಿತರಲ್ಲಿಗೆ ಹೋಗಿ ತೆಂಗಿನ ಕಾಯಿ, ಅಕ್ಕಿ ಕಾಳು, ಭಸ್ಮ ಮಂತ್ರಿಸಿಕೊಂಡು ಬರುತ್ತಾನೆ. ಮರಣ ಹೊಂದಿದವನ ಗಂಡು ಮಕ್ಕಳು ತಲೆ ಕೂದಲು ತೆಗೆಸಿಕೊಳ್ಳುವರು. ಇದಕ್ಕೆ ಋಣ ಕೊಡುವುದು ಎನ್ನುತ್ತಾರೆ. ಕ್ಷೌರಿಕನಿಗೆ ಅಕ್ಕಿ, ಬೇಳೆ, ತೆಂಗಿನ ಕಾಯಿ, ಎಲೆ ಅಡಿಕೆ ಮತ್ತು ಹಣವನ್ನು ಕೊಡುತ್ತಾರೆ. ಬಾಳೆ ಎಲೆಯಲ್ಲಿ ಕೂದಲನ್ನು ಹಾಕಿಕೊಂಡು ಹೋಗಿ ನದಿಯಲ್ಲಿ ಬಿಟ್ಟು ಸ್ನಾನ ಮಾಡಿ ಬರುತ್ತಾರೆ. ನಂತರ ಒಂದು ಚೆಂಡು ಹೂವಿನ ಗಿಡ, ತುಳಸಿಗಿಡ, ಒಂದು ಮಡಕೆಯಲ್ಲಿ ಗಂಜಿ, ಬಾಳೆ ಎಲೆಯಲ್ಲಿ ತಿಂಡಿ ಪದಾರ್ಥಗಳನ್ನು ಇಟ್ಟು, ಕೋಳಿ ಮಾಂಸದ ಸಾರು ಹಾಕಿ ಎಡೆ ಮಾಡಿಕೊಂಡು ಸತ್ತವನ ಮಕ್ಕಳು ಸ್ಮಶಾನಕ್ಕೆ ತೆಗೆದುಕೊಂಡು ಹೋಗುತ್ತಾರೆ. ಅಲ್ಲಿ ಬೂದಿಯನ್ನೆಲ್ಲ ಒಟ್ಟುಗೂಡಿಸಿ, ನೆಲ್ಲಿ ಮರದ ಮೂರು ಕಂಬಗಳನ್ನು ನೆಟ್ಟು, ಎರಡು ಅಡಿ ಎತ್ತರದ ಚಪ್ಪರವನ್ನು ಮಾಡುವರು. ಬೂದಿಯ ಮೇಲೆ ಚೆಂಡು ಹೂವಿನ ಗಿಡ, ತುಳಸಿ ಗಿಡ ನೆಟ್ಟು, ಗಂಜಿ ಗಡಿಗೆಯನ್ನು ಚಪ್ಪರದ ಒಳಗೆ ಇಟ್ಟು ಎಡೆಯನ್ನು ಗಡಿಗೆಯ ಪಕ್ಕದಲ್ಲಿ ಇಟ್ಟು, ಊದುಭತ್ತಿ ಹಚ್ಚಿ ಪೂಜೆ ಮಾಡಿ ಬರುತ್ತಾರೆ.

ಮನೆಯಲ್ಲಿದ್ದವರು, ನೀರು ಎಡೆ, ಗೂಳಿ ಎಡೆ ಎಂಬ ಎರಡು ಎಡೆ ತೆಗೆದುಕೊಂಡು ನದಿ ಅಥವಾ ಹಳ್ಳದ ಪಕ್ಕದ ಜಾಗದ ಒಂದು ಕಡೆ ಗೋಮಯ ಹಾಕಿ ಸ್ವಚ್ಛಗೊಳಿಸಿ ಎಡೆಗಳನ್ನಿಟ್ಟು, ಪುರೋಹಿತರು ಮಂತ್ರಿಸಿ ಕೊಟ್ಟ ತೆಂಗಿನಕಾಯಿಯನ್ನು ಎಡೆಯ ಮೇಲಿಟ್ಟು, ಕುಟುಂಬದವರು ಮತ್ತು ಸಂಬಂಧಿಕರು ಅಕ್ಕಿ ಕಾಳು ಮತ್ತು ಭಸ್ಮವನ್ನು ಎಡೆಯ ಸುತ್ತಲು ಹಾಕುವರು. ತೆಂಗಿನ ಕಾಯಿ ಒಡೆದು ಊದುಭತ್ತಿ ಹಚ್ಚಿ ಪೂಜೆ ಸಲ್ಲಿಸುವರು. ನಂತರ ಜನರೆಲ್ಲಾ ದೂರ ಬಂದು ನಿಂತುಕೊಳ್ಳುವರು. ಕುಟುಂಬದ ಯಜಮಾನ ಗೂಳಿ(ಕಾಗೆ) ಯನ್ನು ಕರೆಯುತ್ತಾರೆ. ಕಾಗೆ ಎಡೆಯಲ್ಲಿನ ಯಾವುದಾದರು ತಿಂಡಿಯನ್ನು ಕಚ್ಚಿಕೊಂಡು ಹೋದರೆ ಸತ್ತವನು ಕಾಗೆಯ ರೂಪದಲ್ಲಿ ಬಂದು ಸಂತೋಷವಾಗಿ ತಿಂದು ಹೋದ ಎಂದು ಭಾವಿಸುತ್ತಾರೆ.

ನದಿಯ ದಡದಲ್ಲಿ ಎರಡು ಲಕ್ಕಿ ಕೋಲು ನಿಲ್ಲಿಸಿ ದಾರವನ್ನು ಸುತ್ತುತ್ತಾರೆ. ನಂತರ ಎಲ್ಲರು ಪ್ರದಕ್ಷಿಣೆ ಮಾಡುವರು. ನೀರೆಡೆಯನ್ನು ಅಡಿಕೆಯ ಹಾಳೆಯಲ್ಲಿಟ್ಟು ಲಕ್ಕಿ ಗೂಟಗಳ ನಡುವೆ ಇಟ್ಟು ಬರುತ್ತಾರೆ. ಇವರು ಮನೆ ಸೇರುವುದರೊಳಗೆ ಸ್ಮಶಾನಕ್ಕೆ ಹೋದವರು ಮನೆಗೆ ಬಂದು ಊಟಮಾಡಿ ಹೋಗಬೇಕು. ಇಬ್ಬರ ಭೇಟಿಯಾಗಬಾರದು. ಮನೆಯಲ್ಲಿದ್ದವರು ಊಟದ ಪದಾರ್ಥಗಳನ್ನು ತೆಗೆದು ಇಡಬೇಕು. ಇವರೇ ಬಡಿಸಿಕೊಂಡು ಊಟಮಾಡಿ ಹೊರಹೋಗುವರು. ಗೂಳಿ ಕರೆಯಲು ನದಿಗೆ ಹೋದವರು ನಂತರ ಮನೆ ಪ್ರವೇಶ ಮಾಡಿ ಕುಟುಂಬದವರು, ಸಂಬಂಧಿಕರೆಲ್ಲರೂ ಸೇರಿ ಊಟ ಮಾಡುವರು. ಋಣ ಕೊಟ್ಟವರನ್ನು

ಸಂಬಂಧಿಕರಲ್ಲಿ ಯಾರಾದರು ತಮ್ಮ ಊರಿಗೆ ಕರೆದುಕೊಂಡು ಹೋಗಿ ಸಾಂತ್ವನಗೊಳಿಸಿ ಹೊಸ ಪಂಚೆ, ಅಥವಾ ಟವೆಲ್ಲು ಉಡುಗೊರೆ ಕೊಟ್ಟು ಕಳುಹಿಸುತ್ತಾರೆ.

ಮರಣ ಹೊಂದಿದ ಇಪ್ಪತ್ತು ಅಥವಾ ಮೂವತ್ತನೇ ದಿವಸ ಅನ್ನಹಾಕುವ ಶಾಸ್ತ್ರ ಮಾಡುತ್ತಾರೆ. ಈ ಪದ್ಧತಿಗೆ ತಿಂಗಳನ್ನ ಹಾಕುವುದು ಎನ್ನುವರು. ಮರಣ ಹೊಂದಿದವನು ಕೆಟ್ಟ ಘಳಿಗೆಯಲ್ಲಿ ಸತ್ತರೆ ಎರಡು, ಮೂರು ಅಥವಾ ಐದು ತಿಂಗಳು ಮನೆ ಬಿಡುವುದ ಬರುವುದುಂಟು. ಹಿಂದಿನ ಕಾಲದಲ್ಲಿ ವಾಸದ ಮನೆಯನ್ನು ಬಿಟ್ಟು ಬೇರೆ ಕಡೆ ವಾಸಮಾಡುತ್ತಿದ್ದರು. ಈಗ ಪುರೋಹಿತರಿಂದ ತೆಂಗಿನಕಾಯಿ ಮಂತ್ರಿಸಿಕೊಂಡು ತಂದು ಮನೆಯ ಮುಖ್ಯದ್ವಾರದ ಮೇಲ್ಭಾಗಕ್ಕೆ ಕಟ್ಟಿರುತ್ತಾರೆ. ಮನೆ ಬಿಡುವುದಿಲ್ಲ. ಈ ದೋಷ ಪರಿಹಾರದ ನಂತರ ಅನ್ನ ಹಾಕುತ್ತಾರೆ.

ಶಿಕಾರಿಪುರದ ಹುಚ್ಚುರಾಯ ಸ್ವಾಮಿ ಒಕ್ಕಲಾಗಿದ್ದವರು ಒಂದು ಶನಿವಾರ ಶುದ್ಧರಾಗಿ ದೇವಸ್ಥಾನಕ್ಕೆ ಹೋಗಿ ದಾಸಯ್ಯನಿಂದ ತೀರ್ಥಪ್ರಸಾದ ಪಡೆದು ನಾಮ ಧರಿಸುತ್ತಾರೆ. ಮನೆಯ ಹೊರಗೆ ಒಳಗೆ ತೀರ್ಥ ಸಿಂಪಡಿಸುವರು. ಚಂದ್ರಗುತ್ತಿ ರೇಣುಕಾಂಬೆಯ ಭಕ್ತರು ಚಂದ್ರಗುತ್ತಿಗೆ ಹೋಗಿ ಪೂಜೆ ಸಲ್ಲಿಸಿ ಬರುವರು. ಅನ್ನ ಹಾಕುವ ದಿವಸ ಮನೆಯನ್ನು ಸ್ವಚ್ಛಗೊಳಿಸಿ ಎಲ್ಲಾ ತರದ ತಿಂಡಿ ಪದಾರ್ಥಗಳನ್ನು, ಕುರಿ, ಕೋಳಿ, ಮಾಂಸದ ಅಡುಗೆಯನ್ನು ತಯಾರಿಸುವರು. ಪುರೋಹಿತರಿಂದ ಅಕ್ಕಿ ಕಾಳು, ಭಸ್ಮ, ತೆಂಗಿನ ಕಾಯಿ ಮಂತ್ರಿಸಿ ಸೂರಿಗೆ ಕಟ್ಟಿರುತ್ತಾರೆ. ದಾಸಯ್ಯನನ್ನು ಕರೆಯಿಸಿ ಮನೆಯಲ್ಲಿ ಒಂದು ಪೂಜೆ ಮಾಡಿಸುತ್ತಾರೆ. ಚಂದ್ರಗುತ್ತಿ ಒಕ್ಕಲು ದಾಸಯ್ಯನನ್ನು ಕರೆಸುವುದಿಲ್ಲ. ತಾಮ್ರದ ಹಂಡೆ, ಕೊಡಪಾನಗಳನ್ನು ಬೆಳಗಿ ಹೊಸ ನೀರು ತುಂಬಿ ಸತ್ತವನು ಬಳಸುತ್ತಿದ್ದ ಅಂಗಿ ಪಂಚೆಯನ್ನು ಹಂಡೆಯ ಮೇಲಿಡುತ್ತಾರೆ. ಮಹಿಳೆಯಾಗಿದ್ದರೆ, ಸೀರೆ, ರವಿಕೆಗಳನ್ನು ಇಡುತ್ತಾರೆ. ಹೂವು ಮುಡಿಸಿ ಗಂಧ ಕುಂಕುಮ ನಾಮ ಇಡುವರು. ಮನೆಯ ಹೊರಗೆ ಸೂರಿನಲ್ಲಿರುವ ಕಾಯಿಯನ್ನು ಗೋಮಯ ಹಾಕಿ ತಂದು ಇಡಕಲು ಹತ್ತಿರ ಇಡುತ್ತಾರೆ. ಒಂದು ಮಣ್ಣಿನ ಹಣತೆಯಲ್ಲಿ ಎರಡು ಕದಿರು ಬತ್ತಿಗಳನ್ನು ಎರಡು ಇಂಚು ಅಂತರದಲ್ಲಿಟ್ಟು ದಾಸಯ್ಯ ದೇವರು ದೀಪದಿಂದ ಹಚ್ಚಿಕೊಂಡು ಹಂಡೆಯ ಪಕ್ಕದಲ್ಲಿಡುತ್ತಾರೆ. ಐದು ಬಾಳೆ ಎಲೆ(ಎಡೆ)ಗಳನ್ನಿಟ್ಟು ಮನೆಯಲ್ಲಿ ತಯಾರಿಸಿರುವ ತಿಂಡಿ ಪದಾರ್ಥಗಳನ್ನು ಎರಡು ಎಡೆಗಳಿಗೆ ಮಾತ್ರ ಹಾಕುತ್ತಾರೆ. ಮರಣ ಹೊಂದಿದವನ ಹಿರಿಯ ಮಗ ಪುರೋಹಿತರಿಂದ ತಂದ ತೆಂಗಿನಕಾಯಿ ಒಡೆದು ಎಡೆಗಳ ಸುತ್ತ ಭಸ್ಮ ಮತ್ತು ಅಕ್ಕಿ ಕಾಳು ಹಾಕಿ ಪೂಜೆ ಮಾಡುವನು. ದಾಸಯ್ಯ ತನ್ನ ದೇವರಿಗೆ ಪೂಜೆ ಮಾಡಿ ಶಂಖ ಊದಿ ಜಾಗಟೆ ಬಾರಿಸುವನು. ಕುಟುಂಬದವರು ದಾಸಯ್ಯನಿಂದ ತೀರ್ಥ ಪ್ರಸಾದ ಪಡೆದು ನಾಮ ಹಚ್ಚಿಕೊಳ್ಳುವರು. ಎರಡು ಬತ್ತಿಗಳ ಸುಳಿಗಳು ಒಂದೇ ಆಗಿ ಕೂಡಬೇಕು. ಆವಾಗ ದೀಪ ಕೂಡಿತು ಎಂದರೆ ಸತ್ತವನ ಆತ್ಮಕ್ಕೆ ಶಾಂತಿ ಸಮಾಧಾನವಾಗಿದೆ ಎಂದು ಭಾವಿಸುತ್ತಾರೆ. ಎಲ್ಲರೂ ಸೇರಿ ಊಟ ಮಾಡುತ್ತಾರೆ. ದಾಸಯ್ಯನ ಜೋಳಿಗೆಗೆ ಅಕ್ಕಿ ತುಂಬಿ ಪಂಚೆ ಕಾಣಿಕೆ ಕೊಟ್ಟು ಕುಟುಂಬ ದವರೆಲ್ಲರು ನಮಸ್ಕಾರ ಮಾಡಿ ಕಳುಹಿಸಿ ಕೊಡುತ್ತಾರೆ.

## ಅಡಿಟಿಪ್ಪಣಿಗಳು

೧. 'ಹತ್ತು ಹೆತ್ತೋಳ್ ಮುಂದೆ ಒಂದ್ ಹೆತ್ತೋಳ್' ಎಂಬ ಗಾದೆ ಇದೆ. 'ಹೆರಿಗೆ ಕಷ್ಟ ಹೆತ್ತೋರಿಗೆ ಗೊತ್ತು'. ಗಂಡು ಹುಟ್ಟಿದರೆ ಕಂದ್ಲಿ(ಕತ್ತಿ)ಯನ್ನು ಹೆಣ್ಣು ಹುಟ್ಟಿದರೆ ಕುಡಗೋಲನ್ನು ತಂದು ಮನೆಯ ಹೊಸ್ತಿಲ ಮುಂದೆ ಇಡುತ್ತಾರೆ.

೨. 'ನಿನ್ನ ಹುರಿಕೊಯ್ದ ಕುಡಗೋಲ ಎಲ್ಲಿದೆ'? 'ನಿನ್ನ ಬಾಯಾಗೆ ಬೆಟ್ಟು ಹಾಕ್ದವರಾರ? ಅತಿ ಮಾತನಾಡುವವರಿಗೆ ಕೇಳಲಾಗುತ್ತದೆ.

೩. ಮಗುವನ್ನು ಮಗ್ಗುಲಾಗಿ ಮಲಗಿಸಬಾರದು ಅಂಗಾತ ಮಲಗಿಸಬೇಕು. ಇಲ್ಲದಿದ್ದರೆ ತಲೆ ಚಪ್ಪಟೆಯಾಗುತ್ತದೆ.

೪. ಉತ್ತರ ಕರ್ನಾಟಕದಲ್ಲಿ ಈ 'ಮಾಸ'ವನ್ನು ಒಂದು ಮಣ್ಣಿನ ಮೊಗೆಯಲ್ಲಿ ಹಾಕಿ ಹಿತ್ತಲಲ್ಲಿ ಹುಗಿಯಲಾಗುತ್ತದೆ. 'ನಿನ್ನ ಮಾಸಿನ ಮಗಿ ಎಲ್ ಹೂಣ್ಯಾರ'? ಎಂದು ಕೇಳುತ್ತಾರೆ. ಮೈಸೂರು, ಮಂಡ್ಯದಲ್ಲಿ ಹೊಕ್ಕಳ ಬಳ್ಳಿಯನ್ನು ಮಗುವಿನ ತೊಟ್ಟಿಲ ದಾರಕ್ಕೆ ಕಟ್ಟುತ್ತಾರೆ. ಹೀಗೆ ಕಟ್ಟುವುದರಿಂದ ಮಗುವಿಗೆ ಯಾವ ಕೇಡು ಬರುವುದಿಲ್ಲ ಎಂಬ ನಂಬಿಕೆ ಇದೆ.

೫. ಮಗುವಿಗೆ ಎದೆಹಾಲು ಕೊಡುವಾಗ 'ಎಲೆ ಅಡಿಕೆ' ಜಗಿಯುತ್ತಿದ್ದರೆ ಎದೆಹಾಲು ಮಗುವಿಗೆ ತೃಪ್ತಿಯಾಗುವಷ್ಟು ದೊರೆಯುತ್ತದೆ ಎಂಬ ನಂಬಿಕೆ ದೀವರಲ್ಲಿದೆ.

೬. ವಳ್ಳಿಯಲ್ಲಿ ಕಾರ ಕುಡಿಸುವಾಗ ತಾಯಿ ಕಾಲುಚಾಚಿ ಕೂತಿರುತ್ತಾಳೆ. ಇದನ್ನು ಮಕ್ಕಳು ದಾಟಿದರೆ, ಮತ್ತೆ ತಿರುಗಿ ದಾಟುವಂತೆ ತಾಯಿ ಹೇಳುತ್ತಾಳೆ. ಕಾರಣ ಮಗುವಿಗೆ ಕಾಲ್‌ದೂಳು ಆಗುತ್ತದೆ ಎಂಬುದಕ್ಕೆ.

೭. ಮಡಕೆಯ ಬದಲಿಗೆ ಲೋಹದ ಪಾತ್ರೆಗಳನ್ನು ಬಳಸುವುದರಿಂದ ಇವುಗಳನ್ನು ಎಸೆಯದೆ ಬಿಡಿ. ಅಂಟುವಾಳ ಹಿಟ್ಟನ್ನು ಬಳಸಿ ಪಾತ್ರೆಗಳನ್ನು ತೊಳೆಯುತ್ತಾರೆ.

೮. ಚೌವಳ = ಚೌವಲ, ಚೌವಳ

೯. ರಂಚು - ಕಂಚಿನ ಲೋಟ ಅಥವಾ ತಂಬಿಗೆಗೆ ಕೆಂಡ ಹಾಕುವುದರಿಂದ ಅದರಲ್ಲಿಯ ಗಾಳಿ ಹೊರ ಹೋಗುವುದು. ಆದ್ದರಿಂದ ನೀರಿರುವ (ಒಕುಳಿ) ತಟ್ಟೆಯನ್ನು ಬಿಗಿಯಾಗಿ ಹಿಡಿಯುತ್ತದೆ. ರಂಚು ಹಿಡಿಯುವುದು ಎನ್ನುತ್ತಾರೆ.

೧೦. 'ಅಕ್ಕಸಾಲಿಗ ಚುಚ್ಚಿದರ ನೊಚ್ಚಗೆ' ಎಂಬ ಗಾದೆ ಮಾತಿದೆ.

೧೧. ಋತುಮತಿ-ಮೈನೆರೆಯುವುದು. ಪುಷ್ಪವತಿ. ದೊಡ್ಡಮನ್ಷ್ಯಾದ್ಲು. ಮಯ್ನೆಗೆ ಬಂದ್ಲು. ದೊಡ್ಡವಳಾದ್ಲು.

೧೨. ಸೊಪ್ಪು-ನಿಂಬೆ ಸೊಪ್ಪು, ಲಕ್ಕಿ ಸೊಪ್ಪು, ಬೇವಿನ ಸೊಪ್ಪು, ಹಲಸಿನ ಸೊಪ್ಪು, ಮಾವಿನ ಸೊಪ್ಪು.

೧೩. ಕೆಲವು ಜನಪದರಲ್ಲಿ ಹೆಣ್ಣಿನ ಮನೆಯಲ್ಲಿ ಗಂಡು ಸುಮಾರು ವರ್ಷಗಳವರೆಗೆ ಕೆಲಸ ಮಾಡಿಕೊಡುತ್ತಾ, ನಡೆ-ನುಡಿ, ಕಾರ್ಯದಕ್ಷತೆ ನೋಡಿ ಹೆಣ್ಣಿತ್ತವರು ಮೆಚ್ಚಿದರೆ ಮದುವೆ ನಿಶ್ಚಯ ಮಾಡುತ್ತಿದ್ದರು.

೧೪. ಗಂಡು ಹೆಣ್ಣನ್ನು ಧಾರೆ ಮುಹೂರ್ತದಲ್ಲಿ ಅಡ್ಡ ತೆರೆ ಸರಿದ ಮೇಲೆಯೇ ಆತ ಹೆಣ್ಣು ನೋಡುತ್ತಿದ್ದುದು. ಹಿರಿಯರ ಸಮ್ಮತಿಯ ಮೇರೆಗೆ ವಿವಾಹವೇರ್ಪಡುತ್ತಿತ್ತು.

೧೫. ಹೆಣ್ಣು ಒಪ್ಪಿಗೆಯಾದರೆ ಮಾತ್ರ ಹೆಣ್ಣಿನ ಮನೆಯಲ್ಲಿ ನೀರು ಅಥವಾ ತಂಬಿತನಿಸು ಮುಟ್ಟುತ್ತಾರೆ. ಇಲ್ಲದಿದ್ದರೆ ಇಲ್ಲ. ಅದೇ ರೀತಿ ಹೆಣ್ಣಿನ ಮನೆಯವರು ಮಾಡುತ್ತಾರೆ. ಗದ್ದೆಯಲ್ಲಿ ಕೆಲಸ ಮಾಡುವಾಗ ಹೆಣ್ಣು ನೋಡುವುದರಿಂದ ಈ ಪ್ರಶ್ನೆ ಉದ್ಭವಿಸುವುದಿಲ್ಲ.

೧೬. ವಿಳ್ಳೇಶಾಸ್ತ್ರ-ಇಳ್ಳೇವು-ವೀಳ್ಯ ಶಾಸ್ತ್ರ

೧೭. ಅಕ್ಷತೆ : ಅಕ್ಕಿಗೆ ಅರಿಸಿಣದ ನೀರು ಸೇರಿಸಿ ಸವರಿದರೆ ಅಕ್ಷತೆಯಾಗುತ್ತದೆ.

೧೮. ಕೋರೂಟ-ಊರುಬತ್ತ ಎಂದು ಕರೆಯುತ್ತಾರೆ. ಊರು ಬತ್ತ-ಬತ್ತ-ಔತ್ತ-ಔತ್ತ-ಔತಣ

೧೯. ಕಂಬಿನ ಕಳಸಕ್ಕೆ ಮಾವಿನ ಎಲೆ ಅಥವಾ ವೀಳ್ಯದ ಎಲೆ ಸುತ್ತಲು ಕಿರೀಟದಂತೆ ಸಿಕ್ಕಿಸಿ. ಮಧ್ಯೆ ಚಂಡುಹೂ ಇಟ್ಟು, ಇದಕ್ಕೆ ವಿಭೂತಿ ಕುಂಕುಮ ಹಚ್ಚಿ, ಕಳಸದ ಮುಂದೆ ಎರಡು ಸಣ್ಣ ದೀಪಗಳನ್ನು ಹಚ್ಚುತ್ತಾರೆ. ಒಂದು ತಟ್ಟೆಗೆ (ಕಂಚಿನ) ಬಾಳೆ ಎಲೆ ಅದರ ಮೇಲೆ ಅಕ್ಕಿ ಹಾಕಿ ಇದರ ಮೇಲೆ ಕಳಸ ಮತ್ತು ದೀಪವನ್ನು ಇಟ್ಟಿರುತ್ತಾರೆ.

೨೦. ಬಲಗೊಡತಿ - ಕೂಡಿಮಿಂದಳು - ಮದುಮಗನನ್ನು ಮದುವೆಯಾಗುವವರೆಗೂ ಒಬ್ಬನನ್ನೆ ಎಲ್ಲಾ ಶಾಸ್ತ್ರದಲ್ಲೂ ಕೂರಿಸುವುದಿಲ್ಲ. ಅಕ್ಕನೊ ಅಥವಾ ತಂಗಿಯೋ ಮದುಮಗನ ಬಲಭಾಗದಲ್ಲಿ ಕುಳಿತುಕೊಂಡು ಶಾಸ್ತ್ರಗಳಲ್ಲಿ ಬಾಗಿಯಾಗಬೇಕು. ಕೂಡಿಮಿಂದವಳಿಗೆ ಹೆಚ್ಚುವರಿಯಾಗಿ ಒಂದು ಸೀರೆ ಕೊಡುತ್ತಾರೆ.

೨೧. ಬೀಗರೂಟ-ಬಾಡೂಟ

೨೨. ಸೋಬನ-ಪ್ರಸ್ತ-ಬಸಗೆ-ಮನೆಕೂಡುವುದು. ನಿಷೇಕ - ಈ ಎಲ್ಲಾ ಪದಗಳ ಅರ್ಥ 'ಶುಭ' ಎಂದು.

೨೩. ಗಂಡಿನ ಶೀಲವನ್ನು ತಮ್ಮದೆ ಆದ ರೀತಿಯಲ್ಲಿ ಜನಪದರು ಗೊತ್ತು ಹಚ್ಚುತ್ತಿದ್ದರು. ಒಂದು ಕಡೆ ಗಟ್ಟಿಯಾದ ನೆಲವನ್ನು ಗುಡಿಸಿ, ಅದರ ಮೇಲೆ ಮದುವೆಗೆ ಗೊತ್ತಾದ ಹುಡುಗನನ್ನು ಕೂರಿಸಿ ಉಚ್ಚೆ ಹುಯ್ಯು ಪರೀಕ್ಷಿಸುತ್ತಿದ್ದರು. ನೆಲ ಕುಳಿ ಬಿದ್ದರೆ, ಅದು ಆಳವಾಗಿದ್ದರೆ ಗಂಡಿನ ಶೀಲ ಕೆಟ್ಟಿಲ್ಲ ಎಂದು ತಿಳಿಯುತ್ತಿದ್ದರು. ಒಂದಷ್ಟು ಜಾಗದಲ್ಲಿ ಮರಳು ಹರಡಿ ಅದರ ಮೇಲೆ ಉಚ್ಚೆ ಹೊಯ್ಯುತ್ತಿದ್ದರು. ಮರಳಿನ ಮೇಲೆ ನೊರೆ ಇದ್ದರೆ ಶೀಲ ಕೆಡಿಸಿ ಕೊಂಡಿದ್ದಾನೆ ಎಂದು ತಿಳಿಯುತ್ತಿದ್ದರು.

೨೪. ನಾದಿನಿ ವಿವಾಹ - ಹೆಂಡತಿಯ ತಂಗಿಯನ್ನು ಮದುವೆಯಾಗುವುದು.

೨೫. ಸೀಮಂತ : ಫಲವಂತಿಕೆ : ಬಯಕೆ - ಬಪಕೆ, ಬಸಿರು ಬಸಗೆ, ಹೂಮುಡಿಸುವುದು ಮುಂತಾದ ಹೆಸರುಗಳಿಂದ ಕರೆಯುತ್ತಾರೆ.

೨೬. 'ಬಡವರ ಮನೆ ಊಟ ಗನ, ದೊಡ್ಡವರ ಮಾತು ಗನ'

೨೭. ಶವಸಂಸ್ಕಾರ, (ಮಾಹಿತಿ) ಶ್ರೀ ಹುಚ್ಚಪ್ಪ ಮಾಸ್ತರ, ಹಿರೆಮನೆ, ತಾಳಗುಪ್ಪ, ಸಾಗರ.

## ಅಧ್ಯಾಯ ೫

# ವಾರ್ಷಿಕಾವರ್ತನದ ಆಚರಣೆಗಳು

### ೫.೧. ಆರಿದ್ರ ಮಳೆ ಹಬ್ಬ

'ಆರಿದ್ರ ಮಳೆ ಹಬ್ಬ' ಈ ಹಬ್ಬವನ್ನು ದೀವರು ಅತಿ ಉತ್ಸಾಹ ಸಂಭ್ರಮದಿಂದ ಆಚರಿಸುತ್ತಾರೆ. ಮೇಲ್ನೋಟಕ್ಕೆ ಮಳೆಗೆ ಸಂಬಂಧಿಸಿದ ಹಬ್ಬದಂತೆ ಕಂಡುಬರುತ್ತದೆ. ನಾವು ಗಮನಿಸಿದಂತೆ ದೀವರು ಹೆಚ್ಚಾಗಿ ವಾಸಿಸುವ ಊರುಗಳಲ್ಲಿ ಮಾತ್ರ ಈ ಹಬ್ಬವಿದೆ. ಅದರಲ್ಲೂ ಸಾಗರ, ಸೊರಬ, ಹೊಸನಗರದ ಕೆಲಭಾಗ, ಸಿದ್ದಾಪುರ (ಉ.ಕ.) ಪೂರ್ವ ಭಾಗದಲ್ಲಿ ಈ ಹಬ್ಬವನ್ನು ಆಚರಿಸುವರು.

ಜೇಷ್ಠ-ಆಷಾಡಗಳೆಂದರೆ ಮಲೆನಾಡಿಗೆ ಮಳೆಗಾಲದ ಆರಂಭದ ತಿಂಗಳುಗಳಾಗಿವೆ. ಮೇಲೆ ಭಾರವಾಗಿ ತೂಗು ಬಿಟ್ಟಿರುವ ಮೋಡಗಳು, ಹೊಲಗದ್ದೆಗಳಲ್ಲಿ ಸಾಕಷ್ಟು ನೀರು ಇದ್ದು, ಬಿತ್ತನೆಯಾದ ನಂತರದಲ್ಲಿ ಗದ್ದೆಯನ್ನು ಹರಗಿ ಸಾಲು ಮಾಡಿಟ್ಟ ಸಸಿಗಳು ನೀರಿನಲ್ಲಿ ತೆಳು ಗಾಳಿಗೆ ಮೈಯೊಡ್ಡಿ ನಿಂತಿರುತ್ತವೆ. ಕೃತಿಕ, ರೋಹಿಣಿಗಳ ಅಬ್ಬರ ಕಡಿಮೆಯಾಗಿ ಮಲೆನಾಡಿನಲ್ಲಿ ದೊಡ್ಡ ಮಳೆಗಳು ಆರಂಭವಾಗುತ್ತವೆ. ಮೃಗಶಿರಾ, ಆರಿದ್ರ, ಪುನರ್ವಸು, ಪುಷ್ಯ ಇತ್ಯಾದಿ ಮಳೆ ಆದರೇನೆ ಬಿತ್ತಿದ ಬೆಳೆ ಕೈಗೆ ಬರುವುದು. ಆರಿದ್ರ ಮಳೆ ಸಂದರ್ಭದಲ್ಲಿ ಈ ಹಬ್ಬವನ್ನು ಆಚರಿಸುವುದು ಯಾಕೆ? ಎಂಬ ಪ್ರಶ್ನೆ ಕಾಡುವುದು ಸಹಜ.

ಮಲೆನಾಡಿನ ಕೃಷಿಪದ್ಧತಿ ಒಣಬೇಸಾಯ ಕ್ರಮವನ್ನು ಅನುಸರಿಸುತ್ತಾರೆ. ಅಥವಾ ನಾಟಿಪದ್ಧತಿ(ನಟ್ಟಿ) ಯನ್ನು ಹೊಂದಿದೆ. 'ಒಣ ಬೇಸಾಯ' ಎಂದರೆ ಕಾದ ಮಣ್ಣಿಗೆ ಬೀಜ ಬಿತ್ತನೆ ಮಾಡುವುದು. ಭೂಮಿ ಯಲ್ಲಿ ಯಾವ ತೆರನಾದ ಹದ ಇರುವುದಿಲ್ಲ. ಮೇ ತಿಂಗಳಲ್ಲಿ ಬಿತ್ತನೆ. ತದನಂತರ ಜೂನ್ ತಿಂಗಳಲ್ಲಿ ಮಳೆಯಾಗಿ ಗದ್ದೆಯಲ್ಲಿ ಸಸಿಗಳು ಹುಟ್ಟಿದ ಹತ್ತು ಹನ್ನೆರಡು ದಿನಕ್ಕೆ 'ಹರಗು'ವರು ಅಥವಾ ಸಾಲು ಮಾಡು ವರು. ಇದಕ್ಕೆ 'ಬರ' ಹಿಡಿಯುವುದು ಎಂದು ಕರೆಯುವರು. ಇದನ್ನು ವಾರ ಬಿಟ್ಟು ವಾರ ಎರಡು ಸಾರಿ ಸಸಿಗೆ ಕುಂಟೆ ಹಿಡಿದರೆ ಕಳೆ, ಕಸ ಯಾವುದು ಅಷ್ಟಾಗಿ ಗದ್ದೆಯಲ್ಲಿ ಇರುವುದಿಲ್ಲ. ಇಷ್ಟೆಲ್ಲಾ ಆದ ನಂತರದಲ್ಲಿ ಮಳೆಯಾಗಿ ಗದ್ದೆ ನೀರಾದಾಗ, ಗದ್ದೆ ಹೊಡೆಯುವುದು ಅಂದರೆ ಕೊರಡು[1] ಕಟ್ಟಿಕೊಂಡು ಗದ್ದೆಯ ಸಸಿಯ ಮೇಲೆ ಚಲಿಸುವುದು ಎಂದರ್ಥ. ನೀರು ನಿಲ್ಲಿಸಿ ಕೊರಡು ಚಲಿಸುವುದರಿಂದ ಸಣ್ಣ ಪುಟ್ಟ ಕಳೆ ಅಥವಾ ಸಾಲಿನಲ್ಲಿ ಇರುವ ಕಳೆಯಲ್ಲಾ ಕದಡಿ ನೀರಿನಲ್ಲಿ ತೇಲುತ್ತದೆ. ತದನಂತರ ಗದ್ದೆಯಲ್ಲಿ ಒಂದು ವಾರದವರೆಗೆ ಸಸಿ ಕಾಣುವಂತೆ ನೀರು ನಿಲ್ಲಿಸುವರು. ಪೆಟ್ಟು ತಗುಲಿದ ಕಳೆ ಕೊಳೆತು ಹೋಗುತ್ತದೆ. ಇಷ್ಟೆಲ್ಲಾ ಕೆಲಸ ಮಾಡಿ ಮುಗಿದರೆ ಆ ವರ್ಷದ ಎತ್ತಿನ ಬೇಸಾಯ ಮುಗಿದಂತೆ. ಹಾಗಿಯೂ ಭೂಮಿ ಹದಗೊಳಿಸಿ,

ಬಿತ್ತನೆ ಮಾಡಿ, ಇಷ್ಟೆಲ್ಲಾ ಮುಗಿಯುವುದು ಸರಿಯಾಗಿ 'ಆರಿದ್ರ ಮಳೆ'ಯು ಬರುವವರೆಗೆ. ಆರಿದ್ರ ಮಳೆಯ ಸಂದರ್ಭದಲ್ಲಿ ರೈತ ನೆಮ್ಮದಿಯ ನಿಟ್ಟುಸಿರು ಬಿಡುತ್ತಾನೆ. ಹೀಗೆ ಕೆಲಸದ ಒತ್ತಡದಿಂದ ನೆಮ್ಮದಿಯ ಬದುಕಿಗೆ ರೈತ ಹೊರಳಿದಾಗ ಮನಸ್ಸು ಸಂಭ್ರಮದ ಕಡೆಗೆ ತಿರುಗುತ್ತದೆ. ಹಳ್ಳಿಹಳ್ಳಿಯಲ್ಲಿ ದೀವರು ಮಳೆ ಹಬ್ಬವನ್ನು ಸಂಭ್ರಮದಿಂದ ಆಚರಿಸುತ್ತಾರೆ. ಆರಿದ್ರ ಮಳೆಗೆ ಕೆಲವರು ಹಬ್ಬವನ್ನು ಆಚರಿಸಿದರೆ ಕೆಲವರು ಮಿರಗಿ ಮಳೆ(ಪುನರ್ವಸು)ಗೆ ಹಬ್ಬವನ್ನು ಆಚರಿಸುವರು.

ಸಾಮಾನ್ಯವಾಗಿ ದೀವರು ವಾಸಿಸುವ ಹಳ್ಳಿಗಳಲ್ಲಿ ಹಳ್ಳಿಗೊಂದು 'ಗ್ರಾಮದೇವರ' (ಜೀರ ದೇವರ) ಗುಡಿ ಇರುತ್ತದೆ. ಈ ಗುಡಿ ಊರಿನ ಕೇಂದ್ರ ಭಾಗದಲ್ಲಿದ್ದು, ಇದರ ಸುತ್ತಲು ದೀವರ ಮನೆಗಳು ಇರುತ್ತವೆ. ಎತ್ತರವಾದ ಚೌಕಾಕಾರದ ಕಟ್ಟೆಯ ಮೇಲೆ ಗುಡಿ ಇದ್ದು, ಒಂದು ಬಾಗಿಲು ಮಾತ್ರವಿರುತ್ತದೆ. ಮೇಲ್ಛಾವಣಿ ಹೆಂಚಿನದಾಗಿರುತ್ತದೆ. ಗುಡಿಯು ಸಣ್ಣದಾದ ಅಟ್ಟ (ಉಪ್ಪರಿಗೆ) ಹೊಂದಿದ್ದು, ಜೀರ ಡೊಳ್ಳು, (ದೇವರ ಡೊಳ್ಳು) ಇಡಲು ಅನುಕೂಲ ಮಾಡಿರುತ್ತಾರೆ. ಗುಡಿಯಲ್ಲಿ ವರ್ಷಕ್ಕೆ ಒಂದು ಸಾರಿ ಮಾತ್ರ ಪೂಜೆ. ಕತ್ತಿ, ಜೀರದೇವರು, ಹುಲಿದೇವರು, ಕಲ್ಲು ಮುಂತಾದ ಮೂರ್ತಿಗಳಿರುತ್ತವೆ.

'ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ, ಅಂಕೋಲಾ ತಾಲೂಕುಗಳಲ್ಲಿ ಗುಡಿಗಳು ಭಿನ್ನವಾಗಿವೆ. ಚೌಕಾಕಾರದ ಗುಡಿಗಳು ಹೆಂಚಿನ ಮೇಲ್ಛಾವಣಿಯನ್ನು ಹೊಂದಿವೆ. ಒಂದು ರೀತಿ ಆಧುನಿಕ ಗುಡಿಗಳ ಮಾದರಿ ಎಂದರೂ ತಪ್ಪಾಗಲಾರದು. ಗರ್ಭಗುಡಿಯಲ್ಲಿ ಕುಮಾರರಾಮನ ತಲೆ ಎನ್ನಲಾದ ಕಲ್ಲಿನ ಗುಂಡು ಇದ್ದು ಅದರ ಮುಂಭಾಗದಲ್ಲಿ ಕಂಚಿನ ಕುದುರೆ, ಜಿಂಕೆ, ಕುದುರೆ ಸವಾರ, ಉದ್ದಗತ್ತಿ, ಬಾವುಟ, ಛತ್ರಿ, ಬೆಳ್ಳಿಗರಿ ಇತ್ಯಾದಿಗಳು ಇರುತ್ತವೆ. ಪ್ರತಿ ಮಂಗಳವಾರ ಮತ್ತು ಶುಕ್ರವಾರ ಪೂಜೆ ನಡೆಯುತ್ತದೆ' (ಡಾ.ಸ.ಚಿ. ರಮೇಶ, ೨೦೦೧, ಪುಟ ೧೬೨). ಆದರೆ ಮಲೆನಾಡಿನ ದೀವರು ವರ್ಷಕ್ಕೆ ಒಂದುಬಾರಿ ಆರಿದ್ರ ಮಳೆ ಹಬ್ಬದ ದಿನದಂದು ದೇವಸ್ಥಾನದ ಬಾಗಿಲನ್ನು ತೆರೆಯುವರು.

ಆರಿದ್ರ ಮಳೆ ಪ್ರಾರಂಭವಾದ ನಂತರದಲ್ಲಿ ಮೊದಲ ಶನಿವಾರದಂದು ಜೀರ ದೇವರ 'ಡೊಳ್ಳು ಇಳಿಸಿ' ಡೊಳ್ಳು ಬಾರಿಸುವರು. ದೇವಸ್ಥಾನದ ಕಟ್ಟೆಯ ಒಳಗೆ ಇಳಿಸಿ ಪೂಜಿಸುವರು. ನಂತರ ಒಂದು ಒಳ್ಳೆಯ ದಿನ ನೋಡಿ ಗ್ರಾಮದೇವರ ಹಬ್ಬವನ್ನು ಆಚರಿಸುವರು. ಆರಿದ್ರ ಮಳೆಯ ಮೊದಲ ಪಾದ ಅಥವಾ ಕೊನೆಯ ಪಾದದಲ್ಲಿ ಗ್ರಾಮದ ಮುಖಂಡರ ಅಣತಿಯಂತೆ ಹಬ್ಬದ ದಿನ ನಿಗದಿ. ನಂತರದ ಕಾರ್ಯ ಎಲ್ಲವು ನಡೆ ಯುತ್ತದೆ. ಹಬ್ಬವು ಎರಡು ದಿನ ನಡೆಯುತ್ತದೆ. ಮೊದಲ ದಿನದ ಹಿಂದಿನ ದಿನದ ಸಂಜೆ ಕೆರೆಯ ದಂಡೆಯಲ್ಲಿ ರುವ ಶೂಲದಕಟ್ಟೆಗೆ, ಜೀರ ಡೊಳ್ಳು, ಹುಲಿದೇವರು, ಕುದುರೆ ದೇವರು, ಛತ್ರಿ ಛಾಮರ ಮುಂತಾದವು ಗಳನ್ನೆಲ್ಲಾ ಕೆರೆಯ ದಂಡೆಗೆ ತರುವರು. ಕೆರೆಯ ದಂಡೆಯಲ್ಲಿ ಚಪ್ಪರ ಹಾಕಿ ಚೌಕಾಕಾರದ ಕಟ್ಟೆಯ ಮೇಲೆ ದೇವರನ್ನು ಅಲಂಕರಿಸುತ್ತಾರೆ. ನಂತರ ಬೆಳಗ್ಗೆ ದೇವರನ್ನು ಉಪವಾಸವಿದ್ದು ಪೂಜಿಸುವರು. ದೇವರ ಕಟ್ಟೆಯ ಪಕ್ಕದಲ್ಲಿ ಮರದಿಂದ ಮಾಡಿದ ಶೂಲಗಳಿರುತ್ತವೆ. ಇದಕ್ಕೆ ಶೂಲದಕಟ್ಟೆ ಎನ್ನುವರು. ಇಲ್ಲಿ ಕೋಳಿ, ಕುರಿ ಬಲಿ ಕೊಡಲಾಗುತ್ತದೆ. ಊರ ಹಿರಿಯರು ಪೂಜಾಕಾರ್ಯದಲ್ಲಿದ್ದು ಏನು ತೊಂದರೆಯಾಗದಂತೆ ಕಾರ್ಯ




ದೇವರ ಮನೆಗಳು, ಕೇಂದ್ರದಲ್ಲಿ ಬೀರ ದೇವರ ಗುಡಿ

ನೆರವೇರಿಸುವರು. ಊರಿನ ಜನರೆಲ್ಲಾ ಕೆರೆಯ ದಂಡೆಗೆ ಬಂದು ದೇವರಿಗೆ ಪೂಜೆ ಸಲ್ಲಿಸುವರು. ಕೋಳಿ, ಕುರಿ ಬಲಿ ಕೊಡುವರು. ಕೆರೆಯ ದಂಡೆಯ ಮೇಲೆ ಅನೇಕ ಜಾತಿಯ ಮರಗಳು ಒತ್ತೊಟ್ಟಿಗೆ ಇದ್ದು, 'ದೈವದ ಬನ'ಗಳಾಗಿರುತ್ತವೆ. ಮಲೆನಾಡಿನ ಊರುಗಳಲ್ಲಿ ಈ ದೈವದ ಬನಗಳದ್ದೆ ಒಂದು ವಿಶೇಷ. ಚೌಡಮ್ಮನ ಬನ, ಭೂತನ ಬನ, ಕೆರಿಯಮ್ಮನ ಬನ, ರಾಚಮ್ಮನ ಬನ ಈ ಬನದ ಯಾವ ಮರ, ಗಿಡವನ್ನು ಕಡಿಯುವಂತಿಲ್ಲ, ಸುಡುವಂತಿಲ್ಲ, ಮನೆಗೆ ಬಳಸುವಂತಿಲ್ಲ. ಮೈಲಿಗೆ ಮಾಡಬಾರದು. ಚಪ್ಪಲಿ ಧರಿಸುವುದು, ಉಗುಳುವುದು, ಮೂತ್ರ, ಮಲ ವಿಸರ್ಜಿಸುವುದು ಮಾಡಬಾರದು. ಬನದಲ್ಲಿ ಹೆಚ್ಚಾಗಿ ಆಲ, ಅರಳಿ, ಸುರಗಿ, ದೇವದಾರು ಮರಗಳಿರುತ್ತವೆ.

ಊರ ಜನರೆಲ್ಲಾ ಪೂಜೆ ಸಲ್ಲಿಸಿದ ನಂತರ ಮಾರನೆಯ ದಿನ 'ಬಿಂಗಿ' ಕುಣಿತದೊಂದಿಗೆ ದೇವರ ಮೆರವಣಿಗೆ ಗ್ರಾಮ ದೇವರ ಗುಡಿಗೆ ಬರುವುದು. ದೇವರು ಬರುವ ಹಾದಿಯಲ್ಲಿರುವ ಮನೆಯವರು ತಳಿರು ತೋರಣ, ಆರತಿ ಎತ್ತುವರು. ಇಲ್ಲಿ ವಿಶೇಷವಾಗಿ ಕಂಗೊಳಿಸುವುದು 'ಬಿಂಗಿ ಕುಣಿತ' ದೇವರ ಉತ್ಸವದ ಮುಂದೆ ಬೀರ ಡೊಳ್ಳಿನ ಸುತ್ತಲು ಹತ್ತಾರು ಡೊಳ್ಳು ಕಟ್ಟಿದ ಯುವಕರು ಆಕರ್ಷಕವಾಗಿ ವೀರಾವೇಶದಿಂದ ಡೊಳ್ಳು ಬಾರಿ ಸುವರು. ಈ ಕುಣಿತದ ಮುಂದೆ ಕೆಲ ಮಕ್ಕಳು ಮರದ ಕತ್ತಿ ಹಿಡಿದು ವೀರಾವೇಶದಿಂದ ಕೂಗುತ್ತಾ ಕುಣಿ ಯುವರು.

'ನಿನ್ನೆ ಬಂದವರು ಯಾರಪ್ಪ ಗೆಜ್ಜೆಕಾಲ ಬೀರಪ್ಪ
ಕೊಡಾ ಕುಯಿ, ಕೊಡಾ ಕುಯಿ'

ಎಂದು ಕೂಗುವರು. ಈ ರೀತಿಯ ಮೆರವಣಿಗೆ ಗುಡಿಯ ಮುಂಭಾಗಕ್ಕೆ ಬಂದು ಮುಂಭಾಗದಲ್ಲಿ ಹರಡಿದ 'ಬೆಂಕಿ ಕೆಂಡ'ವನ್ನು ಹಾಯಲಾಗುತ್ತದೆ. ದೇವರ ಮುಖವಾಡ ದೇವಸ್ಥಾನದಲ್ಲಿ ಪ್ರತಿಷ್ಠಾಪಿಸುತ್ತಿದ್ದಂತೆ ಡೊಳ್ಳು

ಕುಣಿಯುವವರು ಕೆಂಡದ ಮೇಲೆ ಕುಣಿಯುವರು. ಕೆಂಡದ ಕೊಂಡ ಹಾಯುವವರ ಕೇಕೆಗಳಿಂದ ವಾತಾವರಣ ಬಿಸಿಯೇರುತ್ತದೆ. ಇಲ್ಲಿ ವಿಶೇಷವಾಗಿ ದೇವರಿಗೆ ಆರತಿ ಎತ್ತಲಾಗುತ್ತದೆ. ಇದಕ್ಕೆ ಹತ್ತು ಬೆರಳಾರತಿ ಎನ್ನುವರು. ಬೆರಳ ತುದಿಗೆ ಎಣ್ಣೆ, ತುಪ್ಪದಲ್ಲಿ ಅದ್ದಿದ ಹತ್ತಿಯ ಬತ್ತಿಗಳನ್ನು ಇಟ್ಟು ಅವನ್ನು ದೀಪದ ಸಹಾಯದಿಂದ ಹಚ್ಚುವರು. ಹೊಸದಾಗಿ ಮದುವೆಯಾದ ಮದುಮಗಳು ಈ ಆರತಿಯನ್ನು ಬೆಳಗಬೇಕು. ಈ ರೀತಿ ಮಾಡಿದರೆ ಸಂತಾನ ಭಾಗ್ಯ ಲಭಿಸುವುದು ಎಂಬ ನಂಬಿಕೆ ಇದೆ. ಹಬ್ಬಕ್ಕೆ ಬಂದ ಹೊಸ ಅಳಿಯನಿಗೆ ಕೈಚೀಲ, ಛತ್ರಿ, ಸುಣ್ಣದ ಕಾಯಿ ಮುಂತಾದ ವಸ್ತುಗಳನ್ನು ಕೊಡುವರು. ಹುಡುಗಾಟಿಕೆ ಜೀವನದಿಂದ ಜವಾಬ್ದಾರಿ ಜೀವನಕ್ಕೆ ಬಂದಿರುವೆ. ಯಜಮಾನನಂತಿರಬೇಕು ಎಂಬುದನ್ನು ಧ್ವನಿಸುತ್ತದೆ. ಸಂಜೆ ಬೀರ ದೇವರ ಡೊಳ್ಳನ್ನು ಅಟ್ಟಕ್ಕೇರಿಸುವ ಮೂಲಕ ಹಬ್ಬ ಮುಕ್ತಾಯವಾಗುವುದು.

ಇಲ್ಲಿ ಗಮನಿಸಬೇಕಾದ ಅಂಶ ಎಂದರೆ ರಾಜ್ಯದ ಹಲವು ಭಾಗಗಳಲ್ಲಿ ಕುಮಾರ ರಾಮನಾಗಿ ಪೂಜಿಸಿ ಕೊಳ್ಳುವ ಈ ದೈವ ಮಲೆನಾಡಿನ ಭಾಗದಲ್ಲಿ ಗ್ರಾಮದೇವರಾಗಿ ಪೂಜಿಸಿಕೊಳ್ಳುತ್ತದೆ. ಸಾಗರ, ಸೊರಬ ತಾಲ್ಲೂಕುಗಳಲ್ಲಿ ಗ್ರಾಮದೇವರಾಗಿಯೂ, ಹೊಸನಗರ, ತೀರ್ಥಹಳ್ಳಿಯಲ್ಲಿ ಕುಮಾರರಾಮ, ಗ್ರಾಮದೇವರು, ಕುಮಾರಸ್ವಾಮಿ, ಗಾಮೇಶ್ವರ ಎಂದು ಕರೆಯಿಸಿಕೊಳ್ಳುತ್ತಾನೆ(ಡಾ.ಸಿ.ಬಿ.ರಮೇಶ, ೨೦೦೧, ಪುಟ ೧೪೯). ಈ ದೇವರ ಆರಾಧನೆಯಲ್ಲಿ ಕಾಣ ಬರುವ ಸಂಗತಿ ಎಂದರೆ ಮೆರವಣಿಗೆಯು ಕುರಿತ ಕೃಷಿ ಪರಂಪರೆಯ ಸಂಕೇತದ ಪಳಯುಳಿಕೆಯಂತೆ ಕಂಡು ಬಂದರೆ, ಕೃಷಿ ಚಟುವಟಿಕೆಯ ಹಿನ್ನೆಲೆ ಇಟ್ಟುಕೊಂಡು ನೋಡಿದರೆ ಒಂದು ಹಂತದ ಬೇಸಾಯ ಪದ್ಧತಿ ಮುಗಿದು ಗದ್ದೆಗೆ ವನ್ಯ ಜೀವಿಗಳ ತೊಂದರೆ ನಿವಾರಣೆಗೆ ಊರ ಹೊರಗಿನ ಕೆರೆಯಿಂದ ಊರೊಳಗೆ ಕೇಕೆ ಹಾಕುತ್ತ, ಡೊಳ್ಳು ಹೊಡೆಯುತ್ತಾ ಬರುವ ಮೆರವಣಿಗೆಯಿಂದಾಗಿ ವನ್ಯಜೀವಿಗಳು ಜಮೀನಿಗೆ ಇಳಿಯದಂತೆ ಭಯ ಬೀಳಿಸುವ ಪದ್ಧತಿಯಂತೆ ಕಂಡುಬರುವುದು. ಈ ಮಳೆಯಲ್ಲಿ ಕೃಷಿ ಚಟುವಟಿಕೆ ಬಹುತೇಕ ಮುಗಿದಂತೆ. ನಂತರ ಕಳೆ ತೆಗೆಯುವುದು, ನ್ಯಾರೆ ತೆಗೆಯುವುದು, ಗದ್ದೆ ಕೊಯ್ಯುವುದು ಈ ತೆರನಾದ ಕೃಷಿ ಚಟುವಟಿಕೆ ಮುಂದು ವರೆಯುತ್ತದೆ.

## ೫.೨. ಗೌರಿ ಹಬ್ಬ

ಶ್ರಾವಣ-ಭಾದ್ರಪದ ತಿಂಗಳಲ್ಲಿ ಗೌರಿ-ಗಣೇಶನ ಹಬ್ಬವನ್ನು ನಾಡಿನಾದ್ಯಂತ ಆಚರಿಸುವರು. ಕೆಲವರಿಗೆ ಗಣೇಶ ಪ್ರಮುಖನಾದರೆ ಕೆಲವರು 'ಗೌರಿ'ಯನ್ನು ಮಾತ್ರ ಆರಾಧಿಸುವರು. ದೀವರು 'ಗೌರಮ್ಮ'ಳನ್ನು ಪ್ರಮುಖವಾಗಿಟ್ಟುಕೊಂಡು ಪೂಜಿಸುವರು. ಗೌರಮ್ಮನ ಹಬ್ಬದಂದು ಮುಂಜಾನೆ ಆಯಾ ಕೇರಿಯಲ್ಲಿರುವ ಬಾವಿಕಟ್ಟೆಗೆ ಮುತ್ತೈದೆಯರೆಲ್ಲಾ ಸೇರಿ ಬಾವಿಕಟ್ಟೆಯನ್ನು ತೊಳೆದು ಸಿಂಗರಿಸಿ, ಬಾವಿಯಿಂದ ನೀರೆತ್ತಿ, ಕಳಸದ ಗಿಂಡಿಗೆ ನೀರನ್ನು ಹಾಕುವರು. ಹರಿವಾಣ ಅಥವಾ ದೊಡ್ಡ ಸಿಬ್ಬದಲ್ಲಿ, ಗೌರಮ್ಮನನ್ನು ಪ್ರತಿಷ್ಠಾಪಿಸಿ ಹೂವಿನಿಂದಲಂಕರಿಸಿ, ಕಳಸದ ಬಾಯಿಗೆ ಎಲೆಯನ್ನು ಕಿರೀಟದಂತೆ ಮೇಲ್ಮುಖವಾಗಿ ಇಡುವರು. ಇದು ಹೂವಿನ ಗುಚ್ಛದಂತೆ ಕಂಡುಬರುವುದು. ಎಡ, ಬಲ ಬದಿಯ ಎಲೆಗೆ ಬೆಂಡೋಲೆ, ಮಧ್ಯದ ಎಲೆಗೆ ಮೂಗುತಿ ಹಾಕಿ, ಗುಚ್ಛದ ಮೇಲೆ ಹೂವನ್ನು ಇಟ್ಟು, ಹೂವಿಗೆ ಜೈತಲೆ ಬಿಟ್ಟು, ಇಳಿಬಿಟ್ಟು, ಹೂವು ಆಭರಣ ಗಳಿಂದ ಅಲಂಕರಿಸಿ, ಪೂಜಿಸಿ, ಮನೆಯ ಕಡೆ ಗೌರಮ್ಮನನ್ನು ತೆಗೆದುಕೊಂಡು ಬರುವರು.

ಮನೆಯಲ್ಲಿ ಬಾಳೆದಿಂಡಿನಿಂದ ತಯಾರಿಸಿದ ಮಂಟಪ ಇರುತ್ತದೆ. ಟೇಬಲಿನ ಆಕಾರವನ್ನು ಹೋಲುವಂತೆ ಬಾಳೆದಿಂಡಿನ ನಾಲ್ಕು ಕಂಬಗಳನ್ನು ನಿಲ್ಲಿಸಿ, ಕಂಬದಿಂದ ಕಂಬಕ್ಕೆ ಬಿದಿರಿನ ದಬ್ಬೆಯನ್ನು ಚುಚ್ಚಿ ಮಂಟಪ ತಯಾರಿಸುವರು. ಮಂಟಪದ ಮೇಲೆ 'ಗೌರಮ್ಮ'ನ ಹರಿವಾಣ ಇಡುವರು. ಗೌರಮ್ಮನ ಪೂಜೆಗೆ ಬಳಸುವ ಹೂವುಗಳು ಬಹಳ ವಿಶೇಷವಾದಂತವು. ಈ ಕಾಲಮಾನದಲ್ಲಿ ಬಿಡುವ ಇಂದ್ರನ ಹೂ, ಗೊಲ್ಟೆ ಹೂ, ಗುಡ್ಡೆದಾಸವಾಳ ಹೂ, ಡೇರೆದ ಹೂವು ಮುಂತಾದ ಹೂವುಗಳಿಂದ ಸಿಂಗರಿಸುವರು. ಬಾವಿಕಟ್ಟೆಯಿಂದ ಮನೆಯವರೆಗೆ ಗೌರಮ್ಮಳನ್ನು ತಂದ ಮುತ್ತೈದೆಯು ಕಾಲಿಗೆ ಬಾಗಿಲಲ್ಲಿ ನೀರು ಹಾಕಿ ಮನೆಯೊಳಗೆ ಕರೆದು ಕೊಳ್ಳುವರು. ಅತ್ಯಂತ ವೈಭವದಿಂದ ಪೂಜಿಸುವರು. ಗೌರಮ್ಮಳನ್ನು ಬಹಳ ವಿಶೇಷವಾಗಿ ಸಿಂಗರಿಸುತ್ತಾರೆ. ಗೌರಿಯ ಕಳಸದ ಗಿಂಡಿಯ ಕಟ್ಟೆಗೆ ಬಾಳೆದಿಂಡಿನ ಕಾಲು ಮಾಡಿ ಕಾಲುಂಗರ, ಕಾಲುಚೈನ್, ಕಾಲಂದಿಗೆ ಧರಿಸುವರು. ಗಿಂಡಿಯ ಕೊರಳಿಗೆ ತಾಳಿಸರ, ಪವನಿನ ಸರ, ಗುಂಡಿನ ಸರ, ಸೊಂಟಕ್ಕೆ ಬೆಳ್ಳಿಯ ಗೆಜ್ಜೆಯ ಪಟ್ಟಿ ಹಾಕುವರು. ಇಂದ್ರನ ಹೂವಿನ ಗುಚ್ಛದಲ್ಲಿರುವ ಬಿದರ ಕಟ್ಟಿಗೆಗೆ ಚವರಿ ಕಟ್ಟಿ ಜಡೆ ಹಾಕುವರು. ಈ



ಗೌರಮ್ಮ

ರೀತಿ ಹೆಣ್ಣಿಗೆ ಮಾಡುವ ಎಲ್ಲಾ ಅಲಂಕಾರವನ್ನು ಮಾಡುವರು. ಕಜ್ಜಾಯ, ಕರಿಕಡುಬು, ಪಾಯಸ ನೈವೇದ್ಯ ಹಿಡಿಯುವರು. ಆರಿದ್ರ ಮಳೆಯಲ್ಲಿ ಗಂಡಸರು ಪೂಜೆ ಸಲ್ಲಿಸಿದರೆ ಈ ಹಬ್ಬದಲ್ಲಿ ಹೆಂಗಸರು ಪೂಜೆ ಸಲ್ಲಿಸುವರು.

ಮದುವೆಯಾದ ನವ ಮದುಮಕ್ಕಳು ತವರು ಮನೆಗೆ ಹಬ್ಬದ ಹಿಂದಿನ ದಿನವೆ ಬಂದಿರುತ್ತಾರೆ. ಹಬ್ಬದ ದಿನದಂದು ತಾವು ತಂದ ರವಿಕೆ ಕಣ, ಕೊಬ್ಬರಿ ಬಟ್ಟಲು, ಕಾಯಿ, ಗೌರಿಬಳೆ, ಹೂ ಮುಂತಾದವುಗಳನ್ನು ಮಂಟಪದ ಬಲಭಾಗದಲ್ಲಿಟ್ಟು ಪೂಜಿಸುವರು. ಮನೆಯ ಅಳಿಯ ಮೂರ್ತಿ ಇರುವ ಇಡಿ ಬಾಳೆಗೊನೆಗೆ ಸಿಂಗಾರ ಮಾಡಿಕೊಂಡು ಮಾವನ ಮನೆಗೆ ತರಬೇಕು. ಇದಕ್ಕೆ 'ಹೊರೆಗೊನೆ' ಎನ್ನುವರು. ಹೊರೆಗೊನೆಯನ್ನು ಗೌರಿ ಮಂಟಪದಲ್ಲಿಡುವರು. ಗೌರಿಯನ್ನು ೫ ದಿವಸಗಳ ಕಾಲ ಇಟ್ಟು ಪೂಜೆ ಮಾಡುವರು. ಪ್ರತಿ ದಿವಸ ಯಾವುದಾದರೂ ಸಿಹಿ ಅಡುಗೆ ಆಗಲೇಬೇಕು. ಕಜ್ಜಿಕಾಯಿ, ಹೋಳಿಗೆ, ಹುರಕ್ಕಿ ಉಂಡೆ, ಬೇಳೆ ಉಂಡೆ, ಹೆಸರು ಕಾಳು ಉಂಡೆ, ಕಜ್ಜಾಯ ಮುಂತಾದ ಪದಾರ್ಥ ಮಾಡಲೇಬೇಕು. ಗೌರಿ ಬಿಡುವ ದಿವಸ ಗೌರಿಗೆ ಊಟ ಆಗಬೇಕು. ಸಾಮಾನ್ಯವಾಗಿ ಗೌರಿಯನ್ನು ಸಂಜೆ ಊರ ಹೊರಗಿನ ಕೆರೆಗೆ ಬಿಡುವರು.

ಸಂಜೆ ಮಹಾಪೂಜೆ ಆದ ನಂತರ ಗೌರಿಯನ್ನು ಮಂಟಪದಿಂದ ಹೊರ ತೆಗೆದು ಮನೆಯ ಹೆಬ್ಬಾಗಿಲಲ್ಲಿ ಇಟ್ಟು ಮತ್ತೊಮ್ಮೆ ಹಾಲು, ಹಣ್ಣು ಎಡೆ ಮಾಡಿ, ತೆಂಗಿನ ಕಾಯಿ ಒಡೆದು ಪೂಜಿಸುವರು. ಇಡೀ ಊರಿನ ಮುತ್ತೈದೆಯರೆಲ್ಲ ಸೇರಿ ಗೌರಮ್ಮನನ್ನು ಹರಿವಾಣದಲ್ಲಿ ತೆಗೆದುಕೊಂಡು ಕೆರೆಯ ಕಡೆಗೆ ಹೊರಡುವರು. ಹೊರಡುವ ಮೊದಲು ಗಂಡಸರು ಪಟಾಕಿ ಹೊಡೆಯುವರು. ಗೌರಿ ಮಂಟಪಕ್ಕೆ ಕಟ್ಟಿದ ಫಲವಳಿಕೆ ಸಾಮಾನುಗಳನ್ನು ಬುಟ್ಟಿಗೆ ತುಂಬಿ, ಗೌರಿ ಕಡುಬು, ಕಜ್ಜಾಯದ ಬುತ್ತಿಯ ಗಂಟನ್ನು ತೆಗೆದುಕೊಂಡು ಮನೆಯಂಗಳಕ್ಕೆ ಬಂದು ಆರತಿ ಎತ್ತಿ ಏಳು ಸಾರಿ ಹೂವು ಅಕ್ಕಿಯನ್ನು ಮನೆಗೆ ಬೀರುವುದು. ತವರುಮನೆಗೆ ಒಳ್ಳೆಯದಾಗಲಿ ಎಂಬುದಕ್ಕೆ ಅಕ್ಷತೆ ಬೀರುವರು. ಇಷ್ಟೆಲ್ಲಾ ಆದ ನಂತರದಲ್ಲಿ ನೆರೆ ಹೊರೆಯವರೆಲ್ಲ ಸೇರಿ ಕೆರೆ ಅಥವಾ ಹೊಳೆಗೆ ಗೌರಮ್ಮನ ಹರಿವಾಣ ತೆಗೆದುಕೊಂಡು ಕಾಲ್ನಡಿಗೆಯಲ್ಲಿ ತೆರಳುವರು. ಮುತ್ತೈದೆಯರು ಹಾಡು ಹೇಳುತ್ತಾ ಸಾಗಿದರೆ, ಗಂಡಸರು ಮೆರವಣಿಗೆಯ ಮುಂಭಾಗದಲ್ಲಿ ಪಟಾಕಿ ಹೊಡೆಯುತ್ತಾ ಸಾಗುವರು. ಕೆರೆಯ ದಂಡೆಗೆ ಬಂದು ಮೆರವಣಿಗೆ ನಿಲ್ಲುತ್ತದೆ. ಕೆರೆಯ ದಂಡೆಯ ಮೇಲೆ ಜಾಪೆ ಹಾಕಿ ಗೌರಮ್ಮನನ್ನು ಕೂರಿಸಿ ಪೂಜಿಸಿ, ಕಳಸದ ನೀರನ್ನು ಕೆರೆಗೆ ಬಿಡುವರು. ಹೂವು, ಎಲೆ, ಅಕ್ಕಿ ಬುತ್ತಿಗಂಟನ್ನು ಕೆರೆಗೆ ಬಿಡುವರು. ತಂಬಿಗೆಗೆ ೫ ಕಲ್ಲುಗಳನ್ನು ಹಾಕುವರು. ತಂಬಿಗೆಯನ್ನು ಮನೆಗೆ ತಂದು ಛತ್ರದ ಕಣಜ, ಕೀಲು, ಕಡೆಗೋಲು ಮುಂತಾದ ಕಡೆ ಕಲ್ಲುಗಳನ್ನು ಇಡುವರು. 'ಗಂಗೆ ಬಳಿ'ಯವರು ಮಾತ್ರ ಕೆರೆಯಿಂದ ನೀರನ್ನು ತಂಬಿಗೆಗೆ ತುಂಬಿಕೊಂಡು ಮನೆಗೆ ಬಂದು ಗೌರಿ ಕೂರಿಸಿದ ಜಾಗದಲ್ಲಿ ಗಂಗೆಯನ್ನು ಕೂರಿಸಿ ಪೂಜಿಸಿ ಮಾರನೆಯ ದಿನ ಬೆಳಗ್ಗೆ ತೆಂಗಿನ ಮರಕ್ಕೆ ನೀರನ್ನು ಬಿಡುವರು.

ಈ ಹಬ್ಬದ ವಿಶೇಷ ಮನೆಯ ಹೆಣ್ಣು ಮಗಳು ಹಬ್ಬದ ದಿನದಂದು ಗಂಡನ ಜೊತೆಗೆ ತವರುಮನೆಗೆ ಬಂದು ಹಬ್ಬವನ್ನು ಆಚರಿಸುವುದು. ತವರುಮನೆಯಿಂದ ಗಂಡನ ಮನೆಗೆ ಹೋಗುವಾಗ ಕಜ್ಜಾಯ, ಕರಿದವಿಗೆಗಳನ್ನು ಮಾಡಿ ಮಗಳು ಅಳಿಯನ ಸಂಗಡ ಕಳಿಸುವುದು. ಪುರಾಣದ, ಜನಪದದ ಗೌರಿಯನ್ನು ತಂದೆ ಗಿರಿರಾಜ ತವರು ಮನೆಗೆ ಕರೆಯುವ ಸಂದರ್ಭ, ಅದರಿಂದಾದ ತೊಂದರೆ, ಗೌರಿಯ ಸಂಕಟ, ತಳಮಳ, ಜನಪದರಿಗೆ ತಿಳಿದಿರುವುದರಿಂದ ಮನೆಯ ಮಗಳ ಕಾಳಜಿ ಬಹುಮುಖ್ಯವಾಗುತ್ತದೆ.

## ೫.೩. ಭೂಮಿ ಹುಣ್ಣಿಮೆ

ನಮ್ಮ ಸಂಸ್ಕೃತಿಯಲ್ಲಿ ಫಲವಂತಿಕೆಯ ಆಚಾರ ವಿಧಿ ಹಲವು ರೀತಿಗಳಲ್ಲಿ ವ್ಯಕ್ತಗೊಂಡಿದೆ. ಅವರಲ್ಲಿ ಕೃಷಿಕರಾದ ನಮ್ಮ ಜನಪದಿಯರು ಭೂಮಿತಾಯಿಗೆ ಬಯಕೆಗಳಿವೆ. ಈಕೆ ಸ್ತ್ರೀ ಸಹಜವಾದ ಆಸೆ ಆಕಾಂಕ್ಷೆಗಳಿವೆ ಎಂದು 'ಭೂಮಿ ಹಣ್ಣಿಮೆ'ಯ ದಿನದಂದು ಫಲವಂತಿಕೆಯ ಹಬ್ಬವಾದ ಭೂಮ್ಮಣ್ಣಿ ಹಬ್ಬವನ್ನು ಆಚರಿಸುತ್ತಾರೆ. ಮಹಾನವಮಿ ಹಬ್ಬ ಆಗಿ ಏಳು ದಿವಸಕ್ಕೆ ಬರುವ ಹುಣ್ಣಿಮೆ ದಿವಸ ಆಚರಿಸುವರು. ಅಂದರೆ ದೀಪಾವಳಿಗೆ ಹದಿನೈದು ದಿನಗಳ ಹಿಂದೆ ಈ ಹಬ್ಬ ಬರುತ್ತದೆ. ಮಣ್ಣಿನ ಮಕ್ಕಳಾದ ದೀವರು ಈ ಹಬ್ಬವನ್ನು ಬಹಳ ವಿಶೇಷವಾಗಿ ಆಚರಿಸುವರು. ಮಹಾನವಮಿಯ ಹಬ್ಬದ ದಿವಸ ಅಟ್ಟದ ಮೇಲಿರುವ ಭೂಮಣ್ಣಿ ಬುಟ್ಟಿಯನ್ನು ತೆಗೆದು ಸಗಣಿಯಿಂದ ಸಾರಿಸಿ ಕೆಮ್ಮಣ್ಣು ಹಚ್ಚುವರು. ಮಾರನೆಯ ದಿವಸ ಅಕ್ಕಿಯನ್ನು ಅರೆದು ಬಿಳಿ ಬಣ್ಣವನ್ನು ತಯಾರಿಸಿಕೊಂಡು, ಬಿದರಿನ ಕುಂಚದಿಂದ ಈ ಬುಟ್ಟಿಗಳಿಗೆ ಚಿತ್ತಾರ ಬಿಡಿಸುವರು. ಬುಟ್ಟಿಯ ಚಿತ್ತಾರಗಳು, ಗೋಪಿ, ಛತ್ರದ ಸಸಿ, ಅಡಿಕೆಮರ, ಬಾಳೆಗಿಡ, ಭೂಮಣ್ಣಿ ಬುಟ್ಟಿ ಹೊತ್ತ ಮಹಿಳೆ, ನೇಗಿಲು, ಎತ್ತು, ಗಾಡಿ, ಏಣಿ ಮುಂತಾದ ಕೃಷಿಗೆ ಸಂಬಂಧಿಸಿದ ವಸ್ತುಗಳನ್ನು ಚಿತ್ತಾರದ ಆಕೃತಿಗಳಾಗಿ ಬಳಸಿಕೊಳ್ಳುವರು. ಈ ಚಿತ್ತಾರಗಳನ್ನು ಬುಟ್ಟಿಗಳ ಮೇಲೆ ಬರೆಯದೆ ಇದ್ದರೆ ಭೂಮಿ ಬಂಜೆಯಾಗುತ್ತಾಳೆ ಎಂಬ ನಂಬಿಕೆ ಇದೆ. ಭೂಮಿಗು ಸಹ ಬಯಕೆ ಬಿನ್ನಾಣಗಳಿವೆ ಎಂಬ ತಿಳುವಳಿಕೆ ಜನಪದರದ್ದಾಗಿದೆ. ದೀವರಲ್ಲದೆ ಮಲೆನಾಡಿನ ಕೃಷಿಕರೆಲ್ಲರು ಈ ಹಬ್ಬವನ್ನು ಆಚರಿಸುವರು. ದೀವರಲ್ಲಿ ಕಂಡುಬರುವ ಶ್ರದ್ಧೆ, ಹಬ್ಬದ ಮುಂಚಿನ ತಯಾರಿಯಾದ ಚಿತ್ತಾರದ ಬುಟ್ಟಿ ಇವರ ಕಲಾತ್ಮಕತೆ. ರೇಖೆಗಳ ವಿನ್ಯಾಸ, ಚಿತ್ತಾರದ ಕಲ್ಪನೆ ಬಹಳ ವಿಶಿಷ್ಟವಾದದ್ದು. ಉತ್ತರ ಕನ್ನಡದಲ್ಲಿ ಭೂಮಿ ಹಣ್ಣಿಮೆಯ ದಿವಸ ವಿಶೇಷ ಪೂಜೆ ಮತ್ತು ಅಡಿಗೆಯನ್ನು ಮಾಡಿ ಹೊಲ, ತೋಟಗಳಿಗೆ ಒಯ್ದು ಭೂಮಿ ಪೂಜಿಸುವರು. ಬಳಿಕ ತಂದ ಭಕ್ಷ್ಯಗಳನ್ನು ಹೊಂಡ ತೆಗೆದು ಅಲ್ಲೆ ಹುಗಿದು ಬರುವರು. ಈ ರೀತಿ ಸರಳ ಆಚರಣೆ ಕಂಡುಬರುತ್ತದೆ.



ಭೂಮಣ್ಣಿ ಬುಟ್ಟಿ

ಭೂಮಿ ಹುಣ್ಣಿಮೆಯ ಹಿಂದಿನ ರಾತ್ರಿ ಮನೆಯನ್ನೆಲ್ಲಾ ಸ್ವಚ್ಛಗೊಳಿಸಿ, ನಂತರ 'ಹಚ್ಚಂಬಲಿ' ಎಂಬ ವಿಶೇಷ ಪದಾರ್ಥ ಮಾಡಲು ಹೆಂಗಸರು ಅಣಿಯಾಗುವರು. 'ಹಚ್ಚಂಬಲಿಗೆ' ಹೀರೆಕಾಯಿ, ತೊಂಡೆಕಾಯಿ, ಬೆಂಡೆಕಾಯಿ, ಚಿನ್ನಿಕಾಯಿ, ಹಾಗಲಕಾಯಿ, ಅವರೇಕಾಯಿ, ಸೌತೆಕಾಯಿ, ಚಿನ್ನಿ ಎಲೆ, ಬಸಳೆ ಎಲೆ, ಕೆಸವಿನ ಎಲೆ ಮುಂತಾದ ತರಕಾರಿಗಳನ್ನು ಕತ್ತರಿಸಿ ಸಣ್ಣ ತುಂಡು ಮಾಡಿ ಒಂದು ದೊಡ್ಡ ಪಾತ್ರೆಗೆ ಹಾಕಿ ಬೇಯಿಸುವರು. ಉಪ್ಪು ಹಾಕುವುದಿಲ್ಲ, ಕಾರಣ ಉಪ್ಪು ನಂಜು ಎಂಬ ನಂಬಿಕೆ ಇದೆ. ಸೌತೆಕಾಯಿ ಹಾಕಿ ಸಿಹಿ ಕಡುಬು, ಕಜ್ಜಾಯ, ಸುಚ್ಚುಂಡೆ, ಬುತ್ತಿ ಉಂಡೆ, ಚಿತ್ರಾನ್ನ, ಹೋಳಿಗೆ, ಪಾಯಸ ಮುಂತಾದ ಪದಾರ್ಥಗಳನ್ನು ರಾತ್ರಿಯಿಡಿ ಮಾಡುವರು. ಇದಕ್ಕೆ 'ಹಬ್ಬ ಅಡದು' ಎನ್ನುವರು. ಹಬ್ಬ ಅಡದು > ಹಬ್ಬ ಅಡುವುದು > ಹಬ್ಬದ ಅಡುಗೆ ತಯಾರಿಸುವುದು ಎಂಬರ್ಥ.

ಮುಂಜಾನೆ ಎಲ್ಲಾ ಪದಾರ್ಥಗಳಲ್ಲಿ ಸ್ವಲ್ಪ ಸ್ವಲ್ಪ ತೆಗೆದು 'ಹಚ್ಚಂಬಲಿ' ಬುಟ್ಟಿಗಳಿಗೆ ತುಂಬಿ, ಇಡಕಲ್ಲು, ಬುಟ್ಟಿಗಳನ್ನು ಪೂಜಿಸಿ, ಸೂರ್ಯ ಹುಟ್ಟುವುದರೊಳಗೆ ಗದ್ದೆಗೆ ಹಚ್ಚಂಬಲಿ ಬೀರಿ (ಹಾಕಿ) ಬರಬೇಕು. ಗದ್ದೆ, ಬ್ಯಾಣ, ತೋಟ, ಹಿತ್ತಲು ಮುಂತಾದ ಕಡೆಗೆಲ್ಲ ಹಾಕಬೇಕು.

'ಹಚ್ಚಂಬಲಿ ಹರವೆ ಸೊಪ್ಪು ಹಿತ್ಲಾಗಿರೋ ಹಾರೆ ಹಿರೇಕಾಯಿ
ಕಾಗೆ ಬಾಯಿಗೆ ಹುಂಡಿ ಪಟಿವಿ ಹೋ ಹೋ ಹೋ...
ಭೂಮಿ ತಾಯಿ ಬಸರಿ ಬಾನ ಹೋ ಹೋ ಹೋ...'

ಎಂದು ಕೂಗುತ್ತಾ ಹಚ್ಚಂಬಲಿ ಬೀರುವರು. ನಂತರ ಬುಟ್ಟಿಯಲ್ಲಿ ಮಾವಿನ ಎಲೆ ಹಾಕಿಕೊಂಡು ಮನೆಗೆ ಬರುವರು. ಸೂರ್ಯೋದಯದ ನಂತರ ಮನೆ ಮಂದಿಯೆಲ್ಲಾ ಗದ್ದೆಗೆ ಹೊರಡುವರು. ಭೂಮಣ್ಣಿ ಬುಟ್ಟಿಯನ್ನು ಮನೆಯ ಯಜಮಾನ ಅಥವಾ ಹಿರಿಯ ಮಗ ಕರಿಯ ಕಂಬಳಿಹೊದ್ದು ಬುಟ್ಟಿ (ಚಿತ್ತಾರದ) ಹೊತ್ತುಕೊಂಡು ಗದ್ದೆಗೆ ಹೋಗುವರು. ಭೂಮಣ್ಣಿ ಬುಟ್ಟಿಯಲ್ಲಿ ಹಣ್ಣು ಕಾಯಿ, ಹಚ್ಚಂಬಲಿ ಹೂ, ಮುಂತಾದವುಗಳನ್ನು ಹಾಕಿರುವರು. ಇನ್ನೊಂದು ಬುಟ್ಟಿಯಲ್ಲಿ ಸಸಿ ಎಡೆ, ಗೂಳಿ ಎಡೆ (ಕಾಗೆ), ಇಲಿ ಎಡೆ ಮತ್ತು ಸಿಹಿ ಅಡುಗೆ ಹಾಕಿರುವರು. ಗದ್ದೆಗೆ ತೆರಳಿದ ಕುಟುಂಬವು ಪೂರ್ವದ ದಿಕ್ಕಿಗೆ ಮುಖ ಮಾಡಿ ಕುಳಿತು ಕೊಳ್ಳುವರು. ಯಜಮಾನ ಅಥವಾ ಯಜಮಾನತಿ (ಮುತ್ತೈದೆ) ಕೆಲವು ಸಸಿಗಳನ್ನು ತ್ರಿಭುಜದ ಆಕಾರದಲ್ಲಿ ಕಟ್ಟಿ ಇದಕ್ಕೆ ಆಭರಣಗಳಿಂದ ಅಲಂಕರಿಸಿ ರವಿಕೆ ಹಾಕಿ, ತೋರಣ ಕಟ್ಟಿ, ಪೂಜಿಸುವರು. ಸಸಿ ಎಡೆಯನ್ನು ಗದ್ದೆಗೆ ನೈವೇದ್ಯ ಮಾಡಿ ಕೈಮುಗಿಯುವರು. ಇಲಿ ಎಡೆಯನ್ನು ಗದ್ದೆಯ ಬದುವಿನ ಪಕ್ಕದಲ್ಲಿ ಇಡುವರು. ಹಚ್ಚಂಬಲಿಯನ್ನು ಗದ್ದೆಗೆ ಹಾಕಿ ಗೂಳಿ ಎಡೆ ಹಿಡಿದು ಕೊಂಡು ಗೂಳಿ ಬಾ, ಬಾ, ಹೋ, ಹೋ, ಎಂದು ಕಾಗೆಯನ್ನು ಕರೆಯುವರು. ಗೂಳಿ ಎಡೆಯಿಂದ ಕಾಗೆ ಒಂದು ಚೂರನ್ನಾದರು ತೆಗೆದುಕೊಳ್ಳಬೇಕು. ಕಾಗೆ ಎಡೆ ಮುಟ್ಟಿದರೆ ಹಿರಿಯರಿಗೆ* ಸಂತೃಪ್ತಿಯಾಯಿತು ಎಂಬ ನಂಬಿಕೆ ಇದೆ. ಸಸಿಯ ಪಕ್ಕದಲ್ಲಿ ಕೊಟ್ಟೆ ಎಲೆ ಕಡುಬು ಹುಗಿಯುವರು. ನಂತರ ಮನ ಮಂದಿಯೆಲ್ಲಾ ಗದ್ದೆಯಲ್ಲಿ ಊಟ ಮಾಡಿ ಮನೆಗೆ ಹಿಂತಿರುಗುವರು. ಹಬ್ಬದ ದಿನ ಮತ್ತು ಮಾರನೆಯದಿನ ಕೆಲಸ ಮಾಡುವುದಿಲ್ಲ. ಭೂಮಿಯನ್ನು ಅಗೆಯುವುದು, ಕಡಿಯುವುದು, ಮಾಡಿದರೆ ಆಕೆಗೆ ಪೆಟ್ಟಾಗುತ್ತದೆ, ನಂಜಾಗುತ್ತದೆ ಎಂಬ ನಂಬಿಕೆ ಇದೆ.

ಈ ಹಬ್ಬದಲ್ಲಿನ ವಿಶೇಷತೆ ಮತ್ತು ಆಚರಣೆಯ ವಿಧಿ-ವಿಧಾನಗಳನ್ನು ಕುರಿತು ಬರೆಯಲಾಗಿದೆ. ಇಲ್ಲಿ ಗಮನಿಸಬೇಕಾದ ಕೆಲ ಅಂಶಗಳಿವೆ ಮತ್ತು ಪ್ರಶ್ನೆಗಳಿವೆ. ಈ ಕಾಲಘಟ್ಟದಲ್ಲಿ ಹಬ್ಬವನ್ನು ಏಕೆ ಆಚರಿಸುವರು? ಹಬ್ಬಂಬಲಿಯ ವಿಶೇಷವೇನು? ಸಸಿ ಎಡೆ, ಗೂಳಿ ಎಡೆ, ಇಲಿ ಎಡೆಯ ಮಹತ್ವವೇನು? ಎಂಬ ಪ್ರಶ್ನೆಗಳು ಕಾಡುತ್ತವೆ.

ನಮ್ಮ ಜನಪದರು ಯಾವುದನ್ನೆ ಮಾಡಲಿ ಅದಕ್ಕೊಂದು ಕಾರಣವಿದ್ದೆ ಇರುತ್ತದೆ. ಕೃಷಿತಜ್ಞ ಅಥವಾ ಸಂಶೋಧಕ ಈ ಹಬ್ಬದ ಕಾಲದಲ್ಲಿ ಭೂಮಿಯನ್ನು ಸೂಕ್ಷ್ಮವಾಗಿ ಗಮನಿಸಿದಾಗ ಅದರಲ್ಲೂ ಮಲೆನಾಡಿನ ಪಾರಂಪರಿಕ ಬೆಳೆಯನ್ನು ಬೆಳೆಯುವ ಪ್ರದೇಶದಲ್ಲಿ, ಬ್ಯಾಣದ ಹುಲ್ಲು ಇರಬಹುದು, ಗದ್ದೆಯ ಸಸಿ, ತೋಟ ಎಲ್ಲವು ಗರ್ಭಾವಸ್ಥೆಯಲ್ಲಿರುತ್ತದೆ. ಈ ಬಗೆಗೆ ಡಾ.ಸ.ಚಿ.ರಮೇಶ್ ಅವರ ಜೊತೆ ಚರ್ಚಿಸಿದಾಗ ಅವರು ನನ್ನ ಗಮನವನ್ನು ಮುಂದಿನ ವಿಚಾರಗಳ ಕಡೆಗೆ ಸೆಳೆದರು. ಈ ಸಂದರ್ಭದಲ್ಲಿ ಹುಳು, ಕ್ರಿಮಿ, ಇಲಿ ಮುಂತಾದ ಪ್ರಾಣಿಗಳಿಂದ ಸಸಿಗೆ ತೊಂದರೆ ಆದರೆ, ಮುಂದೆ ತೆನೆಯಲ್ಲಿ ಜರಗು, ಬೆಳೆ ತೆನೆ ಕಂದು ಬರುತ್ತದೆ. ಈ ಹಬ್ಬದ ದಿನ ಏಕಕಾಲದಲ್ಲಿ ಇಡೀ ಊರ ಜನ ಬ್ಯಾಣ, ಗದ್ದೆ, ತೋಟಗಳಿಗೆ ಹಬ್ಬಂಬಲಿ ಬೀರುವುದು, ಇಲಿ ಎಡೆ, ಗೂಳಿ ಎಡೆ ಇಡುವುದು. ಊರಿನಲ್ಲಿರುವ ಕಾಗೆ ಗದ್ದೆಗೆ ಬಂದು ವಾರಕ್ಕೂ ಹೆಚ್ಚಿನ ದಿವಸ ಗದ್ದೆಯಲ್ಲಿ ಠಳಾಯಿಸುತ್ತದೆ. ಕಾಗೆ, ಹಕ್ಕಿ, ಪಕ್ಷಿಗಳು ಗದ್ದೆಗೆ ಬರುವುದರಿಂದ ಇಲಿ ಕ್ರಿಮಿಗಳನ್ನು ತಿನ್ನುತ್ತದೆ. ಇಲಿಯು ಸಸಿ ಕಡಿಯುವುದು ಬಿಟ್ಟು ಗದ್ದೆಯಲ್ಲಿ ಬಿದ್ದಿದ್ದ ಹಬ್ಬಂಬಲಿ ಎಡೆಯ ಕಡೆ ಆಕರ್ಷಿತವಾಗುತ್ತದೆ. ಕ್ರಿಮಿಗಳು ಸಹ ಪರ್ಯಾಯ ಆಹಾರದ ಕಡೆ ವಾಲುವುದರಿಂದ ಸಸಿಗೆ ಮತ್ತು ತೆನೆಗೆ ಯಾವುದೇ ಹಾನಿ ಉಂಟಾಗುವುದಿಲ್ಲ. ಇಷ್ಟೆಲ್ಲಾ ಸೂಕ್ಷ್ಮದ ಪರಿಚಯವಿದ್ದ ಜನಪದರು ಆಯಾಕಾಲ ಘಟ್ಟದಲ್ಲಿ ಹಬ್ಬಗಳನ್ನು ಸಂಯೋಜಿಸಿದ್ದಾರೆ. ವೈಜ್ಞಾನಿಕ ಹಿನ್ನೆಲೆಯಲ್ಲಿ ಈ ಹಬ್ಬ ಬಹಳ ಮಹತ್ವದ್ದಾಗಿದೆ. ಕೃಷಿ ವಿಜ್ಞಾನಿಗಳು ಆಸಕ್ತಿ ವಹಿಸಿದರೆ ಹಬ್ಬದ ಪ್ರಯೋಜನ, ಮಹತ್ವ ಇಂದಿನ ಪೀಳಿಗೆಯ ವರಿಗೆ ತಿಳಿಯುತ್ತದೆ. ಭೂಮಣ್ಣಿ ಬುಟ್ಟಿಯಲ್ಲಿನ ಚಿತ್ತಾರ, ನೈಸರ್ಗಿಕ ಬಣ್ಣಗಳ ಬಳಕೆ, ಚಿತ್ತಾರದ ವಿನ್ಯಾಸ, ದೀವರ ಕಲಾ ಪ್ರತಿಭೆಗೆ, ಕಲಾತ್ಮಕತೆಗೆ, ಕಲಾ ನೈಪುಣ್ಯಕ್ಕೆ ಮೆರಗು ನೀಡಿದೆ.

## ೫.೪. ದೊಡ್ಡ ಹಬ್ಬ (ದೀಪಾವಳಿ ಹಬ್ಬ)

ದೀಪಾವಳಿ ಮಲೆನಾಡಿನ ಜನರಿಗೆ ದೊಡ್ಡ ಹಬ್ಬವೆ. ಹೆಸರೆ ಸೂಚಿಸುವಂತೆ ಈ ಹಬ್ಬವು ದೀವರಿಗೆ ವಿಶಿಷ್ಟವಾದ, ವಿಶೇಷವಾದ ಸಂಭ್ರಮದ, ಸಡಗರದ ಹಬ್ಬವಾಗಿದೆ. ಮೊದಲನೆಯ ಹಬ್ಬಗಳು ಮಳೆಗೆ, ಭೂಮಿಗೆ, ಸಂಬಂಧಪಟ್ಟ ಹಬ್ಬವಾಗಿದೆ. ಅಶ್ವಿಜ-ಕಾರ್ತಿಕ ಮಾಸದ ಶರತ್‌ಋತು, ನರಕಚತುರ್ದಶಿಯಂದು ಈ ಹಬ್ಬವನ್ನು ಆಚರಿಸುವರು. ಭೂಮಿ ಹುಣ್ಣಿಮೆ ಹಬ್ಬ ಆದ ಹದಿನೈದು ದಿನಕ್ಕೆ ದೊಡ್ಡ ಹಬ್ಬವನ್ನು ಆಚರಿಸಲಾಗುತ್ತದೆ. ಈ ಹಬ್ಬವು ಮೂರು ಹಂತಗಳಲ್ಲಿ ನಡೆಯುತ್ತದೆ. ಬೂರೆ ಹಬ್ಬ, ಎತ್ತು ಮೈತೊಳೆಯುವುದು, ಎತ್ತು ಬೆದರಿಸುವುದು, ಸಂಜೆ ದೀಪ ಹಚ್ಚುತ್ತಾರೆ (ಅಂಟಿಕೆ ಪಂಟಿಕೆ) ಈರೀತಿ ಮೂರು ದಿನ ಆಚರಿಸುವರು.

## ಬೂರೆ ಹಬ್ಬ

ಬೂರೆ ಅಮವಾಸ್ಯೆಯಂದು ಬೂರೆ ಹಬ್ಬವನ್ನು ಆಚರಿಸುವರು. ಅಮವಾಸ್ಯೆಯ ಹಿಂದಿನ ದಿನ ರಾತ್ರಿ ಅವರಿವರ ಮನೆಯ ಹಿತ್ತಲಲ್ಲಿ ಬಿಟ್ಟಿದ್ದ ಸೌತೆಕಾಯಿ, ಚೆಂಡು ಹೂ ಮುಂತಾದ ವಸ್ತುಗಳನ್ನು ಕೆಲ ತುಂಟರು ಕದಿಯುವುದು, ಅಕ್ಕ ಪಕ್ಕದ ಮನೆಯವರ ಸರಗೋಲು ತೆಗೆಯುವುದು. ಮುಂತಾದ ಚೇಷ್ಟೆಗಳನ್ನು ಮಾಡುತ್ತಾರೆ. ಈ ರೀತಿ ತುಂಟಾಟ ಮಾಡುವಾಗ ಸಿಕ್ಕಿಹಾಕಿ ಕೊಳ್ಳಬಾರದು. ಇದು ಸಾಗರ ತಾಲ್ಲೂಕಿನಲ್ಲಿ ಮಾತ್ರ ಇದೆ. ಉಳಿದ ಕಡೆ ಇಲ್ಲ. ಮಲೆನಾಡಿನ ಒಕ್ಕಲಿಗರು ಹಾಗೂ ಲಿಂಗಾಯಿತರಲ್ಲಿಯೂ ಈ ಬಗೆಯ ಪದ್ಧತಿ ಇದೆ. ಮುಂಜಾನೆ ಮುತ್ತೈದೆ ಹೊಸ ಮಡಿಕೆಯಲ್ಲಿ ಬಾವಿಯಿಂದ ನೀರು ತಂದು ದೇವರ ಪಕ್ಕದಲ್ಲಿ ಇಟ್ಟು ಪೂಜಿಸುವರು. ಹೊಸ ಮಡಿಕೆಗೆ ಬೂರೆ ಮಡಿಕೆಯೆಂದು ಕರೆಯುವರು. ಸಣ್ಣ ಕೊಡಪಾನದ ರೀತಿ ಇರುತ್ತದೆ. ರಾತ್ರಿ ಮನೆಯ ಯಜಮಾನ ಕಣ್ಣಿ (ಹಗ್ಗ) ಹೊಸೆದು ಬೂರೆ ಮಗೆಯ ಮೇಲೆ ಇಟ್ಟು ಪೂಜೆ ಮಾಡುವನು. ಬೂರೆ ಹಬ್ಬದ ದಿನ ಕೊಟ್ಟಿಗೆಯಲ್ಲಿದ್ದ ದನಕರುಗಳನ್ನು ಹೊರಗಟ್ಟಿ ಕೊಟ್ಟಿಗೆಯಲ್ಲಿ ಬಿದ್ದಿದ್ದ ತಗ್ಗು ದಿಣ್ಣೆಗಳನ್ನು ಸಮಮಾಡಿ, ಗೊಚ್ಚು ಕಲ್ಲು ಹಾಕಿ, ಪೆಟ್ಟಿಗೆ ಮಣೆಯಿಂದ ಪೆಟ್ಟಿಸುವರು. ಹಳೆಯ ಕಣ್ಣಿಗಳನ್ನು ತೆಗೆದು ತೊಳೆದು ಹೊಸ ಕಣ್ಣಿಗಳನ್ನು ಹಾಕುವರು. ಕೊಟ್ಟಿಗೆ, ಮನೆಗೆ ಮಾವಿನಸೊಪ್ಪು ಕಟ್ಟುವರು. ಈ ದಿನದ ವಿಶೇಷ ಕೊಟ್ಟಿಗೆ, ಬಾಗಿಲು ಮುಂದಿನ ಜಾಗ ರಿಪೇರಿ ಮಾಡು ವುದಾಗಿದೆ.

## ಎತ್ತು ಮೈ ತೊಳೆಯುವುದು

ಬೂರೆ ಹಬ್ಬದ ಮಾರನೆಯ ದಿನ ಎತ್ತು, ದನ, ಕರುಗಳು, ಗಾಡಿ ಮತ್ತು ಕೃಷಿಗೆ ಸಂಬಂಧಿಸಿದ ವಸ್ತುಗಳಾದ ನೇಗಿಲು, ನೊಗ, ಕೊರಡು ಮುಂತಾದ ಪರಿಕರಗಳನ್ನು ಕೆರೆಗೆ ತೆಗೆದುಕೊಂಡು ಹೋಗಿ ಸ್ವಚ್ಛಗೊಳಿಸುವರು. ಎತ್ತಿನ ಕೊಂಬುಗಳನ್ನು ನುಣುಪು ಮಾಡಿ, ಕೊರಳಿಗೆ ಗಜ್ಜೆಸರ ಮುಂತಾದವುಗಳನ್ನು ಹಾಕುವರು. ಈ ದಿನ ಇಡೀ ಊರೆ ಸ್ವಚ್ಛತಾ ಕಾರ್ಯಕ್ರಮ ಹಾಕಿಕೊಂಡಂತೆ ಕಾಣುವುದು. ಪ್ರತಿಯೊಂದು ವಸ್ತುವನ್ನು ತೊಳೆದು ಮನೆಗೆ ತಂದು ಪೂಜಿಸುತ್ತಾರೆ. ಸಂಜೆ ಎತ್ತುಗಳಿಗೆ ಬೂರೆ ನೀರು ಚಿಮುಕಿಸಿ ಕೊಟ್ಟಿಗೆಯಲ್ಲಿ ಕಟ್ಟುವರು. ಇದಾದ ನಂತರ ಬಾಸಿಂಗವನ್ನು ತೆಗೆದುಕೊಂಡು ಚೆಂಡು ಹೂಗಳನ್ನು ಸಿಕ್ಕಿಸಿ, ಬಾಸಿಂಗದ ಕಡ್ಡಿಯ ತುದಿಗೆ ಪಚ್ಚೆತೆನೆ, ಸಿಂಗಾರ, ಎಲೆ, ಹಾಕಿ ಕಟ್ಟುವರು. ಅಡಿಕೆಸರ ಪೋಣಿಸಿ, ಬಾಸಿಂಗದ ಹುರಿ ಹೊಸೆದು ಎಲ್ಲವನ್ನು ಮಣೆಯ ಮೇಲಿಟ್ಟು ಪೂಜಿಸುವರು.

ಈ ರೀತಿಯ ಎರಡು ಬಾಸಿಂಗಗಳನ್ನು, ಎರಡು ಕಡ್ಡಿಯ ಮಧ್ಯೆ ಚೆಂಡು ಹೂಗಳನ್ನು ಹಾಕಿ, ಬಾಸಿಂಗದ ತುದಿಯ ಕಡ್ಡಿಗಳಿಗೆ ಎಲೆ ಪಚ್ಚೆತೆನೆ, ಸಿಂಗಾರ ಕಟ್ಟುವರು. ಈ ಬಾಸಿಂಗವನ್ನು ಎತ್ತಿನ ಕೊಂಬಿಗೆ ಕಟ್ಟಿ ಮೆರವಣಿಗೆಯಲ್ಲಿ ಕೊಂಡೊಯ್ಯುತ್ತಾರೆ.

## ಎತ್ತು ಬೆದರಿಸುವುದು

ಅಮವಾಸ್ಯೆ ಪಾಡ್ಯದ ದಿನ ಮುಂಜಾನೆ ಬೇಗನೆ ಎದ್ದು 'ತುರ ರೊಟ್ಟಿ' ಸರ ಮಾಡುವರು. ತುರ ರೊಟ್ಟಿ ಸರ ಎಂದರೆ ಬಟ್ಟಲು ಬಳ್ಳಿಯಲ್ಲಿ ದಾರ ತೆಗೆದು ಎರಡು ತೂತುಗಳಿರುವ ರೊಟ್ಟಿಗೆ ದಾರ ಪೋಣಿಸಿ, ಆಕಡೆ ಈಕಡೆ ಎಲೆ-ಅಡಿಕೆ, ಸಿಂಗಾರ, ಪಚ್ಚೆತೆನೆ ಕಟ್ಟಿರುವ ಸರ. ಇಂತಹ ಸರಗಳನ್ನು ಕೊಟ್ಟಿಗೆಯಲ್ಲಿ ಎಮ್ಮೆ,

ಎತ್ತಿನ ಬಾಸಿಂಗ



ದನಕರುಗಳಿವೆ ಎಂಬುದನ್ನು ಗಮನಿಸಿ ಅಷ್ಟು ಸರ ಕಟ್ಟುವರು. ನಂತರ ಎತ್ತಿನ ಕೋಡಿಗೆ ಬಣ್ಣ ಹಚ್ಚಿ, ಕೆಮ್ಮಣ್ಣು, ಜೇಡಿ ಬಣ್ಣದಲ್ಲಿ ಸಿದ್ದೆಯನ್ನು ಅದ್ದಿ ದನಕರುಗಳಿಗೆ ಮುದ್ರೆ ಹಾಕುವರು. ಇದಕ್ಕೆ 'ಛಾಪು' ಹಾಕುವುದೆನ್ನುತ್ತಾರೆ. ಎತ್ತು ಬೆದರಿಸುವ ಹಬ್ಬಕ್ಕೆ ಗೋಪೂಜೆ ಎಂತಲು ಕರೆಯುತ್ತಾರೆ. ಕರುವಿರುವ ಗೋವನ್ನು ಮನೆಯೊಳಗೆ ಕರೆತಂದು, ಪೂಜೆ ಮಾಡಿ, ದನಕರುವಿಗೆ 'ತುರ ರೊಟ್ಟಿ' ಸರ, ಚೆಂಡುಹೂವಿನ ಸರ ಹಾಕಿ ಪೂಜಿಸುವರು. ಪೂಜೆ ಮಾಡುವ ಜಾಗದಲ್ಲಿ ತುರೆ ಹೆಜ್ಜೆ ಚಿತ್ತಾರ ಬಿಡಿಸುವರು.

ತುರೆ ಹೆಜ್ಜೆ ಚಿತ್ತಾರದ ಜಾಗೆಯಲ್ಲಿ ಮೊದಲು ಕೆಮ್ಮಣ್ಣು ಹಚ್ಚಬೇಕು. ನಂತರ ಜೇಡಿ ಮಣ್ಣಿನಿಂದ ತುರೆ ಹೆಜ್ಜೆಯನ್ನು ಬಿಡಿಸಬೇಕು. ಗೋವನ್ನು ಪೂರ್ವದ ದಿಕ್ಕಿನ ಕಡೆ ಮುಖಮಾಡಿ ನಿಲ್ಲಿಸಿ ಪೂಜಿಸುವರು. ಪೂರ್ವದ ತ್ರಿಬುಜದ ಹತ್ತಿರ ಎಲೆ ಹಾಕಿ ಸಗಣಿಯ ಬೆನಪನನ್ನು ಮಾಡಿ ಗರಕಿ ಹುಲ್ಲು ಸಿಕ್ಕಿಸಿ ಪೂಜಿಸುವರು. ನಂತರ ಕೊಟ್ಟಿಗೆಯಲ್ಲಿರುವ ದನ ಕರುಗಳ ಕೊರಳಿಗೆ ತುರ ರೊಟ್ಟಿಯನ್ನು ಕಟ್ಟುವರು. ಇಡೀ ಊರಿನ ಮನೆಯವರ ಗೋಪೂಜೆ ಒಂದೇ ಸಮಯದಲ್ಲಿ ಆಗುವುದು. ಊರು ಸಾರುವವ ಬೆಳಗ್ಗೆ ೧೦ ಗಂಟೆಗೆ ಗೋಪೂಜೆ ೧೧ ಗಂಟೆಗೆ ದನ ಬೆದರಿಸುವುದು ಎಂದು ಸಾರಿರುತ್ತಾನೆ. ಗೋಪೂಜೆಯಾದ ನಂತರ ಗಾಡಿ ಎತ್ತುಗಳನ್ನು ಮನೆಯ ಮುಂದೆ ತಂದು ಬಾಸಿಂಗ ಕಟ್ಟಿ ಅಲಂಕರಿಸುವರು. ಊರಿನವರ ಕೇಕೆ, ಕೂಗುಗಳನ್ನು ಗಮನಿಸಿ ಊರಿನ ಬಯಲಿಗೆ ಶೃಂಗಾರಗೊಂಡ ಎತ್ತುಗಳು ಸೇರುವವು. ತದನಂತರ ಮನೆಯಲ್ಲಿರುವ ದನಕರುಗಳನ್ನು ಬಿಟ್ಟು, ಬೆದರಿಸುವರು. ಕೆಲವರು ದನದ ಕೊರಳಿನಲ್ಲಿದ್ದ ರೊಟ್ಟಿ ಹಾರವನ್ನು ಸಾಹಸದಿಂದ ದನ ಬೆನ್ನತ್ತಿ ಹರಿಯುವರು. ಬಯಲಿಲ್ಲಿ ಸೇರಿದ ಬಾಸಿಂಗದ ಎತ್ತುಗಳು ಮೆರವಣಿಗೆ ಹೊರಡುವವು. ಊರ ಕೇರಿಯಲ್ಲಿ ಸಾಗಿ ದೇವಸ್ಥಾನಗಳನ್ನು ಪ್ರದಕ್ಷಿಣೆ ಹಾಕಿ, ಕೆರೆಗೆ ತೆರಳಿ ಅಲ್ಲಿ ಬಾಸಿಂಗವನ್ನು ಬಿಚ್ಚಿ, ಎತ್ತುಗಳಿಗೆ ನೀರು




ತುರೆ ಹಜ್ಜೆ

ಕುಡಿಸಿ ಬ್ಯಾಣಕ್ಕೆ ಹೊಡೆಯುವರು. ನಂತರ ಬಾಸಿಂಗವನ್ನು ಮನೆಗೆ ತಂದು ಮಣೆಯ ಮೇಲಿಟ್ಟು ಪೂಜಿಸುವರು. ಸಂಜೆ ಮನೆಗೆ ಬಂದ ದನಕರುಗಳಿಗೆ ಓಕುಳಿ ಮಾಡಿ ಸುಳಿಕಾಯಿ ಹೊಡೆಯುವರು. ಹುಡುಗರು ಚೆಂಡಾಟ (ಬೂರೆ ಚೆಂಡು) ಆಡುವರು. ದೀಪಾವಳಿ ದಿನದಂದು ಕೃಷಿಯ ಪರಿಕರಗಳು ಕೊಟ್ಟಿಗೆ, ದನಕರುಗಳು, ಗೊಬ್ಬರಗುಂಡಿ, ಬಾಗಿಲು ಎಲ್ಲವನ್ನು ಪೂಜಿಸುವರು. 'ದೀಪಾವಳಿಯ ಇನ್ನೊಂದು ವಿಶೇಷವೆಂದರೆ ಕೆರಕ ಪೂಜೆ. ಇದು ಭೂಮಿಯನ್ನು ಹಸನು ಮಾಡುವ ಗೊಬ್ಬರದ ಪೂಜೆ ಆಗಿದ್ದು ಅವರಿಗಿರುವ ಸಾವಯವ ಗೊಬ್ಬರದ ಬಗೆಗಿನ ಪಾರಂಪರಿಕ ಜ್ಞಾನದ ಬಗೆಗೆ ಬೆಳಕು ಚೆಲ್ಲುತ್ತದೆ'(ಡಾ.ಸ.ಚಿ.ರಮೇಶ, ೨೦೦೧, ಪುಟ ೧೪೪). ತೀರ್ಥಹಳ್ಳಿಯ ಕೃಷಿಕರು 'ಕೆರಕ ಪೂಜೆ' ಎಂದು ಕರೆದರೆ, ಸಾಗರ-ಸೊರಬದಲ್ಲಿ ಗೊಬ್ಬರದ ಪೂಜೆ ಎಂದು ಕರೆಯುತ್ತಾರೆ.

'ದೀಪವನ್ನೆ ದೀಪಾವಳಿಯ ಹಬ್ಬದ ಬಾಗಿನವಾಗಿ ನೀಡುವ ಕ್ರಮ ವಿಶಿಷ್ಟವೆಂದೇ ಹೇಳಬೇಕು' (ಡಾ.ಸ.ಚಿ.ರಮೇಶ, ೨೦೦೧, ಪುಟ ೧೫೧). ಅಂಟಿ ಪಂಟಿಕೆಯ ದೀಪದ ಹಬ್ಬದ ಕುರಿತು 'ದೀಪದ ಬಾಗಿನ' ಎಂದು ಹೇಳಿರುವುದು ಅರ್ಥಪೂರ್ಣವಾಗಿದೆ. ಕತ್ತಲಾದಂತೆ ಮನೆಮನೆಗೆ ದೀಪ ಕೊಂಡೊಯ್ಯುವ ಅಂಟಿಕೆ-ಪಂಟಿಕೆ ಇಂದಿಗೂ ಜನಪ್ರಿಯ. ತೀರ್ಥಹಳ್ಳಿ, ಹೊಸನಗರ, ಸಾಗರ, ಸೊರಬದ ಕೆಲಭಾಗದಲ್ಲಿ ಇದೆ. ಅಂಟಿಕೆ-ಪಂಟಿಕೆ ಒಕ್ಕಲಿಗರು, ದೀವರು, ಬಡಗಿ, ಬೋವಿ ಮುಂತಾದ ಜನಾಂಗದಲ್ಲಿ ಪ್ರಚಲಿತದಲ್ಲಿದೆ.

ಮನೆ ಮನೆಗೆ ಹೋದ ಅಂಟಿಕೆ-ಪಂಟಿಕೆಯವರು ದೀಪವನ್ನು ಮುಟ್ಟಿಸುವ ಸಂಪ್ರದಾಯವಿದೆ. ಈ ಪದ್ಧತಿಗೆ ಹಬ್ಬ ಹಾಡುವುದು, ದೀಪ ನೀಡುವುದು, ಜ್ಯೋತಿ ಕೊಡುವುದು ಮುಂತಾದ ಹೆಸರುಗಳಿಂದ ಕರೆಯಲಾಗುತ್ತದೆ.

ಉತ್ತರ ಕರ್ನಾಟಕದಲ್ಲಿ ಅಂಟಿಗೆ ಸುಂಟಿಗೆ (ಹಾ.ಮಾ.ನಾಯಕ, ೧೯೭೩, ಪುಟ ೧೪೭), ಅಣೆ-ಪೀಣೆ (ಶ್ರೀಕಂಠ ಕೂಡಿಗೆ, ೧೯೮೨, ಪುಟ ೫೯). ತುಮಕೂರು ಜಿಲ್ಲೆ ಪಾವಗಡದಲ್ಲಿ ಅಂಟಿ-ಸುಂಟಿ, ಮಲೆನಾಡು ಪ್ರದೇಶದಲ್ಲಿ ಅಂಟಿಕೆ-ಪಂಟಿಕೆ ಎನ್ನುವರು. ಉತ್ತರ ಕನ್ನಡದ ಸಿರ್ಸಿ, ಸಿದ್ದಾಪುರಗಳಲ್ಲಿ 'ಬಿಂಗಿ ಪದ'ಗಳೆಂದು, ಶಿವಮೊಗ್ಗ ಜಿಲ್ಲೆಯ ಸೊರಬದಲ್ಲಿ 'ಬಲ್ಲಾಳಿ ಪದ'ಗಳೆಂದು ಸಾಗರ, ಹೊಸನಗರ ಭಾಗಗಳಲ್ಲಿ 'ಹಬ್ಬ ಹಾಡುವುದು' ಅಥವಾ 'ದೀಪ ನೀಡುವುದು' ಎನ್ನುತ್ತಾರೆ (ಡಾ.ಸ.ಚಿ.ರಮೇಶ, ೨೦೦೩, ಪುಟ ೧೪೭). ಅಂಟಿಕೆ ಎಂದರೆ ಅಂಟಿಸುವುದು, ಪಂಟಿಕೆ ಎಂದರೆ ಪ್ರತಿಧ್ವನಿ ಇರಬಹುದು. 'ಪಂಟಿಕೆ ಎಂಬ ಮಾತಿಗೆ ಹಬ್ಬ ಮತ್ತು ಹಾಡು ಎಂಬ ಎರಡು ಅರ್ಥಗಳಿವೆ. ಮೊದಲು ಅಂಟಿಕೆ-ಪಂಟಿಕೆ ಎಂದರೆ 'ದೀಪಾವಳಿ ಹಬ್ಬ' ಎಂಬ ಅರ್ಥವಿದ್ದು ಕ್ರಮೇಣ ಹಬ್ಬದ ಸಂದರ್ಭದಲ್ಲಿ ಹಾಡುವ ಪದಗಳು ಎಂಬ ಅರ್ಥ ಪಡೆದುಕೊಂಡಿದೆ' (ಡಾ.ಎಂ.ಚಿದಾನಂದ ಮೂರ್ತಿ, ೧೯೭೭, ಪುಟ ೧೭೩). ಈ ಕುರಿತು ಅನೇಕ ಚರ್ಚೆಗಳು ಇದ್ದು, ಇಲ್ಲಿ ಸೂಚಿಸಿರುವ ದೀಪಾವಳಿ ಹಬ್ಬದಲ್ಲಿ ಹಾಡುವ ಪದಗಳು ಎಂಬ ಅರ್ಥ ಅಂಟಿಕೆ-ಪಂಟಿಕೆಗೆ ಸಮಂಜಸವಾಗಿದೆ.

'ದೀಪದ ಗೀತ ಸಂಪ್ರದಾಯ ಮಲೆನಾಡಿನ ಜೀವನದೊಂದಿಗೆ ದಟ್ಟವಾಗಿ ಮೈಗೂಡಿಸಿಕೊಂಡಿದೆ. ದೀಪಾವಳಿಯ ಐದು ರಾತ್ರಿಗಳಲ್ಲಿ ಮನೆಮನೆಗೆ ಹೋಗಿ 'ದೀಪ' ನೀಡುವ ಸಂಪ್ರದಾಯ ಇಂದಿಗೂ ಮಲೆನಾಡಿನ ಭಾಗದಲ್ಲಿ ಪ್ರಚಲಿತದಲ್ಲಿದೆ'(ಡಾ.ಸ.ಚಿ.ರಮೇಶ, ೨೦೦೩, ಪುಟ ೧೪೭). ಅಂಟಿಗೆ-ಪಂಟಿಗೆಯವರ ತಂಡ ಹಾಡು ಹೇಳುತ್ತಾ ದೀಪ ಹಚ್ಚುತ್ತಾ ಮನೆಯವರು ಕೊಟ್ಟ ಕಾಣಿಕೆಯನ್ನು ಪಡೆದುಕೊಂಡು ಮುಂದಿನ ಮನೆಗೆ ತೆರಳುತ್ತದೆ. ಐದಾರು ಜನರ ಒಂದು ತಂಡವೇ ಇರುತ್ತದೆ. ಕಾಣಿಕೆ ಎಂದರೆ ಸಿಹಿ ಕಡಬು, ಅಕ್ಕಿ, ಬೆಲ್ಲ ಮುಂತಾದವುಗಳು. ಸಾಗರ, ಸೊರಬದಲ್ಲಿ ಈ ರೀತಿಯ ಪದ್ಧತಿ ಬಹಳ ಕಡಿಮೆ. ಸಂಜೆಯಾಗುತ್ತಲೆ ಪುಂಡಿಕೋಲಿನ ದಂದಿ ಹಚ್ಚಿಕೊಂಡು ತಮ್ಮ ತಮ್ಮ ಮನೆಯ ಮುಂದೆ ಹುಡುಗರು "ದೀಪ್ ದೀಪ್ ಹೋಳಿಗೊ ಗೌಡರ ಕೇರಾಗೆ ಹೋಳಿಗು, ಮೇಲಿನ ಕೇರಾಗೆ ಹೋಳಿಗೊ" ಎಂದು ಕೂಗುವರು. ಪುಂಡಿಕೋಲಿನ ದೊಂದಿಯನ್ನು 'ಬಲೀಂದ್ರನ' ಮುಂದೆ, ಮನೆಯ ಮುಂದೆ, ಸಿಕ್ಕಿಸುವರು. 'ಬಲೀಂದ್ರ' ಎಂದರೆ ಬಲಿ ಚಕ್ರವರ್ತಿಯ ನೆನಪಿಗೆ ಮನೆಯ ಜಗಲಿಯ ಮೇಲೆ ಸೆಗಣಿಯ ವೃತ್ತಾಕಾರದ ಕೋಟೆಕಟ್ಟಿ ಮಧ್ಯದಲ್ಲಿ ಸಗಣಿ ಬೆನಪನನ್ನು ಇಟ್ಟು ಸ್ಯಾರೆ ಹುಲ್ಲು ಸಿಕ್ಕಿಸಿ, ಸಗಣಿಯ ಕೋಟೆಯ ಗೋಡೆಯ ಮೇಲೆ ನೆಲ್ಲಿಕಾಯಿ, ಗುಡ್ಡೆಗೇರು ಕಾಯಿ ನಿಲ್ಲಿಸುವರು. ಮಾರನೆಯ ದಿನ ಮನೆಯ ಹಿರಿಯಾಕೆ, ಗಂಡು ಮಕ್ಕಳು ಏಳುವ ಮುಂಚೆ ಬಲೀಂದ್ರನನ್ನು ತೆಗೆದು ನೆಲವನ್ನು ಸ್ವಚ್ಛಗೊಳಿಸುತ್ತಾರೆ. ಹೀಗೆ ನರಕಚತುರ್ದಶಿಯಂದು ಆರಂಭವಾದ ದೀಪಾವಳಿ ಹಬ್ಬ 'ವರ್ಷದ ತೊಡಕಿನ' ದಿನ ಮುಗಿಯುತ್ತದೆ. ದೀಪಾವಳಿ ಹಬ್ಬ ಆಗಿ ನಾಲ್ಕು ದಿನಕ್ಕೆ ಬರುವ ಸೋಮವಾರದಂದು ಊರಿನಲ್ಲಿರುವ ಎಲ್ಲಾ ದೇವರಿಗು ಹಣ್ಣುಕಾಯಿ ಒಡೆದು, ಪೂಜಿಸುವರು. ಕೊಟ್ಟಿಗೆಯಲ್ಲಿರುವ ದನಕರುಗಳಿಗೊಂದರಂತೆ ತೆಂಗಿನ ಕಾಯಿಯನ್ನು ಮನೆ ದೇವರಿಗೆ ಒಡೆಸುವರು. ಸಂಜೆ ಬೂರೆ ನೀರನ್ನು ತೆಂಗಿನ ಮರದ ಬುಡಕ್ಕೆ ಹಾಕುವರು. ಮನೆತನದ ದೇವರಿಗೂ ಪೂಜೆ ಸಲ್ಲಿಸುವರು. ವಿಜೃಂಭಣೆಯ ದೀಪಾವಳಿ ಹೀಗೆ ಮುಕ್ತಾಯವಾಗುತ್ತದೆ.

ದೀವರು ಆರಿದ್ರ ಮಳೆ, ಭೂಮಿ ಹುಣ್ಣಿಮೆ, ದೀಪಾವಳಿ ಹಬ್ಬಗಳ ಜೊತೆಯಲ್ಲಿ ನಾಗರ ಪಂಚಮಿ, ಕಾರ್ತಿಕ, ಕಣ ಹಬ್ಬ ಮುಂತಾದ ಹಬ್ಬಗಳನ್ನು ಆಚರಿಸುವರು: ಈ ಹಬ್ಬಗಳಲ್ಲಿ ದೇವರಿಗೆ ಪೂಜೆ ಸಲ್ಲಿಸುವರು. ವಿಜೃಂಭಣೆಯ ಆಚರಣೆ ಕಂಡು ಬರುವುದಿಲ್ಲ. ಈ ಹಬ್ಬಗಳನ್ನು ಗಮನಿಸಿದಾಗ ಹಬ್ಬಗಳಿಂದಾಗುವ ಪ್ರಯೋಜನವೇನು, ಇವುಗಳೆಲ್ಲಾ ಏತಕ್ಕೆ ಎಂಬ ಪ್ರಶ್ನೆ ಬರುವುದು ಸಹಜ. ಮನುಷ್ಯನಿಗೆ ಕೆಲಸದ ಜೊತೆಗೆ ಮನರಂಜನೆ, ಅತ್ಯವಶ್ಯಕವಾಗಿ ಬೇಕು. ಮನಸ್ಸಿಗೆ ನೆಮ್ಮದಿ ಹಬ್ಬದಿಂದ ಸಿಗುತ್ತದೆ. ಆರ್ಥಿಕ ಹೊರೆ ಈ ಹಬ್ಬಗಳಿಂದ ಬರುತ್ತದೆಯೆ? ಬರಲು ಸಾಧ್ಯವೆ ಇಲ್ಲ. ಇಲ್ಲಿ ಆಚರಿಸುವ ಹಬ್ಬ ಕೃಷಿಗೆ ಪೂರಕವಾದಂತಹದು. ದುಂದು ವೆಚ್ಚ, ಆಡಂಬರ ಎಲ್ಲೂ ಕಾಣದೆ ಪ್ರಾಕೃತಿಕ ಸಂಪನ್ಮೂಲಗಳನ್ನು ಬಳಸಿಕೊಂಡು ಹಬ್ಬ ಆಚರಿಸಲಾಗಿದೆ. ಹೂವು, ಸೊಪ್ಪು, ದಾರ, ಕಡ್ಡಿ ಎಲ್ಲವು ರೈತನ ಮನೆಯ ಆಸುಪಾಸಿನಲ್ಲಿ ಸಿಗುತ್ತವೆ. ಅದರಲ್ಲೂ ಭೂಮಿಹುಣ್ಣಿಮೆಯ ದಿನ ಬೀರುವ 'ಹಚ್ಚಂಬಲಿ' ಬಹಳ ವಿಶೇಷವಾದ ಆಚರಣೆಯಾಗಿದೆ. ಊರಿನ ಸಮಗ್ರತೆ, ಏಕತೆ, ನೆರೆಹೊರೆಯವರೊಂದಿಗೆ ಉತ್ತಮ ಬಾಂಧವ್ಯ, ಕುಟುಂಬದ ಸಂಬಂಧಗಳ ವೃದ್ಧಿ ಮುಂತಾದ ಅನೇಕ ಸಾಮಾಜಿಕ ಕಾಳಜಿಗಳು ಇವೆ.

೧. ಕುಟುಂಬ-ಕುಟುಂಬಗಳ ದ್ವೇಷ, ಅಸೂಯೆಗಳು ದಮನ

೨. ಗ್ರಾಮದ ಐಕ್ಯತೆ

೩. ಆರೋಗ್ಯ ಮತ್ತು ಬಾಂಧವ್ಯ

೪. ಕೃಷಿಯಲ್ಲಿ ಕೀಟ ನಿಯಂತ್ರಣ.

೫. ಕುಟುಂಬ ಕಾಳಜಿ.

೬ ಕಲೆ ಸಾಹಿತ್ಯಗಳ ಸಂರಕ್ಷಣೆ ಮುಂತಾದ ಅನೇಕ ಪ್ರಯೋಜನಗಳು ಹಬ್ಬದಿಂದ ಲಭ್ಯವಾಗುತ್ತದೆ.

**ಅಡಿಟಿಪ್ಪಣಿಗಳು**

೧. ಕುಂಟೆ - ಸಾಲು ಕುಂಟೆ, ಸಸಿ ಕುಂಟೆ.

೨. ಕೊರಡು - ಬುಗನೆ ಮರದಿಂದ ತಯಾರಿಸಿದ ಐದು ಅಡಿ ಉದ್ದದ ಹಲಗೆಯಂತ ಸಾಧನ.

೩. ನೀರು ತುಂಬಿದ ಕಳಸದ ಗಿಂಡಿಯೇ - ಗೌರಮ್ಮ

೪. ಬುತ್ತಿಗಂಟು - ಮನೆಯ ಆಳು, ಕೂಲಿಯವರಿಗೆ ಬುತ್ತಿಗಂಟು ಕೋಡುಬಳೆ ಕೊಡುವರು.

೫. ಹಿರಿಯರಿಗೆ - ಸತ್ತು ಹೋಗಿರುವ ಮನೆಯ ಹಿರಿಯರು.

೬. ಗೂಳಿ ಎಡೆ - ಕಾಗೆಗೆ ಆಹಾರವನ್ನು ಹಬ್ಬ ಹರಿದಿನಗಳಲ್ಲಿ ಇಡಲು ಕಾರಣ ಕಾಗೆಯ ರೂಪದಲ್ಲಿ ಹಿರಿಯರಿಗೆ (ನಿಧನರಾದ) ಎಡೆ ಸಮರ್ಪಣೆ ಮಾಡುವುದು ಒಂದು ನಂಬಿಕೆ. ಹಬ್ಬದದಿನಗಳಲ್ಲಿ ಆಹಾರ ತಯಾರಿಸುವಾಗ ನಂಜಾಗಿದ್ದರೆ (ವಿಷ) ಕಾಗೆಗೆ ತೊಂದರೆಯಾಗುವುದು. ಇದೊಂದು ಮುಂಜಾಗ್ರತಾ ಕ್ರಮವಾಗಿದೆ.

೭. ಕಣ್ಣಿ - ದನ ಕಟ್ಟುವ ಹಗ್ಗದ ಕುಣಿಕೆ.

## ಅಧ್ಯಾಯ ೬

# ಜನಪದ ಕಲೆ ಮತ್ತು ಸಾಹಿತ್ಯ

'ಬುಡಕಟ್ಟು ಶಿಕ್ಷಣವಿಲ್ಲದೆ ಕಾಡಿನ ನೆಲೆಯ ಬದುಕಿನ ಅಂತಃಸತ್ವ ಬಳಸಿಕೊಂಡು ಕಲೆಯನ್ನು ರೂಪಿಸಿದ್ದಾರೆ. ಈ ಕಲೆಯ ಸೂಕ್ಷ್ಮತೆ ನಯಗಾರಿಕೆ ಗುರುತಿಸಲು ಹೋಗಬಾರದು. ಶಿಷ್ಟ ಕಲೆಯಂತೆ ಇವನ್ನು ನೋಡಬಾರದು' ನಾ.ಡಿಸೋಜಾರವರು ಸಾಗರದಲ್ಲಿ ನಡೆದ 'ಸಂಸ್ಕೃತಿ ಸಂಭ್ರಮ ಸಾಂಸ್ಕೃತಿಕ ಮೇಳ'(೧೬ ಡಿಸೆಂಬರ್ ೨೦೦೩)ದಲ್ಲಿ ಮಾತನಾಡುತ್ತಾ, ಕಲೆಯ ಸೂಕ್ಷ್ಮತೆಯ ಬಗ್ಗೆ ಹಾಗೂ ಕಲೆಯ ಸೃಷ್ಟಿ ಯಾವ ತರಹದ್ದು, ಅದನ್ನು ಯಾವ ರೀತಿ ಗಮನಿಸಬೇಕು ಎಂದು ಹೇಳಿದ್ದಾರೆ. 'ನಗರ ನಿಯಂತ್ರಿತ ಜನಾಂಗಕ್ಕಿಂತ ನಿಸರ್ಗ ನಿಯಂತ್ರಿತ ಜನಾಂಗದಲ್ಲಿ ಮಾನವನ ಪ್ರಾಕೃತಿಕ ಪ್ರಜ್ಞೆಗಳು ದಟ್ಟವಾಗಿ ನೆಲೆ ನಿಂತಿರುತ್ತವೆ' (ಡಾ.ಎಂ.ಎಂ.ಕಲಬುರ್ಗಿ, ೧೯೯೦,ಪುಟ ೨). 'ಮನುಷ್ಯ ನಿಸರ್ಗದಿಂದ ಎಲ್ಲವನ್ನು ಪಡೆದಿದ್ದಾನೆ, ಕಲಿತಿದ್ದಾನೆ. ಅವನ ಪ್ರಜ್ಞೆ ರೂಪುಗೊಂಡಿರುವುದೆ ನಿಸರ್ಗದಿಂದ ಎಂಬುದು ಮಾತ್ರ ಸತ್ಯವಾದುದು. ಮನುಷ್ಯ ಮೂಲ ಸಂವೇದನೆಗಳಿಗೆ ಬಹಳ ಹತ್ತಿರವಾದ ಕಲೆ ಚಿತ್ರಕಲೆಯಾಗಿದೆ. ವ್ಯಕ್ತಿಯ ಬದುಕಿನಷ್ಟೆ ವೈವಿಧ್ಯಮಯ ವರ್ಣ ಮಯವಾಗಿದೆ. ಈ ಕಲೆಗಳು ವ್ಯಕ್ತಿ ತನ್ನ ಅನುಭವಗಳಿಗೆ ಜೀವಕೊಟ್ಟಿದ್ದು ಬಣ್ಣ ತುಂಬಿದ್ದು ಇಂಥ ಕಲೆಗಳ ಮೂಲಕ ಜನಪದರ ಅನುಭವ ಕಲಾ ಪರಂಪರೆ, ಹೃದಯ ಶ್ರೀಮಂತಿಕೆ, ಸಂಸ್ಕಾರವಂತಿಕೆಗಳು ಈ ಚಿತ್ರಕಲೆಯಲ್ಲಿ ಅರಳಿ ನಿಂತಿರುವುದನ್ನು ಕಾಣುತ್ತೇವೆ' ಡಾ.ಬಿ.ಆರ್.ಹಿರೇಮಠರವರು (ಉದ್ಧೃತ) ಚಿತ್ರಕಲೆಯ ಬಗ್ಗೆ ಮಹತ್ವಪೂರ್ಣವಾಗಿ ವಿಶ್ಲೇಷಣೆ ಮಾಡಿದ್ದಾರೆ. ಚಿತ್ರಕಲೆ ಮಾನವನ ಸಂವೇದನೆಗಳಿಗೆ ಮೂಲ, ಈತ ತನ್ನೆಲ್ಲಾ ಅನುಭವಗಳಿಗೆ ಚಿತ್ರಕಲೆಯಲ್ಲಿ ಜೀವಕೊಟ್ಟಿದ್ದಾನೆ. ಮನಸ್ಸಿನಲ್ಲಿ ಸುಪ್ತವಾಗಿದ್ದ ಭಾವನೆಗೆ ಮೂರ್ತ ರೂಪ ಕೊಟ್ಟಿದ್ದಾನೆ.

ದೀವರ ಮಹಿಳೆಯರು ಬರೆಯುವ ಹಸೆ ಚಿತ್ತಾರ ಮತ್ತು ಭೂಮಿ ಹುಣ್ಣಿಮೆ ಬುಟ್ಟಿ ಚಿತ್ತಾರಗಳು ಬಹಳ ವೈಶಿಷ್ಟ್ಯಪೂರ್ಣವಾಗಿವೆ. ಪ್ರತಿಯೊಂದು ಮನೆಯ ಮಹಿಳೆಯರು ಭಾಗಶಃ ಈ ಚಿತ್ರ ಕಲಾವಿದೆಯ ರಾಗಿದ್ದಾರೆ ಎಂದರೆ ತಪ್ಪಾಗಲಾರದು. ಈ ಮಹಿಳೆಯರು ಹಾಡುವ ಸೋಬಾನೆ ಪದಗಳು, ತಮ್ಮ ಕೆಲಸ ಕಾರ್ಯದಲ್ಲಿ ಮಗ್ನವಾಗಿದ್ದಾಗ ಹಾಡುವ ಹಾಡುಗಳು, ಮದುವೆ, ಸಂಪ್ರದಾಯದ ಹಾಡುಗಳು, ಖಂಡಕಾವ್ಯ, ಕಥನಗೀತೆಗಳನ್ನು ಹಾಡುವ ಕಲಾವಿದೆಯರು' ಪ್ರತಿ ಹಳ್ಳಿಯಲ್ಲಿಯು ಇದ್ದಾರೆ. ಕಲೆ ಮತ್ತು ಸಾಹಿತ್ಯ ಕ್ಷೇತ್ರ ದಲ್ಲಿ ಮಹಿಳೆಯರ ಕಲಾಸೇವೆ ದೊಡ್ಡದು. ಮೌಖಿಕ ಸಾಹಿತ್ಯ ತಲತಲಾಂತರದಿಂದ ಅಳಿಯದೆ ಉಳಿದು ಬಂದಿರುವುದಕ್ಕೆ ಮಹಿಳೆಯರ ಕಲಾಭಿಮಾನ, ಕಲಾಪ್ರೌಢಿಮೆ ಮೆಚ್ಚುವಂತಹದ್ದಾಗಿದೆ.

ಕೆಲವು ವರ್ಷಗಳ ಹಿಂದೆ ದೀವರ ಮೂಡಲಪಾಯ ಮತ್ತು ಸಣ್ಣಾಟ ತಂಡಗಳು ಅನೇಕ ಗ್ರಾಮದಲ್ಲಿ ಇದ್ದವು. ಇತ್ತೀಚಿಗೆ ವಿರಳವಾಗಿವೆ. ಕೆಳದಿ ಗ್ರಾಮದ ದೀವರು ಅತ್ತೇರಿ ಕನ್ನಗೌಡ ಯಾನೆ ದೊಡ್ಡಣ್ಣ ಇವರ ನೇತೃತ್ವದಲ್ಲಿ ತಂಡ ರಚಿಸಿಕೊಂಡು ಸುಂದರವಲ್ಲಿ, ಸತ್ಯವಾನ ಸಾವಿತ್ರಿ, ಮಾನವತಿ ಮುಂತಾದ ಸಣ್ಣಾಟ ಪ್ರದರ್ಶನಗಳನ್ನು ನೀಡುತ್ತಿದ್ದರು. ತಡಗಳಲೆ, ಕಾಗೋಡು, ಮಾಗದಿ, ಮುಂತಾದ ಗ್ರಾಮಗಳಲ್ಲಿ ಸಂಗ್ಯಾ-ಬಾಳ್ಯ ನಾಟಕ ಕಲಿಸುವ ದೀವರ ಜನಾಂಗದ ಮಾಸ್ತರ್‌ಗಳು ಇದ್ದಾರೆ. ಡೊಳ್ಳು ಮೇಳಗಳು, ಕೋಲಾಟದ ತಂಡಗಳು ಪ್ರತಿ ಊರಿನಲ್ಲಿಯು ಇವೆ. ದೀವರ ಸಾಂಸ್ಕೃತಿಕ ಜಗತ್ತು ಬಹಳ ವಿಸ್ತಾರವಾದುದು. ಈ ಜನಾಂಗವು ಜಾನಪದ ಕಲೆ ಮತ್ತು ಸಾಹಿತ್ಯಕ್ಕೆ ತನ್ನದೇ ಆದ ಕೊಡುಗೆಯನ್ನು ನೀಡಿದೆ. ಆದರೆ ಯುವ ಶಕ್ತಿ ಈ ಅಪಾರ ಸಂಪತ್ತಿನ ಕಡೆಗೆ ದಿವ್ಯ ನಿರ್ಲಕ್ಷ್ಯ ತೋರುತ್ತಿರುವುದು ವಿಷಾದನೀಯ ಸಂಗತಿಯಾಗಿದೆ.

### ಹಸೆ

ಮಲೆನಾಡಿನ ದೀವರ ಮನೆಯ ಸಮಾರಂಭ ಅಥವಾ ಶುಭಕಾರ್ಯಗಳಲ್ಲಿ ಹಾಗಿಯಾದರೆ, ಅಲ್ಲಿ ನಮ್ಮನ್ನು ಆಕರ್ಷಿಸುವ ಸುಂದರ ಕೈಬರಹದ ರೇಖಾ ಚಿತ್ರ ಮನಸೂರೆಗೊಳ್ಳುತ್ತವೆ. ಮನೆಯ ಗೋಡೆ, ಬಾಗಿಲ ಚೌಕಟ್ಟಿನ ಸುತ್ತ, ಕಟ್ಟೆಯ ಅಂಚಿಗೆ ಹೀಗೆ ನಾನಾ ಜಾಗಗಳನ್ನು ಅಲಂಕರಿಸಿ ನೋಡುಗರಿಗೆ ಬೆರಗುಗೊಳಿಸುವ ಈ ಕಲೆ ಪ್ರಾಚೀನವಾದ ಕಲೆ ಇದಕ್ಕೆ 'ಹಸೆ' ಕಲೆ ಎಂದು ಕರೆಯಲಾಗುತ್ತದೆ.

'ಕಲೆಗಾರ ಇರುವುದು ಸಮಾಜಕ್ಕಾಗಿಯೇ ಹೊರತು ಸಮಾಜ ಇರುವುದು ಕಲೆಗಾರನಿಗೋಸ್ಕರವಲ್ಲ. ಮನುಷ್ಯನ ಪ್ರಜ್ಞೆಯನ್ನು ಬಳಸಿ ಸಮಾಜ ವ್ಯವಸ್ಥೆಯನ್ನು ಉತ್ತಮ ಪಡಿಸಲು ನೆರವಾಗುವುದೇ ಕಲೆಯ ಕೆಲಸ'(ಎಚ್.ಕೆ.ರಾಮಚಂದ್ರಶರ್ಮ (ಅನು) ೧೯೯೧, ಪುಟ ೧೧).ಕಲೆ ಎಂಬುದು ಮನುಷ್ಯನ ಕಲ್ಪನೆಗೆ ರೂಪುಕೊಡುತ್ತ ಸಾಗುತ್ತದೆ. ಕಲೆಯಿಂದ ಸಮಾಜ ವ್ಯವಸ್ಥೆ ಉತ್ತಮಪಡಿಸುವುದರ ಜೊತೆಗೆ ಕಲೆಯಿಂದ ಸಮಾಜ ಸಾಂಸ್ಕೃತಿಕ ಜಗತ್ತಿನ ಹೆಬ್ಬಾಗಿಲ ಪ್ರವೇಶ ಪಡೆಯುತ್ತದೆ. ಕಲೆ ಜನಾಂಗದ ಮಹತ್ವಪೂರ್ಣ ಘಟನೆಗಳೊಂದಿಗೆ ಸಂಬಂಧ ಹೊಂದಿದೆ. ಈ ಕಲೆಗೆ ಸಾಂಪ್ರದಾಯಿಕ ಹಿನ್ನೆಲೆಯಿದೆ. ಅಂದರೆ ನಾಮಕರಣ, ಮದುವೆ, ನಿಶ್ಚಿತಾರ್ಥ, ಪೂಜೆ, ಗೃಹಪ್ರವೇಶ ಮುಂತಾದ ಆಚರಣೆಗಳಲ್ಲಿ ಇರಲೇಬೇಕು. ಈ ಕಲೆ ಬುಡಕಟ್ಟು ಜನಾಂಗದಲ್ಲಿ ಹುಟ್ಟಿ, ಹಿಂದುಳಿದ ವರ್ಗಗಳಲ್ಲಿ ಬೆಳೆದು, ಒಂದು ಜನಾಂಗದಲ್ಲಿ ತನ್ನ ಇರುವನ್ನು ಗುರುತಿಸಿ ಕೊಂಡಿದೆ. ಆಧುನಿಕ ತಂತ್ರಜ್ಞಾನ ಯುಗದಲ್ಲಿ ಈ ಜನಾಂಗಕಷ್ಟೆ ಸೀಮಿತವಾಗದೆ ಹೊಸ ಹೊಸ ರೂಪ ಮತ್ತು ವೇದಿಕೆಯನ್ನು ಕಲ್ಪಿಸಿಕೊಂಡು, ಹೊರ ಜಗತ್ತಿಗೆ ತನ್ನನ್ನು ತಾನು ಪರಿಚಯಿಸಿಕೊಂಡು, ಆಕರ್ಷಣೆಯನ್ನು ಹೆಚ್ಚಿಸಿಕೊಂಡಿದೆ. ಆಧುನಿಕ ಆಕರ್ಷಣೆಗಳ ಹೊಡೆತಕ್ಕೆ ಸಿಕ್ಕಿ ಅನೇಕ ಕಲೆಗಳು ನಶಿಸುವ ಸ್ಥಿತಿಯಲ್ಲಿದೆ. ಆದರೆ ಈ ಕಲೆ ಸಂಪ್ರದಾಯದಲ್ಲಿ ತನ್ನ ಹುಟ್ಟನ್ನು ಪಡೆದು, ಒಂದು ಜನಾಂಗದ ಅಧಿಕೃತ ಕಲೆಯಾಗಿದ್ದ ಇದು ಇಂದು ರಾಜಕೀಯ ಸಮಾರಂಭ, ಜಾನಪದ ಕಲಾಮೇಳ, ಜಾನಪದ ಮಂದಿರಗಳ ಗೋಡೆಯ ಮೇಲೆ ನಾಟಕ, ರಂಗಭೂಮಿ ಹೀಗೆ ನಾನಾ ಕಡೆ ಇದರ ಛಾಪು ಕಂಗೊಳಿಸುತ್ತಿದೆ.

## ಹಿನ್ನೆಲೆ

ಹಸೆ, ಹಿಂದುಳಿದ ವರ್ಗಗಳ ಮಹಿಳೆಯರ ಕಲಾ ಪ್ರೌಢಿಮೆಯ ಆಸಕ್ತಿಯನ್ನು ತೋರಿಸುತ್ತದೆ. 'ಹಸೆ' ಚಿತ್ರ ಹಬ್ಬ, ಮಂಗಳಕಾರ್ಯದಲ್ಲಿ ತನ್ನ ಮಹತ್ವವನ್ನು ಪಡೆದುಕೊಂಡಿದೆ. ಮಹಿಳೆಯರ ಕಲಾಕೌಶಲ್ಯಕ್ಕೆ, ಜಾಣ್ಮೆಗೆ ಈ ಕಲೆ ವೇದಿಕೆಯನ್ನು ಒದಗಿಸಿಕೊಡುತ್ತಿದೆ. ಈ ಕಲೆ ತಲತಲಾಂತರದಿಂದ, ಬೆಳೆದುಬಂದಿದೆ. ಈ ವರ್ಗಗಳಲ್ಲಿ 'ಮಹಿಳೆಯರ ಪಾತ್ರ' ಬಹಳ ದೊಡ್ಡದು. ಮನೆಯಲ್ಲಿ ಗೃಹಿಣಿಯಾಗಿ, ಹೈನುಗಾರಿಕೆ, ಕೃಷಿ, ಕೂಲಿ, ನಾನಾ ಕ್ಷೇತ್ರದಲ್ಲಿ ಗಂಡಸಿಗಿಂತ ಮುಖ್ಯವಾಗಿದ್ದಾಳೆ. ಸತತ ಕೆಲಸದ ನಡುವೆಯು ಈ ಕಲೆ ಬೆಳೆದು ಬಂದಿರುವುದರಿಂದ ವಿನ್ಯಾಸದಲ್ಲಿ, ತನ್ನ ಮೂಲವನ್ನು ಬದಲಾಯಿಸಿಕೊಂಡಿಲ್ಲ. ಈ ಕಲೆಯ ಹುಟ್ಟು, ಮತ್ತು ಬೆಳವಣಿಗೆಯ ಪೋಷಕ ರೂವಾರಿಗಳು ಮಲೆನಾಡಿನ ದೀವರು, ಹಾಲಕ್ಕಿ, ಹಸಲರು, ಕುಣಬಿ ಜನಾಂಗಗಳಾಗಿವೆ. 'ಹಸೆ' ಕಲೆ ಅನಾವರಣಗೊಳ್ಳಲು ಶ್ರದ್ಧೆ, ಕೌಶಲ ಮತ್ತು ತಾಳ್ಮೆ ಬೇಕು. ಹಸೆ ಚಿತ್ತಾರಗಳು ಪರಂಪರೆಗೆ ಕುಟುಂಬದ ಹಿನ್ನೆಲೆಗೆ ಸಂಬಂಧಪಟ್ಟಂತೆ ಇರುತ್ತವೆ.

## ಪರಿಕರಗಳು

ಮಲೆನಾಡಿನಲ್ಲಿ ಸಿಗುವ ಕೆಮ್ಮಣ್ಣು, ಜೇಡಿಮಣ್ಣು, ಗೇರು, ಮರದ ತೊಗಟೆಯ ರಸ (ಹೊನ್ನೆ), ಗುರುಗಿ ಕಾಯಿ ಎಣ್ಣೆ, ಅಂಟು ಅಕ್ಕಿ ಹಿಟ್ಟನ್ನು ನೀರಿನೊಂದಿಗೆ ಬೆರೆಯಿಸಿದ ಹಿಟ್ಟಿನ ನೀರು, ಬಿದರ ಕಡ್ಡಿ, ಅಥವಾ ಪುಂಡಿನಾರಿನ ಕುಂಚಾಲ (ಬ್ರಷ್) ಇವುಗಳನ್ನೆಲ್ಲಾ ಮನೆಯಲ್ಲಿಯೇ ತಯಾರಿಸಿಕೊಳ್ಳುತ್ತಾರೆ. ಚಿತ್ರ ಬಿಡಿಸುವ ಗೋಡೆ, ಭೂಮಿ ಹುಣ್ಣಿಮೆಯ ಬುಟ್ಟಿ ಮುಂತಾದವುಗಳನ್ನು ಮೊದಲು ಸಗಣಿ ನೀರನ್ನು ಸವರಿ ತಗ್ಗು ಉಬ್ಬುಗಳನ್ನು, ಬಿರುಕುಗಳನ್ನು ಮುಚ್ಚಲಾಗುತ್ತದೆ. ನಂತರ ಕೆಮ್ಮಣ್ಣನ್ನು ನೀರಿನೊಂದಿಗೆ ಬೆರೆಸಿ ಬಟ್ಟೆಯಿಂದ ಕೆಂಪು ನೀರನ್ನು ಬುಟ್ಟಿಗೆ, ಗೋಡೆಗೆ ಸವರಲಾಗುತ್ತದೆ. ಕಲಸಿದ ಬಣ್ಣ, ಅಕ್ಕಿಹಿಟ್ಟು ನೀರು ಮುಂತಾದ ಕೆಂಪು, ಹಸಿರು, ಬಿಳಿ, ಹಳದಿ ಬಣ್ಣಗಳಿಗೆ ಬಿದರ ಕುಂಚದಿಂದ ಅದ್ದಿ ಮೂಲೆಯಿಂದ ಮೂಲೆಗೆ ರೇಖೆಗಳನ್ನು ಎಳೆದು, ಅಲ್ಲಲ್ಲಿ ಚೌಕುಳಿಗಳ ಪಟ್ಟಿಯನ್ನು ಬಿಡಿಸಿ, ಚಿತ್ತಾರದ ಮೂಲೆಯಲ್ಲಿ ಪ್ರಾಣಿಗಳ ಚಿತ್ರಗಳು, ಡೊಳ್ಳು ಕುಣಿತದ ಚಿತ್ರಗಳು, ಗಿಡ, ಮರ, ಬಳ್ಳಿ, ಕುಂಭ, ನೇಗಿಲು, ರೈತ, ನರ್ತನದ ಚಿತ್ರಗಳನ್ನು ಬಿಡಿಸುತ್ತಾರೆ. ಮಧ್ಯದಲ್ಲಿ ಗಂಡು ಹೆಣ್ಣಿನ ಮದುವೆಯ ದೃಶ್ಯ, ಪಲ್ಲಕ್ಕಿ, ಚಿತ್ತಾರ ಬಿಡಿಸಲಾಗುತ್ತದೆ. ಹಸೆ ಚಿತ್ರದಲ್ಲಿ ಮೂಡಿರುವ ಆಕೃತಿಗಳು ತೋರಣ, ರಂಗವಲ್ಲಿ, ಗೊಂಬೆ ಸಾಲು ಮುಂತಾದವು. ಭೂಮಿಹುಣ್ಣಿಮೆಯ ಬುಟ್ಟಿ ಚಿತ್ತಾರ ಬಹಳ ಚಿತ್ತಾಕರ್ಷಕವಾಗಿ ನೋಡುಗರ ಕಣ್ಣಿಗೆ ಹಬ್ಬವನ್ನುಂಟುಮಾಡುತ್ತದೆ.

## ಹಸೆ ಕಲೆಯ ಉಳಿವಿಗೆ ಶ್ರಮಿಸಿದವರು

ಹಸೆ ದೀವರ ವೈಶಿಷ್ಟ್ಯಪೂರ್ಣ ಕಲೆ. ಈ ಕಲೆಯ ಶ್ರೀಮಂತಿಕೆ ಅದನ್ನು ಬಿಡಿಸುವ ದೀವ ಹೆಂಗಸರ ಕಲಾತ್ಮಕತೆಗೆ ಸಾಕ್ಷಿಗಳು. ದೀವರ ಹೆಂಗಸರು ಹೊಲ ಮನೆಗಳಲ್ಲಿ ಕೆಲಸ ಮಾಡಿಕೊಂಡು ಬಿಡುವಾದಾಗ ಕಲೆಯತ್ತ ಗಮನ ಹರಿಸುತ್ತಾರೆ. ತಮ್ಮ ಯೋಚನೆ, ಭಾವನೆ ಚಿಂತನೆಗಳನ್ನು ಸುಂದರವಾಗಿ ತಮ್ಮ ಕೈಚಳಕದಿಂದ ಹಸೆಯ ಚಿತ್ರಗಳಲ್ಲಿ ಮೂಡಿಸುತ್ತಾರೆ. ಇತ್ತೀಚಿನ ಆಧುನಿಕತೆಯ ಪ್ರಭಾವ ಕಲಾಕ್ಷೇತ್ರದಲ್ಲಿ ಭಾರೀ

ಪರಿಣಾಮ ಉಂಟು ಮಾಡುತ್ತಿದ್ದರೂ, ಗ್ರಾಮೀಣ ಜನರ ಮನದಾಳದ ಸೊಗಡಾಗಿರುವ 'ಹಸೆ' ಮಾತ್ರ ತನ್ನ ಛಾಯೆಯನ್ನು ಕಳೆದುಕೊಂಡಿಲ್ಲ. ಕೆಲವು ಸಂಘಟನೆಗಳ ಮತ್ತು ಆಸಕ್ತರ ಪ್ರೋತ್ಸಾಹದಿಂದ 'ಹಸೆ' ಈಗ ಹೊಸ ರೂಪ ಮತ್ತು ವೇದಿಕೆಯನ್ನು ಪಡೆಯುತ್ತಿದೆ. ಕೆಲವು ಮಹಿಳಾ ಸಂಘಗಳು (Malnad Tribal Art & Craft Centre, Ambapur, Kugve, Sagar) ಕಲೆಯ ಬಗ್ಗೆ ಆಸಕ್ತಿ ತಳೆದು, ದಿನನಿತ್ಯದ ಪರಿಕರಗಳಾದ ಬುಟ್ಟಿ, ಚೀಲ, ಫೈಲು, ಕಾಗದದ ನೇತುಹಾಕುವ ಚೀಲ, ಪುಸ್ತಕದ ಮುಖಪುಟದ ವಿನ್ಯಾಸ ಮುಂತಾದವುಗಳಲ್ಲಿ ಬಳಸುವ ತರಬೇತಿ ಕೊಡುತ್ತಿವೆ. ರಂಗಕರ್ಮಿ ಪ್ರಸನ್ನರವರು ಕವಿ-ಕಾವ್ಯದಲ್ಲಿ ಮಾಡಿದ ಪ್ರಯತ್ನಗಳು, ಶ್ರೀ ಹುಚ್ಚಪ್ಪ ಮಾಸ್ತರ ಅವರೂ ಈ ಕಲೆಯ ತರಬೇತಿ ನೀಡುವ ಶಾಲೆಯನ್ನು ಕೆಲಕಾಲ ನಡೆಸಿ ಕೆಲ ಕಲಾವಿದರ ಸೃಷ್ಟಿಗೆ ಪ್ರಯತ್ನಿಸಿದರು. ಶ್ರೀ ಕಾಗೋಡು ಅಣ್ಣಪ್ಪನವರು ರಂಗಮಂದಿರದ ಸಮೀಪ ಹಸೆ ಚಿತ್ತಾರದಿಂದ ಅಲಂಕೃತಗೊಂಡಿರುವ 'ನಮ್ಮನೆ' ನೋಡುಗನ ಕಣ್ಣಿಗೆ ಹಬ್ಬವನ್ನುಂಟು ಮಾಡುತ್ತವೆ. ರಾಜ್ಯ ಮತ್ತು ಹೊರ ರಾಜ್ಯದಲ್ಲಿ ಕೂಡಾ ಹಸೆ ಪ್ರಚಾರಕ್ಕೆ ದುಡಿಯುತ್ತಿರುವ 'ಚಿತ್ತಾರ ಜಾವಡಿ'ಯ ಶ್ರೀ ಈಶ್ವರ ನಾಯಕ್ 'ಚಿತ್ರಸಿರಿ'ಯ ಶ್ರೀ ಎಸ್.ಚಂದ್ರಶೇಖರ್ ಶಿರವಂತೆ, ಬಂದಗದ್ದೆ ರಾಧಾಕೃಷ್ಣ, ಹೆಗ್ಗೋಡಿನ 'ಚರಕ' ಮತ್ತು 'ನೀನಾಸಂ' ಹೆಗ್ಗೋಡು ಮುಂತಾದವರ ಪ್ರಯತ್ನದಿಂದಾಗಿ ಹಸೆ ಆಧುನಿಕ ಜಗತ್ತನ್ನು ತನ್ನೆಡೆಗೆ ಸೆಳೆಯುತ್ತಿದೆ.

ಇತ್ತೀಚಿಗೆ ಸಾಗರ ಮಲೆನಾಡು ಜಾನಪದ ಕಲಾ ತಂಡ ಈ ಕಲೆಯ ಪ್ರೋತ್ಸಾಹಕ್ಕೆ ಶ್ರಮಿಸುತ್ತಿದೆ. ಕಲಾ ಮೇಳಗಳಲ್ಲಿ ಯುವಜನೋತ್ಸವಗಳಲ್ಲಿ ವೇದಿಕೆಯನ್ನು ಜಾನಪದ ಪ್ರಕಾರದಲ್ಲಿಯೇ ಸಿದ್ಧಗೊಳಿಸಿ, ಹಸೆ ಕಲೆಯಿಂದ ಸಿಂಗರಿಸಿ, ಆಕರ್ಷಕವಾಗಿ ಕಾಣುವಂತೆ ಮಾಡುವ ಇವರ ಪ್ರಯತ್ನ ಶ್ಲಾಘನೀಯ. ತ್ಯಾಗರ್ತಿ ಮೇಳದಲ್ಲಿ ನಡೆದ ಕಲಾಮೇಳದ ಹಸೆ ಮಂಟಪ ಮತ್ತು ಅದನ್ನು ಬಿಂಬಿಸುವ ಗೀಗಿ ಮೇಳದ ನಿನಾದ ಕಲೆಯ ಬೆಳವಣಿಗೆಗೆ ಒಳ್ಳೆಯ ಅವಕಾಶವಾಯಿತು. ಈ ಬೆಳವಣಿಗೆಯಿಂದ ಇಂತಹ ಜನಾಂಗದ ಅಪರೂಪದ ಪ್ರಾಚೀನ ಕಲೆಗಳು ಉಳಿಯುತ್ತವೆ ಮತ್ತು ಬೆಳೆಯುತ್ತವೆ.

## ಹಸೆಯ ಪ್ರಾಮುಖ್ಯತೆ

ಮಲೆನಾಡಿನ ಗ್ರಾಮೀಣ ಮನೆಗಳಲ್ಲಿ ದೇವರಕೋಣೆ ಎಂಬ ಕಲ್ಪನೆ ಇರಲಿಲ್ಲ. ಹಿರಿಯರನ್ನು ಪ್ರತಿನಿಧಿಸುವ ಇಡಕಲು ಇಡುವ ಕೋಣೆಯೆ ದೇವರಕೋಣೆಯಾಗಿತ್ತು. ಅಂದರೆ ಅಡುಗೆಮನೆ, ಮನೆಯ ಮಧ್ಯದ ವಿಶಾಲ ಕೋಣೆಯೇ ಪ್ರತಿಯೊಂದು ಕಾರ್ಯಕ್ರಮದ, ಚಟುವಟಿಕೆಯ ಕೇಂದ್ರವಾಗಿತ್ತು. ಈ ಕೋಣೆಯ ಪ್ರಧಾನವಾದ ಗೋಡೆಯನ್ನು 'ಹಸೆಗೋಡೆ' ಎಂದು ಕರೆಯುವರು. ಮದುಮಕ್ಕಳನ್ನು ಕೂರಿಸುವುದು ಈ ಗೋಡೆಯ ಕೆಳಗೆ, ಮದುವೆಯಂತಹ ಮಂಗಳಕಾರ್ಯವಲ್ಲದೆ, ಹಬ್ಬಗಳಾಚರಣೆಯಲ್ಲಿ ಗೌರಿ ಮಂಟಪ ಮುಂತಾದವುಗಳು ಸಹ ಹಸೆಗೋಡೆಯ ಮುಂದೆಯೇ ನಡೆಯುತ್ತಿತ್ತು.

ಹಸೆ ಚಿತ್ತಾರ ಬರೆಯುವಾಗಿನ ಹಾಡು

ನಮ್ಮ ತಮ್ಮ ಕಾಣೆ

ಚಿನ್ನದ ಗಿರಿ ಕಾಣೆ

ನಮ್ಮ ನಾದಿನಿಗೆ ವರಕಾಣೆ

ಗುತ್ತಿಯ ಚಿನ್ನದ ಚಾವಡಿಗೆ ದೊರೆ ಕಾಣೆ

ಕಲ್ಲ ಇಟ್ಟರ ಮನೆಗೆ

ಎಲ್ಲಾ ಭಾಗ್ಯವು ಬರಲಿ

ಪಲ್ಲಕ್ಕಿ ಮೇಲೆ ಮಗ ಬರಲಿ

ಈ ಮನೆಗೆ ಮಲ್ಲಿಗೆ ಹೂವ ಮುಡಿವ ಸೊಸೆ ಬರಲಿ...

ಎಂದು ಹಾಡುತ್ತಾ ಚಿತ್ರ ಬರೆಯುತ್ತಾರೆ.

ಮನೆಯ ಮಧ್ಯದ ವಿಶಾಲವಾದ (ನಡುಮನೆಯ) ಗೋಡೆಗೆ ಕೆಮ್ಮಣ್ಣು ಬಳಿದು ಹಸೆ ಚಿತ್ತಾರ ಬರೆಯುವರು. ದೇವರ ಹಸೆ ಚಿತ್ತಾರಗಳು ಬಹಳ ಕ್ಲಿಷ್ಟ, ಸೂಕ್ಷ್ಮ ಎಳೆಯಿಂದ, ಚೌಕಾಕಾರದ, ಗೋಪುರವಿರುವ ಚಿತ್ರಗಳೇ ಪ್ರಧಾನ. ಮಧ್ಯದಲ್ಲಿ ಪಲ್ಲಕ್ಕಿ(ದಂಡಿಗೆ). ಪಲ್ಲಕ್ಕಿಯೊಳಗಡೆ ಮದುಮಕ್ಕಳ ಚಿತ್ರಗಳು ಇರುತ್ತಿದ್ದವು. ಮೊದಲು ಮದುಮಕ್ಕಳನ್ನು ಪಲ್ಲಕ್ಕಿಯಲ್ಲಿ ಕರೆತರುತ್ತಿದ್ದಿರಬಹುದು. ಪಲ್ಲಕ್ಕಿಯ ಚಿತ್ತಾರ ಸಾಂಕೇತಿಕವಾಗಿ ಇತಿಹಾಸವನ್ನು ಸೂಕ್ಷ್ಮವಾಗಿ ಹೇಳುತ್ತವೆ.

ದೇವರ ಹಸೆ ಚಿತ್ರಗಳು ಕಂಬಗಳು, ತ್ರಿಭುಜಗಳು, ವೃತ್ತಗಳು, ಗೆರೆಯಿಂದ ರೂಪುಗೊಂಡ ಮುಂಡಿಗೆಗಳು, ಬಾಸಿಂಗ, ಗೋಪುರ, ಚುಕ್ಕೆಗಳು ಹೀಗೆ ಎಲ್ಲಾ ವಿನ್ಯಾಸವನ್ನು ಒಳಗೊಂಡಿರುತ್ತವೆ. ದೇವಾಲಯ ಮತ್ತು ರಥದ ರೀತಿ ಕಂಗೊಳಿಸುತ್ತವೆ. ಹಸೆಗೋಡೆಯ ಚಿತ್ತಾರವನ್ನು ಬಿಳಿಹಸೆ,[೪] ಕಪ್ಪುಹಸೆ,[೫] ಕೆಮ್ಮಣ್ಣುಹಸೆ ಎಂದು ಮೂರು ವರ್ಣಗಳಲ್ಲಿ ರಚಿಸುತ್ತಾರೆ. ಶಿವಮೊಗ್ಗ ಜಿಲ್ಲೆಯ ಸಾಗರ ಮತ್ತು ಸಿದ್ದಾಪುರ (ಉ.ಕ.) ತಾಲ್ಲೂಕಿನ ಪೂರ್ವಭಾಗದಲ್ಲಿ ಬಿಳಿಹಸೆಯನ್ನು ಕಾಣಬಹುದು. ವರದಾ ನದಿಯ ಮುಂದುವರಿದ ಪ್ರದೇಶದಲ್ಲಿ ಅಂದರೆ ಸೊರಬ ತಾಲ್ಲೂಕಿನ ಅಕ್ಕಪಕ್ಕ ಕರಿ ಹಸೆ, ಕೆಂಪು ಹಸೆ ಕಣ್ಣಿಗೆ ಗೋಚರಿಸುತ್ತದೆ. ಈ ವ್ಯತ್ಯಾಸಕ್ಕೆ ಕಾರಣ ಆಯಾ ಭಾಗದ ಮನೆ ದೇವರು, ಆ ಪ್ರದೇಶದ ಸಂಪ್ರದಾಯಗಳು ಕಾರಣವಿರಬಹುದು.

ಪ್ರತಿಯೊಂದು ಗೆರೆಗೂ ಒಂದೊಂದು ಅರ್ಥವಿದೆ. ಪೀಟಿ ಎಂದರೆ ಪತಂಗದ ಸಾಲು ಎಂದು. ಇದು ಪ್ರಕೃತಿಯ ಜೀವಿಗಳನ್ನು ಪ್ರತಿಬಿಂಬಿಸುತ್ತದೆ. ಪಂಕಗಳು ಎಂದರೆ ಬೀಸಣಿಗೆ, ಪೊಪ್ಪಳಿ ಕಣ್ಣುಗಳು ಮಹತ್ವವಾದವು. ಆದ್ದರಿಂದ 'ಪೊಪ್ಪಳಿ ಹಸೆ' ಎಂಬ ವಿನ್ಯಾಸವಿದೆ. ಇದರಲ್ಲಿಯ ಗರಗಸದ ಸಾಲನ್ನು ಮಾವಿನ ಎಲೆಗಳ ಸಂಕೇತಕ್ಕೆ ಬಳಸುತ್ತಾರೆ. ಗೊಂಚೆಸಾಲು ಮುಂದಿನ ಪೀಳಿಗೆಯಿಂದು ಗುರುತಿಸುತ್ತಾರೆ. ತೇರಿನ ಚಿತ್ತಾರವನ್ನು ತಿರುಪತಿ ತಿಮ್ಮಪ್ಪನ ಒಕ್ಕಲಾದ ದೀವರು ಹಬ್ಬ ಹರಿದಿನಗಳಲ್ಲಿ ಬರೆಯುತ್ತಾರೆ. ತೇರಿನ ಚಿತ್ರದಲ್ಲಿ ತೇರನ್ನು ಎಳೆಯುತ್ತಿರುವ ಜನಗಳು, ಗೋಪುರ, ಮದನ ಕೈಗಳು, ನಾಲ್ಕು ಚಕ್ರ ತೇರಿನ ಮೇಲೆ ಗಿಳಿಗಳ ಸಾಲು ಮುಂತಾದ ಚಿತ್ರಗಳಿರುತ್ತವೆ. ಈ ಚಿತ್ತಾರವನ್ನು ಮದುವೆಗೆ ಮುಂಚೆ ಹಸೆಗೋಡೆಯಲ್ಲಿ ಬರೆಯುತ್ತಾರೆ. ಹಸೆ ಚಿತ್ತಾರದಲ್ಲಿ ಬಾಸಿಂಗದ ನಿಲಿ, ಪೊಪ್ಪಳಿ, ಸೀತೆ ಮುಡಿ, ಪಲ್ಲಕ್ಕಿ, ಮದನಕೈ (ಕಾಮದೇವನ ಹಸ್ತ) ಇರುತ್ತವೆ. ಎರಡು ಮದುವೆ ನಡೆದಾಗ ಎರಡು ಜೋಡಿ ಚಿತ್ರ ಮತ್ತು ನಾಲ್ಕು ಮದನ ಕೈಗಳನ್ನು ಬರೆಯುತ್ತಾರೆ.

## ಹಸೆ ಚಿತ್ತಾರಗಳಲ್ಲಿರುವ ಪ್ರಮುಖ ಆಕಾರಗಳು

೧.  ವೃತ್ತ  ೨.  ಚೌಕ  ೩.  ತ್ರಿಭುಜ

೪.  ಗೆರೆಗಳು

ಹಸೆ ಚಿತ್ರಗಳಲ್ಲಿ ಪರಿಸರದಲ್ಲಿ ಕಂಡುಬರುವ ವಸ್ತುಗಳು, ಜೀವಿಗಳನ್ನು ಬಳಸಿಕೊಂಡು ಚಿತ್ತಾರಗಳನ್ನು ಬಿಡಿಸುತ್ತಾರೆ.

೧. ಮನೆ, ೨. ಮನುಷ್ಯ (ಮದುಮಗ) ೩.ಪ್ರಾಣಿಗಳು ೪. ಪಕ್ಷಿಗಳು ೫. ಹಾವು ೬. ಮರಗಿಡ
















## ಹಸೆ ಚಿತ್ತಾರದಲ್ಲಿ ಬಳಸುವ ಪಟ್ಟಿಗಳು : ವಿವಿಧ ವಿನ್ಯಾಸಗಳು

ಹಸೆ ಚಿತ್ತಾರಗಳು ಅನೇಕ ರೀತಿಯ ವಿನ್ಯಾಸ, ಪಟ್ಟಿಗಳು ಮತ್ತು ತನ್ನದೇ ಆದ ಸಾಂಪ್ರದಾಯಿಕ ಶೈಲಿಯಿಂದ ಅವರವರ ಕಲ್ಪನೆಗೆ ಅನುಗುಣವಾಗಿ ರೂಪುಗೊಳ್ಳುತ್ತಾ ಹೋಗುತ್ತದೆ. ಗೋಡೆಯ ಮೇಲೆ ಕೆಮ್ಮಣ್ಣು, ಜೇಡಿಯಿಂದ ಚಿತ್ತಾರಗಳಿಗೆ ಆಕಾರ ಕೊಡುತ್ತಾರೆ. ಭೂಮಿ ಹುಣ್ಣಿಮೆಯ ದಿನ ಫಲವಂತಿಕೆ ಸಾಮಾನುಗಳನ್ನು ತುಂಬಲು ಬಳಸುವ ಬುಟ್ಟಿ(ಭೂಮಣ್ಣಿ ಬುಟ್ಟಿ)ಗೆ ಸಗಣಿಯಿಂದ ಸಾರಿಸಿ (ಬಳಿದು) ಅದನ್ನು ಒಣಗಲು ಬಿಟ್ಟನಂತರದಲ್ಲಿ ಕೆಮ್ಮಣ್ಣು ಹಚ್ಚುತ್ತಾರೆ. ನಂತರದಲ್ಲಿ ಜೇಡಿಮಣ್ಣನ್ನು ನೀರಿನಲ್ಲಿ ಕಲಸಿ, ಬಿದಿರು ಕಡ್ಡಿಯಿಂದ ಬ್ರಷ್ ತಯಾರಿಸಿಕೊಂಡು ಬುಟ್ಟಿಗೆ ಚಿತ್ತಾರ ಬರೆಯಲು ಪ್ರಾರಂಭಿಸುತ್ತಾರೆ. ಮೇಲೆ ಹೇಳಿದ ಎಲ್ಲಾ ವಿನ್ಯಾಸಗಳ ಬಳಕೆಯು ಇದರಲ್ಲಿ ಕಾಣಬಹುದು. ಇವುಗಳಲ್ಲದೆ ಬುಟ್ಟಿಯ ಚಿತ್ತಾರದಲ್ಲಿ ಛತ್ರದ ಸಾಲು, ಬಾಳೆಗಿಡ, ಏಣಿ, ಗೊಣಬೆ, ಜೋಗಿ ಜಡೆ, ಶಿವನ ಜಡೆ, ಸೀತೆಮುಡಿ ಮುಂತಾದವುಗಳು ಇರುತ್ತವೆ. ಗೊಂಬೆಸಾಲು, ಕುಚ್ಚುಸಾಲು, ಪೋಕಳಿ ಮತ್ತು ಮೂಲೆ ಮನೆಗಳು ಹಸೆ ಚಿತ್ತಾರ(ಗೋಡೆ ಚಿತ್ತಾರ)ದಲ್ಲಿ ಕಾಣಬಹುದು.

















**ಹಸಗರು :** ತೆಂಗಿನ ದೀವರು, ಮೊಗೇರ ಮದುವೆಗಳಲ್ಲಿ ಬರೆಯುವ ಹಸೆ. ಇದನ್ನು ಹಸಗರು ಎಂದು ಕರೆಯುತ್ತಾರೆ. ಸೂರ್ಯ, ಚಂದ್ರರು, ರಂಗೋಲಿ, ಬಾಚಣಿಗೆ, ಬೀಸಣಿಗೆ ನಡುವೆ ತುಳಸಿಕಟ್ಟೆ ಇರುತ್ತದೆ.

**ಹಲಿ :** ಹಾಲಕ್ಕಿ ಗೌಡರು ಮದುವೆ ಸಂದರ್ಭದಲ್ಲಿ ಬರೆಯುವ ಹಸೆಗೆ ಹಲಿ ಎಂದು ಕರೆಯುತ್ತಾರೆ. ಬಾಸಿಂಗ, ತೊಂಡಿಲು ಎರಡು ಮಣೆ ಇರುತ್ತವೆ. ತೊಂಡಿಲು ಮದುಮಗನನ್ನು ಪ್ರತಿನಿಧಿಸುತ್ತವೆ. ಇಲ್ಲಿ ಸಾಂಕೇತಿಕವಾಗಿ ಬಳಸಲಾಗಿದೆ.



ಹಸಗರು



ಹಲಿ

**ದೀವರ ಹಸೆ :** ಪೊಪ್ಪಿ ವಿನ್ಯಾಸವೇ ಇಲ್ಲಿ ಪ್ರಧಾನ. ಅಕ್ಕಪಕ್ಕದಲ್ಲಿ ಎರಡು ಹುಲ್ಲಿನ ಹೊರೆಗಳನ್ನು ಕಾಣಬಹುದು. ದಂಡಿಗೆ, ಮದುಮಕ್ಕಳು, ನಿರಿಕೊಪ್ಪು ಕುಚ್ಚುಸಾಲು, ಗೋಪೆಸಾಲು, ಮೂಲೆಮನೆಗಳು, ಮುಂತಾದವು ಇಲ್ಲಿದೆ.



ದೀವರ ಗೋಡೆ ಹಸೆ ಚಿತ್ತಾರ

## ಭೂಮಿ ಹುಣ್ಣಿಮೆ ಬುಟ್ಟಿಯ ಮತ್ತು ಗೋಡೆ ಹಸೆಯ ಚಿತ್ತಾರಗಳು



೧



೨



೩



೪



೫



೬



೭



೮



೯



೧೦



೧೧



೧೨



೧೩



೧೪



೧೫

೧. ಬಾಳೆಗಿಡ ೨. ಛತ್ರದ ಸಾಲು ೩. ಗೋಣಾಟೆ ೪. ಏಣಿ ೫. ಶಿವನ ಜಡೆ ೬. ಕತ್ತಿ ೭. ಸೀತೆಮುಡಿ ೮. ಮುತ್ತಿನ ಆರತಿ ೯. ಜೋಗಿ ಜಡೆ ೧೦. ಹಲ್ಲಿ ಹೆಜ್ಜೆ ೧೧. ಗೌರಿಮುಡಿ ೧೨. ಸಿರಿಕೊಪ್ಪು ೧೩. ಪೋಪ್ಪಳ್ಳಿ ೧೪. ಕೋಳಿ (ಹುಂಜ) ೧೫. ಮುತ್ತಿನ ಬಟ್ಟು ಹಸೆ ಮಂಟಪ ನಮೂನೆಯ ಗೋಡೆಯಲ್ಲಿರುವ ಚಿತ್ತಾರ.

## ಅಂಟಿಕೆ-ಪಂಟಿಕೆ

'ಅಂಟಿಕೆ ಪಂಟಿಕೆಯು ಮಲೆನಾಡಿನಲ್ಲಿ ಇಂದಿಗೂ ಜೀವಂತವಾಗಿ ಆಚರಣೆಗೊಳ್ಳುವ ಇದು ಅವರ ಸಾಂಸ್ಕೃತಿಕ ಬದುಕನ್ನು ಅನಾವರಣ ಮಾಡುವ ಕನ್ನಡಿಯಂತಿದೆ' (ಡಾ.ಸ.ಚಿ.ರಮೇಶ್, ೨೦೦೨, ಪುಟ ೧೪೭). ದೀಪಾವಳಿ ಹಬ್ಬದ ಪಾಡ್ಯದ ದಿವಸ ಪ್ರಾರಂಭಿಸಿ ಪಟ್ಟೊಡಕಿನವರೆಗೆ ಮೂರು ದಿವಸಗಳವರೆಗೆ ಹಬ್ಬ ದಿನ ಸಂಜೆ ಹಾಡುತ್ತಾರೆ. ಇದಕ್ಕೆ ಹಬ್ಬ ಹಾಡುವುದು ಎಂದು ಹೇಳುತ್ತಾರೆ. ಕಂಚಿನ ದೀಪ ಅಥವಾ ಮಣ್ಣಿನ ದೀಪವನ್ನು ಗ್ರಾಮದ ಗಾಮದೇವರ ಒಕ್ಕಲಾಗಿರುವವರ ಮನೆಯಲ್ಲಿ ಅಥವಾ ಮುಖ್ಯಸ್ಥ ದೀವರ ಮನೆಯಲ್ಲಿ ಇಟ್ಟಿರುತ್ತಾರೆ. ಪಾಡ್ಯದ ರಾತ್ರಿ ಹಬ್ಬದ ಊಟವಾದ ನಂತರ ಸುಮಾರು ರಾತ್ರಿ ೯ ಗಂಟೆಯ ನಂತರ ಮುಖ್ಯಸ್ಥರ ಮನೆಯಲ್ಲಿರುವ ಬಲೀಂದ್ರನ ಹತ್ತಿರ ಇಟ್ಟಿರುವ ದೀಪದೊಂದಿಗೆ ದೀಪ ಹಚ್ಚಿಕೊಂಡ ತಂಡದವರು ಆ ಊರಿನ ದೇವರ ಸನ್ನಿಧಿಯಲ್ಲಿರುವ ದೇವರಿಗೆ ಹಣ್ಣುಕಾಯಿ ಮಾಡಿಸಿ ತಾವು ತಂದ ದೀಪದಿಂದ ಜ್ಯೋತಿ ಬೆಳಗಿಸಿ ದೀಪ ತೆಗೆದುಕೊಂಡು 'ದೀಪ್, ದೀಪ್, ಹೋಳಿಗೆ, ಹಬ್ಬದ ಹೋಳಿಗೆ ದಿಪ್ಪೋಳಿಗೋ' ಎಂದು ತಂಡದ ನಾಯಕ ಹೇಳಿದಾಗ ಹಿಮ್ಮೇಳದವರು ದುಯಾಲೋ ಎಂದು ಧ್ವನಿ ಗೂಡಿಸುತ್ತಾರೆ.

'ದೀಪ ಸಾಲ್ಜ್ಯೋತಿಯುವರ ಧನಿಯಿದ್ದು ಬರಲೊ

ದೀಪ ಸಾಲ್ಜ್ಯೋತಿರನ್ನ ಈ ಊರ ದೇವರಿಗೆ

ಈ ಊರ ಬೂತಪ್ಪ ಬಲು ಸತ್ಯವಂತ

ಸತ್ಯವಂತವಾದರೆ ಸಭೆ ಮುಂದೆ ಬರಲಿ

ಈ ಊರ ಬೂತಪ್ಪನಿಗೆ ಏನೇನು ಪೂಜೆ

ಹೆಡಗೇಲಿ ಹಣ್ಣು, ಹೇರೀಲಿ ಕಾಯಿ

ಆಚೇಯ ದಿಂಬದಾಗ ಯಾವ ತರದ ಬೆಳಕೋ

ದೀಪ ಹಾಡುಡುಗನಾ ಗಾಯನದ ಬೆಳಕೋ'

ಎಂದು ಹಾಡುತ್ತಾ ಮನೆ ಮನೆಗೂ ಹೋಗುತ್ತಾರೆ. ಮನೆಯ ಬಾಗಿಲಿಗೆ ಹೋಗಿ ನಿಂತಾಗ ಮನೆಯಲ್ಲಿದ್ದವರನ್ನು ಎಚ್ಚರಿಸಲು ಏಕಕಂಠದಿಂದ ಹೋ ಎಂದು ಕೂಗುತ್ತಾರೆ. ತಾವು ದೂರದಿಂದ ನಡೆದು ಬಂದ ಸ್ಥಿತಿಯನ್ನು ಹಾಡಿನ ಮೂಲಕ ಹೇಳಿಕೊಳ್ಳುತ್ತಾರೆ.

'ಗೋರೆಂಬ ಕತ್ತಲೆಯೊಳಗೆ ನಾವು ಬಂದೆತಯ್ಯೋ

ಬಂದಾರೆ ನಮ ಬಾಯ ಬರಬೇಕಯ್ಯೋ

ಕಲ್ಲು ಮುಳ್ಳನೆ ತುಳಿದು ನಾವು ಬಂದೇವಯ್ಯೋ'

ಹೀಗೆ ಹೇಳುತ್ತಾ ಮನೆಯವರೆಲ್ಲಾ ಬಾಗಿಲ ಹತ್ತಿರ ಬರುವಂತೆ ಮಾಡುತ್ತಾರೆ.

ಬಾಗಿಲು ಬಾಗಿಲು ಚಂದ

ಈ ಮನೆ ಬಾಗಿಲು ಚಂದ

ಬಾಗಿಲಿಗೆಲ್ಲಾ ಏನೇನೋ

ಬಾಗಿಲಿಗೆಲ್ಲಾ ಏನೇನೋ ಬರೆದೈದಾರೆ

ಕೊಟ್ಟು ಕಾರಿನಾಳದ ನವಲಿಂದು

ಬಾಗಿಲ ಮೇಲಿನ ಗಿಳಿ ಚಂದ'

ಎಂದು ಹಾಡುತ್ತಾರೆ.

ದೀಪ ಇಡುವ ಸ್ಥಳದಲ್ಲಿ ನೆಲಸಾರಿಸಿ ಮಣೆಯಿಟ್ಟು ದೀಪವನ್ನು ಮಣೆಯ ಮೇಲಿಟ್ಟು ತಂಡದ ಯಜಮಾನ ಮಾತ್ರ ಕುಳಿತುಕೊಳ್ಳುತ್ತಾರೆ. ಉಳಿದವರು ನಿಂತುಕೊಂಡೇ ಹಾಡುತ್ತಾರೆ. ದೀಪದಾರಿಗಳು ಇಟ್ಟ ದೀಪಕ್ಕೆ ಮನೆಯೋರು ಎಣ್ಣೆ ಎರೆದು ಜ್ಯೋತಿಯನ್ನು ಹಚ್ಚಿಕೊಂಡು ಮನೆಯಲ್ಲಿ ಬಲೀಂದ್ರನ ಹತ್ತಿರ ಇಡುತ್ತಾರೆ. ದೀಪಕ್ಕೆ ಪೂಜೆ ಮಾಡಿ ಹಣ್ಣು ಕಾಯಿ ಒಡೆಯುತ್ತಾರೆ.

'ಸಾಲೆ ಸೀರೆ ನುಟ್ಟು ಸರದಾಳೆ ಮುಕ್ತ ಕಟ್ಟಿ

ಸಾಲೆ ಮಾಳಗೇಲಿ ಮಲಪ್ಪೋರು ಮಪ್ಪಿ

ಸಾಲೆ ಮಾಳಗೇಲಿ ಮಲಪ್ಪೋರಕ್ಕಮ್ಮ ನಿಮ್ಮ

ನಾಲೆ ಬೆಳಕೀಲಿ ಮುಗು ನಿದ್ರೆ ಜೋಗುಳ ತಾದಿ

ಜ್ಯೋತಿಗೆಣ್ಣೇಯ ಎರೆಯ ಬನ್ನಿ ಸುವ್ವಿ

ಈ ಹಾಡು ಹೇಳುವಾಗ ಮನೆಯೊಡತಿ ಎಣ್ಣೆ ಎರೆದು ಜ್ಯೋತಿ ತೆಗೆದುಕೊಂಡು ಹೋಗುತ್ತಾರೆ. ನಂತರ ಬಲೀಂದ್ರನ ಹಾಡು ಪ್ರಾರಂಭವಾಗುತ್ತದೆ.

ರಾಮಚರಿತೆ, ಬಲೀಂದ್ರನ ಕಥೆ, ಅನೇಕ ಕಥನ ಗೀತೆಗಳನ್ನು ಹಾಡುತ್ತಾ ಈ ದೀಪಧಾರಿಗಳು ಮುಂದೆ ಸಾಗುತ್ತಾರೆ. ಹೀಗೆ ಮೂರು ದಿವಸಗಳವರೆಗೆ ಪ್ರತಿರಾತ್ರಿ ಹಬ್ಬ ಹಾಡುವ ಕಾರ್ಯಕ್ರಮ ನಡೆಯುತ್ತದೆ. ಮನೆಯಿಂದ ಮನೆಗೆ ಹೋಗುವಾಗ ಗಾಳಿಗೆ ದೀಪ ಆರದಂತೆ ಹಾಳೆಯಿಂದ ಮಾಡಿದ ತಡಿಕೆಯನ್ನು ಮರೆ ಮಾಡಿಕೊಳ್ಳುತ್ತಾರೆ. ಹೀಗೆ ಹಾಡುತ್ತಾ ದೀಪವನ್ನು ತೆಗೆದುಕೊಂಡು ಹೋಗಿ ಕೊನೆಗೆ ಕೇರಿಗೆ ವಾಪಾಸಾಗುತ್ತಾರೆ. ಗ್ರಾಮದೇವರ ಮುಖ್ಯಸ್ಥನ ಮನೆಯಲ್ಲಿ ದೀಪವನ್ನು ಇಡುತ್ತಾರೆ. ಇನ್ನು ಕೆಲವು ಕಡೆ ಆತನ ಮನೆಯ ಒಲೆಯ ಬೆಂಕಿಗೆ ದೀಪದ ಬತ್ತಿಯನ್ನು ತಾಗಿಸಿ, ಬತ್ತಿಯನ್ನು ಆರಿಸಿ ಬತ್ತಿಯನ್ನು ತೆಗೆದು ಇಡುತ್ತಾರೆ. ಹೀಗೆ ಮೂರು ದಿನ ಮಾಡಿದ ನಂತರ ನಾಲ್ಕನೇ ದಿವಸ ಸಂಜೆ ತಂಡದವರೆಲ್ಲಾ ಸೇರಿ ಪುನಃ ದೀಪ ಹಚ್ಚಿಕೊಂಡು ಹಾಡು ಹೇಳುತ್ತಾ ದೀಪ ಆರಿಸುವ ಹಾಲು ಮರದ ಹತ್ತಿರ ಹೋಗಿ ಮರ ಮತ್ತು ಜ್ಯೋತಿಯನ್ನು ಪೂಜೆ ಮಾಡಿ ನೆನೆಬತ್ತಿಯನ್ನು ಮರದ ಕೊಂಬೆಗೆ ಇಡುವುದರ ಮೂಲಕ ಮುಕ್ತಾಯ ಮಾಡುತ್ತಾರೆ.

ಈ ದೀಪಧಾರಿಗಳು ಮನೆಮನೆಗೆ ಹೋದಾಗ ಮನೆಯ ಯಜಮಾನರು ಯಜಮಾನಿತಿಯರು ಹಣ ಮತ್ತು ಹಣ್ಣು ಕಾಯಿ, ಹಬ್ಬದ ಸಿಹಿ ತಿಂಡಿಯನ್ನು ಕೊಡುತ್ತಾರೆ. ಹಣ್ಣು ತಿಂಡಿಯನ್ನು ದಾರಿಯಲ್ಲಿ ತಿಂದು ಹಣವನ್ನು ಸಂಗ್ರಹಿಸಿ, ಹಬ್ಬವಾದ ಕೆಲ ದಿವಸಗಳ ನಂತರ ಮೀನು, ಕೋಳಿ ಅಥವಾ ಕುರಿ ತಂದು ಸಾಮೂಹಿಕ ಅಡಿಗೆ ತಯಾರಿಸಿ, ಆ ಊರಿನ ಮುಖಂಡರನೆಲ್ಲಾ ಸೇರಿಸಿ ಸಾಮೂಹಿಕ ಭೋಜನ ಮಾಡುತ್ತಾರೆ. ಇತ್ತೀಚೆಗೆ ಕೆಲ ಭಾಗದಲ್ಲಿ ಮಾಂಸಾಹಾರ ಪದ್ಧತಿಯನ್ನು ರದ್ದು ಮಾಡಿ, ಗ್ರಾಮದ ಅಭಿವೃದ್ಧಿಯ ಕೆಲಸಕ್ಕೆ ಉಪಯೋಗಿಸುತ್ತಿದ್ದಾರೆ. ಈ ಹಬ್ಬ ಹಾಡುವುದನ್ನು ಸಾಗರ, ತೀರ್ಥಹಳ್ಳಿ, ಹೊಸನಗರ ತಾಲ್ಲೂಕುಗಳಲ್ಲಿ ದೀವರು, ಒಕ್ಕಲಿಗರು, ಕುಣಬಿ ಹಸಲರು ಈ ಪದ್ಧತಿಯನ್ನು ಉಳಿಸಿಕೊಂಡು ಬಂದಿದ್ದಾರೆ. ಸಾಗರದ ಹಿರೇನೆಲ್ಲೂರು, ಕಾಗೋಡು ಮುಂತಾದ ಭಾಗದಲ್ಲಿ ಹಬ್ಬ ಹಾಡುವ ಪದ್ಧತಿ ಸಾಂಕೇತಿಕವಾಗಿ ಕಂಡುಬರುತ್ತದೆ. ಇಲ್ಲಿ ದೀಪವನ್ನು ಹಚ್ಚಿಕೊಂಡು ತಂಡದೊಡನೆ ಯಾರು ಹೋಗುವುದಿಲ್ಲ. ಪುಂಡಿಕೋಲಿನ ತುದಿಗೆ ಬಟ್ಟೆ ಸುತ್ತಿ ಎಣ್ಣೆ ಹಾಕಿ ಬಾಳೆ ಎಲೆಯಲ್ಲಿ ಸುತ್ತಿ ಬಲೀಂದ್ರನ ಹತ್ತಿರ ಇಟ್ಟಿರುತ್ತಾರೆ. ಸಂಜೆ ದೀಪ ಹಚ್ಚಿ ಪುಂಡಿಕೋಲಿನ ಕಡಿಬತ್ತಿಯನ್ನು ಹಚ್ಚಿಕೊಂಡು ಮನೆಯ ಹಿರಿಕಿರಿಯ ಹುಡುಗರು ಕೈಯಲ್ಲಿ ಹಿಡಿದುಕೊಂಡು 'ದೀಪ ದೀಪ ಹೋಳಿಗೊ' ಎಂದು ಕೂಗು ಹಾಕುತ್ತಾರೆ. ಎಲ್ಲಾ ಕೇರಿಯ ಹುಡುಗರು 'ದೀಪ ಹಚ್ಚಿಕೊಂಡು ದೀಪ ದೀಪ ಹೋಳಿಗೊ ಮೇಲಿನ ಕೇರಿಗೆ ಹೋಳಿಗೊ'. ಗೌಡರ ಕೇರಿಯಾಗೆ ಹೋಳಿಗೊ ಎಂದು ಕೂಗುತ್ತಾ ನಂತರ ಗೊಬ್ಬರ ಗುಂಡಿ, ಬಾಗಿಲ ಹತ್ತಿರ ಕಡಿ ಬತ್ತಿಯನ್ನು ಸಿಕ್ಕಿಸುತ್ತಾರೆ. ಈ ಭಾಗದಲ್ಲಿ ದೀವರು, ಹರಿಜನರು, ಲಿಂಗಾಯಿತರು, ಒಕ್ಕಲಿಗರು ಈ ರೀತಿ ಆಚರಿಸುತ್ತಾರೆ.

## ದೀಪಧಾರಿಗಳ ವೇಷಭೂಷಣ

ಕಚ್ಚೆಪಂಚೆ, ಜುಬ್ಬ, ತಲೆಗೆ ಪೇಟ ಸುತ್ತಿಕೊಳ್ಳುತ್ತಾರೆ. ಹೆಗಲಿಗೆ ಜರಿ ಶಲ್ಯ ಹಾಕುತ್ತಾರೆ. ಕೈಯಲ್ಲಿ ದೊಣ್ಣೆ ಹಿಡಿದು ಕೊಳ್ಳುತ್ತಾರೆ. ಮನೆಯ ಮುಂದೆ ತುಂಬಾ ಹೊತ್ತಿನವರೆಗೆ ಹಾಡು ಹೇಳುವುದರಿಂದ ಸಹಾಯವಾಗುತ್ತದೆ. ಕತ್ತಲಲ್ಲಿ ಹೋಗುವುದರಿಂದಲು ಕೈಯಲ್ಲಿರುವ ದೊಣ್ಣೆ ರಕ್ಷಣೆ ಒದಗಿಸುತ್ತದೆ. ದೀಪ ಹಿಡಿದವನು ನಿಲುವಂಗಿಯ ಮೇಲೆ ಕೋಟು ಧರಿಸುತ್ತಾನೆ. ಚಳಿಗೆ ಕಂಬಳಿ ಕೊಪ್ಪೆ ಹಾಕುವುದು ಉಂಟು. ಈ ರೀತಿಯ ವೇಷ ಭೂಷಣಗಳನ್ನು ಧರಿಸುತ್ತಾರೆ.

## ಡೊಳ್ಳು

ಕರ್ನಾಟಕದ ಶಿವಮೊಗ್ಗ, ಬಿಜಾಪುರ, ಬಳ್ಳಾರಿ, ತುಮಕೂರು, ರಾಯಚೂರು, ಗುಲ್ಬರ್ಗಾ ಮುಂತಾದ ಜಿಲ್ಲೆಗಳಲ್ಲಿ ಡೊಳ್ಳು ಕುಣಿತ ಕಂಡುಬರುತ್ತದೆ. ಈ ಕಲೆಯನ್ನು 'ಗಂಡು ಮೆಟ್ಟಿನ ಕಲೆ' ಎಂದು ಗುರುತಿಸಲಾಗಿದೆ. ದೀವರು, ಕುರುಬರು, ಉಪ್ಪಾರರು ಮತ್ತು ನಾಯಕರು ಡೊಳ್ಳು ಮೇಳದಲ್ಲಿ ಕಂಡುಬರುತ್ತಾರೆ. ಈ ಕುಣಿತ ಕುರುಬ ಮತ್ತು ದೀವ ಜನಾಂಗದೊಡನೆ ನೇರವಾದ ಸಂಬಂಧ ಹೊಂದಿದೆ. ದೀವರು ಧಾರ್ಮಿಕ ಆಚರಣೆಯಲ್ಲಿ ಬಳಸಲಾಗುತ್ತಿದ್ದ ಡೊಳ್ಳು ಕುಣಿತ ಇಂದು ಮನೋರಂಜನೆಗೆ ಬಳಸುತ್ತಿದ್ದಾರೆ.

ಆರಿದ್ರ ಮಳೆಯ ಹಬ್ಬದ ಸಂದರ್ಭದಲ್ಲಿ ಡೊಳ್ಳು ಕುಣಿತ ಆರಾಧನೆಯ ಒಂದು ಭಾಗವಾಗಿದೆ. ಆರಿದ್ರ ಮಳೆಯ ಪ್ರವೇಶವಾದ ಮೊದಲ ಭಾನುವಾರದಂದು ಮುಂಜಾನೆ 'ಬೀರ ಡೊಳ್ಳ'ನ್ನು ಇಳಿಸಲಾಗುತ್ತದೆ. ನಂತರ ದೇವರ ಮುಖವಾಡವನ್ನು ತೊಳೆದು, ಪೂಜಿಸಿ ಡೊಳ್ಳನ್ನು ಪೂಜೆ ಮಾಡಿ, ಗಟ್ಟಿಯಾಗಿ ಬಾರಿಸಲಾಗುತ್ತದೆ. ಒಂದು ವಾರದ ನಂತರ ಆರಿದ್ರ ಮಳೆ ಹಬ್ಬವನ್ನು ಆಚರಿಸುತ್ತಾರೆ. ಬೀರ ದೇವರ ಮುಖವಾಡ, ಕುಮಾರ ರಾಮನ ಮುಖವಾಡ, ಗ್ರಾಮ ದೇವರ ಮುಖವಾಡ, ಹುಲಿದೇವರು, ಕುದುರೆದೇವರು ಹೀಗೆ ದೇವರಮೂರ್ತಿಯನ್ನು ತರಲಾಗುತ್ತದೆ. ಈ ಮೆರವಣಿಗೆಯ ಮುಂಭಾಗದಲ್ಲಿ ವೀರಾವೇಶದ ಡೊಳ್ಳು ಕುಣಿತ ಸಾಗುತ್ತಿರುತ್ತದೆ. ಸಂಜೆ ಧಗಧಗಿಸುವ ಕೆಂಡದ ಮೇಲೆ ಡೊಳ್ಳು ಬಾರಿಸುತ್ತಾ ರೌದ್ರನರ್ತನ ಮಾಡುತ್ತಾರೆ. ಈ ಕಲೆ ಆರಾಧನೆಯ ಒಂದು ಭಾಗವಾಗಿದೆ.

'ಕರಿಯ ಕಂಬಳಿ ಗದ್ದುಗೆ ಹಾಕಿ
ಬೀರ ಡೊಳ್ಳು ತಂದು ಇಳಿಗಿದರ
ಬೀರ ಡೊಳ್ಳಿನ ಡುಮುಕವ ಕೇಳಿ
ಬಂದರಪ್ಪ ಶಿವಶರಣ'

ಎಂದು ಹಾಡುತ್ತಾ

ಕೋಪಾ ಕುಯಿ ನಿನ್ನೆ ಬಂದವರಾರಪ್ಪ
ಗೆಜ್ಜೆ ಕಾಲ ಬೀರಪ್ಪ

ಕೋವಾ ಕುಯಿ ಎಂದು ಕೂಗುತ್ತಾ ಕುಣಿಯುತ್ತಾರೆ. ಮೇಲಿನ ಪದದ ಹಿನ್ನೆಲೆಯಲ್ಲಿ ಡೊಳ್ಳಿನ ಬಗ್ಗೆ ಕಥೆಯೊಂದಿದೆ. ಪಾರ್ವತಿ ಪರಶಿವರು ಆಟ ಆಡುವಾಗ ಪಾರ್ವತಿ ಗೆದ್ದು ಪರಶಿವ ಸೋಲುತ್ತಾನೆ. ಆಟದ ನಿಯಮದಂತೆ ಶಿವ ಯಾರಿಗೂ ಕಾಣದಂತೆ ಇರಬೇಕು ಎಂಬುದು. ಸೋತ ಶಿವ ಗುಹೆಯಲ್ಲಿ ಇರುತ್ತಾನೆ. ಗುಹೆಯ ಹೊರಗೆ ಮಾಯ ಮೂರ್ತಿಯು ಕಾವಲಿರುತ್ತದೆ. ಶಿವನಿಲ್ಲದೆ ಗೌರಿ ಇರಲು ಸಾಧ್ಯವಿಲ್ಲ. ಇವರು ಹುಡುಕುತ್ತಾ ಬರುವಾಗ ಕಾವಲಿರುವ ಮಾಯ ಮೂರ್ತಿಯನ್ನು ತಪ್ಪಾಗಿ ಗ್ರಹಿಸಿದ ಶಿವಗಣಗಳು ಕೊಲ್ಲುತ್ತವೆ. ಹೊರಗೆ ಬಂದ ಶಿವ ಈ ಘಟನೆಯಿಂದ ಮನನೊಂದು ಕಳೇಬರದಿಂದ ಡೊಳ್ಳು ಮಾಡಿ, ಈ ಡೊಳ್ಳನ್ನು ಮಂಗಳಕಾರ್ಯದಲ್ಲಿ ಬಾರಿಸಬೇಕು ಎಂದು ದೇವರಿಗೆ ಕೊಟ್ಟನು.

## ಡೊಳ್ಳು ವಿನ್ಯಾಸ

ಕನ್ನಡನಾಡಿನ ಬಹುದೊಡ್ಡ ವಾದ್ಯ ಡೊಳ್ಳು. ಇದೊಂದು ಚರ್ಮವಾದ್ಯ ಕೂಡ. ಎಲ್ಲಾ ವಾದ್ಯಗಳಿಗಿಂತ ಹೆಚ್ಚು ಶಬ್ದ ಮಾಡುತ್ತದೆ. ಗುಡುಗಿನಂತೆ ಅರ್ಭಟಿಸುತ್ತದೆ. ಮರದ ತುಂಡನ್ನು ಕತ್ತರಿಸಿ ಅದರ ಒಳಭಾಗವನ್ನು ಪೂರ್ತಿಯಾಗಿ ಟೊಳ್ಳು ಮಾಡಲಾಗುತ್ತದೆ. ಬಲಭಾಗಕ್ಕೆ ಹೋತದ ಚರ್ಮ, ಎಡಭಾಗಕ್ಕೆ ಆಡಿನ ಚರ್ಮವನ್ನು ಹೊದಿಸಲಾಗುತ್ತದೆ. ಸೆಣಬಿನ ಹಗ್ಗದಿಂದ ಹೊರ ಮೈಯನ್ನು ಬಿಗಿಯುತ್ತಾರೆ. ಡೊಳ್ಳಿಗೆ ಬಳಸುವ ಮರ ಹೊನ್ನೆ, ಹೆಬ್ಬೇವು ಅಥವಾ ಹಲಸು. ಗಟ್ಟಿ ಜಾತಿಯ ಮರವನ್ನು ಬಳಸುತ್ತಾರೆ. ಕುಣಿತದಲ್ಲಿ ಕಂಚಿನ ತಾಳ, ಅಥವಾ ಜಾಗಟೆ ಬಾರಿಸುತ್ತಾರೆ.

## ಕುಣಿತ

ಆರಾಧನೆಯ ಸಂದರ್ಭದಲ್ಲಿ ಡೊಳ್ಳು ಕುಣಿಯುವ ದೇವರು ಸಾಮಾನ್ಯ ವೇಷಾಕನಲ್ಲಿ ಇರುತ್ತಾರೆ. ಸೊಂಟಕ್ಕೆ ಕಂಬಳಿ ಸುತ್ತುವರು. ಕಾಲಿಗೆ ಗೆಜ್ಜೆ ಧರಿಸುವರು. ಮಧ್ಯದಲ್ಲಿ ಒಬ್ಬ ಹಾಡುತ್ತಾ ತಾಳ ಬಾರಿಸುತ್ತಿರುತ್ತಾನೆ. ಮೆರವಣಿಗೆಯ ಡೊಳ್ಳಿನವರು ಸ್ವಲ್ಪ ಹಂತವನ್ನು ಕುಣಿದಿರುತ್ತಾರೆ. ತಾಳದ ಕಡೆಗೆ ಕಸರತ್ತಿನ ಕಡೆಗೆ ಯಾವುದೆ ಗಮನಹರಿಸದೆ ಮೈಮರೆಯುವಂತೆ ಕುಣಿವರು.

ಆದರೆ ಈಗ ಮನೋರಂಜನ ವಾದ್ಯವಾದ ಡೊಳ್ಳು ಇಂದು ಅನೇಕ 'ಡೊಳ್ಳು ಮೇಳ'ಗಳ ಹುಟ್ಟಿಗೆ ಕಾರಣವಾಗಿದೆ. ವಿವಿಧ ರೀತಿಯ ವಿಶೇಷ ದಿರಸುಗಳನ್ನು ಧರಿಸಿರುತ್ತಾರೆ. ಕಾಲಿಗೆ, ತೋಳಿಗೆ, ಗೊಬ್ಬರ ಚೀಲದ ಗೊಂಡೆವು ಮಾಡಿ ಕಟ್ಟಿಕೊಂಡಿರುವರು. ಮೈಯಿಗೆ ತೋಳಿಲ್ಲದ ಕಸೆ ಅಂಗಿ, ಹುಲಿಯ ಚಿತ್ರ ಅಥವಾ ಪಳಪಳ ಹೊಳೆಯುವ ಬಟ್ಟೆಯಿಂದ ಅಂಗಿ ಹೊಲಿಸುವರು. ಸೊಂಟಕ್ಕೆ ಕಂಬಳಿ ಅಥವಾ ದಪ್ಪನೆಯ ಬಣ್ಣದ ಜೂಲ ಸುತ್ತುವರು. ಇದಕ್ಕೆ ಮಾವಿನ ಸೊಪ್ಪು ಕಟ್ಟಿಕೊಳ್ಳುವರು. ಮಧ್ಯದಲ್ಲಿ ಇರುವವ ಕಚ್ಚೆಪಂಚೆ, ತಲೆಗೆ ರುಮಾಲು ಧರಿಸಿ ತಾಳ ಬಾರಿಸುತ್ತ, ಡೊಳ್ಳಿನ ಲಯವನ್ನು ಬದಲಾಯಿಸುತ್ತಾ ಹಾಡು ಹೇಳುತ್ತಿರುತ್ತಾನೆ. ಡೊಳ್ಳು ಕಲೆಯ ಸೂತ್ರಧಾರನೀತನಾಗಿದ್ದಾನೆ. ಅನೇಕ ಭಂಗಿಗಳು, ಬಾರಿಸುವ ಲಯಗಳು ಇವನ ನಿರ್ದೇಶನ ದಂತೆ ಬದಲಾಗುತ್ತಿರುತ್ತದೆ. ಡೊಳ್ಳಿನ ಕುಣಿತ ಹೆಜ್ಜೆ ಮತ್ತು ಬಾರಿಸುವಿಕೆಯನ್ನು ಅವಲಂಬಿಸಿರುತ್ತದೆ. ಬಲಭಾಗದಲ್ಲಿ ಕೋಲಿನಿಂದ ಬಾರಿಸಿ ಎಡಭಾಗದಲ್ಲಿ ಕೈಯಿಂದ ಬಡಿದರೆ ಒಂದು ಹೆಜ್ಜೆ. ೧-೩, ೧-೫ ಎಂದು ಹೆಜ್ಜೆಯನ್ನು ಹಾಕುತ್ತಾರೆ. ಕ್ರಮೇಣ ಹೆಚ್ಚುತ್ತಾ ಬೆಸ ಸಂಖ್ಯೆಯಲ್ಲಿರುತ್ತದೆ. 'ಎಳು' ಬಾರಿಸುವುದಿಲ್ಲ. ಏಕೆಂದರೆ ಇದು ಅಶುಭ. ಡೊಳ್ಳು ಕುಣಿತದಲ್ಲಿ ಅನೇಕ ಕಸರತ್ತುಗಳ ವಿಶೇಷ 'ಮುಮಲು'ಗಳಿರುತ್ತವೆ.

**ಲಾಗಹಾಕುವುದು :** ಡೊಳ್ಳು ಬಾರಿಸುತ್ತಿರುವಂತೆ ಲಾಗ ಹಾಕಿ ನಂತರ ಮೊದಲ ಸ್ಥಿತಿಗೆ ಬರುವುದು.

**ಭಾಗುವುದು :** ಡೊಳ್ಳು ಬಾರಿಸುತ್ತಾ ಹಿಂಭಾಗಕ್ಕೆ ಬಾಗಿ ಬಾಯಲ್ಲಿ ನೋಟುಗಳನ್ನು ತೆಗೆಯುವುದು. ಕೈಯನ್ನು ನೆಲಕ್ಕೆ ಊರದೆ ಲಯ ತಪ್ಪದಂತೆ ಬಾರಿಸುತ್ತಾ ಇರುತ್ತಾರೆ.

**ಹಾರುವುದು :** ಡೊಳ್ಳು ಬಾರಿಸುತ್ತಲೇ, 'ಹೋಯ್' ಎಂದು ಕೂಗುತ್ತಾ ಮೇಲಕ್ಕೆ ಹಾರುವುದು.

**ಪಿರಮಿಡ್ :** ಡೊಳ್ಳಿನ ಮೇಲೆ ನಿಂತು ಗೋಪುರ ನಿರ್ಮಿಸುವುದು.

**ಮಂಡಿ ಬಡಿತ :** ಜೋಡಿ ಕಲಾವಿದರು ಎಡಗಾಲನ್ನು ನೆಲಕ್ಕೆ ಬಲಗಾಲನ್ನು ಬಗ್ಗಿಸಿಕೊಂಡು ಡೊಳ್ಳು ಬಾರಿಸುವುದು.

**ಮರಗಾಲು ಬಡಿತ :** ಒದರಿಂದ ಎರಡು ಅಡಿ ಎತ್ತರದ ಮರಗಾಲು ಕಟ್ಟಿಕೊಂಡು ಡೊಳ್ಳು ಬಾರಿಸುವುದು.

ಇದಲ್ಲದೆ ನೆಲದ ಮೇಲಿರುವ ತುಂಬಿದ ಕೊಡವನ್ನು ಬಾಯಲ್ಲಿ ಕಚ್ಚಿ ಎತ್ತಿಕೊಂಡು ನೀರು ಚೆಲ್ಲದಂತೆ ಡೊಳ್ಳು ಬಾರಿಸುತ್ತಾ ಕುಣಿಯುವುದು. ಕುಳಿತು 'ಡೊಳ್ಳು ಬಾರಿಸುತ್ತ ಕುಪ್ಪಳಿಸುವುದು'. ಜಡೆ ಹೆಣೆಯುವ ಕುಣಿತ ಕುಣಿಯುವರು. ಒಂದು ಹಲಗೆಯ ಮೇಲೆ ಕೊಂಡಿಯನ್ನು ಇಟ್ಟು ಇದರ ಸುತ್ತಲು ರಂಧ್ರ ಮಾಡಿ ನೂಲಿನ ಹಗ್ಗವನ್ನು ಇಳಿಬಿಟ್ಟು ಮಧ್ಯದಲ್ಲಿ ಕತ್ತದ ಬಿಣೆಯನ್ನು ಇಳಿಯ ಬಿಡುತ್ತಾರೆ. ಹತ್ತು ಹನ್ನೆರಡು ಅಡಿ ಎತ್ತರದಲ್ಲಿ ಅದ್ವಗಳವನ್ನು ಕಂಬದ ಮೇಲೆ ನಿಲ್ಲಿಸಿ ಮಧ್ಯದಲ್ಲಿ ಕೊಂಡಿ ಹಲಗೆಯನ್ನು ಕಟ್ಟುವರು. ಡೊಳ್ಳು ಕುಣಿತದವರು ಒಂದೊಂದು ನೂಲಿನ ಹಗ್ಗವನ್ನು ಹಿಡಿದುಕೊಂಡು ಬಲಗೈಯಲ್ಲಿ ಡೊಳ್ಳು ಬಾರಿಸುತ್ತ ಬಿಣೆಗೆ ಜಡೆ ಹೆಣೆಯುವರು. ಕಲಾವಿದರು ಬಿಣೆಯ ಸುತ್ತಲು ಪ್ರದಕ್ಷಿಣೆ ಹಾಕುತ್ತಾ ಸುತ್ತುವರು. ನಂತರ ಕುಣಿತವನ್ನು ಹಿಮ್ಮುಖಗೊಳಿಸಿದರೆ ಜಡೆ ಬಿಚ್ಚಿಕೊಳ್ಳುವುದು. ಅನೇಕ ರೀತಿಯ ತಾಳ, ತಂತ್ರ, ಕಸರತ್ತುಗಳು ಡೊಳ್ಳು ಕುಣಿತದಲ್ಲಿ ಇದೆ.

ಡೊಳ್ಳು ಕುಣಿತ ಸಾಂಪ್ರದಾಯಿಕ ಆಚರಣೆಗಳ ಮೂಲಕ ತನ್ನ ಹುಟ್ಟನ್ನು ಕಂಡುಕೊಂಡು ಇಂದು ಧಾರ್ಮಿಕ ಸಮಾರಂಭಗಳಲ್ಲಿ, ಮೆರವಣಿಗೆ ಉತ್ಸವಗಳಲ್ಲಿ, ಗಣಪತಿ ವಿಸರ್ಜನೆ, ಮಾರಿದೇವತೆ ವಿಸರ್ಜನೆ, ಮದುವೆ ಮೆರವಣಿಗೆ ಹತ್ತು ಹಲವು ಸಂದರ್ಭಗಳಲ್ಲಿ ಕುಣಿತದ ಹಾಜರಿ ಕಡ್ಡಾಯವಾಗಿದೆ. ಒಂದು ನಿರ್ದಿಷ್ಟ ಜನಾಂಗದ ಕುಣಿತವಾಗಿ ಉಳಿದಿಲ್ಲ. ಎಲ್ಲಾ ಹಿಂದುಳಿದ ಜನಾಂಗಗಳು ಡೊಳ್ಳು ಕಲಾಮೇಳಗಳನ್ನು ಹೊಂದಿವೆ.

'ಹಸೆ' ದೀವ ಹೆಂಗಸರ ಕಲಾಕೌಶಲ್ಯಕ್ಕೆ ಸಾಕ್ಷಿಯಾದರೆ 'ಡೊಳ್ಳು' ದೀವ ಗಂಡಸರ ಕಲಾ ನೈಪುಣ್ಯಕ್ಕೆ ಸಾಕ್ಷಿಯಾಗಿದೆ. ಇದೊಂದು ಯುದ್ಧಕ್ಕೆ ಸಂಬಂಧಿಸಿದ ವಾದ್ಯ ಎನ್ನಬಹುದು. ನಮ್ಮ ಪ್ರದೇಶದಲ್ಲಿ ಈ ವಾದ್ಯ ಇಂದು ಜಾನಪದ ಅಭಿವ್ಯಕ್ತಿಯ ಪ್ರಮುಖ ವಾಹಿನಿಯಾಗಿದೆ. ಸಾಗರ, ಸೊರಬ, ಶಿಕಾರಿಪುರ, ಹೊಸನಗರ ಹೀಗೆ ಮಲೆನಾಡಿನ ಸುತ್ತಮುತ್ತ ಅನೇಕ ಡೊಳ್ಳಿನ ತಂಡಗಳಿವೆ. ಕಣ್ಣೇಶ್ವರ ಡೊಳ್ಳು ಕಲಾ ಸಂಘ ಕಣ್ಣೂರು ಮತ್ತು ಕಾಗೋಡು ರಂಗಮಂಚದ ಕಲಾವಿದರು (ನಾಟಕ, ಹಾಡು, ಡೊಳ್ಳು) ವಿದೇಶ ಯಾತ್ರೆಗೆ ಹೋಗಿ ಮಲೆನಾಡಿನ ಡೊಳ್ಳಿನ ಶಬ್ದವನ್ನು ಮೊಳಗಿಸಿದ್ದಾರೆ.

## ಮಲೆನಾಡಿನ ಕೋಲಾಟದ ಸಂಪ್ರದಾಯಗಳು

ಭೂಮಿ ಹುಣ್ಣಿಮೆ ಹಬ್ಬಕ್ಕೂ ವಿಜಯದಶಮಿಗು ಏಳು ದಿನಗಳ ಅಂತರ. ವಿಜಯದಶಮಿ ದಿನದಂದು ಪ್ರತಿ ವರುಷ ಕೋಲು ಕಡಿಯುತ್ತಾರೆ. ಕೊಡಸಿನ ಬುಗನೆ ಮರದಿಂದ ದಪ್ಪ ಮಾಡಿ ಕೋಲು ತಯಾರಿಸುತ್ತಾರೆ. ಬಂದಳಿಕೆ ಕಾರೆ, ಕರಿಮಲ, ಹೊನ್ನೆ ಜಾತಿಯ ಶ್ರೇಷ್ಠ ಮರದಿಂದ ಕೋಲು ಕಡಿಯುತ್ತಾರೆ. ವಿಜಯದಶಮಿಯಿಂದ ದೀಪಾವಳಿ ಹಬ್ಬ ಮುಗಿದ ನಂತರ ಇಲಾಡಿಯವರೆಗೆ, ಪಾಡ್ಯ, ಪಜ್ಞೋದಕನವರೆಗೆ ಈ ಮೂರು ದಿವಸ ಕೋಲು ಹೊಯ್ಯುತ್ತಾರೆ.

ಊರಿನ ಎಲ್ಲಾ ಮನೆಗು ಮತ್ತು ಪಕ್ಕದ ಹಳ್ಳಿಯ ಪ್ರತಿ ಮನೆಗೆ ಹೋಗಿ ಕೋಲು ಹಾಕುತ್ತಾರೆ. ಮನೆಯವರು ಹಣ, ಅಕ್ಕಿ, ಹಬ್ಬದ ತಿಂಡಿ ತಿನಿಸು ಕೊಡುತ್ತಾರೆ. ಕೋಲು ಆಡುವಾಗ ಮಧ್ಯೆ ಒಂದು ಐವತ್ತು ಪೈಸೆ ನಾಣ್ಯವನ್ನು ಹಾಕುತ್ತಾರೆ. ಕೋಲು ಹೊಡೆಯುವವರು ಕೈಕೋಲು ತಪ್ಪಿಸದೆ (ತಾಳ ತಪ್ಪದಂತೆ) ಹಣವನ್ನು ತೆಗೆದುಕೊಳ್ಳಬೇಕು. ಚೆನ್ನಾಗಿ ಆಡುವವರಿಗೆ ನೋಟಿನ ಸರ ಮಾಡಿ ಹಾಕುವುದು ಉಂಟು. ಮಲೆನಾಡಿನ ಭಾಗದ ದೀವರು, ಹರಿಜನರು, ಕೋಲು ಮೇಳ ಮಾಡುತ್ತಾರೆ.

ದೀಪಾವಳಿಯ ನಂತರ ಒಂದು ದಿವಸ ನಿಗದಿ ಮಾಡಿಕೊಂಡು ಕೋಲು ಹಬ್ಬ ಮಾಡುತ್ತಾರೆ. ಮೀನು, ಮಾಂಸ ತಂದು ಹೊಳೆಯ ದಿಬ್ಬದಲ್ಲಿ ಕೋಲುಮೇಳದವರು ಊಟ ಮಾಡುತ್ತಾರೆ. ಕೋಲುಗಳನ್ನು ನದಿಗೆ ತೆಗೆದುಕೊಂಡು ಹೋಗಿ ಪೂಜಿಸಿ, ಚಚ್ಚೌಕವಾಗಿ ಇಟ್ಟು ಮಧ್ಯೆ ನೀರು ತುಂಬಿದ ತಂಬಿಗೆ ಇಟ್ಟು ತಂಬಿಗೆ ಕೊರಳಿಗೆ ತಾಳಿಯಿರುವ ಕರಿಮಣಿ ಕಟ್ಟಿ, ಹೊಸ ಪಂಚೆಯನ್ನು ಕೊಂಡು ತಂದು ಪಂಚೆಯನ್ನು ನೆಲಕ್ಕೆ ಹಾಸಿ, ಪಂಚೆಯ ಮೇಲೆ ಕೋಲು ಕಟ್ಟಿ, ತಂಬಿಗೆಯ ಮೇಲೆ ತೆಂಗಿನ ಕಾಯಿಯನ್ನಿಟ್ಟು ಮಾವಿನ ತೋಳಲು ಇಡುತ್ತಾರೆ. ಪೂಜೆಯ ನಂತರ ಪಂಚೆಯ ತುದಿಗಳನ್ನು ನಾಲ್ಕು ಜನ ಹಿಡಿದು ಕೊಂಡು ನೀರಿನಲ್ಲಿಳಿದು ಕೋಲುಗಳನ್ನು ನೀರಿನಲ್ಲಿ ಬಿಡುತ್ತಾರೆ, ಪಂಚೆ, ತಂಬಿಗೆ ಎತ್ತಿಕೊಳ್ಳುತ್ತಾರೆ.

ಹೀಗೆ ಸಂಪ್ರದಾಯಿಕ ಕೋಲು ಮೇಳ ಮುಕ್ತಾಯವಾಗುತ್ತದೆ. ಈಗಲು ದೀಪಾವಳಿಯ ಕಾಲದಲ್ಲಿ ಮಲೆನಾಡಿನ ಭಾಗದಲ್ಲಿ ಈ ಕೋಲು ಮೇಳವಿರುತ್ತದೆ. ಕೋಲಾಟದಲ್ಲಿ ಅನೇಕ ವಿಧಗಳಿವೆ. ಚಕ್ರದ ಕೋಲಾಟ, ಒನಕೆ ಆಟ, ಮರಗಾಲು ಕೋಲಾಟ, ಕತ್ತಿಕಟ್ಟಿ ಆಡುವ ಕೋಲಾಟ.

### ಚಕ್ರದ ಕೋಲಾಟ

ಆರು ಅಡಿ ಉದ್ದದ ಅಡಿಕೆ ಮರದ ಗಟ್ಟಿಯಾದ ತುಂಡನ್ನು ಎರಡುವರೆ ಅಡಿ ಆಳ ನೆಲದಲ್ಲಿ ಹುಗಿದು ಅಡಿಕೆ ತುಂಡಿನ ಮಧ್ಯ ಭಾಗಕ್ಕೆ ಕಬ್ಬಿಣದ ಹಾರೆ ಇಳಿಸಿ, ಹಾರೆಯ ಮೇಲೆ ಚಕ್ರವನ್ನು ಇಡುತ್ತಾರೆ. ನಂತರ ಆರು ಜನ ಚಕ್ರದ ಮೇಲೆ ನಿಂತು, ಕುಳಿತು ಕೋಲು ಹುಯ್ಯುತ್ತಾರೆ. ಇನ್ನುಳಿದವರು, ಕೆಲವರು ಹಾಡುತ್ತಾ, ಕೆಲವರು ಚಕ್ರ ತಿರುಗಿಸುತ್ತಾರೆ. ಈ ಆಟ ಆಡುವಾಗ ೪ ಅಡಿ ಕೆಳಭಾಗದಲ್ಲಿಟ್ಟ ತುಂಬಿದ ಕೊಡವನ್ನು ಒಂದೇ ಕೈಯಿಂದ ಎತ್ತಿಕೊಂಡು ಹೆಗಲಮೇಲೆ, ಬಾಯಲ್ಲಿ ಕಚ್ಚಿಕೊಂಡು ಕೋಲು ಹೊಡೆಯುತ್ತಾರೆ.

### ಒನಕೆ ಕೋಲಾಟ

ಈ ಆಟಕ್ಕೆ ನಾಲ್ಕು ಛತ್ರ ಕುಟ್ಟುವ ಒನಕೆಗಳು ಬೇಕು. ೮ ಆಳು ಬೇಕು. ನಾಲ್ಕು ಜನ ಎದಿರು ಬದರು ನಿಂತುಕೊಂಡು ಎರಡು ಹೆಗಲ ಮೇಲೆ ಎರಡು ಒನಕೆಯ ತುದಿಗಳನ್ನು ಇಟ್ಟುಕೊಂಡು ಇಬ್ಬರ ಹೆಗಲ ಮೇಲೆ ಮತ್ತೊಬ್ಬ ಹತ್ತಿ ನಿಂತುಕೊಂಡು ಕೋಲು ಹೊಡೆಯುತ್ತಾರೆ. ಮೇಲೆ ನಿಂತವರು ಕೆಳಗಡೆ ನಿಂತವರಿಗೆ ಕೋಲು ಕೊಡುತ್ತಾರೆ. ಒಂಟಿಕೋಲು ಹಾಕುತ್ತಾರೆ. ಸಮಭಾರ ಬರುವವರೆಗೆ ಕರವಸ್ತ್ರಗಳನ್ನು ನಾಲ್ಕು ಜನ ಹಿಡಿದುಕೊಂಡು ಎದ್ದು ನಿಲ್ಲುತ್ತಾರೆ. ಸಮತೋಲನ ಸಿಕ್ಕ ನಂತರ ಕರವಸ್ತ್ರ ಬಿಡುತ್ತಾರೆ. ಒನಕೆಯ ಮೇಲೆ ನಿಂತು, ಮಲಗಿ ಕೋಲು ಹೊಡೆಯುತ್ತಾರೆ.

### ಮರಗಾಲು ಕೋಲಾಟ

ಮರಗಾಲು ಕೋಲಾಟಕ್ಕೆ ೮ ಅಥವ ೧೦ ಜನಗಳು ಬೇಕು. ೮ ಜನರಿದ್ದರೆ ನಾಲ್ಕು ಜನ ಮರಗಾಲು ಕಟ್ಟಿಕೊಳ್ಳುತ್ತಾರೆ. ಮರಗಾಲು ಎರಡು ಅಥವಾ ಮೂರು ಅಡಿ ಇರುತ್ತವೆ. ಹಗುರವಾದ ಮದ್ದಾಲೆ ಮರದಿಂದ ಮರಗಾಲು ತಯಾರಿಸುತ್ತಾರೆ. ಬಾಳೆಪಟ್ಟೆಯನ್ನು ನೀರಿನಲ್ಲಿ ನೆನಸಿಟ್ಟುಕೊಂಡು, ಈ ಪಟ್ಟೆಯಿಂದ ಕಾಲಿಗೆ ಕಟ್ಟಿಕೊಳ್ಳುತ್ತಾರೆ. ಅಥವಾ ಬಾರಾಪುರದ ಪಂಚೆಯಿಂದ ಕಾಲಿಗೆ ಕಟ್ಟಿಕೊಳ್ಳುವುದು ಉಂಟು. ಈ ರೀತಿ ನಾಲ್ಕು ಜನ ಮರಗಾಲಿನವರು, ನಾಲ್ಕು ಜನ ಸಾದಾ ಕೋಲಿನವರು ಒಬ್ಬರ ಪಕ್ಕ ಒಬ್ಬರಂತೆ ನಿಂತು ಕೋಲು ಹೊಡೆಯುತ್ತಾರೆ.

### ಕತ್ತಿ ಕಟ್ಟಿ ಆಡುವ ಕೋಲಾಟ

ಮಲೆನಾಡಿನಲ್ಲಿ ಗದ್ದೆಕೊಯ್ಯುವ ಕತ್ತಿಯನ್ನು ಬಲೆಕ್ಕೆಟ್ಟು ಎರಡು ತೋಳುಗಳಿಗೆ ಕಟ್ಟಿಕೊಂಡು ಕೋಲು ಹೊಡೆಯುತ್ತಾರೆ. ಇಲ್ಲಿ ತಂಡದಲ್ಲಿ ಇಬ್ಬರು ಅಥವಾ ಮೂರು ಜನ ಕಟ್ಟಿಕೊಳ್ಳುತ್ತಾರೆ. ನೋಡಲು ರೋಮಾಂಚನವಾಗಿರುತ್ತದೆ.

## ೬.೨. ಜನಪದ ಸಾಹಿತ್ಯ

ಜನಪದ ಕ್ಷೇತ್ರ ತುಂಬಾ ವಿಸ್ತಾರವಾದ, ಸಮೃದ್ಧವಾದ ನೆಲೆಗಟ್ಟನ್ನು ಹೊಂದಿದೆ. ಶಿಷ್ಟ ಸಾಹಿತ್ಯಕ್ಕಿಂತ ಮಿಗಿಲಾದ ಸೃಜನಶೀಲತೆ, ಪ್ರತಿಭಾಪೂರ್ಣತೆ ಹಾಗೂ ವೈವಿಧ್ಯತೆಯನ್ನು ಹೊಂದಿದೆ. ಹಳ್ಳಿಗಾಡಿನ ಅನಕ್ಷರಸ್ಥ ಜನ ತಮ್ಮ ಜೀವನದುದ್ದಕ್ಕೂ ಸಂತೋಷ, ದುಃಖ, ಸಂಭ್ರಮಗಳನ್ನು ಅನುಭವದ ಮೂಲಕ, ಭಾಷೆಯ ಮೂಲಕ ಸಹಜವಾಗಿ ಅಭಿವ್ಯಕ್ತಿಸಿದ ಭಾವಗಳು ಅನೇಕ ಪ್ರಕಾರಗಳಾಗಿ ಹೊರಹೊಮ್ಮಿವೆ. ಕಥೆ, ಗೀತೆ, ಗಾದೆ, ಒಗಟು ಮುಂತಾದವುಗಳ ಮೂಲಕ ಬದುಕಿನಲ್ಲಿ ಸಂತಸ ಕಂಡಿರುವ ಗ್ರಾಮೀಣ ಜನರು ಜಾನಪದ ಸಾಹಿತ್ಯ ಕ್ಷೇತ್ರಕ್ಕೆ ಭದ್ರಬುನಾದಿ ಹಾಕಿದ್ದಾರೆ. ಶಿಷ್ಟ ಕವಿಗಳ ರಚನೆಯಲ್ಲಿ ಉದ್ದೇಶವಿರುವುದರಿಂದ ಹೆಚ್ಚು ವಾಸ್ತವತೆ ಕಾಣುವುದಿಲ್ಲ. ಈ ಶಿಷ್ಟಪರಂಪರೆಗೆ ಮೂಲ ಜನಪದ ಕ್ಷೇತ್ರವೇ ಆಗಿದ್ದರೂ ನಿರ್ಲಕ್ಷ್ಯಕ್ಕೆ ಒಳಗಾಗಿದ್ದನ್ನು ಕಾಣಬಹುದು. ಆದರೆ ಮೂರು ನಾಲ್ಕು ದಶಕಗಳಿಂದೀಚೆಗೆ ಈ ಕ್ಷೇತ್ರದಲ್ಲಿ ಅಪಾರವಾದ

ಕೆಲಸವಾಗಿದೆ. ಈ ಅಧ್ಯಾಯದಲ್ಲಿ ಗಾದೆ ಮತ್ತು ಒಗಟುಗಳ ಬಗ್ಗೆ ಚರ್ಚಿಸಿದ್ದೇನೆ. ದೀವರ ಜನಾಂಗಕ್ಕೆ ಸಂಬಂಧಿಸಿದ ಕಥೆಗಳನ್ನು ಅಧ್ಯಾಯ ಎರಡರಲ್ಲಿ ಚರ್ಚಿಸಿದ್ದೇನೆ. ಗೀತೆಗಳನ್ನು ಸಂಗ್ರಹಿಸಿ ಅನುಬಂಧದಲ್ಲಿ ಸೇರಿಸಲಾಗಿದೆ.

## ಗಾದೆಗಳು

ಗಾದೆಗಳು ಜನಪದ ಸಾಹಿತ್ಯದ ಶ್ರೀಮಂತಿಕೆಯನ್ನು ಎತ್ತಿಹಿಡಿದಿವೆ. ಗಾದೆಗಳ ಸೃಷ್ಟಿ ಯಾವ ಕ್ಷಣದಲ್ಲಾದರು ಆಗಬಹುದು. ಮಾತನಾಡುವಾಗ, ನಾನಾವ್ಯಕ್ತಿಗಳ ಜೊತೆ ಕಾರ್ಯಮಗ್ನನಾದಾಗ ಕೆಲವು ಜನಪದರು ರಸವತ್ತಾದ ಸತ್ವ ಪೂರ್ಣವಾದ ಗಾದೆಗಳನ್ನು ಹೇಳಿ ರಸ ನಿಮಿಷದಲ್ಲಿ ಉಲ್ಲಾಸದ ವಾತಾವರಣ ನಿರ್ಮಾಣ ವಾಗುವಂತೆ ಮಾಡುತ್ತಾರೆ. ಗಾದೆಗಳು ಅನಾದಿ ಕಾಲದಿಂದ ಎಲ್ಲಾ ಜನಾಂಗಗಳಲ್ಲಿಯು ಬಳಕೆಯಲ್ಲಿದೆ. ಗಾದೆ ವಾಮನವಾದರು ಇದರ ಅರ್ಥ ವ್ಯಾಪ್ತಿ ತ್ರಿವಿಕ್ರಮವಾಗಿದೆ.

ಹಲವರ ಅನುಭವ ಒಬ್ಬನ ವಿವೇಕಯುತವಾದ ಮಾತು ಗಾದೆ ಎನ್ನಬಹುದು. ಬದುಕಿನ ಓರೆಕೋರೆಗಳನ್ನು ತಿದ್ದುವ ಪ್ರಯತ್ನವನ್ನು ಗಾದೆ ಮಾಡುತ್ತವೆ. ಗಾದೆಗಳು ಜನಾಂಗದ ಆರ್ಥಿಕ ಸ್ಥಿತಿ, ಜೀವನಕ್ರಮ, ಪರಿಸರ ಎಲ್ಲವೂ ಮಿಳಿತವಾಗಿರುತ್ತದೆ. ಗಾದೆಗಳಲ್ಲಿ ಅಡಗಿರುವ ವಿಷಯವನ್ನು ಅರ್ಥಗರ್ಭಿತವಾದ ಕೆಲವಾರು ವಿಷಯಗಳ ಮೇಲೆ ಬಳಸುವ ವಿಚಾರಧಾರೆಯಾಗಿದೆ. ಈ ಗಾದೆಗಳು ಓದುಗರಿಗೆ ಕೇಳುಗರಿಗೆ ಆನಂದ ನೀಡುತ್ತವೆ.

ದೀವರ ಜನಾಂಗದ ಬದುಕಿನುದ್ದಕ್ಕೂ ಮತ್ತು ಜನಾಂಗವನ್ನೆ ಕುರಿತ ಗಾದೆಗಳು, ಅನ್ಯ ಜನಾಂಗದ ದೃಷ್ಟಿಕೋನಗಳು ಎಲ್ಲವು ಕೆಳಗಿನ ಗಾದೆಗಳಲ್ಲಿ ಮಿಳಿತವಾಗಿದೆ. ಈ ಜನಾಂಗದ ಆರ್ಥಿಕ, ಸಾಮಾಜಿಕ, ಧಾರ್ಮಿಕ, ರಾಜಕೀಯ ಸ್ಥಿತಿಗತಿಗಳನ್ನು ಗಾದೆಗಳು ಪ್ರತಿಬಿಂಬಿಸುತ್ತವೆ.

## ದೀವರ ಜನಾಂಗದ ಕುರಿತ ಗಾದೆಗಳು

'ಸಾವಿರ ತಲೆ ಹೋದರು ದೀವರ ತಲೆ ಹೋಗಲ್ಲ'

ದೀವರ ವೀರ ಪರಂಪರೆಯನ್ನು ಮತ್ತು ಮೂಲತಃ ಸೈನಿಕರಾಗಿದ್ದರು ಎಂಬುದು ತಿಳಿದುಬರುತ್ತದೆ. ಈ ಗಾದೆಯು ಮತ್ತೊಂದು ಅರ್ಥವನ್ನು ಧ್ವನಿಸುತ್ತದೆ. ರಣರಂಗದಲ್ಲಿ ಸತ್ತ ಸೈನಿಕರ ಶವದ ಮಧ್ಯೆ ಸತ್ತವರಂತೆ ಬಿದ್ದುಕೊಂಡು ತಮ್ಮ ತಲೆ ಕಾಯ್ದುಕೊಂಡರು. ಸಾವಿಗೆ ಅಂಜುವ ಇವರ ಗುಣವನ್ನು ನೋಡಿ ಈ ಗಾದೆ ಸೃಷ್ಟಿಯಾಗಿರಲೂಬಹುದು.

'ಬ್ರಾಹ್ಮಣ ಮಾಡೋದು ಬಿಂದಕ್ಕೆ, ದೀವರು ಮಾಡೋದು ದಂಡಕ್ಕೆ, ಹೊಲೆಯ ಮಾಡೋದು ಹೆಂಡಕ್ಕೆ'

ಈ ಮೂರೂ ಜನಾಂಗಗಳ ಆರ್ಥಿಕ ಸ್ಥಿತಿಗತಿಯನ್ನು ತೋರಿಸುತ್ತವೆ. ಎಷ್ಟು ದುಡಿದರು ಅಷ್ಟೇ, ಆದಾಯ ಈ ರೀತಿ ಖರ್ಚಿಗೆ ಸಮವಾಗುತ್ತದೆ ಎಂದು ಸೂಚಿಸುತ್ತವೆ. ಬ್ರಾಹ್ಮಣರ ದುಡಿಮೆ ತಿಥಿ ಊಟಕ್ಕೆ ಸಮನಾಗುತ್ತದೆ. ದೀವರು ಗೇಣಿ ರೈತರಾಗಿರುವುದರಿಂದ ಇವರ ದುಡಿಮೆಯು ಮೂರನೇ ಎರಡು ಭಾಗ

ಗೇಣಿರೂಪದಲ್ಲಿ ಭೂಮಾಲಿಕರಿಗೆ ಸಂದಾಯವಾಗುವುದರಿಂದ ಇವರ ದುಡಿಮೆ ದಂಡದ ರೂಪದಲ್ಲಿಯೂ ಹಾಗೂ ಗಲಾಟೆ ತಂಟೆ ತಕರಾರುಗಳಿಗೆ ದಂಡದ ರೂಪದಲ್ಲಿ ಇವರ ದುಡಿಮೆ ಸಂದಾಯವಾಗುತ್ತದೆ. ಹೋಲಿಯ ಮಾಡುವುದು ಹೆಂಡಕ್ಕೆ ಹೇಗೆ ಸಮನಾಗುತ್ತದೆ ಎಂದರೆ ಇತರಿಗೆ ಯಾವುದೇ ಸ್ವತ್ರಂತರದ ಅವಕಾಶಗಳು ದೊರೆಯದೇ ಇರುವುದರಿಂದ ದುಡಿಮೆಯ ಹಣ ಹೆಂಡಕ್ಕೆ ವ್ಯಯವಾಗುತ್ತದೆ. ಆದರೆ ಈ ಕಾಲಘಟ್ಟದಲ್ಲಿ ದೀವರು ಗೇಣಿ ವ್ಯವಸ್ಥೆಯಿಂದ ಭೂಮಾಲಿಕ ವ್ಯವಸ್ಥೆಗೆ ಬದಲಾಗಿದ್ದಾರೆ. ಪರಿಶಿಷ್ಟ ಜಾತಿಯ ಜನಾಂಗಗಳಿಗೆ ಇಂದು ಮೀಸಲಾತಿ ಅವಕಾಶವಿರುವುದರಿಂದ ಆರ್ಥಿಕ ಬದಲಾವಣೆ ಈ ವರ್ಗದಲ್ಲಿಯೂ ಆಗಿದೆ. ಈ ಗಾದೆಯು ಪ್ರಸ್ತುತ ದಿನಗಳಿಗೆ ಸರಿ ಹೊಂದಲಾರದು.

ಅನೇಕ ಗಾದೆಗಳು ಈ ಜನಾಂಗದಲ್ಲಿ ಇಂದಿಗೂ ಬಳಕೆಯಾಗುತ್ತಾ, ಸಂದರ್ಭಕ್ಕೆ ತಕ್ಕಂತೆ ಒಂದು ಸನ್ನಿವೇಶವನ್ನು ಮೊನಚುಗೊಳಿಸುತ್ತಾ, ಸಮಾಜವನ್ನು ತಿದ್ದುವ, ನೈಜ ಸತ್ಯವನ್ನು ಪ್ರತಿಬಿಂಬಿಸುವ ವಿವೇಕ ಪೂರ್ಣ, ಅರ್ಥಪೂರ್ಣ, ಶಕ್ತ ಈ ಚುಟುಕಾದ ಗಾದೆಯಲ್ಲಿದೆ.

## ಒಗಟುಗಳು

ಒಗಟುಗಳು ತೀಕ್ಷ್ಣವಾದ ಅರ್ಥವನ್ನು ಗೂಡಾರ್ಥವನ್ನು ಹೊಂದಿರುತ್ತವೆ. ಇವನ್ನು ಪ್ರಶ್ನೆಯಾಗಿ ಕೇಳಲಾಗುತ್ತದೆ. ಇಬ್ಬರ ಅಥವಾ ಜಾಸ್ತಿ ಜನರ ನಡುವಿನ ಸಂವಾದ, ಜನಪದರ ಬುದ್ಧಿಮತ್ತೆಯನ್ನು ಪರೀಕ್ಷಿಸುವ, ಚುರುಕುಗೊಳಿಸುವ, ಒಂದು ಆಟ, ಕೆಲಸ ಮಾಡುವಾಗ, ಹರಟೆ ಹೊಡೆಯುವಾಗ, ಸೃಷ್ಟಿಯಾಗುತ್ತವೆ. ಈ ಪ್ರಸಂಗಗಳು ಹಾಸ್ಯಮಯವಾಗಿ, ಮೇಲ್ನೋಟಕ್ಕೆ ಅಶ್ಲೀಲತೆ ಕಂಡರೂ ಉತ್ತರ ತಿಳಿದಾಗ ಅಚ್ಚರಿ ಕಂಡು ಬರುತ್ತದೆ. ಬದುಕಿನಲ್ಲಿ ಕಾಣುವ ಕೆಲ ವಸ್ತುಗಳಿಗೆ ಸಾಮ್ಯತೆಯನ್ನು ಸೃಷ್ಟಿಸಿ, ಹೇಳುಗ ಕೇಳುಗನಿಗೆ ಕೆಲಕಾಲ ಗೊಂದಲಗೊಳಿಸಿ ಉತ್ತರ ಪಡೆಯಲಾಗುತ್ತದೆ. ಅಂತಹ ಕೆಲ ಒಗಟುಗಳನ್ನು ಇಲ್ಲಿ ಕೊಡಲಾಗಿದೆ.

## ದೀವರ ಒಗಟುಗಳು

'ಅವನದು ನೆಟ್ಟಗೆ ಇವಳದು ಪುಟ್ಟಗೆ' - ದೀವರು ಗಂಡಸರು ಹಣೆಗೆ ಧರಿಸುವ ನಾಮ ಹೆಂಗಸರು ಹಣೆಗೆ ಧರಿಸುವ ಕುಂಕುಮ

ಗಿಡ್ಡಿ ಕುದ್ದಿದರೆ ಮನೆತುಂಬ ಮಕ್ಕಳು - ಬೆಳ್ಳುಳ್ಳಿ ಬೇಳೆ

'ಒಂದು ಓಡುತ್ತದೆ, ಒಂದು ಆಡುತ್ತದೆ - ಒಂದು ಕುತಗಂಡ ನೋಡುತ್ತದೆ' - ನೀರು, ಮೀನು, ಕಲ್ಲು (ಹೊಳೆಯಲ್ಲಿ)

'ನಮ್ಮನೆಗೆ ಒಂದೇ ಕಂಬ' - ಅಣಬೆ

'ಕರೆಕಾನಾಗೆ ಕರೆ ಆನೆ ಮರಿ ಹಾಕಿತ್ತು' - ಹೇನು, ಸೀರು (ಕರೆ-ಕಪ್ಪು)

'ಅಪ್ಪನ ದುಡ್ಡು ಎಣಿಸಕಾಗಲ್ಲ, ಅವ್ವನ ಹಾಸಿಗೆ ಮಡಚಕಾಗಲ್ಲ' - ನಕ್ಷತ್ರ, ಆಕಾಶ

'ದುಡ್ಡು ಕೊಟ್ಟು ದುಃಖ ಪಡೆ' - ನೀರುಳ್ಳಿ

'ಮಾತುಕತೆ ಯಾವಾಗ ಎದುರ ಬದರ ಕೂತಾಗ - ಅಳುವ ಕರೆಯುವ ಯಾವಾಗ ಅರ್ಥ ಹೊಕ್ಕಾಗ - ಬಳೆಗಾರ ನಕ್ಕು ನಲಿಯದು ಯಾವಾಗ ಪೂರ್ತಿ ಆದಾಗ' - ಬಳೆ ಧರಿಸುವ ಘಟನೆ

ಈ ತೆರನಾದ ವೈವಿಧ್ಯಮಯ ಒಗಟನ್ನು ದೀವರ ಜನಾಂಗದಲ್ಲಿ ಕಾಣಬಹುದು. ಗಾದೆಗಳಂತೆ, ಒಗಟುಗಳು ಜನಪದ ಸಾಹಿತ್ಯಕ್ಕೆ ಜನಾಂಗಗಳ ಕೊಡುಗೆ ಎನ್ನಬಹುದು. ಈ ಒಗಟುಗಳು ಮನೋರಂಜನೆಯನ್ನು, ಉಲ್ಲಾಸವನ್ನು ಕೊಡುತ್ತವೆ.

## ಭಾಷೆ

ಜನಾಂಗದ ಗುರುತಿಸುವಿಕೆಗೆ ಪ್ರಾದೇಶಿಕತೆ, ಭೌಗೋಳಿಕ ನೆಲೆ ಮತ್ತು ಆಚರಣೆಗಳು ಎಷ್ಟು ಮುಖ್ಯವೋ ಅಷ್ಟೇ ಮುಖ್ಯ ಆ ಜನಾಂಗದ ಭಾಷೆ. ಇವರು ಕನ್ನಡವನ್ನೇ ಮಾತನಾಡುತ್ತಾರೆ. ಕೆಲವು ಶಿಷ್ಟ ಪದಗಳು ಹೇಗೆ ಗ್ರಾಮ್ಯ ಭಾಷೆಯಲ್ಲಿ ವಿಶಿಷ್ಟ ಶೈಲಿಯನ್ನು ಪಡೆಯುತ್ತವೆ ಎಂಬುದು ಈ ಜನಾಂಗದ ವಿಶೇಷ. ಒಂದು ಜನಾಂಗ ಸ್ವತಂತ್ರತೆಯನ್ನು ಪಡೆದುಕೊಳ್ಳುವಾಗ ಅವರ ಮಹತ್ವ ಜನಸಂಖ್ಯೆಯಿಂದಲ್ಲದೆ, ಸಾಹಿತ್ಯ ಮತ್ತು ಬಳಸುವ ಭಾಷಾಶೈಲಿ ಮುಖ್ಯ. ಸಾಹಿತ್ಯಿಕ ನೆಲೆಯಿಂದ ದೀವರ ಭಾಷೆ ವಿಶಿಷ್ಟವಾದುದು. ಮಲೆನಾಡಿನಲ್ಲಿ ಎರಡು ವಿಶಿಷ್ಟ ಕನ್ನಡಭಾಷೆಯನ್ನು ಮಾತನಾಡುವ ಜನಾಂಗಗಳು ಎಂದರೆ ಹವ್ಯಕ ಬ್ರಾಹ್ಮಣರ 'ಹವ್ಯಕ ಭಾಷೆ' ದೀವರ ಗ್ರಾಮ್ಯ ಭಾಷೆ ಬಹಳ ಲಯಗಾರಿಕೆಯನ್ನು ಹೊಂದಿದೆ.

'ಹವ್ಯಕ' ಭಾಷೆ ಬ್ರಾಹ್ಮಣರು ತಮ್ಮ ತಮ್ಮವರೊಂದಿಗೆ ಸುಲಲಿತವಾಗಿ ಮಾತನಾಡುತ್ತಾ ಅದಕ್ಕೆ ಪೋಷಣೆ ಮತ್ತು ಬೆಳವಣಿಗೆಗೆ ಪೂರಕ ವಾತಾವರಣ ನಿರ್ಮಿಸಿದ್ದಾರೆ. ಆದರೆ ದೀವರ ಗ್ರಾಮ್ಯ ಭಾಷೆಯನ್ನು ಇತ್ತೀಚಿನ ದಿನಗಳಲ್ಲಿ ಯುವಜನಾಂಗ ಮಾತನಾಡುವುದಿಲ್ಲ. ನಗರದ ಭಾಷಾಶೈಲಿಯ ಅನುಕರಣೆ ಮತ್ತು ಗ್ರಾಮ್ಯ ಭಾಷೆಯನ್ನು ಮಾತನಾಡುವುದು ಕೀಳರಿಮೆ ಎಂಬ ಭಾವನೆ ಇರುವುದರಿಂದ ಭಾಗಶಃ ಈ ಶೈಲಿ ಮಾಯವಾಗುತ್ತಿದೆ. ಇದಕ್ಕೆ ಒಂದು ಕಾರಣ ಹೊರಜಗತ್ತು ಈ ಶೈಲಿಯನ್ನು ಬಳಸುತ್ತಿದ್ದ ದೀವರನ್ನು ಒಂದು ರೀತಿ ಅಪಹಾಸ್ಯ ಮಾಡುವ ರೀತಿ ನೋಡುತ್ತಿದ್ದುದರಿಂದ ಈ ಶೈಲಿ ಕಣ್ಮರೆಯಾಗುತ್ತಿದೆ ಎನ್ನಬಹುದು. ಇಂದು ಜನಾಂಗಗಳು ಆರ್ಥಿಕವಾಗಿ ಮುಂದುವರೆದಂತೆ ಹಿಂದುಳಿದ ಜನಾಂಗಗಳು ಬದಲಾವಣೆ ಹೊಂದುವುದು ಸಹಜವೇ ಆಗಿದೆ. ಆರ್ಥಿಕವಾಗಿ ಮುಂದುವರಿದ ಜನಾಂಗಗಳ ಭಾಷಾಶೈಲಿ ಬದಲಾಗದೆ ಉಳಿಯುವುದಕ್ಕೆ ಕಾರಣ ಅವರು ತಮ್ಮನ್ನು ತಾವು ಗುರುತಿಸಿಕೊಳ್ಳುವುದು ಎನ್ನಬಹುದು.

ಸಾಹಿತ್ಯಿಕ ನೆಲೆಯಿಂದ ದೀವರ ಜನಾಂಗದ ಹಾಡು-ಹಸೆ, ಗಾದೆ-ಒಗಟು ಮತ್ತು ಕೋಲಾಟ-ಡೊಳ್ಳು ಕುಣಿತದ ಕಲೆಗಳು ಶ್ರೀಮಂತಿಕೆಯನ್ನು ಪಡೆದುಕೊಂಡಿದೆ. ಮೌಖಿಕ ಸಾಹಿತ್ಯವನ್ನು ಹೊಂದಿರುವ ದೀವರು ನಗರ ಸಂಸ್ಕೃತಿಗೆ ಬದಲಾವಣೆ ಹೊಂದುತ್ತಿರುವುದರಿಂದ ಇವುಗಳನ್ನು ಸಂರಕ್ಷಿಸುವ, ಬೆಳೆಸುವ, ಉಳಿಸುವ ಕಾರ್ಯ ನಡೆಯಬೇಕಾಗಿದೆ.

## ಕೆಲವು ವಿಶಿಷ್ಟ ಪದಗಳು ಮತ್ತು ಅರ್ಥ

ಗನಾಕೆ - ಗನ - ಘನ - ಆರೋಗ್ಯವಾಗಿದ್ದಿರು

ಒತ್ಲ - ಒತ್ಲ - ಔತ್ಣ - ಔತಣ

ಬಾನ - ಅನ್ನ

ಆಂಬ್ರ - ಪದಾರ್ಥ (ಸಾರು-ಪಲ್ಯ)

ಗೌಲು - ಮಾಂಸದ ಅಡುಗೆ

ಮುದೌವ್ವ - ಅಜ್ಜಿ

ಮುದ್ಯಪ್ಪ - ಅಜ್ಜ

ಅಪ್ಪಿ - ಮಗ, ಹುಡುಗ, ಹುಡುಗಿ

ಜ್ರಿಸ್ತವಾರ್ - ಗುರುವಾರ

ಆಯಿತ್‌ವಾರ - ಭಾನುವಾರ

ಜೈಗು - ಸಂಜೆ, ರಾತ್ರಿ

ಹೊತಾರೆ - ಮುಂಜಾನೆ

ಬಸಾರೆ - ಸಂಜೆ

ಮಜ್ಜಾನ - ಮಧ್ಯಾಹ್ನ

ಸುಡ್ಲು - ದೀಪ

ಮಗಿ - ಮಡಕೆ

ಬಾಡೂಟ - ಮಾಂಸದೂಟ

ಬರಹುಡುಗ - ಬರಮಾವ - ಓದುಬರಹ ಕಲಿತವ

ಮಕ - ಮುಖ

ಮುಕುಳಿ - ತಿಕ

ಸಾವಂತಿ - ಸಾಮಂತ್ರಿ - ಸಾವಿತ್ರಿ

ದೇಸ - ದೇಶ

ಸಂದಾಕೆ - ಚೆಂದಾಕೆ - ಚೆನ್ನಾಗಿದ್ದಿರಾ

ಬಲ್ಲಿ - ಬಸ್ಸಿ

ಸಾಲಿ - ಶಾಲೆ

ಈಸ್ಕೂಲು - ಶಾಲೆ, ಸ್ಕೂಲು

ಬರಸಯ್ಯ - ಶಿಕ್ಷಕ

ಮೆತ್ತು - ಅಟ್ಟ, ಮೇಲ್ಮನೆ

ಕವಳ - ಎಲೆ ಅಡಿಕೆ

ಬವುಲಿಗೆ - ಬಯಲು, ಊರು

ಜಳಕ - ಸ್ನಾನ

ಸಾಲಿ - ಸೀರೆ, ವಸ್ತ್ರ, ಶಲ್ಯ

ಕನ್ನೆ - ಕನ್ಯೆ

ಕೂರೆ - ಹೇನು

ಬಾಯಿಗೆ - ಕವಳ

ಯತ್ತಾಗೆ - ಯಾವ ಕಡೆಗೆ

ಬಾಡು - ಮಾಂಸ

ಬಾಡ್ಯ - ಬಡಕಲು, ಸ್ವಂತ ನಿಲುವು ಇಲ್ಲದವ

ಬದ್ದ - ಸತ್ಯ

ಬದ್ದೆ - ಬುಡ

ಬಧ - ಗದ್ದೆಯ ಅಂಚಿನ ಪಾಳಿ, ಒಡ್ಡು-ಕಟ್ಟೆ

ತಾವು - ಜಾಗ

ಬಾಗ - ಅರ್ಧ

ಬ್ಯಾರೆ - ವಿಭಕ್ತ, ಬೇರೆ

ಜನವು - ಜನನ, ಹುಟ್ಟು

ಕರೆವು - ನಿಜ

ಕರಾವು - ಹಾಲು, (ಹೈನುಗಾರಿಕೆ)

ಬ್ಯಾನೆ - ನೋವು

ರಾಮು - ರೋಮ, ಕೂದಲು

ರಯಿತ - ರಕ್ತ

## ಅಡಿಟಿಪ್ಪಣಿಗಳು

೧. ಪ್ರಶಸ್ತಿ ವಿಜೇತೆ ಹಾವಿಮನೆ ಕಲ್ಲವ್ವ, ಬಳೆಗಾರ ಕರಿಯವ್ವ, ಶಾಗೋಟಿ ಮಾಸ್ತವ್ವ, ನೆಲ್ಲೂರು ಕಾಟ ಕಲ್ಲವ್ವ ಮುಂತಾದ ಅನೇಕ ಮಹಿಳೆಯರಿದ್ದಾರೆ.

೨. ಮಧ್ಯಪ್ರದೇಶ ಮತ್ತು ಬಿಹಾರ ರಾಜ್ಯಗಳಲ್ಲಿ ಗ್ರಾಮೀಣ ಮಹಿಳೆಯರು ಬರೆಯುವ ಮಧುಬನಿ ಮತ್ತು ಮಹಾರಾಷ್ಟ್ರ ರಾಜ್ಯದ ವರ್ಲಿ ಬುಡಕಟ್ಟು ಜನಾಂಗದವರು ಬರೆಯುವ ಚಿತ್ರಗಳು ಸುಂದರವಾಗಿ ಇದೇ ರೀತಿಯವು.

೩. ಗುರಗಿ ಕಾಯಿಯ ಸಿಪ್ಪೆಯಿಂದ ತಯಾರಿಸಿದ ಬಣ್ಣ - ಹಳದಿ ಚಿತ್ತಾರವಾಗುತ್ತದೆ.

೪. ಅಕ್ಕಿಯನ್ನು ನೆನೆಸಿ ರುಬ್ಬಿ ಬರೆಯುವ ಚಿತ್ತಾರ - ಅಕ್ಕಿಯ ಚಿತ್ತಾರ (ಬಿಳಿಬಣ್ಣ)

೫. ಅಕ್ಕಿಯನ್ನು ಕಪ್ಪಾಗುವಂತೆ ಹುರಿದು ರುಬ್ಬಿ, ಬರೆಯುವ ಚಿತ್ತಾರ - ಕಪ್ಪಿನ ಚಿತ್ತಾರ.

೬. ಕೆಮ್ಮಣ್ಣಿನಿಂದ ಬರೆಯುವ ಚಿತ್ತಾರ - ಕೆಮ್ಮಣ್ಣಿನ ಚಿತ್ತಾರ.

೭. ದೀವರ ಹಸೆ : ವಿವರ ನೀಡಿದವರು, ಕೆಳದಿ ಗೌರಮ್ಮ, ಮಾಲ್ತೇಶಮನೆ ಮಂಜಪ್ಪ, ಕೆಳದಿ. ಸಂಗ್ರಹ : ಬಂದಗದ್ದೆ ರಾಧಾಕೃಷ್ಣ.

೮. ಬೀರದೊಳ್ಳು - ಬೀರ ದೇವರ ಡೊಳ್ಳು ಎಲ್ಲಾ ಡೊಳ್ಳಿಗಿಂತ ಸ್ವಲ್ಪ ದೊಡ್ಡದು. ದೇವಸ್ಥಾನದ ಅಟ್ಟದ ಮೇಲೆ ಇಟ್ಟಿರುತ್ತಾರೆ.

೯. ಗುಲ್ಬರ್ಗದ ಕಡೆ ಕುಳಿತು ಕುಪ್ಪಳಿಸಿ ಡೊಳ್ಳು ಬಾರಿಸುವ ಕ್ರಮಕ್ಕೆ 'ಕುಂತು ಪಾರ' ಎನ್ನುವರು.

೧೦. ಕುರುಬ ಜನಾಂಗದಲ್ಲಿ ಡೊಳ್ಳಿಗೆ ಸಂಬಂಧಿಸಿದಂತೆ ಅನೇಕ ಪುರಾಣ ಕಥೆಗಳಿವೆ. ಅನೇಕ ಕಸರತ್ತುಗಳು, ತಂತ್ರಗಳು, ವಿಶಿಷ್ಟ ವೇಷಭೂಷಣಗಳು, ಡೊಳ್ಳಿನ ಪದಗಳು ಇವೆ. ಮೈಲಾರಲಿಂಗನ ಆರಾಧನೆ ಮತ್ತು ಜಾತ್ರೆಯ ಸಂದರ್ಭದಲ್ಲಿ ಕುರುಬರು ಡೊಳ್ಳು ಬಾರಿಸುತ್ತಾ ಹಾಡುತ್ತಾರೆ.

೧೧. ದೀವರು ಬಗಟಿಗೆ - ಬಡಚಿಕಡ್ಡೆ ಎಂದು ಕರೆಯುತ್ತಾರೆ.

೧೨. ಬೆಸ್ತವಾರ - ಬೃಹಸ್ಪತಿವಾರ, ಗುರುವಾರ

# ಅಧ್ಯಾಯ ೭

# ವೃತ್ತಿ

## ೭.೧. ಸಾಂಪ್ರದಾಯಿಕ ವೃತ್ತಿ

ಮೂಲತಃ ದೀವರು ಬೇಟೆಯಾಡಿ ಬದುಕು ಸಾಗಿಸುತ್ತಿದ್ದ ಜನಾಂಗ. ಮೊದಲು ಕಾಡಿನಲ್ಲಿ ವಾಸ ಮಾಡುತ್ತಿದ್ದರು. ತದನಂತರ ಆಸುಪಾಸು ಒಂದೇ ಜಾಗದಲ್ಲಿ ಗುಂಪಾಗಿ ಮನೆ ನಿರ್ಮಿಸಿ ಬದುಕು ಸಾಗಿಸುತ್ತಿದ್ದಿರಬಹುದು. ಯಾಕೆಂದರೆ ಈಗಲೂ ದೀವರ ಜನಾಂಗದಲ್ಲಿ ಚಾಪೆ ನೇಯುವ ಜನರನ್ನು ಕಾಣಬಹುದು. ಇವರ ಮುಖ್ಯ ಕಸುಬು ಬೇಟೆ ಮತ್ತು ಹೆಂಡ ಇಳಿಸುವುದು. ಬಗನೆ ಮರದಿಂದ ಹೆಂಡವನ್ನು ತೆಗೆದು ಸೇವಿಸುತ್ತಿದ್ದರು. ಇದರ ನಂತರ ಇವರು ಕಾಡಿನ ಪರಿಕರಗಳನ್ನು ಉಪಯೋಗಿಸಿ ವಸ್ತುಗಳ ತಯಾರಿಕೆಗೆ ತೊಡಗಿರಬಹುದು. ಈಗಲೂ ಸಹಿತ ಕೆಲ ದೀವರು ಹೆಂಡವನ್ನು ತಯಾರಿಸುತ್ತಾರೆ ಮತ್ತು ಮಾರಾಟ ಮಾಡುತ್ತಾರೆ. ಈಗ ಬೆಲ್ಲದಿಂದ ಹೆಂಡವನ್ನು ತಯಾರಿಸುವುದು ರೂಢಿಯಲ್ಲಿದೆ.

ಇವರು ಮೊದಲು ಬೇಟೆಯನ್ನು ಆಹಾರಕ್ಕೆ ಮಾತ್ರ ಉಪಯೋಗ ಮಾಡುತ್ತಿರಬೇಕು. ಬೇಟೆಯಲ್ಲಿ ಅನೇಕ ವಿಧಗಳಿವೆ. ಒಂದು ಗುಂಪಾಗಿ ಹೋಗಿ ಪ್ರಾಣಿಯನ್ನು ಬೇಟೆಯಾಡುವಂತಹದು. ಎರಡನೆಯದು ಸಣ್ಣಪುಟ್ಟ ಸೊಪ್ಪಿನ ಮರೆಮಾಡಿ ಬಳ್ಳಿಯ ಉರುಳು ಮಾಡಿ, ಮೊಲ ಮುಂತಾದ ಪ್ರಾಣಿಗಳನ್ನು ಹಿಡಿಯುವುದು, ಮೀನು ಹಿಡಿಯುವ ಪದ್ಧತಿಯು ಸಾಂಪ್ರದಾಯಿಕ ರೀತಿಯಲ್ಲಿ ಇದೆ. ಮೀನನ್ನು ಹಿಡಿಯಲು, ಗಾಣ, ಮಂಕರಿ, ಗುಣಿ, ಬುಟ್ಟಿ, ಬಿದಿರು ಅಂಡೆ, ಮುಂತಾದ ಸಾಧನಗಳಿಂದ ಮೀನು ಹಿಡಿಯುವುದು, ಅಥವಾ ಕಾರೆಕಾಯಿ ಸೊಪ್ಪನ್ನು ನೀರಿನಲ್ಲಿ ಮಿಶ್ರ ಮೀನನ್ನು ಹಿಡಿಯುವುದು. ಹೀಗೆ ಇವರು ಮೊದಲು ಬೇಟೆ, ಹೆಂಡ ತಯಾರಿಸುವಿಕೆ, ಮುಂತಾದ ಸಾಂಪ್ರದಾಯಿಕ ವೃತ್ತಿಯನ್ನು ಅವಲಂಬಿಸಿದ್ದರು.

## ೭.೨. ಅವಲಂಬಿತ ವೃತ್ತಿ

ಕೆಳದಿ ಅರಸರ ನಂತರ ಈ ಭಾಗದ ಭೂಮಿಯು ಒಡೆತನ ಬ್ರಾಹ್ಮಣ, ವೀರಶೈವರ ಪಾಲಾಗುತ್ತದೆ. ಕಾಡಿನಲ್ಲಿ ವಾಸಿಸುತ್ತಿದ್ದ ಜನಾಂಗಕ್ಕೆ ಕೆಲವು ತೊಂದರೆಗಳು ಕಾಡಿರಬಹುದು. ಪ್ರಬಲರಾದ ಶೈವರು ಕಾಡಿನ ಬೇಟೆಗೆ ನಿಷೇಧ ಹೇರಿರಬಹುದು. ಅಥವಾ ಅವರು ಕಾಡಿನಿಂದ ನಾಡಿಗೆ ಬಂದಾಗ ಜೀವನ ನಿರ್ವಹಣೆಗೆ ವೀರಶೈವರನ್ನು ಆಶ್ರಯಿಸಿರಬಹುದು. ಕಂದಾಯ ಪದ್ಧತಿಯಿಂದಾಗಿ ಜಮೀನು ಕೆಲವೇ ಕೆಲವು ಜನಾಂಗಗಳ ಅಧೀನಕ್ಕೆ ಒಳಪಟ್ಟಿತ್ತು. ರಾಜರ ನಂತರ ಬಂದ ಬ್ರಿಟಿಷರು ಇದೇ ಪದ್ಧತಿಯನ್ನು ಮುಂದುವರಿಸಿದರು.

ಒಟ್ಟಾರೆ ಏನೋ ಒಂದು ಜರುಗಿ ಇವರು ಶೈವರ ಜಮೀನಿನಲ್ಲಿ ಕೆಲಸ ಮಾಡಲು ಆರಂಭಿಸಿರಬಹುದು. ಹೀಗೆ ಸ್ವೇಚ್ಛೆಯಾಗಿ ಬದುಕು ಸಾಗಿಸುತ್ತಿದ್ದ ಜನಾಂಗ ಬ್ರಾಹ್ಮಣರ, ಶೈವರ ಅಧೀನಕ್ಕೆ ಒಳಪಡುತ್ತದೆ. ಇಲ್ಲಿ ಇವರು ಮೊದಲು ಜೀತದ ಆಳುಗಳಾಗಿ ಕೆಲಸಕ್ಕೆ ಇರುತ್ತಾರೆ. ತದನಂತರ ದೀವರಿಗೆ ವೀರಶೈವರು ಜಮೀನನ್ನು ಗೇಣಿಗೆ ಕೊಟ್ಟಿರುತ್ತಾರೆ. ಹೀಗೆ ದೀವರಿಗೆ ಭೂಮಿ ಗೇಣಿಯ ಭೂಮಿಯಾಗಿ ದೊರೆಯುತ್ತದೆ.

ದೀವರು ಸಾಂಪ್ರದಾಯಿಕ ವೃತ್ತಿಯಿಂದ ಅವಲಂಬಿತ ವೃತ್ತಿಯನ್ನು ಆಶ್ರಯಿಸುತ್ತಾರೆ. ಇಲ್ಲಿ ಇವರು ಬೇಟೆ-ಹೆಂಡ-ಕೃಷಿ ಈ ರೀತಿ ಕಾಲದಿಂದ ಕಾಲಕ್ಕೆ ಬದಲಾಗುತ್ತ ಹೋಗುತ್ತಾರೆ. ಕೃಷಿ ಅವಲಂಬಿತ ವೃತ್ತಿಯಾಗಿದೆ. ಕೃಷಿಯಲ್ಲಿ ಅನೇಕ ಹಂತಗಳನ್ನು ದಾಟುತ್ತಾರೆ. 'ಜೀತ ಪದ್ಧತಿ' ಎಂದರೆ ಸಾಯುವವರೆಗೆ ಒಂದೇ ಮನೆಯಲ್ಲಿ ಕೆಲಸ ಮಾಡುವುದು. ಜೀತದವನಿಗೆ ಸಂಬಳ ಇಲ್ಲ. ಕೊಟ್ಟಷ್ಟನ್ನು ಪಡೆಯುವುದು. ಜೀತಪದ್ಧತಿಯಿಂದ ಕೂಲಿಯಾಗಿ, ಅನಂತರ ಗೇಣಿರೈತರಾಗಿ, ಭೂಮಾಲೀಕರಾಗಿ ಪರಿವರ್ತನೆ ಹೊಂದುತ್ತಾರೆ.

ಮೂಲತಃ ಸಾಹಸಿಗಳಾದ ಇವರು ಗೇಣಿ ರೈತರಾದ ಕೆಲವೇ ವರ್ಷಗಳಲ್ಲಿ ಗೇಣಿ ಕೊಡುವ ಬಗ್ಗೆ ತಕರಾರು ತೆಗೆದು ಗೇಣಿ ಕೊಡುವುದು ಇಂತಿಷ್ಟು ಎಂದು ತಾವೇ ನಿರ್ಧರಿಸುತ್ತಾರೆ. ಪ್ರತಿಭಟನೆ ಚಳುವಳಿಯಾಗುತ್ತದೆ. ಸ್ವಾತಂತ್ರ್ಯ ಬಂದು ಹಲವು ವರ್ಷಗಳ ನಂತರ ದೇವರಾಜ ಅರಸರ ಕಾಲದಲ್ಲಿ ಇವರು ಉಳುವವನೇ ಹೊಲದೊಡೆಯ ಎಂಬ ಕಾನೂನಿನ ಅಡಿಯಲ್ಲಿ ಭೂಮಿಗೆ ಒಡೆಯರಾಗುತ್ತಾರೆ. ಹೀಗೆ ಇವರ ಬದುಕಿನಲ್ಲಿ ಅವಲಂಬಿತ ವೃತ್ತಿಯೇ ಇವರ ಸ್ವಂತ ಬದುಕಾಗುತ್ತದೆ. ಅವಲಂಬಿತ ವೃತ್ತಿಯ ಜೊತೆಗೆ ಸಾಂಪ್ರದಾಯಿಕ ವೃತ್ತಿಯನ್ನು ಮುಂದುವರಿಸಿಕೊಂಡು ಬಂದಿದ್ದಾರೆ.

## ಅಧ್ಯಾಯ ೮

# ದೀವರ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸ್ಥಿತ್ಯಂತರಗಳು

### ೮.೧. ಕಾಗೋಡು ರೈತ ಸತ್ಯಾಗ್ರಹ

'ಕಾಗೋಡು ರೈತ ಸತ್ಯಾಗ್ರಹ' ನಾಡಿನ ಇತಿಹಾಸದ ಚಿರಸ್ಮರಣೀಯ ಅಧ್ಯಾಯ. ದೀವರ ಜನಾಂಗದ ಸ್ಥಿತ್ಯಂತರಕ್ಕೆ ಕಾರಣವಾದ ಈ ಘಟನೆ, ಭೂಸುಧಾರಣೆ ಶಾಸನದ ಸ್ಫೂರ್ತಿಯ ಚಿಲುಮೆ. ಅನೇಕ ನಾಯಕರ ಸೃಷ್ಟಿಗೆ ಕಾರಣವಾದ ಈ ಚಳುವಳಿ ಚರಿತ್ರೆಯಲ್ಲಿ ಕಂಗೊಳಿಸುತ್ತಿದೆ. 'ಉಳುವವನೇ ಹೊಲದೊಡೆಯ' ಎಂಬ ಶಾಸನದ ಸೃಷ್ಟಿಗೆ ಕಾರಣವಾಗಿದೆ.

ಕಾಗೋಡು ಸತ್ಯಾಗ್ರಹ ಒಬ್ಬ ವ್ಯಕ್ತಿ ಅಥವಾ ಹಳ್ಳಿಗೆ ಸಂಬಂಧಿಸಿದ್ದಲ್ಲ. ರೈತಾಪಿ ವರ್ಗದವರ ಮೇಲೆ ಜಮೀನ್ದಾರಿ ಪದ್ಧತಿಯ ದಬ್ಬಾಳಿಕೆ ಮತ್ತು ಶೋಷಣೆಯ ವಿರುದ್ಧವಾಗಿ ನಡೆದ ಹೋರಾಟವಾಗಿದೆ.

ಕೆಳದಿ ಅರಸ ಕಾಲದಿಂದಲೂ ಭೂಮಿಯ ಒಡೆತನ ಸಮಾಜದಲ್ಲಿ ಮುಂದುವರೆದ ಜನಾಂಗಗಳಾದ ಬ್ರಾಹ್ಮಣ ಮತ್ತು ಲಿಂಗಾಯಿತ ಕೋಮಿನವರ ಹಿಡಿತದಲ್ಲಿ ಸಿಲುಕಿತ್ತು. ಇದು ೧೯೫೦-೬೦ರವರೆಗೆ ಮುಂದುವರಿಯುತ್ತಾ ಬಂದಿತು. ಸಾವಿರಾರು ಎಕರೆಯ ಭೂಮಿಗೆ ದುಡಿಯುವ ವ್ಯಕ್ತಿ, ಭೂಮಿಗೆ ಒಡೆಯರಾಗುವ ಪದ್ಧತಿಯ ವಿರುದ್ಧ ದನಿ ಎತ್ತಿದ ಹೋರಾಟವಾಗಿದೆ. ಚಳುವಳಿ ಹೇಗೆ ಪ್ರಾರಂಭವಾಯಿತು? ಆಗಿನ ಪರಿಸ್ಥಿತಿ ಹೇಗಿತ್ತು? ಮಹತ್ವದ ಘಟನೆಗಳು ಏನು? ಇಂತಹ ಪ್ರಶ್ನೆಗಳಿಗೆ ಸಮಂಜಸವಾದ ಉತ್ತರ ದೊರೆಯುತ್ತದೆ.

ದೀವರ ಜನಾಂಗದ ಒಟ್ಟಾರೆ ಬದಲಾವಣೆಗೆ ಕಾರಣವಾದ ಚಳುವಳಿಯ ಹಿನ್ನೆಲೆ ಏನು? ಅಂದಿನ ಕಾಲದಲ್ಲಿ ದೀವರು ಆರ್ಥಿಕವಾಗಿ ಹೇಗಿದ್ದರು ಎಂಬುದನ್ನು ಗಮನಿಸಿದಾಗ ಈ ಚಳುವಳಿಯ ಮಹತ್ವ ತಿಳಿಯುತ್ತದೆ.

ಒಡೆಯ ಒಕ್ಕಲು ಎಂಬ ಪರಿಕಲ್ಪನೆಯ ಹಿಂದೆ ಬಹು ಢಾಳಾಗಿ ಗೋಚರಿಸುವುದು ಜಾತಿ ಮತ್ತು ವರ್ಗ ವ್ಯವಸ್ಥೆ. ಆರ್ಥಿಕವಾಗಿ ಪ್ರಬಲವಾದ ಜನಾಂಗವೊಂದು ಆಸ್ತಿಯ ಸಮಗ್ರ ಹಕ್ಕನ್ನು ಪಡೆದುಕೊಂಡು, ಇನ್ನೊಂದು ಜಾತಿಯನ್ನು ಶೋಷಿಸುತ್ತದೆ. ಆಗ ಈ ನೆಲದ ಜೊತೆ ನಿಕಟ ಸಂಪರ್ಕ ಹೊಂದಿರುವ ಜನಾಂಗವೊಂದು ಅದರಿಂದ ವಿಮುಖನಾಗುವುದನ್ನು ಹೇಗೆ ಸಹಿಸುತ್ತದೆ? ಕಾಗೋಡಿನಲ್ಲಿ ನಡೆದ 'ದೀವರ' ಈ ಚಳುವಳಿ ಮಣ್ಣಿನ ನಿಕಟ ಒಡನಾಟದ ಅಂತಃಸತ್ವದ ಪ್ರತಿಭಟನಾತ್ಮಕ ನೆಲೆಯಿಂದಲೇ ಬಂದದ್ದು.

ಕಾಗೋಡು ಸತ್ಯಾಗ್ರಹಕ್ಕೆ ಕಾರಣೀಭೂತರಾದ ಭೂಮಾಲೀಕರಾದರೂ ಎಂತವರು? ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿದ ಆಗಿನ ಮುಖ್ಯ ಕಾಂಗ್ರೆಸ್ ನಾಯಕರಾದ ಕೆ.ಜಿ.ಒಡೆಯರ್, ಬ್ರಿಟಿಷ್ ಶೋಷಣೆ, ಭಾರತದ ಗುಲಾಮಗಿರಿ ಇದಕ್ಕೆ ಪ್ರತಿಯಾಗಿ ಚಳುವಳಿ ಮಾಡಿದವರು. ತಾವೇ ಒಂದು ವರ್ಗದ ಶೋಷಕರಾಗಿ, ಗುಲಾಮಗಿರಿಯ ಪೋಷಕರಾಗಿ ಕಾಣಿಸಿಕೊಂಡಿದ್ದು, ಅಂದಿನ ಕೆಲವು ಬಂಡವಾಳಶಾಹಿ ಮೇಲ್ವರ್ಗದ ಹೋರಾಟಗಾರರ ಮುಖವಾಡಗಳನ್ನು ಬಯಲಿಗೆ ಎಳೆಯುತ್ತದೆ. ಇದೊಂದು ಚಾರಿತ್ರಿಕ ದುರಂತ ಮತ್ತು ವ್ಯಂಗ್ಯ.

ರೈತ ಹೋರಾಟವೆಂದರೆ ಖಾಸಗಿ ಒಡೆತನವನ್ನು ಶಾಶ್ವತವಾಗಿ ನಿರಾಕರಿಸಿ ನಿಜ ದುಡಿಮೆಗಾರರ ಒಡೆಯನಾಗುವ ದಾರಿಯಲ್ಲಿನ ಕ್ರಾಂತಿಕಾರಕ ಚಲನೆ. ಇಲ್ಲಿ ಒಂದು ಶೋಷಕ ವ್ಯವಸ್ಥೆಯನ್ನು ಹೊಡೆದುಹಾಕಿ ಇನ್ನೊಂದು ಶೋಷಕ ವ್ಯವಸ್ಥೆ ಹಕ್ಕುದಾರನಾಗದೆ, ಸಾಮಾನ್ಯ ವ್ಯಕ್ತಿಯೊಬ್ಬ ತನ್ನ ದುಡಿಯುವ ಅನ್ನಕ್ಕೆ ನಿಜ ವಾರಸುದಾರನಾಗುವುದು. ಈ ಹಂತದಲ್ಲಿಯೇ ಪ್ರಮುಖ ವರ್ಗವ್ಯವಸ್ಥೆ ಅಥವಾ ಅದನ್ನು ಪ್ರಚೋದಿಸುವ ಜಾತಿ ವ್ಯವಸ್ಥೆ ಶಿಥಿಲಗೊಂಡು ಉತ್ಪಾದನಾ ಶಕ್ತಿಯಾದ ಶ್ರಮಜೀವಿಯು ಸ್ವಾಭಿಮಾನಿ ಸ್ವಾವಲಂಬಿ ಬದುಕನ್ನು ಸೃಷ್ಟಿಸಿಕೊಳ್ಳುವುದೇ ಆಗಿದೆ.

ಕಾಗೋಡು ಚಳುವಳಿ ಪ್ರಾದೇಶಿಕ ಸೀಮಿತತೆ ಹೊರಗಿನ ಸಂಘಟನೆಯ ಬೆಂಬಲದ ಕೊರತೆ ಹೊಂದಿತ್ತಾದರೂ ಈ ಹಿಂದಿನ ಸ್ವಾತಂತ್ರ್ಯ ಹೋರಾಟಕ್ಕಿಂತ ಬಹುಮುಖ ಜೀವನ್ಮರಣ ಪ್ರಶ್ನೆಯಾಗಿ ಈ ಚಳುವಳಿ ನಿಲ್ಲುತ್ತದೆ. ಪಾಶ್ಚಾತ್ಯ ಗುಲಾಮಗಿರಿಯ ವಿರುದ್ಧ ಸಮಷ್ಟಿ ಪ್ರಜ್ಞೆಯಲ್ಲಿ ವ್ಯಾಪಕವಾಗಿ ಸ್ವಾತಂತ್ರ್ಯದ ಕಲ್ಪನೆಯನ್ನು ರಾಷ್ಟ್ರೀಯ ಚಳುವಳಿ ತಂದಿತ್ತಾದರೂ ವಾಸ್ತವವಾಗಿ ಸ್ವಾತಂತ್ರ್ಯ ಹಾಗೂ ಪ್ರಜಾಪ್ರಭುತ್ವ ಜನಸಾಮಾನ್ಯರ ಪಾಲಿಗೆ ಗಗನ ಕುಸುಮವಾಗಿಯೇ ಇದ್ದ ಸಂದರ್ಭದಲ್ಲಿ ಅಷ್ಟು ದೀರ್ಘವಲ್ಲದ, ವಿಶಾಲ ತಳಹದಿಯಿಲ್ಲದ, ಆರ್ಥಿಕ ಬೆಂಬಲವಿಲ್ಲದ, ಸ್ಥಳೀಯ ಪ್ರಭುತ್ವದ ವಿರುದ್ಧ, ದೌರ್ಜನ್ಯದ ವಿರುದ್ಧ ಹೋರಾಡಿದ 'ದೀವರ' ಕಾಗೋಡು ಸತ್ಯಾಗ್ರಹ ನಿಜವಾದ ಸ್ವಾತಂತ್ರ್ಯ ಹೋರಾಟವೆಂದೇ ಪರಿಗಣಿಸಬಹುದು. 'ಒಂದು ದೇಶದ ಸ್ವಾತಂತ್ರ್ಯಕ್ಕಿಂತ ಒಂದು ಬದುಕಿನ ಸ್ವಾತಂತ್ರ್ಯ ಅತ್ಯಂತ ಜರೂರಾಗಿತ್ತು. ತನಗೆ ತನ್ನ ಹೆಂಡತಿ ಮಕ್ಕಳಿಗೆ ಸ್ವಾತಂತ್ರ್ಯವಿಲ್ಲದವನು ದೇಶದ ಸ್ವಾತಂತ್ರ್ಯಕ್ಕೆ ಹೋರಾಡುವುದು ಕೂಡಾ ವಿಪರ್ಯಾಸವಲ್ಲವೆ? ಎಲ್ಲಿಯವರೆಗೆ ವೈಯುಕ್ತಿಕ ಸ್ವಾತಂತ್ರ್ಯದ ಕಲ್ಪನೆ ಲಭಿಸುವುದಿಲ್ಲವೋ ಅಲ್ಲಿಯವರೆಗೆ ರಾಷ್ಟ್ರೀಯ ಸ್ವಾತಂತ್ರ್ಯ ಎಂಬುದು ಬರಿ ಭ್ರಮಾತ್ಮಕವಾಗಿರುತ್ತದೆ' (ಜಿ.ರಾಜಶೇಖರ, ೧೯೮೦, ಪುಟ ೨೩).

ಎಲ್ಲಾ ಹೋರಾಟಗಳಿಗಿಂತ ಭಿನ್ನವಾದ ಬಗೆಯನ್ನು ಹೊಂದಿರುವ ಕಾಗೋಡು ಸತ್ಯಾಗ್ರಹ ಪ್ರತ್ಯಕ್ಷವಾಗಿ ಪರಿಣಮಿಸಿದ್ದಕ್ಕಿಂತಲೂ ಪರೋಕ್ಷವಾದ ವಿಶಾಲ ಒಳಹರಿವು ಇಟ್ಟುಕೊಂಡಿದ್ದು, ಮುಖ್ಯವಾಗಿ ಕೇವಲ ಒಂದು ಜಾತಿಯ ಜನರ ಹೋರಾಟ.' ಇದನ್ನು ಜಿ.ರಾಜಶೇಖರ ಅವರು ಕಾಗೋಡು ಸತ್ಯಾಗ್ರಹದಲ್ಲಿ ಗುರುತಿಸಿದ್ದಾರೆ. ಸೊರಬ, ಸಾಗರ, ಹೊಸನಗರ, ಸಿದ್ದಾಪುರ ತಾಲ್ಲೂಕುಗಳಿಂದ ಆಗಮಿಸಿ ಕಾಗೋಡು ಹೋರಾಟದಲ್ಲಿ ಭಾಗಿಯಾದವರಲ್ಲಿ ಬಹುತೇಕ ದೀವರೇ ಆಗಿದ್ದು, ಅದೇ ಊರಲ್ಲಿ ಅಥವಾ ಪಕ್ಕದ ಊರಲ್ಲಿ ಇದ್ದ ಮಡಿವಾಳರಾಗಲಿ, ಹರಿಜನರಾಗಲಿ ಈ ಹೋರಾಟದಲ್ಲಿ ಪಾಲ್ಗೊಳ್ಳದಿರುವುದು ಇದನ್ನೆ ದೃಢೀಕರಿಸುತ್ತದೆ.

ಸಾಮಾಜಿಕ, ಆರ್ಥಿಕ ವ್ಯವಸ್ಥೆಯೊಂದನ್ನು ರೂಪಿಸಬಲ್ಲ ಆಧುನಿಕ ಸಮಾಜದ ಪ್ರಮುಖ ವ್ಯವಸ್ಥೆಯಾದ ರಾಜಕೀಯ ಶಕ್ತಿಯ ಅಲೆಯೊಂದು ಕ್ರಿಯಾತ್ಮಕವಾಗಿ ದೀವರಲ್ಲಿ ಹೇಗೆ ಹುಟ್ಟಿತು? ಇಡೀ ರಾಜ್ಯಾದ್ಯಂತ ರೈತ ಹೋರಾಟಕ್ಕೆ ಮೂಲ ವೇದಿಕೆಯನ್ನಂತೂ ಸೃಷ್ಟಿಸಿತು. ಕಾಗೋಡು ಎನ್ನುವುದೇ ಈ ಜನಾಂಗದ ಏಳಿಗೆಗೆ ಕಾರಣೀಭೂತವಾಯಿತು. ಎಲ್ಲಾ ರೈತ ಹೋರಾಟಗಳಲ್ಲಿ ಅತ್ಯಂತ ಪ್ರಾಮುಖ್ಯತೆ ಪಡೆಯಿತು.

## ಸ್ವಾತಂತ್ರ್ಯ ಹೋರಾಟ

೧೯೪೭ರಲ್ಲಿ ಭಾರತ ಸ್ವಾತಂತ್ರ್ಯ ಗಳಿಸಿತು. ಅನೇಕ ಜನಾಂಗಗಳ ಪ್ರಮುಖರು ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಿ ಯಶಸ್ವಿಯಾದರು. ಅನೇಕ ತತ್ವಗಳ, ಆದರ್ಶಗಳ ಮುಖಂಡರ ಪರಿಚಯ, ಅವರ ಜೊತೆ ಒಡನಾಟ ಆದಾಗ ತಮ್ಮ ಸ್ವಾತಂತ್ರ್ಯದ ಬಗ್ಗೆ ಯೋಚಿಸಲು ತೊಡಗಿದರು. ವ್ಯಕ್ತಿಸ್ವಾತಂತ್ರ್ಯ ಪರಿಕಲ್ಪನೆ ಎಲ್ಲಾ ಭಾಗ ಗಳಲ್ಲೂ ದಟ್ಟವಾಗತೊಡಗಿತು. ಬ್ರಿಟಿಷರು ವ್ಯಾಪಾರಕ್ಕೆ ಬಂದಾಗ ಅವರನ್ನು ಸ್ವಾಗತಿಸಿ ಮಣೆ ಹಾಕಿದ್ದು ನಮ್ಮ ರಾಷ್ಟ್ರದ ರಾಜಮನೆತನಗಳೆ. ಇವರ ಅಧಿಕಾರದ ಸೀಮೆಯು ಕೋಟೆಗೆ ಧಕ್ಕೆಯಾದಾಗ ಎಲ್ಲರು ಒಗ್ಗೂಡಿ ಅವರ ವಿರುದ್ಧ ಹೋರಾಟಕ್ಕೆ ತೊಡಗಿದರು. ಈ ಸಂದರ್ಭದಲ್ಲಿ ಹೋರಾಟದ ತೀವ್ರತೆ ಅಷ್ಟಾಗಿ ಕಂಡು ಬರುವುದಿಲ್ಲ. ಬ್ರಿಟಿಷರು ಇಲ್ಲಿ ಒಡೆದು ಆಳುವ ನೀತಿಯನ್ನು ಅನುಸರಿಸಿ ಅಂತಃಕಲಹ ಸೃಷ್ಟಿಸಿ ಸಂಸ್ಥಾನಗಳನ್ನು ವಶಪಡಿಸಿಕೊಂಡರು. ನಂತರ ಇವರ ಕಣ್ಣು ತಿರುಗಿದ್ದು ಜಮೀನ್ದಾರರು ಮತ್ತು ಜನಸಾಮಾನ್ಯರ ಅವಶ್ಯಕ ಸಾಮಗ್ರಿಗಳ ಮೇಲೆ. ಉದಾ. ಉಪ್ಪಿನ ಮೇಲೆ ತೆರಿಗೆ ಹಾಕುವುದು ಇತ್ಯಾದಿ. ಇಂತಹ ಬಿಕ್ಕಟ್ಟಿನ ಸಮಯದಲ್ಲಿ ಮಹಾತ್ಮ ಗಾಂಧೀಜಿಯವರ ಪ್ರವೇಶದಿಂದ ಎಲ್ಲರೂ ಹೋರಾಟದಲ್ಲಿ ಭಾಗಿಯಾಗಿ ಸ್ವಾತಂತ್ರ್ಯ ದೊರೆಯು ವುದರ ಜೊತೆಗೆ ವ್ಯಕ್ತಿ ಸ್ವಾತಂತ್ರ್ಯದ ಅರಿವು ಮೂಡಲು ಸಾಧ್ಯವಾಯಿತು.

ಭಾರತದಲ್ಲಿ ದಾಸ್ಯ ಪದ್ಧತಿ ಎನ್ನುವುದು ರಕ್ತಗತವಾಗಿತ್ತು. ಮನುಷ್ಯ ಗೌರವದ ಪ್ರಶ್ನೆಯೇ ಇರಲಿಲ್ಲ. ಇದಕ್ಕೆ ವೇದಗಳು ಸಹಕಾರಿಯಾಗಿದ್ದವು. ಪ್ರಾಂತೀಯ ಒಡೆತನ, ಸ್ಥಳೀಯ ಜಮೀನ್ದಾರರ ಒಡೆತನ ಹೆಚ್ಚು ಕಡಿಮೆ ಒಂದೇ ತೆರನಾಗಿದ್ದವು. ಉಳ್ಳವರ ಕೈಯಲ್ಲಿ ಜಮೀನುಗಳು ಇದ್ದರೆ ಕೈ ಕೆಳಗೆ ಇನ್ನುಳಿದ ಕೆಲವು ಜನಾಂಗಗಳು ಜೀತಕ್ಕೆ, ಗೇಣಿಗೆ, ಭೂಮಿಯಲ್ಲಿ ದುಡಿಯಲು ಇರುವಂಥ ಸ್ಥಿತಿ ಇತ್ತು. ಯಾವಾಗ ಪರಕೀಯರ ವಿರುದ್ಧದ ಹೋರಾಟ ಎಂಬ ಬಿರುಗಾಳಿಗೆ ಎಲ್ಲಾ ಜನಾಂಗಗಳ ಪ್ರಮುಖರು ಭಾಗಿಯಾಗಿ ಸ್ವಾತಂತ್ರ್ಯ ದೊರೆತ ನಂತರ ಇದ್ದಕ್ಕಿದ್ದ ಹಾಗೆ ಬ್ರಿಟಿಷರಿಗಿಂತಲೂ ಕಡೆಯಾದ ಅನಿಷ್ಟ ಗುಲಾಮ ಪದ್ಧತಿ ನಮ್ಮಲ್ಲಿ ಗೋಚರಿಸಲು ಶುರುವಾಯಿತು.

೧೯೩೮ರ ಸುಮಾರಿಗೆ ಮಲೆನಾಡಿನಲ್ಲಿ ತೀವ್ರವಾಗಿ ಮತ್ತು ವ್ಯಾಪಕವಾಗಿ ನಡೆದ ಸ್ವಾತಂತ್ರ್ಯ ಚಳುವಳಿಯ ಅರಣ್ಯ ಸತ್ಯಾಗ್ರಹದಲ್ಲಿ ಕೆ.ಜಿ.ಒಡೆಯರು ಭಾಗವಹಿಸಿದ್ದಲ್ಲದೆ ಕಾಗೋಡಿನ ತಮ್ಮ ಒಕ್ಕಲುಗಳಲ್ಲಿ ಕೆಲವರನ್ನೂ ಚಳುವಳಿ ಮಾಡುವಂತೆ ಪ್ರೇರೇಪಿಸಿದ್ದರು. ಅರಣ್ಯ ಸತ್ಯಾಗ್ರಹದಲ್ಲಿ ಭಾಗವಹಿಸಿದ್ದಕ್ಕೆ ಅವರು ೧೫ ತಿಂಗಳ ಸೆರೆಮನೆವಾಸವನ್ನು ಅನುಭವಿಸಿದ್ದರು. ಅಸಹಕಾರ ಚಳುವಳಿಯಲ್ಲಿ ಭಾಗವಹಿಸಿ ಒಂದು ವರ್ಷ ಜೈಲಿನಲ್ಲಿದ್ದರು. ಇವರ ಜೊತೆಯಲ್ಲಿ ಹಿರೇನೆಲ್ಲೂರಿನ ದೀವರ ಮುಖಂಡರಾದ ಶ್ರೀಯುತ ಬರಸಿನ ದ್ಯಾವಪ್ಪನವರು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ ಒಂದು ವರ್ಷಕ್ಕೂ ಹೆಚ್ಚು ಕಾಲ ಜೈಲುವಾಸ

ಅನುಭವಿಸಿದರು. ಜೈಲಿನಲ್ಲಿ ಕೆಂಗಲ್ ಹನುಮಂತಯ್ಯ, ಬದರಿನಾರಾಯಣ ಅಯ್ಯಂಗಾರ ಮುಂತಾದ ಮುತ್ಸದ್ದಿಗಳೊಂದಿಗಿನ ಒಡನಾಟವಿತ್ತು. ಶ್ರೀಯುತ ಹೆಚ್.ಗಣಪತಿಯಪ್ಪನವರು ದೀವರ ಪೈಕಿ ಎದ್ದು ಕಾಣುವ ವ್ಯಕ್ತಿತ್ವದವರು. ಮುಲ್ಕಿ ಪರೀಕ್ಷೆ ಪಾಸು ಮಾಡಿಕೊಂಡಿದ್ದರು. ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ ಜೈಲುವಾಸ ಕಂಡವರು. ಪಿಕೆಟಿಂಗ್ ಚಳುವಳಿಯಲ್ಲಿ ಭಾಗವಹಿಸಿದ್ದಕ್ಕೆ ಅವರ ಮೇಲೆ ವಾರೆಂಟ್ ಇರುವುದರಿಂದ ಹಿರೇನೆಲ್ಲೂರಿಗೆ ಬಂದು ತಲೆಮರೆಸಿಕೊಂಡಿದ್ದರು. ಇಲ್ಲಿಯ ಮಕ್ಕಳಿಗೆ ಮೇಷ್ಟ್ರು ಆದರು. ಹೀಗೆ ಸ್ವಾತಂತ್ರ್ಯ ಹೋರಾಟವೆನ್ನುವುದು ಅನೇಕ ಬುದ್ಧಿಜೀವಿಗಳ, ವಿಚಾರವಾದಿ ಚಳುವಳಿಗಾರರನ್ನು ಸೃಷ್ಟಿ ಮಾಡಿತು.

## ಮಲೆನಾಡಿನ ಹಳ್ಳಿಗಳು ಮತ್ತು ಕಾಗೋಡು

೧೯೫೦ರ ದಶಕದಲ್ಲಿ ಮಲೆನಾಡಿನ ಹಳ್ಳಿಗಳು ಬಹುತೇಕ ಋಷಿ ಮುನಿಗಳ ತಾಣದಂತೆ ಗೋಚರಿಸುತ್ತಿದ್ದವು. ಯಾವುದಾದರೂ ಹಳ್ಳಿಗೆ ಹೋದರೆ ಮನೆಗಳನ್ನು ನೋಡಿಯೇ ಅವರು ಯಾರು, ಆರ್ಥಿಕ ಸ್ಥಿತಿಗಳೇನು ಎಂಬುದನ್ನು ತಿಳಿಸುತ್ತಿದ್ದವು. ಹಳೆಯ ತಲೆಮಾರಿನ ಜನರನ್ನು ಮಾತನಾಡಿಸಿದರೆ ತಮ್ಮ ಕಾಲದ ಹಂದರವನ್ನು ಬಿಡಿಸಿ ಹೇಳುತ್ತಾರೆ. ಲಿಂಗಾಯತ, ಬ್ರಾಹ್ಮಣ, ಒಕ್ಕಲಿಗರ ಮನೆಗಳು ನೋಡಲು ಬೃಹತ್ತಾಗಿ ಕಾಣುತ್ತಿದ್ದವು. ಹೆಚ್ಚಾಗಿ ಐದಂಕಣ ಆರಂಕಣ ಮನೆಗಳು, ಸುತ್ತ ಕೊಟ್ಟಿಗೆಯ ಮನೆ, ಪಳತ್‌ದ ಮನೆ ನೋಡುತ್ತಿದ್ದ ಹಾಗೆ ಶ್ರೀಮಂತಿಕೆಯನ್ನು ಅಳೆಯಬಹುದಾಗಿತ್ತು. ಹೆಚ್ಚಾಗಿ ಸ್ಥಿತಿವಂತ ಜೀವನ ನಡೆಸುತ್ತಿದ್ದರು.

ಇನ್ನುಳಿದ ರೈತಾಪಿ ಜನಾಂಗವಾದ ದೀವರ ಮನೆಗಳು ಗುಂಪಾಗಿ ಗುಡಿಸಲು ಮನೆಗಳೆ ಹೆಚ್ಚಾಗಿದ್ದವು. ಅಲ್ಲೊಂದು ಇಲ್ಲೊಂದು ಹೆಂಚಿನ ಮನೆಗಳನ್ನು ನೋಡಬಹುದಿತ್ತು. ಹೆಚ್ಚಿನವರಿಗೆ ಸ್ವಂತ ಜಮೀನು ಇರಲಿಲ್ಲ. ಗೇಣಿ ಜಮೀನು ಹೊಂದಿದ್ದರು. ಜಮೀನಿನ ಒಟ್ಟು ಉತ್ಪಾದನೆಯಲ್ಲಿ ಅರ್ಧಕ್ಕಿಂತಲೂ ಜಾಸ್ತಿ ಒಡೆಯರ ಮನೆಗೆ ಗೇಣಿ ರೂಪದಲ್ಲಿ ಸಂದಾಯವಾಗುತ್ತಿತ್ತು. ಅದರಲ್ಲೂ ಮಲೆನಾಡಿನ ದೀವರು ವಾಸಿಸುವ ಭಾಗಗಳಾದ ಸಾಗರ, ಸೊರಬ, ಹೊಸನಗರ, ಸಿದ್ದಾಪುರ(ಪೂರ್ವಭಾಗ)ದಲ್ಲಿ ಅತ್ಯಧಿಕ ಮಳೆಯಾಗುವುದರಿಂದ ಭತ್ತದ ಇಳುವರಿ ಅಷ್ಟಕಷ್ಟೆ. ಸೊರಬದಲ್ಲಿ ಸ್ವಲ್ಪ ಮಟ್ಟಿಗೆ ಪರವಾಗಿಲ್ಲ. ಎರೆಮಣ್ಣಿನ ಭೂಮಿಯನ್ನು ಹೊಂದಿದೆ. ಹೆಚ್ಚಾಗಿ ಈ ಭಾಗದಲ್ಲಿ ಹೊಳೆ, ಹಳ್ಳಕೊಳ್ಳಗಳು ಹರಿಯುವುದರಿಂದ ಇವು ಮಳೆಗಾಲದಲ್ಲಿ ತುಂಬಿ ಉಕ್ಕಿ ಹರಿಯುತ್ತವೆ. ಬೇಸಿಗೆಯಲ್ಲಿ ಹನಿ ನೀರು ಇರುವುದಿಲ್ಲ. ಆದುದರಿಂದ ಹೊಳೆಯ ಆಸುಪಾಸು ನೇರೆಗೂಳಿ, ಜಡ್ಡು, ಭತ್ತಗಳನ್ನು ಬಿತ್ತನೆ ಮಾಡಬೇಕಾದ ಸ್ಥಿತಿ ಇದೆ. ಈ ಸಾಂಪ್ರದಾಯಿಕ ಭತ್ತಗಳು ನೀರಿನ ಹೊಡೆತಕ್ಕೆ ತಡೆಯುತ್ತವೆ. ಆದರೆ ಇಳುವರಿ ಬಹಳ ಕಡಿಮೆ. ಒಂದೊಂದು ಸಾರಿ ಪ್ರವಾಹ ಬಂದು ಕೊಚ್ಚಿಕೊಂಡು ಹೋಗಿದ್ದು ಇದೆ. ಇಂತಹ ಕಷ್ಟಕರವಾದ ಸ್ಥಿತಿ ಮಲೆನಾಡಿನ ರೈತ ವರ್ಗದ್ದು.

ನಾಗರೀಕ ಸೌಲಭ್ಯ ಅನೇಕ ಹಳ್ಳಿಗಳಿಗೆ ತಲುಪಿರಲಿಲ್ಲ. ಸೊರಬ ತಾಲ್ಲೂಕಿನ ಕೆಲವು ಹಳ್ಳಿಗಳು ಈಗಲೂ ಪಳೆಯುಳಿಕೆಯಂತೆ ಕಂಡು ಬರುತ್ತವೆ.

'ಪ್ರಾಥಮಿಕ ಶಾಲೆ' ಎಂಬುದು ಅಪರೂಪದ ವಿಷಯವಾಗಿತ್ತು. ೧೯೩೫ರಲ್ಲಿ ಶ್ರೀಯುತ ಗಣಪತಿಯಪ್ಪನವರು ಹಿರೇನೆಲ್ಲೂರು ಗ್ರಾಮದ ಮಾಸ್ತರಾಗಿ ಸೇವೆ ಸಲ್ಲಿಸಿದ್ದನ್ನು ಸ್ಮರಿಸುತ್ತಾರೆ. ಗೌಡರ ಮನೆಯ ಅಟ್ಟದ

ಮೇಲೆ ಪಾಠ ಮಾಡುತ್ತಿದ್ದುದು, ಹುಡುಗರ ಮನೆಯವರು ಕೊಡುತ್ತಿದ್ದ ಭತ್ತವೇ ಇವರ ವರಮಾನವಾಗಿತ್ತು. ಹೀಗೆ ಇದೇ ಮಲೆನಾಡಿನ ಹಳ್ಳಿಗಳ ನಾಗರೀಕ ಸ್ಥಿತಿ. ಕಾಗೋಡು ತಿಮ್ಮಪ್ಪನವರು ತಮ್ಮ ಪ್ರಾಥಮಿಕ ವಿದ್ಯಾಭ್ಯಾಸವನ್ನು ಕುರಿತು ಹೀಗೆ ಹೇಳುತ್ತಾರೆ. ಹಿರೇನೆಲ್ಲೂರಿನ ಗೌಡರ (ಮುದ್ದಪ್ಪ, ಮಲ್ಲಿಕಾರ್ಜುನ ಗೌಡರು) ಮನೆಯ ಕಣಗಲ ಗಿಡದ ಬುಡದಲ್ಲಿ ಮರಳು ಹರಡಿ ಅದರಲ್ಲಿ ಬೆರಳಿನಿಂದ ಅಕ್ಷರ ಬರೆದು ಓದುವ ಸ್ಥಿತಿ ಇತ್ತು ಎಂದಿದ್ದಾರೆ. ಶಿಕ್ಷಣ ಎಂಬುದು ಉಳ್ಳವರ ಪಾಲಿಗೆ ಎಟುಕುವ ಕುಸುಮವಾಗಿತ್ತು.

ಮಲೆನಾಡಿನ ಎಲ್ಲಾ ಹಳ್ಳಿಗಳ ಸ್ಥಿತಿ ಇದೇ ರೀತಿ ಇತ್ತು. ನಾವು ರೈತ ಹೋರಾಟ ನಡೆದ ಕಾಗೋಡು ಗ್ರಾಮವನ್ನು ಗಮನಿಸಿದರೆ ಇಲ್ಲಿ ಇರುವ ವ್ಯವಸ್ಥೆಯ ಚಿತ್ರಣವೇ ಎಲ್ಲಾ ಮಲೆನಾಡಿನ ಹಳ್ಳಿಗಳ ಚಿತ್ರಣವಾಗಿದೆ.

**ಕಾಗೋಡು**

ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕಿನ, ತಾಳಗುಪ್ಪ ಹೋಬಳಿಯಲ್ಲಿರುವ ಹಿರೇನೆಲ್ಲೂರು ಗ್ರಾಮ ಪಂಚಾಯತಿಯ ವ್ಯಾಪ್ತಿಗೆ ಒಳಪಡುವ ಒಂದು ಚಿಕ್ಕ ಹಳ್ಳಿ ಕಾಗೋಡು. ಕಾಗೋಡು, ಹಾಗಲಪುರ, ಮಣಗದ್ದೆ ಸಣ್ಣಮನೆ, ಇವು ಹಿರೇನೆಲ್ಲೂರು ಗ್ರಾಮ ಪಂಚಾಯಿತಿಗೆ ಒಳಪಡುತ್ತದೆ. "ಸರಕಾರಿ ದಾಖಲೆಗಳಲ್ಲಿ ಕಾಗೋಡು ಒಂದು ರೆವಿನ್ಯೂ ಗ್ರಾಮವಲ್ಲ. ಈ ಹಳ್ಳಿಯಲ್ಲಿ ೯೭ ದೀವರ ಮನೆಗಳು, ೪ ಲಿಂಗಾಯಿತರ ಮನೆಗಳು, ೭ ಮಡಿವಾಳರು ಮನೆಗಳು, ೩೦ ಹರಿಜನರ ಮನೆಗಳಿವೆ. ೧೯೭೦ರಲ್ಲಿ ಈ ಹಳ್ಳಿಯಲ್ಲಿ ೧೩೮ ಮನೆಗಳಿದ್ದುದು ಕಂಡುಬರುತ್ತದೆ(ರಾಜಶೇಖರ ಜಿ., ೧೯೮೦, ಪುಟ ೧).

ಇಂದು ಲಿಂಗಾಯಿತರ ಮನೆಗಳನ್ನು ನೋಡಿದರೆ ದಬ್ಬಾಳಿಕೆಯ ಪಳೆಯುಳಿಕೆಗಳೇನೋ ಎಂಬಂತೆ ಗೋಚರಿಸುತ್ತವೆ. ೧೯೫೦-೭೦ರ ದಶಕದಲ್ಲಿ ಕಂಡುಬಂದ ಭಾರಿ ಹಳತಗಳು ಬಹುಶಃ ಕಣ್ಮರೆಯಾಗಿವೆ. ಗುರುವಯ್ಯ ಗೌಡರ ಮನೆ ಸ್ವಲ್ಪ ಮಟ್ಟಿಗೆ ಉತ್ತಮವಾಗಿದೆ. ಆರ್ಥಿಕವಾಗಿ ಮೊದಲಿನ ವೈಭವ ಇಲ್ಲದಿದ್ದರೂ ಪರವಾಗಿಲ್ಲ ಎನ್ನುವಂತೆ ಜೀವನ ನಡೆಸುತ್ತಿದ್ದಾರೆ.

೧೯೫೦-೭೦ರ ದಶಕದಲ್ಲಿ ದೀವರು ಗೇಣಿ ಭೂಮಿಯನ್ನು ಹೊಂದಿದ್ದು, ವರ್ಷಕ್ಕೆ ಒಂದು ಬೆಳೆ ಬರುವ ೪ ರಿಂದ ೫ ಎಕರೆಗಳ ಜಮೀನು ಹೊಂದಿದ್ದರು. ಇದರಲ್ಲಿ ಗೇಣಿ ಭತ್ತ ಕೊಟ್ಟು ಉಳಿದಿದ್ದರಲ್ಲಿ ಜೀವನ ನಿರ್ವಹಣೆ ಮಾಡುವ ಸ್ಥಿತಿ ಇತ್ತು. ಮಲೆನಾಡಿನ ಎಲ್ಲಾ ಹಳ್ಳಿಗಳ ಹಾಗೆ ದೀವರು ಗುಂಪಾಗಿ ವಾಸಿಸುತ್ತಿದ್ದರು. ಹೆಚ್ಚಾಗಿ ಗುಡಿಸಲು ಮನೆಗಳೇ ಜಾಸ್ತಿ. ಸವಾಜಿ ಬೀರನಾಯಕರು (ಕಾಗೋಡು ತಿಮ್ಮಪ್ಪನವರ ಮನೆ) ಸ್ವಂತ ಸಾಗುವಳಿ ಜಮೀನು ಹೊಂದಿದ್ದರು. ಇವರಿಗೆ ಗೇಣಿ ಸಮಸ್ಯೆ ಇರಲಿಲ್ಲ. 'ಲಿಂಗಾಯಿತರ ಮನೆಗಳು ಹೆಂಚಿನ ಮಾಡು, ಸುಣ್ಣ ಬಣ್ಣ ಬಳಿದು, ರಸ್ತೆಗೆ ಎದ್ದು ಕಾಣಿಸುತ್ತಿದ್ದವು. ಒಳಗೆ ವಾಸಿಸುವ ಜನರಿಗೆ ನಾಗರೀಕತೆಯ ಪರಿಚಯವಿದೆ ಎಂದು ಅನ್ನಿಸುತ್ತದೆ' (ರಾಜಶೇಖರ ಜಿ., ೧೯೮೦, ಪುಟ ೨) ಎಂದು ಹೇಳಿರುವುದು ಅವರು ಆರ್ಥಿಕವಾಗಿ ಸದೃಢರಾಗಿದ್ದರು ಎಂಬುದು ತಿಳಿಯುತ್ತದೆ. ಇದಕ್ಕೆ ಪುಷ್ಟಿ ಎಂಬಂತೆ ಈಗಲೂ ಬಣ್ಣ ಕಾಣದ ಭಾರಿ ಮನೆಗಳು ಕಂಗೊಳಿಸುತ್ತಿವೆ.

ಹೀಗೆ ಮೂಲಭೂತ ಸಮಸ್ಯೆಗಳಲ್ಲಿ ಸಿಲುಕಿದ ಜನಾಂಗ ಅಕ್ಷರ ಜ್ಞಾನದ ಕಡೆಗೆ ಒಲವು ಮೂಡುವುದಾದರು ಹೇಗೆ? ಇವರ ಸಂಪಾದನೆಯ ದಾರಿ ಏನು? ಸೋಮಾರಿಗಳಾಗಬೇಕು ಅಥವಾ ಪರ್ಯಾಯ ದಾರಿ ಹುಡುಕಬೇಕು. ಹಾಗಾಗಿ ಇವರು ಕಳ್ಳಭಟ್ಟಿ ದಂದೆಗೆ ಕೈ ಹಾಕಿರಬೇಕು. ದೀವರ ಮುಖ್ಯ ಸಂಪಾದನೆಯ ಕಸುಬು ಇದು ಆಗಿರುವ ಸಾಧ್ಯತೆಯಿದೆ. ಆದರಲ್ಲೂ ಮೂಲತಃ ಕಸುಬು ಇದೇ ಆಗಿರುವುದರಿಂದ ಹಾಗು ಕೃಷಿ ಚಟುವಟಿಕೆಯ ಮಧ್ಯದಲ್ಲಿಯೇ ಇದರ ಉತ್ಪಾದನೆ, ಸಾಗಾಣಿಕೆಗೆ ತೊಡಗಿರುವ ಸಾಧ್ಯತೆ ಇದೆ. ಆದರೆ ಈಗ ಕಾಗೋಡು ಗ್ರಾಮದಲ್ಲಿ ಸಾರಾಯಿ ಮಾಡುವವರಿಗೆ, ಮಾರುವವರಿಗೆ ೧೦೦೦ ರೂ.ಗಳ ದಂಡ ವಿಧಿಸುವ ಕ್ರಮವಿದೆ. ಇದೇ ರೀತಿ ಹಿರೇನೆಲ್ಲೂರು ಗ್ರಾಮದಲ್ಲಿಯೂ ಇದೆ. ಈ ರೀತಿಯ ಪರಿವರ್ತನೆಗೆ ಕಾರಣ ಆರ್ಥಿಕ ಸ್ವಾವಲಂಬನೆಯಾಗಿದೆ. (ಕೆಲವು ಊರಿನಲ್ಲಿ ಸಾರಾಯಿ ಮಾರಾಟಕ್ಕೆ ನಿಷೇಧ ಹೇರಿದೆ)

'ಕೆಳ ಜಾತಿಯವರಿಗೆ ಶಿಕ್ಷಣಾವಕಾಶ', 'ಉದ್ಯೋಗಾವಕಾಶ', 'ಹಳ್ಳಿಗಳಲ್ಲಿ ಸಾಕ್ಷರತಾ ಚಳುವಳಿ', 'ವಿಕೇಂದ್ರೀಕರಣ' ಮುಂತಾದ ಘೋಷಣೆಗಳು ಮಲೆನಾಡಿನಂತಹ ಹಳ್ಳಿಗಳಿಗೆ ಸತ್ಯಾಗ್ರಹದ ಕಾಲಘಟ್ಟದಲ್ಲಿ ತಲುಪಲೇ ಇಲ್ಲ. ಶಾಲೆಗೆ ಹೋಗುವವರ ಸಂಖ್ಯೆ ಬಹಳ ಕಡಿಮೆಯಿತ್ತು. ದೀವಜಾತಿಯಾದ ಮಕ್ಕಳಲ್ಲಿ ಅರ್ಧದಷ್ಟು ಮಕ್ಕಳು ಶಾಲೆಗೆ ಹೋಗಲು ಆಗುತ್ತಿರಲಿಲ್ಲ. ದನ ಕಾಯಲು, ಕೂಸು ಆಡಿಸಲು, ಮನೆಕಾಯಲು, ಹುಡುಗರು ಮನೆಯಲ್ಲಿಯೇ ಇರುತ್ತಿದ್ದರು.

ಈ ಸ್ಥಿತಿ ಮಲೆನಾಡಿನ ಹಳ್ಳಿಗಳ ಶಾಲೆಗಳ ಸಾಮಾನ್ಯ ಸ್ವರೂಪವಾಗಿತ್ತು. ಶಾಲೆಯ ಮಾಸ್ತರು ಶಾಲೆಗೆ ಬರದ ಹುಡುಗರನ್ನು ಹೊತ್ತುಕೊಂಡು ಬರಲು ಐದಾರು ದಷ್ಟಪುಷ್ಟ ಹುಡುಗರನ್ನು ಕಳಿಸುತ್ತಿದ್ದರಂತೆ. (೧೯೮೦) ಹುಡುಗಿಯರ ಸಂಖ್ಯೆ ಬಹಳ ಕಡಿಮೆ. ಇನ್ನು ಇದಕ್ಕೂ ಹಿಂದೆ ಶಾಲೆ ಎಂಬ ಪದವೇ ಅಪರೂಪವಾಗಿರುವ ಸ್ಥಿತಿಯನ್ನು ಆಲೋಚಿಸಿದರೆ ಈ 'ಅನಕ್ಷರತೆ' ಬಹುಮಟ್ಟಿಗೆ ಹರಿಜನರು, ದೀವರು ಮುಂತಾದ ತೀರ ಹಿಂದುಳಿದ ಮಕ್ಕಳಿಗೆ ಮಾತ್ರ ಇದ್ದಿರಬೇಕು.

ಆದರೆ ಈಗ ದೀವರ ಪ್ರತಿಯೊಂದು ಮಗುವು ಶಾಲೆಗೆ ಹೋಗುವ ದೃಶ್ಯ ಸರ್ವೇಸಾಮಾನ್ಯ. ಅನೇಕ ಜನ ಉದ್ಯೋಗದಲ್ಲಿ ಇರುವುದನ್ನು ಕಾಣುತ್ತೇವೆ. ಮಲೆನಾಡಿನ ಯಾವುದೇ ತಾಲ್ಲೂಕು ಕಛೇರಿಗೆ ಭೇಟಿ ಕೊಟ್ಟರೆ ದೀವರ ಅಧಿಕಾರಿಗಳು ಗೋಚರಿಸುತ್ತಾರೆ. ಸಾರ್ವಜನಿಕ ಕ್ಷೇತ್ರದಲ್ಲಿ, ಶಿಕ್ಷಣ ಕ್ಷೇತ್ರದಲ್ಲಿ, ಎಲ್ಲಾ ಕ್ಷೇತ್ರದಲ್ಲಿ ಇವರು ಕಂಡುಬರುವುದು ಹೋರಾಟದ ಸಾರ್ಥಕತೆಯ ಪ್ರತೀಕವಾಗಿದೆ.

ಕಾಗೋಡು ಗ್ರಾಮದ ಮನೆಗಳ ಸಂಖ್ಯೆ

| ಜನಾಂಗ | ಮನೆಗಳ ಸಂಖ್ಯೆ | | |
|---|---|---|---|
| | ೧೯೭೦-೮೦ | ೧೯೮೦-೯೦ | ೧೯೯೦-೨೦೦೦ |
| ದೀವರು | ೯೭ | ೧೩೯ | ೧೭೮ |
| ಲಿಂಗಾಯಿತರು | ೪ | ೬ | ೬ |
| ಹರಿಜನರು | ೩೦ | ೩೫ | ೪೨ |
| ಮಡಿವಾಳರು | ೭ | ೧೦ | ೧೧ |
| ಶೆಟ್ಟರು (ಅಕ್ಕಸಾಲಿಗ) | - | ೨ | ೩ |
| ಒಟ್ಟು | ೧೩೪ | ೧೯೩ | ೨೩೨ |

## ಕಾಗೋಡು ಗ್ರಾಮ ಮತ್ತು ಹಿರೇನೆಲ್ಲೂರು ಗ್ರಾಮದ ಶಾಲಾ ಮಕ್ಕಳ ಸಂಖ್ಯೆ

| ಗ್ರಾಮ | ಮಕ್ಕಳ ಸಂಖ್ಯೆ | | | |
|---|---|---|---|---|
| | ೧೯೭೦-೮೦ | | ೧೯೯೦-೨೦೦೦ | |
| | ದಾಖಲಾತಿ | ಹಾಜರಾತಿ | ದಾಖಲಾತಿ | ಹಾಜರಾತಿ |
| ಹಿರೇನೆಲ್ಲೂರು | ೧೫೦ | ೮೦ | ೨೦೦ | ೧೯೦ |
| ಕಾಗೋಡು | ೪೦ | ೨೦ | ೧೮೦ | ೧೭೨ |
| ಶುಂಠಿಕೊಪ್ಪ | ೨೬೦ | ೧೦೦ | ೨೭೦ | ೨೫೮ |

ಕಾಗೋಡು ಗ್ರಾಮದ ವಿಸ್ತೀರ್ಣ ಕೇವಲ ೮೯೧ ಎಕರೆ ೧೫ ಗುಂಟೆ ಮಾತ್ರ ಗ್ರಾಮದ ಜನಸಂಖ್ಯೆ ೧೦೪೪. ಇದರಲ್ಲಿ ಗಂಡಸರು ೪೯೮, ಹೆಂಗಸರು ೫೪೬. ಒಟ್ಟು ಕುಟುಂಬಗಳು ೨೬೨.

### ಕ್ರಿ.ಶ. ೧೯೯೯-೨೦೦೦ ಸಾಲಿನ ವಿವರಗಳು

| ಕುಟುಂಬಗಳು | |
|---|---|
| ದೀವರ ಕುಟುಂಬಗಳು | ೧೭೮ |
| ಹರಿಜನ ಕುಟುಂಬಗಳು | ೪೨ |
| ಲಿಂಗಾಯಿತ ಕುಟುಂಬಗಳು | ೭ |
| ಮಡಿವಾಳರ ಕುಟುಂಬಗಳು | ೧೧ |
| ಅಕ್ಕಸಾಲಿಗರ ಕುಟುಂಬಗಳು | ೬ |
| ಮುಸ್ಲಿಂ | ೧ |
| ಉಪ್ಪಾರ | ೧ |
| ಒಟ್ಟು | ೨೬೨ |

## ಕಾಗೋಡಿನಲ್ಲಿರುವ ವಿವಿಧ ಬಗೆಯ ಜಮೀನಿನ ವಿವರ

| | | |
|---|---|---|
| ೧. | ಸರ್ಕಾರಿ ಬಂಜರು ನೆಲ | ೫೫.೩೩ |
| ೨. | ಗೋಮಾಳ | ೧೬೧-೦೫ |
| ೩. | ತರೀ ಜಮೀನು | ೨೧೦.೩೨ |
| ೪. | ಬಾಗಾಯ್ತು | ೧೧.೩೨ |
| ೫. | ಸೊಪ್ಪಿನ ಬೆಟ್ಟ | ೧೫.೦೫ |
| ೬. | ಕಾನು | ೨೪೩.೩೬ |
| ೭. | ಗ್ರಾಮ | ೨.೦೦ |
| ೮. | ಖರಾಬು | ೪೫.೦೨ |
| ೯. | ಓಡುವಳಿ ಬೆಟ್ಟ | ೧೪೦.೦೫ |

## ಕಾಗೋಡಿನಲ್ಲಿ ಜಮೀನು ಹೊಂದಿರುವ ರೈತರು

| | | | |
|---|---|---|---|
| ೧. | ಒಂದು ಎಕರೆ ಜಮೀನು ಹೊಂದಿರುವವರು | ೨೩ | ಜನ |
| ೨. | ಒಂದರಿಂದ ಎರಡು ಎಕರೆ | ೪೬ | ಜನ |
| ೩. | ಎರಡರಿಂದ ಮೂರು ಎಕರೆ | ೧೮ | ಜನ |
| ೪. | ಮೂರರಿಂದ ನಾಲ್ಕು ಎಕರೆ | ೧೮ | ಜನ |
| ೫. | ನಾಲ್ಕರಿಂದ ಐದು ಎಕರೆ | ೧೦ | ಜನ |
| ೬. | ಐದರಿಂದ ಆರು ಎಕರೆ | ೩ | ಜನ |
| ೭. | ಆರರಿಂದ ಏಳು ಎಕರೆ | ೨ | ಜನ |
| ೮. | ಏಳರಿಂದ ಎಂಟು ಎಕರೆ | ೪ | ಜನ |
| ೯. | ಎಂಟರಿಂದ ಒಂಬತ್ತು ಎಕರೆ | ೩ | ಜನ |
| ೧೦. | ಹತ್ತು ಎಕರೆ, ಇದಕ್ಕೂ ಮೇಲ್ಪಟ್ಟು | ೫ | ಜನ |
| | ಒಟ್ಟು | ೧೩೨ | ಜನ |

ಇದರಲ್ಲಿ ೧೫ ಜನ ಗೇಣಿಕಾರರಾಗಿರದೆ ಮೊದಲಿನಿಂದಲೂ ಸ್ವಂತ ಜಮೀನು ಹೊಂದಿರುವವರು. ೧೧೭ ಜನ ಹಿಂದೆ ಗೇಣಿದಾರ ರೈತರಾಗಿದ್ದು ಈಗ ಸ್ವಂತ ಖಾತೆದಾರರಾಗಿದ್ದಾರೆ.

ಕಾಗೋಡು ಸತ್ಯಾಗ್ರಹ ನಡೆದ ಕಾಲದಲ್ಲಿ ಅಂದರೆ ೬-೫-೧೯೫೧ರ ಮೊದಲು ಕಾಗೋಡು ಮಣಗದ್ದೆ ಹಿರೇನೆಲ್ಲೂರು, ಸಣ್ಣಮನೆ, ಸೂರಗುಪ್ಪೆ, ಶುಂಠಿಕೊಪ್ಪ, ತಟ್ಟೆಗುಂಡಿ ಹಾಗೂ ಹಾಗಲಪುರ ಹಳ್ಳಿಗಳಲ್ಲಿ ಕಾಗೋಡು ಗೌಡರ ಜಮೀನಿನ ವಿವರ.

೧೯೫೦-೫೧ರ ಕಾಲಘಟ್ಟದಲ್ಲಿ

| | |
|---|---|
| ತರಿ | ೧೧೫೦ ಎಕರೆ |
| ಮುಷ್ಕಿ | ೬೭೩ ಎಕರೆ |
| ಕಾನು | ೪೩೦ ಎಕರೆ |
| ಬಾಗಾಯ್ತು | ೬ ಎಕರೆ |
| ಒಟ್ಟು | ೨೨೪೫ ಎಕರೆ |

ಕೋಷ್ಟಕದಲ್ಲಿ ಕಂಡುಬಂದ ಮಕ್ಕಳಲ್ಲಿ ಶಾಲೆಗೆ ಹೋಗುವವರು ಯಾರು? ಓದುವವರು ಬರೆಯುವರು ಎಷ್ಟು ಮಂದಿ ಎಂಬುದನ್ನು ತಿಳಿಯುವುದು ಕಷ್ಟ. ಆದರೆ ಈಗ ಅತಿ ಹೆಚ್ಚು ಮಕ್ಕಳು ಓದುವುದು, ಬರೆಯುವುದು ಮಾಡುತ್ತಾರೆ. ಎಸ್.ಎಸ್.ಎಲ್.ಸಿ.ಯಲ್ಲಿ ಪ್ರಥಮ ಶ್ರೇಣಿಯಲ್ಲಿ ಪಾಸಾದ ಮಕ್ಕಳು ಕಂಡು ಬರುತ್ತಾರೆ.

ಈಗ ಶಿಕ್ಷಣ ಎಂಬುದು ಎಲ್ಲಾ ವರ್ಗದ ಜನರಿಗೆ ದೊರೆಯುತ್ತಿದೆ. ಮಲೆನಾಡಿನ ಭಾಗದ ಹರಿಜನರ, ಗಿರಿಜನರಲ್ಲಿ ಶಾಲೆಗೆ ಹೋಗುವವರು ಕೆಲವೆ ಕೆಲವು ಮಂದಿ ಮಾತ್ರ. ಇವರು ಕೂಲಿಯಿಂದ ರೈತನಾಗುವ ಸ್ಥಿತಿಗೆ ಬದಲಾವಣೆ ಹೊಂದಲೇ ಇಲ್ಲ. ಕಾರಣ ಅಂದಿನಿಂದ ಇಂದಿನವರೆಗೂ ಇವರು ಕೂಲಿಯಾಗಿಯೇ ಮುಂದುವರಿಯುತ್ತಿರುವುದು ದುರದೃಷ್ಟಕರ ವಿಷಯವಾಗಿದೆ.

ಮಲೆನಾಡಿನ ದೀವರಿಗೆ ಆರ್ಥಿಕವಾಗಿ ಮೇಲೇಳಲು ಸಾಧ್ಯವಾಗದ ಸ್ಥಿತಿಯನ್ನು ಗೇಣಿ ಪದ್ಧತಿ ಹೊಂದಿತು. ದುಡಿಮೆಯಲ್ಲಿ ಅರ್ಧದಷ್ಟು ಆದಾಯ ಭೂಮಾಲಿಕರಿಗೆ ಕೊಡುವುದರಿಂದ ಇವರಿಗೆ ಗಂಜಿಗೂ ಉಳಿಯುತ್ತಿರಲಿಲ್ಲ. ಸಾಮಾನ್ಯವಾಗಿ ಈ ಪ್ರದೇಶದಲ್ಲಿ ಎಕರೆಗೆ ೧೦ ರಿಂದ ೧೫ ಚೀಲ ಭತ್ತ ಬೆಳೆಯುವುದು ಕಷ್ಟ ಸಾಧ್ಯವಾಗಿತ್ತು. ಕೆರೆ ಇದ್ದರು ಅದು ಅಡಿಕೆ ತೋಟಕ್ಕೆ ಮಾತ್ರ ಸಾಕಾಗುತ್ತದೆ. ಇಲ್ಲಿಯ ಭೂಮಿ ಹೊಳೆಯ ಉದ್ದಕ್ಕೂ ಅಕ್ಕ ಪಕ್ಕ ಬರುತ್ತದೆ. ಇಲ್ಲಿಯ ಮಣ್ಣು ಫಲವತ್ತಾದುದಲ್ಲ. ದೀವರ ಜಮೀನು ಹೆಚ್ಚಾಗಿ ಹೊಳೆಯ ಅಕ್ಕಪಕ್ಕದಲ್ಲಿ ಇರುವುದು ಜಾಸ್ತಿ.

ಮಲೆನಾಡಿನ ಭಾಗದಲ್ಲಿ ಇರುವ ದುಬಾರಿ ಸಾಲ. ಇಂತಹ ಸಾಲಗಳಿಗೆ ಕೈ ಒಡ್ಡುವ ಬಡತನದ ಸ್ಥಿತಿ ಇತ್ತು. ಆದರೆ ಈಗ ದೀವರು ಸ್ವಾಭಿಮಾನಿಗಳಾಗಿ, ಬ್ಯಾಂಕು ಮುಂತಾದ ರಾಷ್ಟ್ರೀಕೃತ ವಾಣಿಜ್ಯ ಕೇಂದ್ರಗಳಲ್ಲಿ

ವ್ಯವಹರಿಸುತ್ತಾ ಆರ್ಥಿಕವಾಗಿ ಉತ್ತಮವಾಗಿದ್ದಾರೆ ಎಂದರೆ ತಪ್ಪಾಗಲಾರದು. ಇವರ ಬಿಕ್ಕಟ್ಟಿಗೆ ಮತ್ತೊಂದು ಕಾರಣ, ಸಣ್ಣ ವಯಸ್ಸಿನಲ್ಲಿ ಮದುವೆಯಾಗುವುದು. ತತ್‌ಕ್ಷಣ ಬಿಕ್ಕಟ್ಟಾಗುವುದು ಈ ರೀತಿಯಿಂದಾಗಿ ಭೂಮಿ ಮತ್ತೆ ಸಣ್ಣಸಣ್ಣ ಭಾಗಗಳಾಗಿ ನಿರ್ವಹಣಾ ವೆಚ್ಚ ಜಾಸ್ತಿಯಾಗಿ ಆರ್ಥಿಕ ಸಂಕಷ್ಟಕ್ಕೆ ಸಿಲುಕಿರುವುದು ಈ ಪ್ರಾಂತ್ಯದಲ್ಲಿ ಕಂಡು ಬರುತ್ತದೆ. ಆದರೆ ವ್ಯಕ್ತಿ ಸ್ವಾತಂತ್ರ್ಯದ ನೆಮ್ಮದಿಯ ಬದುಕು ಅವರ ಕಂಗಳಲ್ಲಿ ಗೋಚರಿಸುತ್ತಿದೆ.

ಕಾಗೋಡಿನ ಬಗ್ಗೆ ಹೇಳಿದ ಮಾತುಗಳು ಬಹ್ವಾರೆ ಮಲೆನಾಡಿನ ಎಲ್ಲಾ ಹಳ್ಳಿಗೂ ಅನ್ವಯಿಸುತ್ತದೆ. ಕೆಲವು ಸಣ್ಣ ವ್ಯತ್ಯಾಸಗಳು ಇರಬಹುದು. ಆದರೆ ಒಟ್ಟು ಚಿತ್ರದಲ್ಲಿ ಯಾವುದೇ ವ್ಯತ್ಯಾಸವಿಲ್ಲ. ಕರ್ನಾಟಕದ ಯಾವುದೇ ಹಳ್ಳಿಗೆ ಇರದ ದೊಡ್ಡ ಸ್ಥಾನ ಕಾಗೋಡಿಗಿದೆ. ಕಾಗೋಡಿನ ಗೇಣಿದಾರ ರೈತರು, ಭೂಮಾಲೀಕ ಕುಟುಂಬ ಮತ್ತು ಮೈಸೂರು ರಾಜ್ಯದ ಕಾಂಗ್ರೆಸ್ ಸರಕಾರದ ವಿರುದ್ಧ ೧೯೫೦-೫೧ರಲ್ಲಿ ಸುಮಾರು ಒಂದು ವರ್ಷ ಕಾಲ ಸುಸಂಘಟಿತ ಹೋರಾಟ ನಡೆಸಿದರು. ಅನೇಕ ರಾಜಕೀಯ ಮುಖಂಡರನ್ನ ತನ್ನತ್ತ ಸೆಳೆಯಲು ಕಾರಣವಾದ ಭೂಮಿ ಇದಾಗಿದೆ. ರಾಷ್ಟ್ರೀಯ ನಾಯಕರಾದ ರಾಮಮನೋಹರ ಲೋಹಿಯಾ ಕೂಡಾ ಕಾಗೋಡಿನವರೆಗೆ ಬಂದು ಸತ್ಯಾಗ್ರಹದಲ್ಲಿ ಪಾಲ್ಗೊಂಡು, ಕೆಲವು ದಿನಗಳವರೆಗೆ ಸೆರೆಮನೆವಾಸ ಅನುಭವಿಸಿದರು. ಕರ್ನಾಟಕದ ಏಕಮಾತ್ರ ಸುಸಂಘಟಿತ ರೈತ ಹೋರಾಟವೆಂದು ಕಾಗೋಡು ಸತ್ಯಾಗ್ರಹವನ್ನು ನೋಡಬಹುದು.

## ಭೂಮಾಲಿಕತ್ವ-ಒಡೆಯ : ಒಕ್ಕಲು ಸಂಬಂಧ

ಸಾಗುವಳಿ ಭೂಮಿ ಇರುವ ಕಡೆ ಭೂಮಾಲಿಕತ್ವ ಕಂಡು ಬರುತ್ತದೆ. ಆಯಾ ಭಾಗದಲ್ಲಿ ಸಾಮಾಜಿಕ ವ್ಯವಸ್ಥೆಯಲ್ಲಿ ಮುಂಚೂಣಿಯಲ್ಲಿರುವ ಜನಾಂಗ ಭೂಮಿಯ, ಬಂಡವಾಳದ ಒಡೆಯರಾಗುವ ಪದ್ಧತಿ ಇದೆ. ರಾಜರ ನಂತರ ಬ್ರಿಟಿಷರ ಕಾಲದಲ್ಲಿ ಕಂದಾಯ ವಸೂಲಾತಿಯ ಸಂಬಂಧವಾಗಿ ಭೂಮಿ ಎಂಬುದು ಪ್ರಬಲ ಜನಾಂಗದ ತೆಕ್ಕೆಗೆ ಸೇರ್ಪಡೆಯಾಯಿತು. ಕರ್ನಾಟಕದಲ್ಲಿ ಭೂಮಾಲೀಕರು ಹೆಚ್ಚಾಗಿ ಬ್ರಾಹ್ಮಣ, ಲಿಂಗಾಯಿತ (ವೀರಶೈವ), ಒಕ್ಕಲಿಗ ಮುಂತಾದ ಬಲಿಷ್ಠ ಕೋಮಿನವರು ಆಗಿದ್ದಾರೆ. (ಒಡೆಯ : ಭೂಮಿಗೆ ಯಜಮಾನ. ಒಕ್ಕಲು - ಗೇಣಿರೈತ, ಒಕ್ಕಲಿಗ - ಹಿಂದುಳಿದ ಬಲಿಷ್ಠ ಜನಾಂಗ)

೧೯೫೦ರ ವೇಳೆಗೆ ಕಾಗೋಡು ಗ್ರಾಮದಲ್ಲಿ ೭೦ ದೀವರ ಮನೆಗಳು, ೧೪ ಹರಿಜನ ಕುಟುಂಬಗಳು, ೩ ಮಡಿವಾಳರು, ೧ ಅಕ್ಕಸಾಲಿಗರ ಕುಟುಂಬಗಳು ವಾಸವಾಗಿದ್ದವು. ಹರಿಜನರನ್ನು ಬಿಟ್ಟು ಉಳಿದವರೆಲ್ಲರೂ ಕಾಗೋಡು ಗೌಡರ ಒಕ್ಕಲುಗಳಾಗಿದ್ದರು. ಆ ಕಾಲದಲ್ಲಿ ಕಾಗೋಡಿನಲ್ಲಿ ಒಂದೇ ಒಂದು ಬೃಹತ್ತಾದ ಗೌಡರ ಮನೆ ಇತ್ತು. ಇವರಿಗೆ ಏಳು ಹಳ್ಳಿ ಗೌಡರು ಎಂದು ಕರೆಯುತ್ತಿದ್ದರು. ಸಾವಿರಾರು ಎಕರೆ ತರಿ ಜಮೀನು ಇವರ ಖಾತೆಯಲ್ಲಿತ್ತು. ಕಾಗೋಡಿನ ಅಂಚಿನಲ್ಲಿ ಬರುವ ವರದಾ ನದಿಯ ದಡದಲ್ಲಿ ಬರುವ ಮಣಗದ್ದೆ, ಹಿರೇನೆಲ್ಲೂರು, ಸಣ್ಣಮನೆ, ಸೂರಗುಪ್ಪೆ, ಯಲಕುಂದ್ಲಿ, ಕುಂಠಿಕೊಪ್ಪ ಮತ್ತು ತಟ್ಟೆಗುಂಡಿಗಳಲ್ಲಿ ಗೌಡರು ಜಮೀನು ಹೊಂದಿದ್ದರು. ಸ್ವಂತ ಸಾಗುವಳಿ ಹನ್ನೆರಡು ಎಕರೆಯಷ್ಟು ತರಿ ಜಮೀನು ಮತ್ತು ಆರು ಎಕರೆ ಅಡಿಕೆ ಬಾಗಾಯ್ತು ಮಾತ್ರ. ಉಳಿದ ಎಲ್ಲಾ ಜಮೀನನ್ನು ಗೇಣಿಗೆ ಕೊಟ್ಟಿದ್ದರು. ಆ ಕಾಲದಲ್ಲಿ ಗೌಡರು

ಮೂರುಸಾವಿರ ರೂಪಾಯಿ ಕಂದಾಯವನ್ನು ಒಂದು ವರ್ಷಕ್ಕೆ ಕಟ್ಟುತ್ತಿದ್ದರು. ದೀವರಲ್ಲಿ ಸವಾಜಿ ಬೀರನಾಯಕರ ಮನೆಯವರಿಗೆ ಸ್ವಂತ ಸಾಗುವಳಿ ಜಮೀನು ಮತ್ತು ಗೇಣಿ ಜಮೀನುಹೊಂದಿದ್ದರು. ಇವರನ್ನು ಬಿಟ್ಟರೆ ಉಳಿದ ಯಾರಿಗೂ ಸ್ವಂತ ಜಮೀನು ಇರಲಿಲ್ಲ. ಹರಿಜನರ ಕೇರಿಯ ೧೪ ಮನೆಯವರು ಕೂಲಿಗಾಗಿ ಗೌಡರನ್ನು ಆಶ್ರಯಿಸಿದ್ದರು. ಇವರಿಗೆ ಗೇಣಿ ಭೂಮಿಯು ಇರಲಿಲ್ಲ. ಉಳಿದ ದೀವರಿಗೆ ಗೇಣಿಭೂಮಿ ಇರುವುದು ಕಂಡುಬರುತ್ತದೆ. ಇವರೆಲ್ಲರು ಗೌಡರ ಮನೆಯ ಒಕ್ಕಲಾಗಿದ್ದರು. ಒಡೆಯ ಒಕ್ಕಲು ಸಂಸ್ಕೃತಿ ದಟ್ಟವಾಗಿತ್ತು. ಒಕ್ಕಲು ಎನ್ನುವುದಕ್ಕಿಂತ ಗುಲಾಮ ಪದ್ಧತಿ ರೂಢಿಯಲ್ಲಿತ್ತು ಎಂದರೆ ತಪ್ಪಾಗಲಾರದು.

ಮಲೆನಾಡಿನಲ್ಲಿ ಗೇಣಿ, ಬಿಟ್ಟಿ ಪದ್ಧತಿಗಳು ಚಾಲ್ತಿಯಲ್ಲಿದ್ದವು. ರೈತ ಖಾತೆದಾರ ಭೂಮಾಲೀಕನ ಭೂಮಿಯನ್ನು ಎಕರೆಗೆ ಇಷ್ಟು 'ಖಂಡುಗ' ಭತ್ತ ಎಂದು ನಿಗದಿಮಾಡಿ ಬೇಸಾಯ ಮಾಡುವ ಕ್ರಮಕ್ಕೆ ಗೇಣಿ ಪದ್ಧತಿ ಎಂದು ಕರೆಯುತ್ತಾರೆ. ರೈತನ ಒಟ್ಟು ಉತ್ಪಾದನೆಯ ಅರ್ಧದಷ್ಟು ಭೂಮಾಲೀಕನಿಗೆ ಕೊಡಬೇಕಾಗುತ್ತಿತ್ತು. ಭೂಮಾಲಿಕ ಸರಕಾರಕ್ಕೆ ಕಂದಾಯ ಕಟ್ಟುತ್ತಿದ್ದರು. ನೆರೆ ಹಾವಳಿಗೆ ತುತ್ತಾಗುವ ಜಮೀನಿಗೆ ಕೇವಲ ಕಂದಾಯ ಮಾತ್ರ ವಸೂಲಾಗುತ್ತಿತ್ತು. ಗೇಣಿರೈತರು ಇನ್ನುಳಿದ ಆದಾಯದಲ್ಲಿ ಮನೆ ಖರ್ಚು ತೂಗಿಸಬೇಕಾಗಿತ್ತು. ಹಾಗಾಗಿ ದೀವರು ಕಡುಬಡತನದಲ್ಲಿ ನರಳಬೇಕಾದ ಸ್ಥಿತಿ ಇತ್ತು. ಯಾವ ಒಕ್ಕಲಿಗೂ ೫-೬ ಎಕರೆಗೆ ಮೀರಿ ಗೇಣಿಗೆ ಜಮೀನು ಕೊಟ್ಟಿರಲಿಲ್ಲ. ಹಾಗಾಗಿ ದೀವರ ಮನೆಗಳು ಹೆಚ್ಚಾಗಿ ಅಡಿಕೆ ಸೋಗೆಯ, ಕರಡದ ಕಟ್ಟಿನ, ಹುಲ್ಲಿನ ಮನೆಗಳು ಸರ್ವೇಸಾಮಾನ್ಯವಾಗಿದ್ದವು. ಆದರೆ ಈಗ ವಾಸಿಸುವ ಮನೆಗಳೆಲ್ಲಾ ಹೆಂಚಿನ ಮನೆಗಳಾಗಿವೆ. ಕಟ್ಟಿಗೆ, ಕೊಟ್ಟಿಗೆ, ಬಚ್ಚಲು ಮನೆಗಳು ಸೋಗೆಯ ಮನೆಗಳನ್ನು ಕಾಣಬಹುದು. ಗುಡಿಸಲ ಮನೆಗಳು ಈಗ ವಿರಳವಾಗಿ ಕಂಡುಬರುತ್ತವೆ.

ಜಮೀನ್ದಾರಿ ಪದ್ಧತಿಯ ಪ್ರಕಾರ, ಸಾಗುವಳಿಗೆ ಯೋಗ್ಯವಾಗಿರುವ ಸಾವಿರಾರು ಎಕರೆಯ ಭೂಮಿಯ ಒಡೆತನವನ್ನು ಒಬ್ಬನೇ ಹೊಂದಿರುತ್ತಿದ್ದ. ಅವನ ಭೂಮಿಯಲ್ಲಿ ದುಡಿಯುವ ಜನರನ್ನು ಒಕ್ಕಲುಗಳೆಂದು ಕರೆಯುತ್ತಿದ್ದರು. ಆದರೆ ಈ ಒಕ್ಕಲುಗಳನ್ನು ಭೂಮಾಲೀಕರು ತಮ್ಮ ಗುಲಾಮರಂತೆಯೇ ಕಾಣುತ್ತಿದ್ದರು. (ಹೆಚ್.ಗಣಪತಿಯಪ್ಪ, ೧೯೯೭, ಪುಟ ೧೩೭) ಇಲ್ಲಿ ಕಂಡು ಬರುವ ಅಂಶವೆಂದರೆ ರೈತನಿಗೆ ನಿಜವಾದ ರಕ್ಷಣೆ ಇರಲಿಲ್ಲ. ಆತ ಅತಂತ್ರ ಸ್ಥಿತಿಯಲ್ಲಿದ್ದ. ಒಡೆಯರು ಬಿಡು ಅಂದರೆ ಜಮೀನನ್ನು ಬಿಟ್ಟುಬಿಡಬೇಕಾಗಿತ್ತು. ಒಡೆಯ ಮತ್ತು ಒಕ್ಕಲು ಮಧ್ಯೆ ಯಾವುದೇ ಕರಾರು ಪತ್ರ ಇರಲಿಲ್ಲ. ಗೇಣಿಯನ್ನು ಒಡೆಯರೆ ನಿರ್ಧರಿಸುತ್ತಿದ್ದರು. ಒಡೆಯನ ಅನುಮತಿ ಇಲ್ಲದೆ ಜಮೀನನ್ನು ಪ್ರವೇಶಿಸುವಂತಿರಲಿಲ್ಲ. ಇದು ಮಲೆನಾಡಿನ ಎಲ್ಲಾ ಭಾಗಗಳಲ್ಲೂ ಸರ್ವೇಸಾಮಾನ್ಯವಾಗಿತ್ತು.

ಗೇಣಿ ಪದ್ಧತಿಯಲ್ಲದೆ ಇನ್ನೂ ಅನೇಕ ಪದ್ಧತಿಗಳು ಗೇಣಿ ರೈತನ ಮೇಲೆ ಹೇರಲ್ಪಟ್ಟಿತ್ತು. "ಬಿಟ್ಟಿ ಪದ್ಧತಿ" ಇದೊಂದು ಅಮಾನವೀಯ ಪದ್ಧತಿಯಾಗಿದೆ. ಹಬ್ಬ ಹರಿದಿನಗಳು, ಮದುವೆ ಮುಂಜಿಗಳಲ್ಲಿ ಗೇಣಿ ರೈತರೆಲ್ಲ ಒಡೆಯರ ಮನೆಗೆ ಬಂದು ಬಿಟ್ಟಿ ಚಾಕರಿ ಮಾಡಬೇಕಾಗುತ್ತಿತ್ತು. ಇದಕ್ಕೆ ಯಾವುದೇ ಸಂಬಳವಿಲ್ಲ. ಹಬ್ಬದ ಊಟ, ವರ್ಷಕ್ಕೆ ಒಂದು ಸಾರಿ ಟವೆಲ್ಲು, ಪಂಚೆ ಮಾತ್ರ ಪಡೆಯುತ್ತಿದ್ದರು. ಇದಲ್ಲದೆ ಸಲಿಗೆ ಭತ್ತ ಅಂದರೆ ಹೆಚ್ಚಿನ ಭತ್ತವನ್ನು ಕೊಡಬೇಕಾಗುತ್ತಿತ್ತು. ಅಲ್ಲದೆ ಎಕರೆಗೆ ಇಂತಿಷ್ಟು ಹುಲ್ಲನ್ನು ಕೊಡಬೇಕಾಗುತ್ತಿತ್ತು.

ಮನೆಯಲ್ಲಿ ಬೆಳೆದ ತರಕಾರಿಯನ್ನು ಕೊಟ್ಟು ಒಡೆಯರ ಮುಗುಳ್ನಗೆಯನ್ನು ಸಂಪಾದಿಸುವ ಕೆಲಸವು ನಡೆಯುತ್ತಿತ್ತು. ಒಟ್ಟಾರೆ ಗೇಣಿ ರೈತನಿಗೆ ವ್ಯಕ್ತಿ ಸ್ವಾತಂತ್ರ್ಯ ಇರಲಿಲ್ಲ. ಇವೆಲ್ಲವನ್ನು ಗೇಣಿ ರೈತ ಪ್ರಶ್ನೆ ಮಾಡುವಂತಿರಲಿಲ್ಲ. ಒಂದು ರೀತಿ ಕರ್ತವ್ಯವೆಂಬಂತೆ ಮಾಡುತ್ತಿದ್ದರು.

೧೯೫೦-೫೧ರಲ್ಲಿ ಕಾಗೋಡಿನ ಒಡೆಯರು ಒಂದೇ ಮನೆಯಲ್ಲಿ ವಾಸ ಮಾಡುತ್ತಿದ್ದರು. ಇವರ ಮನೆತನದಲ್ಲಿ ಹಿಸ್ಸೆಯಾಗಿರಲಿಲ್ಲ. ಮೂರು ಜನ ಅಣ್ಣತಮ್ಮಂದಿರು ಒಟ್ಟಿಗೆ ವಾಸಿಸುತ್ತಿದ್ದರು. ಕೆ. ಶಿವಲಿಂಗಗೌಡರು, ಕೆ.ಗುರುಬಸಪ್ಪ ಒಡೆಯರು, ಮತ್ತು ಕೆ.ಗುರುವಯ್ಯಗೌಡ ಈ ತ್ರಿಮೂರ್ತಿಗಳ ತಂದೆ ಈ ಮಕ್ಕಳು ಸಣ್ಣ ವಯಸ್ಸಿನವರಿದ್ದಾಗಲೆ ತೀರಿಕೊಂಡಿದ್ದರು. ಈ ಮನೆತನದ ವಂಶವೃಕ್ಷ ಇಂತಿದೆ.




ಕೆ.ಶಿವಲಿಂಗಗೌಡರು ಬಹಳ ಸಭ್ಯ ಮನುಷ್ಯರಾಗಿದ್ದರು. ಇವರು ದಾರಿಯಲ್ಲಿ ಬಿದ್ದ ಸಗಣಿಯನ್ನು ಯಾರ ಸಗಣಿ ಗುಂಡಿಯಾದರು ಸರಿ ಅದಕ್ಕೆ ಹಾಕುತ್ತಿದ್ದರು. ಬಹಳ ಸಜ್ಜನರು ಎಂದು ಹೇಳುತ್ತಾರೆ. ಇವರ ಬಿತ್ತಿನವರಾದ ಕೆ.ಗುರುಬಸಪ್ಪ ಒಡೆಯರ್‌ರವರು ಶಿವಮೊಗ್ಗ ಜಿಲ್ಲಾ ಕಾಂಗ್ರೆಸ್‌ನ ಮುಂದಾಳು ಆಗಿದ್ದರು. ಇವರು ಕಲ್ಕತ್ತ, ಮದರಾಸು ವಿಶ್ವವಿದ್ಯಾಲಯಗಳಲ್ಲಿಯೂ ಓದಿದ್ದರು. ಈ ಭಾಗಕ್ಕೆ ಆಗಿನ ಕಾಲದಲ್ಲಿ ಅತಿ ಹೆಚ್ಚು ಓದಿದ ಮನುಷ್ಯರಾಗಿದ್ದರು. ೧೯೪೨ರ ವೇಳೆಯಲ್ಲಿ ನಡೆದ ಸ್ವಾತಂತ್ರ್ಯ ಚಳುವಳಿಯಲ್ಲಿ ಪಾಲ್ಗೊಂಡಿದ್ದರು. ಅರಣ್ಯ ಸತ್ಯಾಗ್ರಹದಲ್ಲಿ ತಮ್ಮ ಕೆಲವು ಒಕ್ಕಲುಗಳಲ್ಲಿ ಕೆಲವರನ್ನು ಕರೆದುಕೊಂಡು ಹೋರಾಟಕ್ಕೆ ದುಮುಕಿದ್ದರು. ೧೫ ತಿಂಗಳ ಸೆರೆಮನೆವಾಸ ಅನುಭವಿಸಿದ್ದರು. ಇವರ ಜೊತೆಗಿನ ಒಡನಾಡಿ. ದೀವರ ಮುಖಂಡ ಬರಸಿ ದ್ಯಾವಪ್ಪನವರು' (೮೮ ವರ್ಷ) ಹೇಳುವಂತೆ 'ಬಹಳ ಒಳ್ಳೆಯ ವ್ಯಕ್ತಿತ್ವವನ್ನು ಹೊಂದಿದ ವ್ಯಕ್ತಿ. ಆಗಿನ ಕಾಲದಲ್ಲಿ ಸಹಪಂಕ್ತಿ ಭೋಜನ ಕೂಟದಲ್ಲಿ ಪಾಲ್ಗೊಂಡು ನನ್ನನ್ನು ಅವರ ಪಕ್ಕದಲ್ಲಿ ಕೂರಿಸಿಕೊಂಡು ಊಟ ಮಾಡುತ್ತಿದ್ದರು. ಆಗಿನ ಕಾಲದಲ್ಲಿ ಇಂತವರು ಬಹಳ ಅಪರೂಪ' ಹೀಗಾಗಿ ಲಿಂಗಾಯಿತರು ಇವರನ್ನು ಹೆಚ್ಚಾಗಿ ಇಷ್ಟಪಡುತ್ತಿರಲಿಲ್ಲ. ಹೇಳುವಂತೆಯು, ಅನುಭವಿಸುವಂತೆಯು ಇರಲಾರದ ಸ್ಥಿತಿಯಾಗಿತ್ತು. ಎರಡು ಸಾರಿ (೧೯೫೨ ಮತ್ತು ೧೯೫೭) ಚುನಾವಣೆಗಳಲ್ಲಿ ಭಾರಿ ಬಹುಮತದಿಂದ ಶಿವಮೊಗ್ಗ ಲೋಕಸಭಾ ಚುನಾವಣೆಗಳಲ್ಲಿ ಆಯ್ಕೆಯಾಗಿದ್ದರು. ಹೀಗಾಗಿ ಒಡೆಯರ ಹೆಸರು ಕಾಗೋಡು ಸತ್ಯಾಗ್ರಹದ ಕರಪತ್ರಗಳಲ್ಲಿ ಪ್ರಮುಖ ಕೇಂದ್ರ ಬಿಂದುವಾಗಿತ್ತು. ಎಲ್ಲೋ ಒಂದು ಕಡೆ ಭೂಮಾಲೀಕ ವ್ಯವಸ್ಥೆಯಲ್ಲಿ ಕಂಡುಬರುವಂತಹ ಸಭ್ಯ, ಗುಣ ಸಂಪನ್ನ ವ್ಯಕ್ತಿಗಳಾಗಿದ್ದರು. ಇವರ ಬಗ್ಗೆ ಹೆಚ್.ಗಣಪತಿ ಯಪ್ಪನವರು ಸಹ ಒಳ್ಳೆಯ ಸುಸಂಸ್ಕೃತ ವ್ಯಕ್ತಿಯಾಗಿದ್ದರು ಎಂದು ಹೇಳುತ್ತಾರೆ. ಇವರು ಕುಟುಂಬದ ವ್ಯವಹಾರದಲ್ಲಿ ತಲೆ ಹಾಕುತ್ತಿರಲಿಲ್ಲ. ರಾಜಕೀಯವಾಯಿತು ಇವರಾಯಿತು.

ರೈತ ಹೋರಾಟಕ್ಕೆ ಕಾರಣೀಭೂತವಾದವರು ಮಹಾ ಗರ್ವಿಷ್ಠ, ಭೂಮಾಲೀಕ ನಮುವಳ್ಳಿಕೆಯ, ಗುರುಪ್ಪ ಗೌಡರು. ಇವರು ಈ ಮನೆತನದ ಕಿರಿಯ ಸಹೋದರ. ಒಕ್ಕಲುಗಳ ಪಾಲಿಗೆ ದುಃಸ್ವಪ್ನವಾದ ವ್ಯಕ್ತಿ, ಪಾಳೆಯಗಾರಿಕೆ ವ್ಯಕ್ತಿ. ಸಂಧಾನದಲ್ಲಿ ಬಗೆಹರಿಯುವಂತಹ ಘಟನೆಯನ್ನು ತೀವ್ರವಾಗಿ ಬೆಳೆಸಿ ಹೋರಾಟಕ್ಕೆ ನಾಂದಿ ಹಾಡಿದ ವ್ಯಕ್ತಿ. ಮಲೆನಾಡಿನ ಭೂಮಾಲಿಕರೆಲ್ಲರು ಇದೇ ರೀತಿ ಇದ್ದರು. ಕೆ.ಜಿ.ಒಡೆಯರಂತವರು ಬಹಳ ಅಪರೂಪ. ಸಾಗರ, ಸೊರಬ, ಹೊಸನಗರ ತಾಲ್ಲೂಕುಗಳಲ್ಲಿ ಪ್ರತಿಶತ ೯೦ರಷ್ಟು ಗೇಣಿರೈತರು ದೀವರಾಗಿದ್ದರು.

ಮೈಸೂರು ರಾಜ್ಯ (ನವೆಂಬರ್ ೧೯೫೬, ಮೈಸೂರು ಸರಕಾರದ ವಾರ್ಷಿಕ ವರದಿಗಳು)

| ಶಿವಮೊಗ್ಗ ಜಿಲ್ಲೆ (ಔದ್ಯೋಗಿಕ ವಿವರ ೧೯೫೧) | | |
|---|---|---|
| ಸ್ವಂತ ಬೇಸಾಯಗಾರರು | ೨.೬೧.೩.೨೫ | ೩೯.೪% |
| ಗೇಣಿದಾರರು | ೧.೧೧.೭೮೦ | ೧೬.೯% |
| ಕೂಲಿ | ೬೯.೩೬೨ | ೧೦.೫% |
| ಬೇಸಾಯ ಮಾಡದ ಭೂಮಾಲೀಕರು | ೨೯.೯೭೭ | ೪.೫% |

ಇದರಲ್ಲಿ ಬಹುಪಾಲು ದೀವರು ಗೇಣಿದಾರರಾಗಿದ್ದರು. ಗೇಣಿ ರೈತರಿಗೆ ಸ್ವಾಭಿಮಾನ - ಸ್ವಾತಂತ್ರ್ಯ ಎಂಬುದೇ ಮರೆತು ಹೋಗಿತ್ತು. ತಮ್ಮ ಹಣೆಬರಹವೇ ಇದು ಏನು ಮಾಡಲು ಸಾಧ್ಯವಿಲ್ಲ ಎಂಬ ಮನೋಭಾವ ದೀವರದಾಗಿತ್ತು.

ಕೆಳದಿಯ ಶಿವಪ್ಪನಾಯಕ ತನ್ನ ಅಳಿಯ ಕೆಂಚಣ್ಣನನ್ನು ಕರೆದು ಗೇಣಿಬಾಕಿ ಕೊಡದ ರೈತರನ್ನು ಕರೆಯಿಸಿ ಭೂಮಾಲಿಕರಿಗೆ ಕೊಡಿಸುವ ಏರ್ಪಾಟು ಮಾಡುತ್ತಿದ್ದನಂತೆ. (ಮೈಸೂರು ಪುರಾತತ್ವ ಇಲಾಖೆಯ ವಾರ್ಷಿಕ ವರದಿಗಳು, ೧೯೧೬, ಪುಟ ೧೧೨) ಕೆಳದಿಯ ರಾಜರ ಸಮಕ್ಷಮದಲ್ಲಿ ಗೇಣಿ ತಕರಾರಿನ ಬಗ್ಗೆ ವ್ಯಾಜ್ಯಗಳು ತೀರ್ಮಾನವಾಗುತ್ತಿದ್ದವು. ಉತ್ಪಾದನಾ ವೆಚ್ಚ ಭರಿಸಲಾಗದೆ ರೈತರು ಜಮೀನು ಉಳುಮೆ ಮಾಡುವುದನ್ನು ಬಿಟ್ಟರೆ ಅವರನ್ನು ಕರೆಯಿಸಿ ಜಮೀನು ಮಾಡುವಂತೆ ಶಾಸನಗಳನ್ನು ವಿಧಿಸಲಾಗುತ್ತಿತ್ತು. (ಗುಂಡಾ ಜೋಯಿಸ್, ೧೯೭೩, ಪುಟ ೬೨) ಹೀಗೆ ಗೇಣಿರೈತರಿಗೆ ಒತ್ತಾಯ ಪೂರ್ವಕವಾಗಿ ಗುಲಾಮಿ ಸಂಸ್ಕೃತಿ ಯನ್ನು ಹೇರಲಾಗುತ್ತಿತ್ತು. ಇಂತಹ ನಿಕೃಷ್ಟ ಪದ್ಧತಿ ಶತಮಾನಗಳಿಂದಲೂ ನಡೆದುಕೊಂಡು ಬಂದಿರುವುದು ದಾಖಲೆಗಳಿಂದ ತಿಳಿಯುತ್ತದೆ.

ದಣಿಗಳಿಗೆ ಮರ್ಯಾದೆ ಕೊಡುವ ಪದ್ಧತಿಯಂತು ಅಮಾನವೀಯ ಸಂಸ್ಕೃತಿಯಾಗಿತ್ತು. ಪಸಾಹತುಶಾಹಿ ಸಂಸ್ಕೃತಿ ಮನೆ ಮಾಡಿತ್ತು. ಮನುಷ್ಯ ಮನುಷ್ಯನನ್ನು ಗೌರವಿಸುವ ಪದ್ಧತಿ ಇರಲಿಲ್ಲ. ಶಿವಮೊಗ್ಗ ಜಿಲ್ಲೆಯಲ್ಲಿ ಇದು ಸುಮಾರು ೭೦ರ ದಶಕದವರೆಗು ಇತ್ತು ಎಂದರೆ ತಪ್ಪಾಗಲಾರದು. ಭೂಮಾಲಿಕರು ಇದ್ದ ಕಡೆ ಇದು ಕಂಡುಬರುತ್ತದೆ. ದಣಿಗಳ ಎದುರು ದೀವರು ಕಾಲು ಮುಚ್ಚುವಂತೆ ಪಂಚೆ ಉಡುವಂತಿರಲಿಲ್ಲ. ಅದು

ಮೊಣಕಾಲಿನ ಮೇಲೆ ಇರಬೇಕು. ಜೋಡು, ಮೆಟ್ಟು, ಎಕ್ಕಡ (ಚಪ್ಪಲಿ) ಹಾಕುವಂತಿರಲಿಲ್ಲ. ದಣಿಗಳು ಎದುರು ಸಿಕ್ಕರೆ ಮೈಬಗ್ಗಿಸಿ ನಮಸ್ಕಾರ ಮಾಡಬೇಕಾಗಿತ್ತು. ದಣಿಗಳ ಮನೆಗೆ ಹೋದರೆ ಜಗುಲಿಯ ಮೂಲೆಯಲ್ಲಿ ಕುಕ್ಕರಗಾಲಿನಲ್ಲಿ ಕೂರಬೇಕಾಗಿತ್ತು. ಹಳೆಯ ಕಾಲದ ತೊಟ್ಟಿ ಮನೆಗಳಲ್ಲಿ (ದಣಿಗಳ ಮನೆಯನ್ನು ಗಮನಿಸಿದರೆ), ಹೊರಗೆ ಎರಡು ಜಗುಲಿ ಇರುತ್ತದೆ. ಮೇಲಿನ ಜಗುಲಿ-ದಣಿಗಳು, ಶ್ರೀಮಂತರು ಜಾತಿ ಬಾಂಧವರು ಕೂರುವಂತಹದು. ಕೆಳಗಿನ ಜಗುಲಿ, ಗೇಣಿ ರೈತರು ಕೂಲಿಯವರು ಕೂರುವಂತಹದು, ಚಪ್ಪಲಿ ಬಿಡುವ ಜಾಗದಲ್ಲಿ ಕೂರಬೇಕಾಗಿತ್ತು.

ಒಡೆಯರ ಮಕ್ಕಳು ತೊಟ್ಟಿಲ ಶಿಶುವಾಗಿದ್ದರೂ ಕೂಡ ಅಣ್ಣಯ್ಯನವರು, ಅಕ್ಕಮ್ಮನವರು ಎಂದು ಬಹುವಚನದಿಂದ ಸಂಬೋಧಿಸಬೇಕು. ಅವರ ಮನೆಯಲ್ಲಿ ಊಟ ಮಾಡುವುದಾದರೆ ಕೊಟ್ಟಿಗೆಯ ಮನೆಯ ತೌಡು ಕುಟ್ಟುವ ಮನೆಯಲ್ಲಿ ಊಟ ಹಾಕುತ್ತಿದ್ದರು. ಒಡೆಯರಿಗೆ ಸೊಂಟ ಬಗ್ಗಿಸಿ ನಮಸ್ಕಾರ ಹೇಳಬೇಕು ಇವುಗಳನ್ನು ಮೀರಿದವರಿಗೆ ಕಂಬಕ್ಕೆ ಕಟ್ಟಿ ಶಿಕ್ಷಿಸುವ ಉದಾಹರಣೆಗಳೇನು ಕಡಿಮೆ ಇರಲಿಲ್ಲ. ಇದನ್ನು ಸರ್ಕಾರಕ್ಕಾಗಲಿ, ಪೋಲೀಸರಿಗಾಗಲಿ ತಿಳಿಸುವ ಸ್ಥಿತಿಯೂ ಇರಲಿಲ್ಲ (ಎಚ್.ಗಣಪತಿಯಪ್ಪ, ೧೯೯೭, ಪುಟ ೧೩೮) ಈ ಬಗೆಯ ಹೇಯ ಗುಲಾಮಗಿರಿ ಆಚರಣೆಗಳನ್ನು ಜಮೀನ್ದಾರರೆಲ್ಲರು ಉಳಿಸಿಕೊಂಡೇ ಬಂದಿದ್ದರು. ಮುಚ್ಚು ಮರೆಯಿಂದಲ್ಲ, ಬಹಿರಂಗವಾಗಿ. ಇಂದು-ನಿನ್ನೆಯದಲ್ಲ, ತಲತಲಾಂತರಗಳಿಂದ ಬಂದದ್ದು. ಇವುಗಳಿಂದ ತಪ್ಪಿಸಿಕೊಳ್ಳಲು ಯಾರಾದರು ಪ್ರಯತ್ನಿಸಿದರೆ ಜಮೀನ್ದಾರರು ದರ್ಪ ದಬ್ಬಾಳಿಕೆಯಿಂದ ಮುಗ್ಧ ಗೇಣಿದಾರರ ಮೇಲೆ ಕಡ್ಡಾಯವಾಗಿ ಹೇರುತ್ತಿದ್ದರು.

ಒಕ್ಕಲುಗಳ ಶ್ರಮ ಮಾತ್ರವಲ್ಲ ಅವರ ವಿರಾಮ ಕೂಡ ದಣಿಗಳ ಸೊತ್ತು ಎಂಬಂತೆ ಇತ್ತು. ಹಳ್ಳಿಯಲ್ಲಿ ನಾಟಕ, ಯಕ್ಷಗಾನವಾದರೆ ಮೇಲು ಜಾತಿಯವರಿಗೆ ಮಾತ್ರ ಎದುರಿಗೆ ಕುರ್ಚಿಯಲ್ಲಿ ಕೂಡುವ ಅವಕಾಶವಿತ್ತು. ಇನ್ನುಳಿದ ಇತರೆ ಜಾತಿಯವರು ನೆಲದಲ್ಲಿ ಕೂರಬೇಕಾಗಿತ್ತು. ಕಾಗೋಡಿನಲ್ಲಿ ಕಣಸೆ ಜಟ್ಟ ಎಂಬುವವನು, ಗೌಡರ ಒಕ್ಕಲು, ಮಹಾಸ್ವಾಭಿಮಾನಿ, ಜಟ್ಟ ಒಂದು ಸಾರಿ ನಾಟಕ ನಡೆಯುವಾಗ ಗೌಡರು ಕುರ್ಚಿಯಲ್ಲಿ ಕುಳಿತಿರುವುದನ್ನು ನೋಡಿ ಕಾಡಿಗೆ ಹೋಗಿ ಮರದ ಕೊಂಬೆಗಳನ್ನು ತಂದು ಕುರ್ಚಿಯ ರೀತಿ ಕಟ್ಟಿ ಬೆಳಗಿನವರೆಗೂ ಅದರ ಮೇಲೆ ಕುಳಿತು ನಾಟಕ ನೋಡಿದ್ದನಂತೆ, ಕಾಗೋಡಿನ ಹಲವರು ಇಂದಿಗೂ ಮಾತನಾಡುತ್ತಿರುತ್ತಾರೆ. ಇಂದಿಗೂ 'ಜಟ್ಟ'ನ ಕುಟುಂಬದವರು ಬಗರ್‌ಹುಕುಂ ಜಮೀನು ಸಾಗುವಳಿ ಮಾಡುತ್ತಿದ್ದಾರೆ.

ಕಾಗೋಡು ಸತ್ಯಾಗ್ರಹದಲ್ಲಿ ಕಣಸೆ ಜಟ್ಟ ಭಾಗವಹಿಸಿ ಹಲವು ತಿಂಗಳು ಜೈಲಿನಲ್ಲಿ ಕಳೆದ. ಸತ್ಯಾಗ್ರಹ ಮುಗಿದ ಮೇಲೆ 'ಗೌಡರ ಜಮೀನು ಬೇಡ ಅವರ ಹಂಗೂ ಬೇಡ' ಎಂದು ಕೊನೆಯವರೆಗೂ ಕೂಲಿನಾಲಿ ಮಾಡಿಯೇ ಬದುಕಿದ್ದನಂತೆ. ಸತ್ಯಾಗ್ರಹದ ವೇಳೆಯಲ್ಲಿ ಪೋಲೀಸರೊಂದಿಗೆ ಗಲಾಟೆ ಮಾಡಿ ನಿನ್ನಂತಹ ಇಪ್ಪತ್ತಾರು ಜೋಬಿನವರನ್ನು ಬಹಳ ಕಂಡಿದ್ದೇನೆ ಹೋಗೋ ಎಂದು ಬಯ್ದು ಪೋಲಿಸಿನವರ ಕೈಯಲ್ಲಿ ಹೊಡೆತ ತಿಂದಿದ್ದನಂತೆ. ಇಂತಹ ವ್ಯಕ್ತಿಗಳು ಬಹಳ ಅಪರೂಪ. ಈತನ ಬಗ್ಗೆ ಈಗಲು ಕಾಗೋಡಿನ ಜನರು ಮೆಚ್ಚುಗೆಯ ಮಾತನಾಡುತ್ತಾರೆ. ಹೀಗೆ ಈತ ಸುತ್ತಮುತ್ತಲಿನವರ ಮೆಚ್ಚುಗೆಗೆ ಪಾತ್ರನಾಗಿದ್ದ ಅಚ್ಚರಿ ಹುಟ್ಟಿಸುತ್ತಿದ್ದಾನಂತೆ. ಈತ ೭೦ರ ದಶಕದಲ್ಲಿ ಮರಣಹೊಂದಿ ಇಂದಿಗೂ ಜನಪದರ ಬಾಯಲ್ಲಿ ಜೀವಂತವಾಗಿದ್ದಾನೆ.

ಈ ಭಾಗದ ಗೇಣಿರೈತರು ಭೂಮಾಲಿಕರನ್ನು 'ಅನ್ನ ಕೊಡುವ' ದಣಿಗಳು ನ್ಯಾಯ ಕೊಡುವ ಸರಕಾರವೆಂದೇ ತಿಳಿದಿದ್ದರು. ಹಾಗಾಗಿ ಈ ವ್ಯವಸ್ಥೆ ದೇವರೆ ಮಾಡಿರುವುದೇನೊ ಎಂಬಂತೆ ನಡೆದುಕೊಂಡು ಬಂದಿತ್ತು. ಇದಕ್ಕೆ ಕಾರಣ ಬಡತನ, ಅನಕ್ಷರತೆ ಮುಖ್ಯವಾಗಿತ್ತು. ಹಳ್ಳಿಯ ಒಕ್ಕಲುಗಳಿಗೆ ಸರಕಾರಿ ಯಂತ್ರದ ಅಧಿಕಾರಿಯ ಮುಖ ಪರಿಚಯವಿರಲಿಲ್ಲ. ಸರಕಾರಿ ಅಧಿಕಾರಿಗಳ ಸಂಪರ್ಕವೇನಿದ್ದರೂ ಭೂಮಾಲಿಕರೊಂದಿಗೆ. ಹಾಗಾಗಿ ಗೇಣಿ ರೈತರು ಇವರನ್ನೆಲ್ಲ ಬೆರಗಿನಿಂದ ನೋಡಲು ಕಾರಣವಾಯಿತು. ವಾರ್ಷಿಕ ವರದಿ ಬರೆಯಲು ಬಂದ ಸರಕಾರಿ ಅಧಿಕಾರಿಗಳು ಭೂಮಾಲಿಕರ ಮನೆಯಲ್ಲಿ ಉಳಿದು ಊಟ ಉಪಚಾರವನ್ನು ಪಡೆದು ಅವರಿಷ್ಟದಂತೆ ಬರೆದುಕೊಂಡು ಹೋಗುತ್ತಿದ್ದರು. ಬಡವನಾದ ಗೇಣಿರೈತರು ಕಳ್ಳಭಟ್ಟಿ, ಕಳ್ಳನಾಟಾ ಕೇಸುಗಳಲ್ಲಿ ಸಿಕ್ಕಿ ಹಾಕಿಕೊಂಡರೆ ಇವರನ್ನು ಭೂಮಾಲಿಕರು ರಕ್ಷಿಸುತ್ತಿದ್ದರು. ಹಾಗಾಗಿ ಭೂಮಾಲಿಕರು ರೈತರಕ್ಷಕರಂತೆ ಕಂಡುಬರುತ್ತಿದ್ದರು.

ಮಳೆ ಚೆನ್ನಾಗಿ ಆಗದೆ ಬೆಳೆ ಕೈಕೊಟ್ಟಾಗ ಗೇಣಿಯಲ್ಲಿ ರಿಯಾಯಿತಿ ತೋರಿಸುವುದು, ಸಲಿಗೆ ಭತ್ತ ಪೆಚ್ಚು ಭತ್ತದಲ್ಲಿ ರಿಯಾಯಿತಿ ತೋರಿಸುವುದು, ಒಕ್ಕಲಿಗೆ ಏನಾದರು ತೊಂದರೆಯಾದರೆ, ಮದುವೆ, ಬಾಣಂತನ ಮುಂತಾದ ಸಂಕಷ್ಟಗಳು ಎದುರಾದರೆ ಭತ್ತ ನಗದು ಸಹಾಯ ಮಾಡುವುದು ಇಂತಹ ಔದಾರ್ಯವನ್ನು ಭೂಮಾಲಿಕರು ಪ್ರದರ್ಶಿಸುತ್ತಿದ್ದರು. 'ಭೂಮಾಲಿಕರು ಶೋಷಕರಾಗಿದ್ದರೇ ವಿನಾ ವೈಯಕ್ತಿಕವಾಗಿ ಅಮಾನುಷ ಕ್ರೂರಿಗಳಾಗಲೀ, ಸ್ತ್ರೀಲಂಪಟರಾಗಲೀ ದುರಾಭ್ಯಾಸಿಗಳಾಗಲೀ ಆಗಿರಲಿಲ್ಲ. ಅವರೆ ಒಕ್ಕಲಿಂದ ವಸೂಲಿ ಪಡೆದದ್ದು 'ಆತನ ಹಕ್ಕು ಒಕ್ಕಲಿಗೆ ಆತ ಕೊಟ್ಟದ್ದು ಔದಾರ್ಯ ಎಂಬ ಮೌಲ್ಯ ವ್ಯವಸ್ಥೆಯೇ ಅನ್ಯಾಯದ ವ್ಯವಸ್ಥೆ' (ರಾಜಶೇಖರ ಜಿ.೧೯೮೦, ಪುಟ ೨೯). ಇದೊಂದು ರೀತಿ ಮೇಲ್ನೋಟಕ್ಕೆ ಔದಾರ್ಯ, ಅನುಕಂಪ ದಂತೆ ಕಂಡುಬಂದರು. ಭೂಮಾಲಿಕರ ಸಹಾಯ ಹಸ್ತದ ಹಿಂದೆ ಬಂದು ಉದ್ದೇಶವಿತ್ತು. ಹಾಗಾಗಿ ಒಳನೋಟ ಬೀರಿದರೆ ಗೋಮುಖ ವ್ಯಾಘ್ರ ನೀತಿ ಗೋಚರಿಸುತ್ತದೆ.

ಸಾಗರ ತಾಲ್ಲೂಕಿನ ಆನಂದಪುರ ಹೋಬಳಿಯಲ್ಲಿ ದೊಡ್ಡ ಮಾಲಿಕರಾಗಿದ್ದ (೧೯೫೦ರಲ್ಲಿ) ರಾಮಕೃಷ್ಣ ಅಯ್ಯಂಗಾರ್ ಅವರ ದರ್ಪ ದಬ್ಬಾಳಿಕೆಗೆ ಆನಂದಪುರದ ಜನರು ಹಣ್ಣಾಗಿರುವುದನ್ನು ಈಗಲು ನೆನಪು ಮಾಡಿಕೊಳ್ಳುತ್ತಾರೆ. ಗೇಣಿ ವಸೂಲಿಗೆ ದೊಡ್ಡ ಗೂಂಡಾ ಪಡೆಯನ್ನು ಹೊಂದಿದ್ದು ಅನೇಕ ಗೇಣಿರೈತರನ್ನು ಸ್ವತಃ ಹೊಡೆದು ಹಾಕಿದ್ದರಂತೆ. ಬಿಟ್ಟಿಗೆ ರೈತ ಬಾರದಿದ್ದರೆ ಅವನ ಮನೆಗೆ ಬೆತ್ತವನ್ನು ಅಯ್ಯಂಗಾರರ ಆಳು ತಂದು ಕೊಡುತ್ತಿದ್ದನು. ಗೇಣಿ ರೈತ ಅದನ್ನು ತೆಗೆದುಕೊಂಡು ಅಯ್ಯಂಗಾರರ ಮನೆಗೆ ಒಪ್ಪಿಸಬೇಕು. ಅವರಿಗೆ ಎಷ್ಟು ತೋಚುವುದೋ ಅಷ್ಟು ಛಡಿ ಏಟನ್ನು ಕೊಡುತ್ತಿದ್ದರು. ಹೀಗೆ ಒಕ್ಕಲುಗಳನ್ನು ತಮ್ಮ ಮುಷ್ಟಿಯಲ್ಲಿ ಹಿಡಿದಿಟ್ಟುಕೊಂಡಿದ್ದರು. ಇವರು ಕಾಂಗ್ರೆಸ್ ಮುಂದಾಳು. ಸಾಧು ಮನುಷ್ಯರೆಂದೇ ಪ್ರಖ್ಯಾತರಾದ ಬದರೀ ನಾರಾಯಣ್. ೧೯೫೨ ಸಾಗರ ವಿಧಾನಸಭಾ ಚುನಾವಣೆಯಲ್ಲಿ ಸೋಷಲಿಸ್ಟ್ ಪಕ್ಷದ ಅಭ್ಯರ್ಥಿ ಶಾಂತವೇರಿ ಗೋಪಾಲಗೌಡರಿಂದ ಸೋತಿದ್ದರು. ಇನ್ನೊಬ್ಬ ಭಾರಿ ಭೂಮಾಲಿಕ ಕರೂರು-ಬಾರಂಗಿ ಹೋಬಳಿಯ ಹುರುಳಿ ಕೊಲ್ಲಪ್ಪಗೌಡ ಎಂಬುವವರು ಅನೇಕ ಬಂಡಾಯ ಗೇಣಿರೈತರನ್ನು ಹೊಡೆದು ಕೊಲ್ಲಿಸಿದ್ದರಂತೆ. ಇಂತಹ ಭೂಮಾಲಿಕರು ಮಲೆನಾಡಿನ ಭಾಗದಲ್ಲಿ ಇದ್ದರು.

ಕಾಗೋಡಿನ ಭೂಮಾಲಿಕರು ಕೊಲೆಗಾರರಾಗಿರಲಿಲ್ಲ, ಕ್ರೂರಿಗಳು ಆಗಿರಲಿಲ್ಲ, ಇದೊಂದನ್ನು ಬಿಟ್ಟರೆ ಉಳಿದಂತೆ ಎಲ್ಲಾ ಭೂಮಾಲಿಕರಂತೆ ತಮ್ಮ ಒಕ್ಕಲುಗಳನ್ನು ನಡೆಸಿಕೊಂಡಿದ್ದರು. ಕಾಗೋಡಿನ ಒಡೆಯರ ಆದಾಯವೆಲ್ಲ ದೀವ ಒಕ್ಕಲುಗಳ ಮೇಲೆ ನಿಂತಿತು. ಕಾಗೋಡಿನ ಒಡೆಯರು ನೆರೆ ವಿಪರೀತ ಬಂದು ಜಮೀನು ಮುಳಗಡೆಯಾದರೆ ಗೇಣಿ ಮಾಫಿ ಮಾಡುತ್ತಿದ್ದರು. ಒಕ್ಕಲಿಗೆ ತೊಂದರೆಯಾದರೆ 'ಬರುವ ವರ್ಷ ಬಾಕಿ ತೀರಿಸು ಹೋಗು' ಎನ್ನುತ್ತಿದ್ದರು. ಗೇಣಿ ಇತರ ಕಡೆಗಿಂತ ಬಹಳ ಕಡಿಮೆ ಗೇಣಿಯನ್ನು ವಿಧಿಸಿದ್ದರು. ಕಾರಣ ಈ ಭಾಗದ ಭೂಮಿ ಫಲವತ್ತಾಗಿರಲಿಲ್ಲ. ಉಳಿದ ಜಮೀನಿಗೆ ಎಕರೆಗೆ ಆರು ಚೀಲ ಭತ್ತ ನಿಗದಿ ಮಾಡಿದ್ದರು. ಗೌಡರು ಮತ್ತು ಒಕ್ಕಲು ಯಾವತ್ತು ಕೋರ್ಟು ಕಛೇರಿ ಹತ್ತಿದವರಲ್ಲ. ಎಲ್ಲಾ ವ್ಯವಹಾರವು ನಂಬಿಕೆಯ ಮೇಲೆ ಬರಿ ಬಾಯಿಮಾತಿನಲ್ಲಿ ನಡೆಯುತ್ತಿತ್ತು. ದಕ್ಷಿಣಕನ್ನಡ ಜಿಲ್ಲೆಯಲ್ಲಿಯು ಕೂಡ ಇದೆ ತೆರನಾದ ಸಂಬಂಧವಿತ್ತು. ಶಿರಸಿ ಸೀಮೆಯಲ್ಲಿಯು ಸಹ ಒಕ್ಕಲು ಒಡೆಯ ಸಂಬಂಧ ಇದೆ ತೆರನಾಗಿತ್ತು. ಈ ರೀತಿಯ ವಿಶ್ವಾಸದ ನಂಬಿಕೆಯೇ ಒಕ್ಕಲುಗಳಿಗೆ ಭಾರಿ ದ್ರೋಹವಾಯಿತು. ಸರಕಾರ, ಕಾನೂನಿನ ಮುಂದಿಡಲು ಗೇಣಿರೈತರ ಹತ್ತಿರ ಯಾವುದೇ ದಾಖಲೆ, ಪತ್ರ, ರಶೀತಿ ಇರಲಿಲ್ಲ. 'ಉಳುವವನೆ ಹೊಲದೊಡೆಯ' ಕಾನೂನು ಬಂದಾಗ ಅನೇಕ ಗೇಣಿರೈತರು ಪರದಾಡುವ ಸ್ಥಿತಿ ನಿರ್ಮಾಣವಾಗಿತ್ತು. ಕೆಲವು ಬುದ್ಧಿವಂತ ಭೂಮಾಲಿಕರು ಶಾಸನ ಬರುವುದರ ಸುಳಿವು ಅರಿತು ಮೊದಲೇ ಕೆರೆ ಕೆಳಗಿನ ಭಾಗಾಯ್ತು ಯೋಗ್ಯವಾದ ತರಿ ಜಮೀನುಗಳನ್ನೆಲ್ಲ ಬಿಡಿಸಿಕೊಂಡು, ಗೇಣಿ ಕೊಟ್ಟಿದ್ದೆ ಇಲ್ಲ ಎಂದು ಸಾಧಿಸಿ ಗೇಣಿ ರೈತರ ಭೂಮಿಯೆಲ್ಲಾ ಸ್ವಂತ ಸಾಗುವಳಿಗೆ ವಶಪಡಿಸಿಕೊಂಡರು. ಇಂದಿಗೂ ಸಹ ಭೂಮಾಲಿಕರ ಜಮೀನುಗಳೆಲ್ಲಾ ಕೆರೆಯ ಅಕ್ಕಪಕ್ಕ ಫಲವತ್ತಾದ ಭೂಮಿಯನ್ನು ಹೊಂದಿರುವುದು ಮಲೆನಾಡಿನ ಭಾಗದಲ್ಲಿ ಸರ್ವೇಸಾಮಾನ್ಯ.

ಒಕ್ಕಲಿನ ಗೇಣಿ ಭತ್ತವನ್ನು ಬೆಳೆಯುವ ಖರ್ಚುವೆಚ್ಚಗಳನ್ನು ಗಮನಿಸಿದರೆ ಆ ಫಸಲಿನ ಕೂಲಿ ವೆಚ್ಚಕ್ಕಿಂತಲೂ ಜಾಸ್ತಿ. ಒಟ್ಟು ಉತ್ಪಾದನೆಯನ್ನು ಮೂರು ಭಾಗಮಾಡಿದರೆ, ಒಂದು ಭಾಗ ಅಥವಾ ಅದಕ್ಕಿಂತ ಸ್ವಲ್ಪ ಹೆಚ್ಚು ಗೇಣಿಯಾಗಿ ಸಂದಾಯ ಮಾಡುತ್ತಿದ್ದರು. ಉಳಿದ ೨/೩ ಭಾಗದಲ್ಲಿ ಗೇಣಿ ರೈತನ ಶ್ರಮ, ಕೂಲಿ ಎಲ್ಲಾ ಲೆಕ್ಕ ಹಾಕಿದರೆ ಗೇಣಿರೈತನಿಗೆ ಉಳಿಯುವುದು ಬಿಳಿ ಹುಲ್ಲು ಮಾತ್ರ. ಹಾಗಾಗಿ ಭೂಮಾಲೀಕ ಮತ್ತು ಗೇಣಿರೈತರ ಆರ್ಥಿಕ ಒಪ್ಪಂದವು ಬಹಳ ಕಾಲದ ಮಟ್ಟಿಗೆ ಗಟ್ಟಿಯಾಗಿ ಇರದೆ ಚಳುವಳಿಗೆ ದಾರಿಯಾಯಿತು. ಅನೇಕ ವರ್ಷಗಳಿಂದ, ಶತಮಾನಗಳಿಂದ ಬಂದ ಈ 'ಋಣ ಸಂಬಂಧ' ಬಿರುಕು ಬಿಡಲು ಕಾಗೋಡು ಸತ್ಯಾಗ್ರಹ ಕಾರಣವಾಯಿತು.

## ಕ್ರಾಂತಿಯ ರೂವಾರಿ ಎಚ್.ಗಣಪತಿಯಪ್ಪ

ಸ್ವಾತಂತ್ರ್ಯದ ನಂತರ ನಡೆದ ದೊಡ್ಡ ಹೋರಾಟಗಳಲ್ಲಿ ಕಾಗೋಡು ರೈತ ಹೋರಾಟಕ್ಕೆ ಹಲವು ದೃಷ್ಟಿಗಳಿಂದ ಮಹತ್ವದ ಸ್ಥಾನವಿದೆ. ಶ್ರೀ ಸಾಮಾನ್ಯರ ಕೇಂದ್ರಬಿಂದುವಾಗಿ ಪ್ರಜ್ವಲಿಸಿದ ಐತಿಹಾಸಿಕ ಘಟನೆಯಿದೆ. ಹೋರಾಟದಿಂದ ಪಲ್ಲಟಗಳು ಸಾಧ್ಯವಿದೆ ಎಂಬುದನ್ನು ತೋರಿಸಿಕೊಟ್ಟಂತಹ ಚಳುವಳಿ ಇದು. ಗಾಂಧೀ ತತ್ವ ಅನುಸರಿಸಿದ ಹೋರಾಟವಿದು. ರಕ್ತರಹಿತ ಕ್ರಾಂತಿಗೆ ನಾಂದಿಹಾಡಿತು. ನಾಡಿನ ಇತಿಹಾಸದಲ್ಲಿ ಮೈಲುಗಲ್ಲು. ಈ ಹೋರಾಟದಲ್ಲಿ ಮಾನವನ ಮೂಲಭೂತ ಅಂಶಗಳಾದ ಸ್ವಾತಂತ್ರ್ಯ, ಸಮಾನತೆ, ಸ್ವಾವಲಂಬನೆ

ಅಡಕವಾಗಿದೆ. ಲೋಹಿಯಾ ಹೇಳುವಂತೆ ಭಾರತದಲ್ಲಿ ಯಾರೇ ಆಗಲಿ ಮೇಲೇರುವುದಕ್ಕೆ ಜಾತಿ, ಆಸ್ತಿ, ಇಂಗ್ಲಿಷ್ ವಿದ್ಯಾಭ್ಯಾಸ ಈ ಮೂರರಲ್ಲಿ ಯಾವುದಾದರು ಎರಡನ್ನು ಪಡೆದಿರಬೇಕು ಎಂದು ವಿಶ್ಲೇಷಿಸಿದ್ದರು. ಶ್ರೀಯುತ ಗಣಪತಿಯಪ್ಪನವರು ವಿದ್ಯಾಭ್ಯಾಸವೊಂದನ್ನೆ ಪಡೆದು ಕ್ರಾಂತಿಯ ಕಹಳೆ ಊದಿದರು. ಒಬ್ಬ ಸಾಮಾನ್ಯ ವ್ಯಕ್ತಿ ಅಸಾಮಾನ್ಯವಾದದನ್ನು ಸೃಷ್ಟಿ ಮಾಡಿದ್ದನ್ನು ಕಾಣಬಹುದು.

ರೈತ ಸಂಘದ ಗಣಪತಿಯಪ್ಪ ಎಂದೇ ಈಗಲೂ ಪ್ರಖ್ಯಾತರಾಗಿರುವ ಇವರು ಉತ್ತರಕನ್ನಡ ಜಿಲ್ಲೆಯ ಸಿದ್ದಾಪುರ ತಾಲ್ಲೂಕಿನ ಹೊಸೂರಿನವರು. ೧೯೨೪ರಲ್ಲಿ ಜನನ. ಹೊಸೂರು ಕನ್ನಪ್ಪ-ಕನ್ನಮ್ಮ ದಂಪತಿಗಳಿಗೆ, ಆರನೆ ಮಗುವಾಗಿ ಜನಿಸಿದರು. ಈ ಮಗುವೇ ಕಾಗೋಡು ಕ್ರಾಂತಿಯ ಆಕಾರವಾಯಿತು. ಇರುವ ೫ ಎಕರೆ ಗೇಣಿ ಜಮೀನಿನಲ್ಲಿ ಜೀವನ ನಿರ್ವಹಣೆ, ಬೆಳೆದ ಬೆಳೆಯಲ್ಲಿ ಅರ್ಧದಷ್ಟನ್ನು ಗೇಣಿದಾರರಾದ ಇವರು ಭೂಮಾಲೀಕರಿಗೆ ಒಪ್ಪಿಸಬೇಕಿತ್ತು. ಹಾಗಾಗಿ ಇವರು ಬಹಳ ಶ್ರಮಜೀವಿಗಳಾಗಿದ್ದರು.

ಆ ಕಾಲದಲ್ಲಿ ವಿದ್ಯಾಭ್ಯಾಸ ಪಡೆಯುವುದು ಶೂದ್ರವರ್ಗಕ್ಕೆ ಕಷ್ಟ ಸಾಧ್ಯವಾದ ಕೆಲಸ. ತಾಯಿ ಕನ್ನಮ್ಮನಿಗೆ ಮಗನನ್ನು ಓದಿಸಲೇಬೇಕೆಂಬ ಹಂಬಲ ಇರುವ ಕಷ್ಟದ ನಡುವೆಯು ಕಿರಿಯವನಾದ ಈತ ಓದಲೇಬೇಕೆಂಬುದು ಕನ್ನಮ್ಮನ ಆಶಯವಾಗಿತ್ತು. ವಿದ್ಯೆ ಎಂಬುದು ವ್ಯಕ್ತಿಯ ವಿಕಾಸಕ್ಕೆ, ಉನ್ನತಿಗೆ, ಕಾರಣವಾಗುತ್ತದೆ. ಪ್ರಪಂಚದ ಅರಿವು ಉಂಟಾಗುತ್ತದೆ. ವ್ಯಕ್ತಿ ತನ್ನ ಸಾಧನೆಯಿಂದ ಗೌರವವನ್ನು ಪಡೆದುಕೊಳ್ಳುವಂತಹದು. ಹಿಂದೂ ಧರ್ಮ ವರ್ಣವ್ಯವಸ್ಥೆಯಲ್ಲಿ, ವೈದಿಕ ಪುರೋಹಿತಶಾಹಿ ಸೃಷ್ಟಿಸಿದ ಜಾತಿಯತೆಯಲ್ಲಿ ಶೂದ್ರವರ್ಗ ವಿದ್ಯೆ ಪಡೆಯುವುದು ಬಹಳ ಕಷ್ಟಕರವಾದ ಕೆಲಸವಾಗಿತ್ತು.

ಜಾತಿಯಲ್ಲಿ ಲಿಂಗಾಯಿತರಾದ ಅವರುಗುಪ್ಪೆ ಹಾಲಪ್ಪ ಮಾಸ್ತರು ಗಣಪತಿಯಪ್ಪನವರ ಬಾಳಿನಲ್ಲಿ ಬೆಳಕಾಗಿ ಬಂದವರು. ಜಾತ್ಯಾತೀತತೆಯನ್ನು ಮೆರೆದವರು. ಅನೇಕ ಕ್ರಾಂತಿಗಳಲ್ಲಿ 'ಮಾಸ್ತರು' ಎಂಬ ವರ್ಗದ ಪಾತ್ರ ಬಹಳ ದೊಡ್ಡದು. ಹೀಗೆ ಗಣಪತಿಯಪ್ಪನವರು ವಿದ್ಯಾಸಂಪನ್ನರು, ಗುಣಶೀಲರು ಆದ ಹಾಲಪ್ಪ ಮಾಸ್ತರರ ಮಾರ್ಗದರ್ಶನದಿಂದಲೇ ಬೆಳೆದ ಇವರು, ಕಾರವಾರದಲ್ಲಿ ಮುಲ್ಕಿ ಪರೀಕ್ಷೆ ಪಾಸುಮಾಡಿದ ಪ್ರಪ್ರಥಮ ದೀವರು ಎಂದರು ಸುಳ್ಳಾಗಲಿಕ್ಕಿಲ್ಲ. ೧೯೩೮ರಲ್ಲಿ ಮುಲ್ಕಿ ಪರೀಕ್ಷೆ ಪಾಸುಮಾಡಿದರು. ಹೀಗೆ ಇವರು ಹುಟ್ಟು ಹೋರಾಟಗಾರರಾಗಿ ರೂಪುಗೊಂಡರು.

ಅಂದಿನ ಕಾರವಾರ ಜಿಲ್ಲೆಯ ಜಿಲ್ಲಾಧಿಕಾರಿಗಳಾಗಿದ್ದ ಡಬ್ಲ್ಯು.ಎನ್.ಭಕ್ತಿಯಾರ್‌ರವರಿಗೂ ಹಾಲಪ್ಪ ಮಾಸ್ತರಿಗೂ ನಿಕಟ ಪರಿಚಯವಿತ್ತು. ಹೀಗಾಗಿ ದೀವ ಜನಾಂಗದ ಪ್ರಪ್ರಥಮ ವಿದ್ಯಾವಂತ, ಆರ್ಥಿಕವಾಗಿ ಬಹಳ ಹಿಂದುಳಿದ ಗಣಪತಿಯಪ್ಪನವರಿಗೆ ಆಗಿನ ಮುಂಬಯಿ ಕರ್ನಾಟಕದಲ್ಲಿ ಗ್ರಾಮಪಂಚಾಯಿತಿ ಸೆಕ್ರೆಟರಿಯಾಗಿ ಸಿದ್ದಾಪುರ ಗ್ರಾಮಪಂಚಾಯಿತಿಗೆ ನೇಮಕಗೊಂಡರು. ಈ ಕಾಲಘಟ್ಟದಲ್ಲಿ ಸಿದ್ದಾಪುರ ತಾಲ್ಲೂಕು ಕಾಂಗ್ರೆಸ್ ಚಟುವಟಿಕೆಯ ಕೇಂದ್ರಬಿಂದುವಾಗಿತ್ತು. ಸಿದ್ದಾಪುರ ತಾಲ್ಲೂಕನ್ನು 'ಕರ್ನಾಟಕದ ಬಾರ್ಡೋಲಿ' ಎಂದು ಕರೆಯುತ್ತಿದ್ದರು. ಈ ತಾಲ್ಲೂಕಿನಲ್ಲಿ ದಿನನಿತ್ಯ ಕಾಂಗ್ರೆಸ್ ಕಾರ್ಯಕರ್ತರು ಪ್ರಭಾತ ಪೇರಿ, ಸಭೆ ಸಮಾರಂಭಗಳು ನಡೆಯುತ್ತಿದ್ದವು. ಇದರಿಂದಾಗಿ ಯುವಕ ಗಣಪತಿಯಪ್ಪನವರನ್ನು ತನ್ನೆಡೆಗೆ ಸೆಳೆಯಿತು. ೧೯೪೨ರಲ್ಲಿ (ಆಗಸ್ಟ್‌ನಲ್ಲಿ) ಬೊಂಬಾಯಿಯಲ್ಲಿ ನಡೆಯುವ ಕಾಂಗ್ರೆಸ್ ಅಧಿವೇಶನಕ್ಕೆ ಸಿದ್ದಾಪುರದ ತರುಣ ಕಾರ್ಯಕರ್ತರ ಜೊತೆಯಲ್ಲಿ ಗಣಪತಿಯಪ್ಪನವರು ಹೋಗಿ ಬಂದರು.

ಕಾರವಾರದ ಜಿಲ್ಲಾಧಿಕಾರಿಗಳು ಕಾಂಗ್ರೆಸ್ ಅಧಿವೇಶನದಲ್ಲಿ ಭಾಗವಹಿಸಿದಕ್ಕೆ ಸರಕಾರದ ನೌಕರರ ಪಟ್ಟಿಯನ್ನು ತರಿಸಿಕೊಂಡು ಷೋಕಾಸ್ ನೋಟೀಸ್ ಜಾರಿ ಮಾಡಲಾಯಿತು. ಗಣಪತಿಯಪ್ಪನವರು ಅಧಿವೇಶನವನ್ನು ಸಮರ್ಥಿಸಿಕೊಂಡಿದ್ದರಿಂದ ಇವರ ಮೇಲೆ ಭಾರತೀಯ ರಕ್ಷಣಾ ಕಾನೂನು (D.T.R) ಪ್ರಕಾರ ಬಂಧಿಸಿ ಜೈಲಿನಲ್ಲಿಡಲು ಆದೇಶ ಹೊರಡಿಸಿದರು. ಈ ಕಾರಣಕ್ಕಾಗಿ ಕೆಲಸ ಕಳೆದುಕೊಂಡರು. ಮುಂಬಯಿ ಸ್ವಾತಂತ್ರ್ಯ ಚಳುವಳಿಯ ಕಾಂಗ್ರೆಸ್ ಅಧಿವೇಶನಕ್ಕೆ ಹೋಗಿಬಂದ ಇವರು ಚಳುವಳಿಯಲ್ಲಿ ಸಕ್ರೀಯವಾಗಿ ಪಾಲ್ಗೊಂಡರು. ಅನೇಕ ಕಾಂಗ್ರೆಸ್ ನಾಯಕರ ಪರಿಚಯ ಇವರಿಗೆ ಆಯಿತು. ಭೂಗತ ಚಟುವಟಿಕೆಯಲ್ಲಿ ತೊಡಗಿದರು. ಒಮ್ಮೆ ಶಿರಸಿಯಲ್ಲಿ ಕರಪತ್ರ ಹಂಚುವಾಗ ಇವರನ್ನು ಹಿಡಿಯಲಾಯಿತು. ಬೆಳಗಾಂ ಜಿಲ್ಲೆಯ ಹಿಂಡಲಗಾ ಜೈಲನ್ನು ಸೇರಬೇಕಾಯಿತು. ಜೈಲಿನಿಂದ ಬಿಡುಗಡೆಯಾದರು. ಆದರೆ ಸಿದ್ದಾಪುರದ ಪೋಲಿಸರು ಇವರನ್ನು ಮತ್ತೆ ಬಂಧಿಸಿದರು. ಪಂಚಾಯ್ತಿ ಕಾರ್ಯದರ್ಶಿಯಾಗಿ ವಜಾ ಆದ ನಂತರ ಇವರು ಇತರರಿಗೆ ಛಾರ್ಜ ವಹಿಸಿರಲಿಲ್ಲ. ಸರಕಾರಿ ನೌಕರರಾಗಿ ಭೂಗತ ಚಟುವಟಿಕೆಯಲ್ಲಿ ಪಾಲ್ಗೊಂಡಿದ್ದಕ್ಕೆ ಇವರನ್ನು ಒಂದು ವರ್ಷ ಅಪರಾಧಿಯಾಗಿ ಸಿದ್ದಾಪುರ ಜೈಲಿನಲ್ಲಿ ಇಡಲಾಯಿತು. ಜೈಲಿನಿಂದ ಬಿಡುಗಡೆಯಾದರು. ಪೋಲೀಸರ ಕಾಟ ತಪ್ಪಲಿಲ್ಲ. ಪೋಲೀಸರು ದಿನವೂ ಮನೆಗೆ ಬಂದು ಕಿರುಕುಳ ಕೊಡಲು ಶುರುವಿಟ್ಟಾಗ ಮನೆಯಲ್ಲಿ ಅಶಾಂತಿ ಮೂಡಿತು. ಅಣ್ಣನಿಂದ ತಿರಸ್ಕಾರದ ನೋಟ ಹರಿದಾಗ ಇವರು ಮನೆಯನ್ನು ತ್ಯಜಿಸಬೇಕಾಯಿತು. ಅಲ್ಲದೆ ಅನೇಕ ಕಾರಣಗಳಿಗಾಗಿ ಪೋಲೀಸರಿಗೆ ಬೇಕಾಗಿದ್ದರು. ಇವರ ಕಾಟದಿಂದ ಪಾರಾಗಲು ಅವರಿಗೆ ತೋಚಿದ ಮಾರ್ಗವೆಂದರೆ ಮುಂಬಯಿ ಪ್ರಾಂತ್ಯದ ಸಿದ್ದಾಪುರದಿಂದ ಕೆಲವೆ ಮೈಲುಗಳಲ್ಲಿ ಇದ್ದ ಮೈಸೂರು ಅರಸರ ಆಡಳಿತಕ್ಕೆ ಸೇರಿದ ಪ್ರದೇಶವಾದ ಹಿರೇನೆಲ್ಲೂರಿಗೆ ಆಗಮಿಸಿದರು. ಸಾಗರ ಮೈಸೂರು ಅರಸರ ಆಳ್ವಿಕೆಗೆ ಒಳಪಟ್ಟಿತ್ತು. ಸಿದ್ದಾಪುರ ಬೊಂಬಾಯಿ ಪ್ರಾಂತ್ಯಕ್ಕೆ ಸೇರಿತ್ತು. ವರದಾ ನದಿ ಇವುಗಳ ಮಧ್ಯೆ ಗಡಿ ರೂಪದಲ್ಲಿ ಇತ್ತು. ಸಾಗರ ಪ್ರಾಂತ್ಯದಲ್ಲಿ ಭತ್ತದ ಬೆಲೆ ಕಡಿಮೆ. ಸಾಗರಕ್ಕಿಂತಲೂ ಹತ್ತಿರದಲ್ಲಿದ್ದ ಸಿದ್ದಾಪುರದಲ್ಲಿ ಭತ್ತದ ಬೆಲೆ ಜಾಸ್ತಿ ಹಾಗಾಗಿ ಭೂಮಾಲಿಕರು, ರೈತರು, ಎಲ್ಲರು ವರದಾ ನದಿಯ ಮುಖಾಂತರ ಭತ್ತ ಸಾಗಾಟ ಮಾಡುತ್ತಿದ್ದರು. ಅಂದು ಕಂಟ್ರೋಲ್ ಇದ್ದ ಕಾಲ. ಸಾಗರದಲ್ಲಿ ಒಂದು ಖಂಡುಗ ಭತ್ತಕ್ಕೆ ೩ ರೂಪಾಯಿ ಇದ್ದರೆ ಸಿದ್ದಾಪುರದಲ್ಲಿ ೭ ರೂಪಾಯಿ ಇತ್ತು. ಹಾಗಾಗಿ ಸಾಗರದಿಂದ ಸಿದ್ದಾಪುರಕ್ಕೆ ಹತ್ತಾರು ಗಾಡಿಗಳು ದಿನನಿತ್ಯ ಬಂದು ಹೋಗುತ್ತಿದ್ದವು. ಹೀಗೆ ಗಣಪತಿಯಪ್ಪನವರು ಉಟ್ಟ ಬಟ್ಟೆಯಲ್ಲಿ ವರದಾ ನದಿಯನ್ನು ದಾಟಿ ಸಾಗರ ತಾಲ್ಲೂಕಿಗೆ ಬಂದರು. ಸಣ್ಣಮನೆ ಎಂಬ ಹಳ್ಳಿಯಲ್ಲಿ ಕೆಲಕಾಲ ಉಳಿದರು. ಅಲ್ಲಿಂದ ತುಸು ದೊಡ್ಡದಾದ ಹಿರೇನೆಲ್ಲೂರಿಗೆ ಬಂದರು. ಹಿರೇನೆಲ್ಲೂರು ಗಣಪತಿಯಪ್ಪನವರ ಸಾಧನೆಯ ನೆಲವಾಯಿತು.

ಗಣಪತಿಯಪ್ಪನವರು ಹಿರೇನೆಲ್ಲೂರಿನಲ್ಲಿ ಮುಗದೂರು ವೀರಭದ್ರಪ್ಪ ಗೌಡರನ್ನು ಭೇಟಿ ಮಾಡಿದರು. ಗಣಪತಿಯಪ್ಪನವರು, ನಾನು ಜೈಲಿಗೆ ಹೋಗಿದ್ದೇನೆ, ಸ್ವಾತಂತ್ರ್ಯ ಹೋರಾಟಗಾರ. ಓದಿದ್ದೇನೆ. ಇಲ್ಲಿ ಖಾಸಗಿ ಶಾಲೆ ನಡೆಸುವ ಉದ್ದೇಶ ನನ್ನದು ಎಂದು ವಿನಂತಿಸಿಕೊಂಡಾಗ, ಗೌಡರು ನೀವು ಕೆ.ಜಿ.ಒಡೆಯರ ಹಾಗೆ ಸ್ವಾತಂತ್ರ್ಯಕ್ಕಾಗಿ ಜೈಲಿಗೆ ಹೋದವರು. ನಿಮ್ಮ ಜಾತಿಯ ಬರಸಿನ್ ದ್ಯಾವಪ್ಪ, ಕಲ್ಮನಿ ಹುಚ್ಚನಾಯಕರು ಮುಂತಾದವರನ್ನು ಬೇಟಿ ಮಾಡಿಸುತ್ತೇನೆ ಎಂದು ಹೇಳಿದರು. ಅಂದು ಸಂಜೆ ಮಾರಿಗುಡಿಯ ಜಗುಲಿಯ ಮೇಲೆ ಎಲ್ಲಾ ವರ್ಗದವರು ಸೇರಿ ಶಾಲೆ ಮಾಡುವ ಉದ್ದೇಶವನ್ನು ಸಮರ್ಥಿಸಿದರು.

೧೯೪೪ರಲ್ಲಿ ಮುಗದೂರು ವೀರಭದ್ರಪ್ಪಗೌಡರ ಮನೆಯ ಮಹಡಿಯ ಮೇಲೆ ಶಾಲೆ ಪ್ರಾರಂಭವಾಯಿತು. ಮೊದಲನೆಯ ವರ್ಷಕ್ಕೆ ೫ ಹೆಣ್ಣು ಮಕ್ಕಳು, ೭ ಗಂಡು ಮಕ್ಕಳು ಸೇರಿದರು. ಎರಡನೆಯ ವರ್ಷಕ್ಕೆ ಸುಮಾರು ೩೦ ಹುಡುಗ ಹುಡುಗಿಯರು ಸೇರಿದರು. ಒಬ್ಬ ವಿದ್ಯಾರ್ಥಿಗೆ ಎರಡು ಚೀಲ ಛತ್ರ, ನಾಲ್ಕು ರೂಪಾಯಿ ಕೊಡುವುದೆಂದು ತೀರ್ಮಾನಿಸಿದರು. ಇದರಿಂದಾಗಿ ಇವರ ಆರ್ಥಿಕ ಸ್ಥಿತಿ ಸ್ವಲ್ಪ ಸುಧಾರಿಸಿತು. ಅಲ್ಲದೆ ಊರಿನ ಮಧ್ಯದಲ್ಲಿ ಕಿರಾಣಿ ಅಂಗಡಿಯನ್ನು ತೆರೆದರು. ದೀವರ ಜನಾಂಗದಲ್ಲಿ ಎಲ್ಲರಿಗು ಗಣಪತಿಯಪ್ಪನ ಬಗ್ಗೆ ಓದಿದವನೆಂಬ ಹೆಮ್ಮೆ ಇತ್ತು.

೧೯೪೬-೪೭ರಲ್ಲಿ ಬ್ರಿಟನ್‌ನ ಚುನಾವಣೆಯಲ್ಲಿ ಚರ್ಚಿಲ್‌ರ ಪರಾಭವ ಭಾರತದ ಬಗ್ಗೆ ಆಸಕ್ತಿಹೊಂದಿದ ಕಾರ್ಮಿಕ ಪಕ್ಷದ ಲಾರ್ಡ್ ಅಟ್ಲಿಯವರ ಆಗಮನ, ಗಾಂಧೀಜಿಯವರ ಅಪ್ರತಿಹತ ಹೋರಾಟ, ನೇತಾಜಿಯವರ ಕಾರ್ಯಾಚರಣೆ, ಭಾರತೀಯ ನೌಕಾಪಡೆಯ ಬಂಡಾಯ ಈ ಎಲ್ಲಾ ಕಾರಣಗಳಿಂದ ಭಾರತಕ್ಕೆ ೧೫-೮-೧೯೪೭ರಲ್ಲಿ ಸ್ವಾತಂತ್ರ್ಯ ದೊರೆಯಿತು.

ಮೈಸೂರು ಅರಸೊತ್ತಿಗೆಯ ಸರಕಾರವು ಸ್ವತಂತ್ರ ಭಾರತದಲ್ಲಿ ಸೇರ್ಪಡೆ ಹೊಂದಲು ಬಯಸಲಿಲ್ಲ. ಮತ್ತೊಮ್ಮೆ ಮೈಸೂರು ರಾಜ್ಯ ಮುಷ್ಕರಕ್ಕೆ ಅಣಿಯಾಯಿತು. 'ಮೈಸೂರು ಚಲೋ' ಚಳುವಳಿಗೆ ಕಾರಣವಾಯಿತು. ಜನಸಾಗರ ಉತ್ಸಾಹದಿಂದ ಹೋರಾಟಕ್ಕೆ ಇಳಿಯಿತು. ಇದರ ಕಾವು ಸಂಸ್ಥಾನಕ್ಕೆ ಮುಟ್ಟಿದಾಗ, ಅಂದಿನ ದಿವಾನ್‌ರಾಗಿದ್ದ ಅರ್ಕಾಟ್ ಲಕ್ಷ್ಮಣಸ್ವಾಮಿ ಮೊದಲಿಯಾರ್ ಮಣಿಯಲೇಬೇಕಾಯಿತು. ಸಾಗರದಲ್ಲಿ ಕೆ.ಜಿ.ಒಡೆಯರು, ಗಣಪತಿಯಪ್ಪನವರು, ಬರಸಿನ ದ್ಯಾವಪ್ಪ, ಕಾನ್ಲೆ ಹಾಲಪ್ಪ ಗೌಡ (ಹಿರೇನೆಲ್ಲೂರು), ಹೆಚ್.ಎಲ್.ವೀರಭದ್ರಗೌಡರು, ಬದರಿನಾರಾಯಣ್ ಮುಂತಾದವರು ಸಾಗರದ ಕಛೇರಿಯ ಮೇಲೆ ತ್ರಿವರ್ಣ ಧ್ವಜ ಹಾರಿಸಿದರು. ಎಲ್ಲರು ಸಾಗರ ಜೈಲಿಗೆ ಹೋಗಲು ನಿರಾಕರಿಸಿದರು. ಪೋಲಿಸರಿಗೂ ಇವರಿಗೂ ಘರ್ಷಣೆಯಾಗಿ ಜೈಲು ಸೇರಬೇಕಾಯಿತು.

ಕೆ.ಸಿ.ರೆಡ್ಡಿಯವರ ನೇತೃತ್ವದಲ್ಲಿ ನಿಯೋಗವೊಂದು ಮಹಾರಾಜರನ್ನು ಭೇಟಿ ಮಾಡಿತು. ನಂತರ ೧೯೪೭ರ ಅಕ್ಟೋಬರ್ ೧೨ರಂದು 'ಪ್ರಜಾಪ್ರತಿನಿಧಿಗಳ ಮಂತ್ರಿ ಮಂಡಲ ಸ್ಥಾಪನೆಯಾಗಿದೆ' ಎಂದು ಸರಕಾರಿ ಆಜ್ಞೆ ಹೊರಡಿಸಿದರು. ೨೪-೧೦-೧೯೪೭ರಂದು ಮೈಸೂರಿನಲ್ಲಿ ಜನತಾ ಸರಕಾರ ಸ್ಥಾಪನೆಗೊಂಡಿತು. ಕೆ.ಸಿ.ರೆಡ್ಡಿಯವರು ಮುಖ್ಯಮಂತ್ರಿಯಾಗಿ ಅಧಿಕಾರ ವಹಿಸಿಕೊಂಡರು. ಎಲ್ಲಾ ಸತ್ಯಾಗ್ರಹಿಗಳು ಬಿಡುಗಡೆ ಯಾದರು. ಜೈಲಿನಿಂದ ಬಿಡುಗಡೆಯಾದ ಗಣಪತಿಯಪ್ಪನವರಿಗೆ. ಸಮಾಜದಲ್ಲಿ ಗೌರವ ಲಭಿಸಿತು. ಇವರು ಕೆ.ಜಿ.ಒಡೆಯರ ಆಪ್ತರಾದರು. ಹಿರೇನೆಲ್ಲೂರಿನ ಜನ ಬಹಳ ಅಭಿಮಾನದಿಂದ ಇವರನ್ನು ಕಂಡರು. ಹೀಗೆ ಗಣಪತಿಯಪ್ಪನವರು ಹಿರೇನೆಲ್ಲೂರಿನಲ್ಲಿ ಆಳವಾಗಿ ಬೇರು ಬಿಟ್ಟರು. ಇವರ ಮಾತಿಗೆ ಒಂದು ತೂಕ ಲಭಿಸಲು ಶುರುವಾಯಿತು. ಸಮಾಜದಲ್ಲಿ ತನ್ನ ಜನಾಂಗದವರ ಸ್ಥಾನಮಾನಗಳ ಕುರಿತಂತೆ ಒಂದು ವ್ಯಥೆ ಇವರನ್ನು ಕಾಡಲು ಶುರುವಿಟ್ಟಿತ್ತು. ದೀವರನ್ನು ಗೇಣಿದಾರರನ್ನಾಗಿ ಶೋಷಣೆ ಮಾಡುವ ವಿಷಯ ಆತಂಕಕ್ಕೆ ಈಡು ಮಾಡಿತ್ತು. ಇಂತ ಸಮಯದಲ್ಲಿ ಹಿರೇನೆಲ್ಲೂರಿನ ಈಶ್ವರ ದೇವಸ್ಥಾನದ ಪ್ರತಿಷ್ಠಾಪನೆ ದೀವರ ಜನಾಂಗಕ್ಕೆ ಅವಹೇಳನಕರವಾಗಿ ಪರಿಣಮಿಸುತ್ತಿದೆ ಅನ್ನಿಸಿ ಗಣಪತಿಯಪ್ಪ 'ದೀವರ ಮಂಡಳಿ' ಎಂಬ ಒಂದು ಸಂಘವನ್ನು ಸ್ಥಾಪಿಸಿದರು.

ಇದರಿಂದಾಗಿ ಮುಂದುವರಿದವರ ಕೋಪಕ್ಕೆ ಇವರು ಗುರಿಯಾಗಬೇಕಾಯಿತು. ಇವರ ಪ್ರಾಣಕ್ಕೆ ಅಪಾಯ ಬರುವ ಸಾಧ್ಯತೆ ಕೂಡ ಕಂಡಿತು. ಗ್ರಾಮದ ಮುಂದಾಳುಗಳು ಗ್ರಾಮ ಬಹಿಷ್ಕಾರಕ್ಕೆ ಕೂಡ ಈಡುಮಾಡಿದರು. ಆದರೆ ಗಣಪತಿಯಪ್ಪ ಅಂಜಲಿಲ್ಲ. ತನ್ನ ಜನಾಂಗಕ್ಕೆ ಏನನ್ನಾದರೂ ಒಳ್ಳೆಯದನ್ನು ಮಾಡಬೇಕು ಎಂದು 'ಸಾಗರ ತಾಲ್ಲೂಕು ರೈತಸಂಘ' ಕಟ್ಟಿದರು. ಇದಕ್ಕೆ ಮೂಲ ಸಾಮಾಜಿಕ ಕಾಳಜಿಯೇ ಕಾರಣ.

ಕೆಲವು ದೀವ ಮುಖಂಡರನ್ನು ಕರೆದುಕೊಂಡು ಗೇಣಿರೈತರನ್ನು ಸಂಘಟಿಸಲು ಮುಂದಾದರು. ಹಳ್ಳಿ ಹಳ್ಳಿಗೆ ತಿರುಗಿ ಕರಪತ್ರ ಹಂಚಿದರು. ಭಾಷಣ, ಸಭೆ ಸಮಾರಂಭಗಳನ್ನು ನಡೆಸಿದರು. ಪ್ರಖ್ಯಾತ ರೈತ ವಿಚಾರವಾದಿ ಹೋರಾಟಗಾರರನ್ನು ಕರೆಯಿಸಿ ಭಾಷಣ ಮಾಡಿಸಿ ವೈಚಾರಿಕ ನೆಲೆಗಟ್ಟನ್ನು ಭದ್ರಪಡಿಸಿದರು. ಭೂಮಾಲೀಕರ ವಿರುದ್ಧ ರೈತರನ್ನು ರೊಚ್ಚಿಗೇಳಿಸದೆ ಹಿಂಸೆಗೆ ಅವಕಾಶ ಕೊಡದೆ ಶಾಂತಿಯುತ ಹೋರಾಟವನ್ನು ಸೃಷ್ಟಿ ಮಾಡಿದರು. ರೈತ ಸಂಘದ ಸದಸ್ಯರಿಂದ ಸದಸ್ಯತ್ವ ಶುಲ್ಕ ಕೇವಲ ಎಂಟಾಣೆ ಮಾತ್ರ. ರೈತರಿಗಾಗಿ ತಮ್ಮ ಬದುಕನ್ನು ಧಾರೆ ಎರೆದರು. ಹೆಂಡತಿ ಕಡೆಯಿಂದ ಬಂದ ಆಸ್ತಿಯನ್ನು ಚಳುವಳಿಗೆ ಸುರಿದರು.

ಕಾಗೋಡು ಹೋರಾಟದಿಂದಾಗಿ ಸಜ್ಜನ ಶ್ರೀಯುತ ಗೋಪಾಲಗೌಡರಂತಹ ನಾಯಕತ್ವದ ಹುಟ್ಟಿಗೆ ಕಾರಣವಾಯಿತು. ವ್ಯಕ್ತಿತ್ವದ ವಿಕಸನಕ್ಕೆ ಕಾರಣವಾಯಿತು. ಅನೇಕರ ರಾಜಕೀಯ ಜೀವನಕ್ಕೆ ಭದ್ರ ಬುನಾದಿಯನ್ನು ಒದಗಿಸಿತು. ಅನೇಕ ಏರುಪೇರುಗಳನ್ನು ಇವರು ಕಂಡರು. ಸಾಗರದಲ್ಲಿ ಕೆಲಕಾಲ ಅಂಗಡಿ ಯನ್ನು ನಡೆಸಿದರು. 'ನ್ಯಾಯದ ತಕ್ಕಡಿ' ಎಂಬ ದಿನಪತ್ರಿಕೆಯನ್ನು ನಡೆಸಿಕೊಂಡು ಬಂದರು.

ಗಣಪತಿಯಪ್ಪನವರು ಇಂದಿಗೂ ಸರಳ ಜೀವನ ನಡೆಸಿಕೊಂಡು ಬಂದಿದ್ದಾರೆ. ಖಾದಿ ಪಂಚೆ, ಶರಟು, ಮೇಲೆ ವಾಸ್‌ಕೋಟು. ಬಿಳಿ ಟೋಪಿ ಧರಿಸಿ ಯಾವತ್ತು ಶಿಸ್ತಿನ ಸಿಪಾಯಿಯಂತೆ ಕಂಗೊಳಿಸುತ್ತಾರೆ. ಈಗಲೂ ಇವರಲ್ಲಿ ಸಾಮಾಜಿಕ ಕಾಳಜಿ ಇದೆ. ವೈಚಾರಿಕ ಮಾತುಕತೆ, ಪ್ರಗತಿಪರ ಚಿಂತನೆಗಳಿವೆ. ಎಪ್ಪತ್ತೆಂಟು ವಸಂತ ಗಳನ್ನು ದಾಟಿರುವ ಇವರು ಇಂದಿಗೂ ಸೈಕಲ್ಲಿನ ಮೇಲೆ ನಿತ್ಯ ಸಾಗರಕ್ಕೆ ಬರುತ್ತಾರೆ. 'ದೀವರ ಸಂಘ'ದ ಅಧ್ಯಕ್ಷರು ಆಗಿರುವ ಇವರು ದೀವರು ದೀವರನ್ನಾಗಿಯೇ ನೋಡಬೇಕು. ಈಡಿಗರೆಂದು ಎಂದಿಗೂ ಕರೆಯಿಸಿ ಕೊಳ್ಳಬಾರದು ಎಂಬುದು ಇವರ ಅಚಲ ನಿರ್ಧಾರ. ಇವರ ಮಾತಿನಲ್ಲಿ ದಿಟ್ಟತನ, ನೇರವಂತಿಕೆ, ಕೆಚ್ಚೆದೆ ಮಾಸಿಲ್ಲ. ಈಗಲೂ ಇವರು ಭ್ರಷ್ಟಾಚಾರ, ಕೋಮುಭಾವನೆಗಳ ವಿರುದ್ಧ, ಪಾನನಿರೋಧದ ಪರವಾಗಿ ದೀವರನ್ನು ಜಾಗೃತಗೊಳಿಸುತ್ತಿದ್ದಾರೆ. ಆದರೆ ಇಷ್ಟೆಲ್ಲ ಮಾಡಿದ ಇವರಿಗೆ ರಾಜಕೀಯ ಕ್ಷೇತ್ರದಲ್ಲಿ ಹೆಚ್ಚಿನ ಸ್ಥಾನಮಾನ ದೊರಕದಿರುವುದು ವಿಪರ್ಯಾಸವೇ ಇರಬೇಕು. ಮತ್ತೊಂದು ದೊಡ್ಡ ದುರಂತವೆಂದರೆ ಇವರದೆ ಜನಾಂಗದವರಿಂದ ಬಹಿಷ್ಕಾರಕ್ಕೆ ಒಳಗಾಗಿದ್ದು ರಾಜ್ಯ ರಾಜಕೀಯದಲ್ಲಿ ಬಿರುಗಾಳಿಯನ್ನು ಎಬ್ಬಿಸಿತು.

ಹೀಗೆ ಇವರು ತಮ್ಮ ಇಳಿವಯಸ್ಸಿನಲ್ಲಿಯು ಅನಿಷ್ಟ ಪದ್ಧತಿಗಳ ವಿರುದ್ಧ ಅವಿರತವಾಗಿ ಹೋರಾಟಕ್ಕೆ ದುಮುಕಿದ್ದಾರೆ. ದೀವರ ಜನಾಂಗ ಈಗಲೂ ಇವರ ಮೇಲೆ ಮೊದಲಿನ ಗೌರವವನ್ನೇ ಹೊಂದಿದೆ.

## ಶಾಂತವೇರಿ ಗೋಪಾಲಗೌಡ

"ನನ್ನ ದೃಷ್ಟಿಯಲ್ಲಿ ಅವರೊಬ್ಬರು ರಾಜಕೀಯ ಜೀವನದಲ್ಲಿ ಶ್ರದ್ಧಾಪೂರ್ಣ ತತ್ವನಿಷ್ಠ ಹೋರಾಟಗಾರರು. ಅವರೆಂದೂ ತಾವು ನಂಬಿದ ಧ್ಯೇಯ ಧೋರಣೆಗಳಿಂದ ವಿಮುಖರಾಗಲಿಲ್ಲ. ಆಸೆ, ಆಮಿಷಗಳಿಗೆ ಬಲಿಯಾಗ

ಲಿಲ್ಲ. ಅವರೊಬ್ಬರು ಹುತಾತ್ಮರೆಂದರೂ ತಪ್ಪಾಗಲಾರದು. ರಾಜಕೀಯಕ್ಕಾಗಿ ಅವರು ತಮ್ಮ ಲೌಕಿಕವಾದವು ಗಳನ್ನೆಲ್ಲ ಯಜ್ಞ ಮಾಡಿದ್ದಾರೆ. ಅವರು ಸ್ವಲ್ಪ ಸಂಯಮದಿಂದ ಬಾಳಿದ್ದರೆ ಇನ್ನಷ್ಟು ಕಾಲ ನಾಡಿನ ಸೇವೆಗಾಗಿ ಬದುಕಬಹುದಾಗಿತ್ತು. ಅವರ ಅಕಾಲಮರಣ ನಾಡಿನ ರಾಜಕೀಯ ರಂಗಕ್ಕೆ ಭರಿಸಲಾಗದ ನಷ್ಟ. ಅವರ ಸತ್ಯ ನಿಷ್ಠುರತೆ ಮತ್ತು ಪ್ರಾಮಾಣಿಕತೆಯನ್ನಾದರೂ ನಮ್ಮ ತರುಣರು ಅನುಸರಿಸಿ ನಡೆದರೆ, ಈ ನಾಡಿನ ರಾಜಕೀಯ ಕ್ಷೇತ್ರ ಹೆಚ್ಚು ಪರಿಶುದ್ಧವಾದೀತು - ಕುವೆಂಪು (ಉದ್ಧೃತ)

ಮಲೆನಾಡಿನ ಶಿವಮೊಗ್ಗ ಜಿಲ್ಲೆ ಪ್ರಮುಖ ಸಾಹಿತಿಗಳು, ವಿಶಿಷ್ಟ ರಾಜಕಾರಣಿಗಳನ್ನು ನೀಡಿದ ಮಹಾ ನೆಲವಾಗಿದೆ. ಅದರಲ್ಲೂ ಮಲೆನಾಡಿನ ತುಂಗಾನದಿ ದಡದಲ್ಲಿರುವ ತೀರ್ಥಹಳ್ಳಿ ಪ್ರದೇಶ ಸಾಹಿತ್ಯಕ್ಷೇತ್ರದ ಮೇರುಕವಿ ಕುವೆಂಪು ಮತ್ತು ಪರಿಶುದ್ಧ ರಾಜಕಾರಣಿ ಗೋಪಾಲಗೌಡ ಮುಂತಾದವರನ್ನು ನೀಡಿದೆ. ಸಾಹಿತ್ಯದ ಮೂಲಕ ನಿಸರ್ಗ, ಮಾನವರನ್ನು ಪ್ರೀತಿಸುವುದು. ವೈಚಾರಿಕತೆಯ ಮುಖಾಂತರ ಸಾಂಸ್ಕೃತಿಕ ಸಮಾಜವನ್ನು ನಿರ್ಮಿಸುವುದು ಮುಂತಾದ ಆಶಯಗಳನ್ನು ಕುವೆಂಪು ಕೃತಿಗಳಲ್ಲಿ ಕಾಣಬಹುದು. ಈ ಎಲ್ಲಾ ಗುಣಗಳು ಗೋಪಾಲಗೌಡರಲ್ಲಿ ಹುದುಗಿತ್ತು. ರಾಜಕಾರಣದ ಮೂಲಕ ಜನರಲ್ಲಿ ಜಾಗೃತೀಕರಣಗೊಳಿಸುವುದು ಗೋಪಾಲಗೌಡರ ಗುರಿಯಾಗಿತ್ತು. ಮಾನವೀಯಗುಣ, ಹೋರಾಟ, ಪ್ರತಿಭಟನೆ ಮುಂತಾದವು ಗೌಡರ ಜೀವನ ಪದ್ಧತಿಯಾಗಿತ್ತು. ಮಹಾಚೇತನ ಕುವೆಂಪುರವರು ಗೋಪಾಲಗೌಡರ ಬಗ್ಗೆ ಮೇಲೆ ಹೇಳಿದ ಮಾತುಗಳು ಎಂದೆಂದಿಗೂ ಪ್ರಸ್ತುತ ವಾಗಿದೆ.

ಶಾಂತವೇರಿ ಗೋಪಾಲಗೌಡರು ಕನ್ನಡ ನೆಲ ಕಂಡ ವಿಶಿಷ್ಟ ವ್ಯಕ್ತಿತ್ವದ ರಾಜಕಾರಣಿ. ೧೯೨೩, ಮಾರ್ಚ್ ೧೪ ರಂದು ಸಮಾಜವಾದದ ಕೂಸು ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕು ಶಾಂತವೇರಿಯಲ್ಲಿ ಉದಯಿಸಿತು. ತಂದೆ ಕೊಲ್ಲೂರಯ್ಯ ಗೌಡ, ತಾಯಿ ಶೇಷಮ್ಮ. ಇದೊಂದು ಗೇಣಿದಾರ ಕುಟುಂಬವಾಗಿತ್ತು. ಬೆಳೆಯುವ ಸಿರಿ ಮೊಳಕೆಯಲ್ಲಿಯೇ ಎಂಬಂತೆ ಗೌಡರು ವಿದ್ಯಾರ್ಥಿ ಜೀವನದಲ್ಲಿಯೇ ಹೋರಾಟದ ಮುಂಚೂಣಿಯಲ್ಲಿರುತ್ತಿದ್ದ ಇವರು ೧೯೪೨ರ 'ಕ್ವಿಟ್ ಇಂಡಿಯಾ' ಚಳುವಳಿಗೆ ದುಮುಕಿ ಜೈಲುವಾಸ ಅನುಭವಿಸಿದಂತವರು.

ನಮ್ಮ ದೇಶ ಕಂಡ ಮಹಾತ್ಮರೆಂದೆ ಖ್ಯಾತಿವೆತ್ತ 'ಬಾಪೂಜಿ ಗಾಂಧಿ'ಯವರು ಅನೇಕ ಚಿಂತಕರು, ಸಿದ್ಧಾಂತಿಗಳು, ಹೋರಾಟಗಾರರಿಗೆ ಮುನ್ನುಡಿಯಾಗಿದ್ದರು. ಮಹಾತ್ಮ ಗಾಂಧಿಯವರ ಮಾನವ ಪ್ರೀತಿ, ಸಾಮರಸ್ಯ ಜೀವನ, ಸರಳ ಜೀವನ ಪದ್ಧತಿ, ದೇಶಪ್ರೇಮ ಮುಂತಾದ ಗುಣಗಳು ಯುವಕರನ್ನು ಇವರೆಡೆಗೆ ಆಕರ್ಷಿಸಲು ಕಾರಣವಾದವು. ಗಾಂಧಿಯವರ ಸಿದ್ಧಾಂತ, ಮಾನವೀಯ ಗುಣಗಳನ್ನು ತನ್ನೊಳಗೆ ರಕ್ತಗತ ಮಾಡಿಕೊಂಡ ವ್ಯಕ್ತಿ ಡಾ.ರಾಮಮನೋಹರ ಲೋಹಿಯಾರವರು. ೧೯೩೦-೪೭ರ ಕಾಲಘಟ್ಟದಲ್ಲಿ ಭಾರತ ಸಂದಿಗ್ಧ ಸ್ಥಿತಿಯಲ್ಲಿತ್ತು. ಅಂದು ಗಾಂಧಿ, ಲೋಹಿಯಾ ಮುಂತಾದ ವ್ಯಕ್ತಿಗಳು ಯುವಕರಿಗೆ ಆದರ್ಶರಾಗಿದ್ದರು. ಇವರ ಜೀವನ ಶೈಲಿಯನ್ನು ಯುವಕರು ಅನುಸರಿಸುತ್ತಿದ್ದುದು ಒಂದು ವಿಶೇಷವಾಗಿತ್ತು. ಡಾ.ಲೋಹಿಯಾರವರ ಸಮಾಜವಾದದ ಸಿದ್ಧಾಂತಗಳನ್ನು ಮೈತುಂಬಿಸಿಕೊಂಡಿದ್ದ ಗೋಪಾಲಗೌಡ ಸಮಾಜವಾದವನ್ನು ಜೀವನ ಪದ್ಧತಿ ಎಂದು ರೂಢಿಸಿಕೊಂಡಿದ್ದರು. ಹೆಚ್ಚಿನ ರಾಜಕಾರಣಿಗಳೆಲ್ಲ 'ಬಾಯಲ್ಲಿ ಮಂತ್ರ, ತಲೆಯೊಳಗೆ ತಂತ್ರ' ಎಂಬ

ನೀತಿಯನ್ನು ಅನುಸರಿಸುತ್ತಿದ್ದುದೇ ಹೆಚ್ಚು. ಆದರೆ ಗೌಡರು ನಿಷ್ಠುರ ನಡೆ, ವೈಚಾರಿಕ ಪ್ರಜ್ಞೆ, ಮಾನವ ಪ್ರೇಮ ಮುಂತಾದ ಗುಣಗಳಿಂದ ಹೆಸರು ವಾಸಿಯಾಗಿದ್ದರು. ಸಮಾಜವಾದ ಎಂದರೆ ಏನು ಎಂಬುದನ್ನು ನಿಜ ಜೀವನದಲ್ಲಿ ಬದುಕಿ ತೋರಿಸಿದ ಧೀಮಂತ ವ್ಯಕ್ತಿ. ಸರಳ ಜೀವನದ ಬಗ್ಗೆ ಹಿರೇನೆಲ್ಲೂರಿನ ಬಸ್ಸಿನ ದ್ಯಾವಪ್ಪ, ಕಾಗೋಡು ರಾಮಭದ್ರನ್ ದ್ಯಾವನಾಯಕರು ಹೇಳುವಂತೆ, 'ನಮ್ಮ ದೇವರ ಹಾಗೆ ಅವರು ಗೇಣಿ ಕುಟುಂಬದಿಂದ ಬಂದವರು. ಗೇಣಿ ಎಂದರೆ ಏನು, ಕಷ್ಟ, ನಷ್ಟ, ಏಂತದು ಅಂತ ಅವರಿಗೆ ಸಣ್ಣವರಾಗಿದ್ದಾಗಲೇ ತಿಳಿದಿತ್ತು. ಅದಕ್ಕೆ ಅವರಿಗೆ ಗೇಣಿರೈತರು ಅಂದರೆ ಪ್ರೇಮ. ಕಾಗೋಡು ರೈತ ಹೋರಾಟದಾಗೆ ಮನೆಮಠ ಎಲ್ಲಾ ಬಿಟ್ಟು ದೇವರ (ನಮ್ಮಜೊತೆ) ಜೊತೆ ಹೆಗಲಿಗೆ ಹೆಗಲು ಕೊಟ್ಟು ನಿಂತ್ರು, ದೇವರಂತ ಮನುಷ್ಯ ಅವರು ಸ್ವರ್ಗದಾಗೆ ತಣ್ಣಗಿರಲಿ, ಮಕ್ಕಳು ಮರಿಗೆಲ್ಲಾ ಒಳ್ಳೆಯದಾಗಲಿ' ಎಂಬ ಹಾರೈಕೆಯನ್ನು ಇಂದಿಗೂ ಅವರು ಹೇಳುವುದನ್ನು ನೆನಸಿಕೊಂಡರೆ ಗೌಡರ ಬಗ್ಗೆ ಹೆಮ್ಮೆ ಎನಿಸದಿರದು. (ಕ್ಷೇತ್ರಕಾರ್ಯದಲ್ಲಿ ಗೌಡರ ಬಗ್ಗೆ ಕೇಳಿದಾಗ ಜನರು ಪ್ರತಿಕ್ರಿಯಿಸಿದ ಮಾತಿದು) ಇವರ ಬಗ್ಗೆ ಹಳೆಯ ತಲೆಮಾರಿನ ಹಿರಿಯರು ತೇವಗೊಂಡ ಕಣ್ಣುಗಳಿಂದ ಹೆಮ್ಮೆಯ ನಾಯಕನನ್ನು ಸ್ಮರಿಸುತ್ತಾರೆ. ತಮ್ಮ ವೈಯಕ್ತಿಕ, ಸಾರ್ವಜನಿಕ ಜೀವನಗಳಲ್ಲಿ ಗೌಡರು ಒಂದಾಗಿ ಬಾಳಿದವರು.

ರಾಜ ಪರಂಪರೆಯ ನಂತರ ಬ್ರಿಟಿಷ್ ಆಳ್ವಿಕೆಯಲ್ಲಿ ಭಾರತದ ನೆಲ ಜನ ಸಾಮಾನ್ಯರ ಬದುಕಿಗೆ ಕಷ್ಟದ ಕಡಲೆಯಾಗಿತ್ತು. ವ್ಯಾಪಾರದ ಮುಖಾಂತರ, ಒಪ್ಪಂದದ ಮೂಲಕ ಬ್ರಿಟಿಷರು ನಮ್ಮ ದೇಶವನ್ನು ಹಿಡಿತಕ್ಕೆ ತೆಗೆದುಕೊಂಡ ನಂತರದಲ್ಲಿ ಆರ್ಥಿಕ ನೀತಿಗೆ ತಕ್ಕಂತೆ ತೆರಿಗೆ ಕ್ರಮದಿಂದ ಖಜಾನೆಗೆ ಹಣ ಸಂಗ್ರಹದ ಪರಿಪಾಠ ಬೆಳೆಯಿತು. ಈ ಕಾಲಮಾನದಲ್ಲಿ 'ಭೂಮಿ' ಭೂಮಾಲೀಕರ ಪಾಲಿಗೆ ನಿಧಿ ಸಿಕ್ಕಂತೆ ಆಯಿತು. ಭೂಮಿ ಇಂತವರ ಕೈವಶವಾದ ಮೇಲೆ ಅರ್ಧಭಾಗವನ್ನು ಗೇಣಿರೂಪದಲ್ಲಿ ಭೂಮಾಲೀಕರಿಗೆ ಕೊಡಬೇಕಾಗಿತ್ತು. ಇದರಿಂದಾಗಿ ರೈತರು ಆರ್ಥಿಕವಾಗಿ ದಿವಾಳಿಯಾಗಿದ್ದರು. ಗೇಣಿದಾರ ಕುಟುಂಬದಿಂದ ಬಂದ ಗೋಪಾಲ ಗೌಡರು ತಮ್ಮ ಬೆಳವಣಿಗೆಯ ಉದ್ದಕ್ಕೂ ಕಷ್ಟ-ನಷ್ಟದ ಅರಿವಿತ್ತು. ಈ ಎಲ್ಲಾ ಕಾರಣಗಳು ಮತ್ತು ಗಾಂಧೀಜಿಯವರ ಪ್ರಭಾವದಿಂದಾಗಿ ೧೯೪೨ರ 'ಕ್ವಿಟ್ ಇಂಡಿಯಾ ಚಳುವಳಿ'ಯಲ್ಲಿ ತಮ್ಮನ್ನು ತೊಡಗಿಸಿ ಕೊಂಡರು. ನಂತರದಲ್ಲಿ ಸ್ಥಳೀಯ ಸಮಸ್ಯೆಯಾದ 'ಗೇಣಿ' ವಿಷಯದ ಕಡೆಗೆ ಗೇಣಿರೈತರ ಪರವಾಗಿ ನಿಂತರು. ೧೯೪೭ರಲ್ಲಿ ದೇಶಕ್ಕೆ ಸ್ವಾತಂತ್ರ್ಯ ತರುವುದಕ್ಕೋಸ್ಕರ ದೇಶದ ಪರವಾಗಿ ಹೋರಾಡಿದರು. ನಂತರದಲ್ಲಿ ಬ್ರಿಟಿಷರಷ್ಟೇ ಕುಟಿಲರಾದ ನಮ್ಮವರೆ ಆದ ಭೂಮಾಲೀಕರ ವಿರುದ್ಧ ಹೋರಾಟಕ್ಕೆ ವೇದಿಕೆ ಸಜ್ಜುಗೊಳಿಸಿದರು. ತೀರ್ಥಹಳ್ಳಿ, ಹೊಸನಗರ, ಸಾಗರ ಭಾಗಗಳಲ್ಲಿ ಭೂಮಾಲೀಕರು ಗೇಣಿರೈತರಿಂದ ಗೇಣಿಯನ್ನು ಅಧಿಕವಾಗಿ ಪಡೆಯುತ್ತಿದ್ದರು. ಗೋಪಾಲ ಗೌಡರ ಆಗಮನದಿಂದಾಗಿ ತಲೆಬಗ್ಗಿಸಿ ಹೇಳಿದಷ್ಟು ಗೇಣಿ ಕೊಡುತ್ತಿದ್ದ ಗೇಣಿರೈತ, ತಲೆ ಎತ್ತಿ ಭೂಮಾಲೀಕರನ್ನು ಪ್ರಶ್ನೆ ಮಾಡಲಾರಂಭಿಸಿದ ಕೆಲವು ಭಾಗಗಳಲ್ಲಿ ಗೌಡರು ಭಾಷಣಗಳಿಂದ ಪ್ರಭಾವಿತರಾದ ಗೇಣಿರೈತರು ನಿಗದಿಯಾದ ಗೇಣಿಗಿಂತ ಜಾಸ್ತಿ ಗೇಣಿಯನ್ನು ಕೊಡಲಾಗುವುದಿಲ್ಲ ಎಂಬ ನಿಲುವು ತಾಳಿದರು. ಇದರಿಂದಾಗಿ ಭೂಮಾಲೀಕರು ಮತ್ತು ಗೇಣಿರೈತರ ಮಧ್ಯೆ ಸಂಘರ್ಷವೇರ್ಪಟ್ಟಿತು. ತೀರ್ಥಹಳ್ಳಿ ಹೊಸನಗರವಲ್ಲದೆ ಸಾಗರದ ಕಾಗೋಡಿನಲ್ಲಿಯು ಒಡೆಯ-ಒಕ್ಕಲು ಸಂಬಂಧ ಮುರಿದು ಬಿತ್ತು.

ನೀತಿಯನ್ನು ಅನುಸರಿಸುತ್ತಿದ್ದುದೇ ಹೆಚ್ಚು. ಆದರೆ ಗೌಡರು ನಿಷ್ಠುರ ನಡೆ, ವೈಚಾರಿಕ ಪ್ರಜ್ಞೆ, ಮಾನವ ಪ್ರೇಮ ಮುಂತಾದ ಗುಣಗಳಿಂದ ಹೆಸರು ವಾಸಿಯಾಗಿದ್ದರು. ಸಮಾಜವಾದ ಎಂದರೆ ಏನು ಎಂಬುದನ್ನು ನಿಜ ಜೀವನದಲ್ಲಿ ಬದುಕಿ ತೋರಿಸಿದ ಧೀಮಂತ ವ್ಯಕ್ತಿ. ಸರಳ ಜೀವನದ ಬಗ್ಗೆ ಹಿರೇನೆಲ್ಲೂರಿನ ಬಿನ್ನಿನ ದ್ಯಾವಪ್ಪ, ಕಾಗೋಡು ರಾಮಭದ್ರನ್ ದ್ಯಾವನಾಯಕರು ಹೇಳುವಂತೆ, 'ನಮ್ಮ ದೀವರ ಹಾಗೆ ಅವರು ಗೇಣಿ ಕುಟುಂಬದಿಂದ ಬಂದವರು. ಗೇಣಿ ಎಂದರೆ ಏನು, ಕಷ್ಟ ನಷ್ಟ ಏಂತದು ಅಂತ ಅವರಿಗೆ ಸಣ್ಣವರಾಗಿದ್ದಾಗಲೇ ತಿಳಿದಿತ್ತು. ಅದಕ್ಕೆ ಅವರಿಗೆ ಗೇಣಿರೈತರು ಅಂದರೆ ಪ್ರೇಮ. ಕಾಗೋಡು ರೈತ ಹೋರಾಟದಾಗೆ ಮನೆಮಠ ಎಲ್ಲಾ ಬಿಟ್ಟು ದೀವರ (ನಮ್ಮಜೊತೆ) ಜೊತೆ ಹೆಗಲಿಗೆ ಹೆಗಲು ಕೊಟ್ಟು ನಿಂತ್ರು, ದೇವರಂತ ಮನುಷ್ಯ ಅವರು ಸ್ವರ್ಗದಾಗೆ ತಣ್ಣಗಿರಲಿ, ಮಕ್ಕಳು ಮರಿಗೆಲ್ಲಾ ಒಳ್ಳೆಯದಾಗಲಿ' ಎಂಬ ಹಾರೈಕೆಯನ್ನು ಇಂದಿಗೂ ಅವರು ಹೇಳುವುದನ್ನು ನೆನಸಿಕೊಂಡರೆ ಗೌಡರ ಬಗ್ಗೆ ಹೆಮ್ಮೆ ಎನಿಸದಿರದು. (ಕ್ಷೇತ್ರಕಾರ್ಯದಲ್ಲಿ ಗೌಡರ ಬಗ್ಗೆ ಕೇಳಿದಾಗ ಜನರು ಪ್ರತಿಕ್ರಿಯಿಸಿದ ಮಾತಿದು) ಇವರ ಬಗ್ಗೆ ಹಳೆಯ ತಲೆಮಾರಿನ ಹಿರಿಯರು ತೇವಗೊಂಡ ಕಣ್ಣುಗಳಿಂದ ಹೆಮ್ಮೆಯ ನಾಯಕನನ್ನು ಸ್ಮರಿಸುತ್ತಾರೆ. ತಮ್ಮ ವೈಯಕ್ತಿಕ, ಸಾರ್ವಜನಿಕ ಜೀವನಗಳಲ್ಲಿ ಗೌಡರು ಒಂದಾಗಿ ಬಾಳಿದವರು.

ರಾಜ ಪರಂಪರೆಯ ನಂತರ ಬ್ರಿಟಿಷ್ ಆಳ್ವಿಕೆಯಲ್ಲಿ ಭಾರತದ ನೆಲ ಜನ ಸಾಮಾನ್ಯರ ಬದುಕಿಗೆ ಕಬ್ಬಿಣದ ಕಡಲೆಯಾಗಿತ್ತು. ವ್ಯಾಪಾರದ ಮುಖಾಂತರ, ಒಪ್ಪಂದದ ಮೂಲಕ ಬ್ರಿಟಿಷರು ನಮ್ಮ ದೇಶವನ್ನು ಹಿಡಿತಕ್ಕೆ ತೆಗೆದುಕೊಂಡ ನಂತರದಲ್ಲಿ ಆರ್ಥಿಕ ನೀತಿಗೆ ತಕ್ಕಂತೆ ತೆರಿಗೆ ಕ್ರಮದಿಂದ ಖಜಾನೆಗೆ ಹಣ ಸಂಗ್ರಹದ ಪರಿಪಾಠ ಬೆಳೆಯಿತು. ಈ ಕಾಲಮಾನದಲ್ಲಿ 'ಭೂಮಿ' ಭೂಮಾಲೀಕರ ಪಾಲಿಗೆ ನಿಧಿ ಸಿಕ್ಕಂತೆ ಆಯಿತು. ಭೂಮಿ ಇಂತವರ ಕೈವಶವಾದ ಮೇಲೆ ಅರ್ಧಭಾಗವನ್ನು ಗೇಣಿರೂಪದಲ್ಲಿ ಭೂಮಾಲೀಕರಿಗೆ ಕೊಡಬೇಕಾಗಿತ್ತು. ಇದರಿಂದಾಗಿ ರೈತರು ಆರ್ಥಿಕವಾಗಿ ದಿವಾಳಿಯಾಗಿದ್ದರು. ಗೇಣಿದಾರ ಕುಟುಂಬದಿಂದ ಬಂದ ಗೋಪಾಲ ಗೌಡರು ತಮ್ಮ ಬೆಳವಣಿಗೆಯ ಉದ್ದಕ್ಕೂ ಕಷ್ಟ-ನಷ್ಟದ ಅರಿವಿತ್ತು. ಈ ಎಲ್ಲಾ ಕಾರಣಗಳು ಮತ್ತು ಗಾಂಧೀಜಿಯವರ ಪ್ರಭಾವದಿಂದಾಗಿ ೧೯೪೨ರ 'ಕ್ವಿಟ್ ಇಂಡಿಯಾ ಚಳುವಳಿ'ಯಲ್ಲಿ ತಮ್ಮನ್ನು ತೊಡಗಿಸಿ ಕೊಂಡರು. ನಂತರದಲ್ಲಿ ಸ್ಥಳೀಯ ಸಮಸ್ಯೆಯಾದ 'ಗೇಣಿ' ವಿಷಯದ ಕಡೆಗೆ ಗೇಣಿರೈತರ ಪರವಾಗಿ ನಿಂತರು. ೧೯೪೭ರಲ್ಲಿ ದೇಶಕ್ಕೆ ಸ್ವಾತಂತ್ರ್ಯ ತರುವುದಕ್ಕೋಸ್ಕರ ದೇಶದ ಪರವಾಗಿ ಹೋರಾಡಿದರು. ನಂತರದಲ್ಲಿ ಬ್ರಿಟಿಷರಷ್ಟೇ ಕುಟಿಲರಾದ ನಮ್ಮವರೇ ಆದ ಭೂಮಾಲೀಕರ ವಿರುದ್ಧ ಹೋರಾಟಕ್ಕೆ ವೇದಿಕೆ ಸಜ್ಜುಗೊಳಿಸಿದರು. ತೀರ್ಥಹಳ್ಳಿ, ಹೊಸನಗರ, ಸಾಗರ ಭಾಗಗಳಲ್ಲಿ ಭೂಮಾಲೀಕರು ಗೇಣಿರೈತರಿಂದ ಗೇಣಿಯನ್ನು ಅಧಿಕವಾಗಿ ಪಡೆಯುತ್ತಿದ್ದರು. ಗೋಪಾಲ ಗೌಡರ ಆಗಮನದಿಂದಾಗಿ ತಲೆಬಗ್ಗಿಸಿ ಹೇಳಿದಷ್ಟು ಗೇಣಿ ಕೊಡುತ್ತಿದ್ದ ಗೇಣಿರೈತ, ತಲೆ ಎತ್ತಿ ಭೂಮಾಲಿಕರನ್ನು ಪ್ರಶ್ನೆ ಮಾಡಲಾರಂಭಿಸಿದ ಕೆಲವು ಭಾಗಗಳಲ್ಲಿ ಗೌಡರು ಭಾಷಣಗಳಿಂದ ಪ್ರಭಾವಿತರಾದ ಗೇಣಿರೈತರು ನಿಗದಿಯಾದ ಗೇಣಿಗಿಂತ ಜಾಸ್ತಿ ಗೇಣಿಯನ್ನು ಕೊಡಲಾಗುವುದಿಲ್ಲ ಎಂಬ ನಿಲುವು ತಾಳಿದರು. ಇದರಿಂದಾಗಿ ಭೂಮಾಲೀಕರು ಮತ್ತು ಗೇಣಿರೈತರ ಮಧ್ಯೆ ಸಂಘರ್ಷವೇರ್ಪಟ್ಟಿತು. ತೀರ್ಥಹಳ್ಳಿ ಹೊಸನಗರವಲ್ಲದೆ ಸಾಗರದ ಕಾಗೋಡಿನಲ್ಲಿಯು ಒಡೆಯ-ಒಕ್ಕಲು ಸಂಬಂಧ ಮುರಿದು ಬಿತ್ತು.

ಸೇಟ್, ತೀರ್ಥಹಳ್ಳಿಯಿಂದ ಗೋಪಾಲಗೌಡರು, ಸೊರಬದಿಂದ ಬಂಗಾರಪ್ಪ, ಶಿಕಾರಿಪುರದಿಂದ ಬಸವಣ್ಣೆಪ್ಪ, ಎಸ್.ಜಿ.ಹಾಲಪ್ಪ ಚನ್ನಗಿರಿ ಕ್ಷೇತ್ರದಿಂದ ವಿಧಾನ ಸಭೆಗೆ ಆಯ್ಕೆಯಾದವರು. ಸಮಾಜವಾದಿ ಪಕ್ಷವನ್ನು ಕರ್ನಾಟಕದಲ್ಲಿ ಕಟ್ಟಿದ ಕೀರ್ತಿ ಗೌಡರಿಗೆ ಸಲ್ಲುತ್ತದೆ.

ಎಚ್.ಗಣಪತಿಯಪ್ಪ, ಕಾಗೋಡು ಚಳುವಳಿಯ ನೇತಾರರನ್ನು ಗೋಪಾಲಗೌಡರ ರೈತರ ಕಾಳಜಿ ಯಾವ ತರಹದ್ದು ಎಂಬಿತ್ಯಾದಿ ವಿಷಯಗಳ ಬಗ್ಗೆ ವಿಚಾರಿಸಿದಾಗ ಅವರು 'ಗೋಪಾಲಗೌಡರು ದೀವರ ಧ್ವನಿಯಾಗಿದ್ದರು, ಯಾವುದೇ ಸ್ವಹಿತ ಸ್ವಾರ್ಥಲಾಭವಿಲ್ಲದೆ ಗೇಣಿರೈತರ ಪರವಾಗಿ, ಸಮಾಜವಾದಿ ಗೆಳೆಯರೊಡನೆ ಸೇರಿ ಕಾಗೋಡು ಚಳುವಳಿಗೆ ಧುಮುಕಿದವರು. ಹೋರಾಟ, ಸಂಘಟನೆ, ವಿಚಾರಕ್ರಾಂತಿ ಅವರ ಮಂತ್ರವಾಗಿತ್ತು. ೧೯೪೮ರಲ್ಲಿ ರೈತ ಸಂಘ ಅಸ್ತಿತ್ವಕ್ಕೆ ಬಂದಿತ್ತು. ಮರತ್ತೂರಿನ ಡಿ.ಮೂಕಪ್ಪನವರು ಅಧ್ಯಕ್ಷರಾಗಿಯೂ, ನನ್ನನ್ನು ಪ್ರಧಾನ ಕಾರ್ಯದರ್ಶಿಯನ್ನಾಗಿಯೂ, ಹದಿನೈದು ಜನರನ್ನು ಸದಸ್ಯರನ್ನಾಗಿ ಆಯ್ಕೆಮಾಡಲಾಯಿತು. ರೈತ ಸಂಘವು ಅನೇಕ ಬೇಡಿಕೆಗಳನ್ನು ಭೂಮಾಲೀಕರ ಮುಂದಿಟ್ಟಿತ್ತು. ಗೇಣಿ ನಿಗದಿ, ಕೊಟ್ಟುದ್ದಕ್ಕೆ ರಶೀದಿ, ಬಿಟ್ಟಿ ಕೆಲಸ, (ವರ್ಷಕ್ಕೆ ೧೦-೧೫ ಆಳು ಒಡೆಯರ ಮನೆಗೆ ಕೂಲಿ ಇಲ್ಲದೆ ಕೆಲಸ ಮಾಡುವುದು) ರದ್ದತಿ ಮುಂತಾದ ವಿಷಯಗಳ ಬಗ್ಗೆ ಬೇಡಿಕೆ ಸಲ್ಲಿಸಿತ್ತು. ಈ ಸಂದರ್ಭದಲ್ಲಿ ಭೂಮಾಲೀಕರ ಸಂಘ ರಚನೆಯಾಗಿತ್ತು. 'ಸಾಗರ ತಾಲ್ಲೂಕು ಹಿಡುವಳಿದಾರರ ಸಂಘ' ಇದಕ್ಕೆ ಶ್ರೀಮಂತ ಹೆಚ್.ಎಲ್.ವೀರಭದ್ರಪ್ಪ ಗೌಡರು ಅಧ್ಯಕ್ಷರಾಗಿದ್ದರು. ಇವರುಗಳೆಲ್ಲ ರೈತ ಸಂಘಟನೆ ಹೇಗೆ ತಡೆಗಟ್ಟಬೇಕು ಹೇಗೆ ಬಗ್ಗು ಬಡಿಯಬೇಕು ಎಂಬ ಬಗ್ಗೆ ತಂತ್ರ ಪ್ರತಿತಂತ್ರಗಳನ್ನು ನಮ್ಮ ವಿರುದ್ಧ ಮಾಡುವುದೇ ಈ ಸಂಘದ ಮುಖ್ಯ ಧ್ಯೇಯವಾಗಿತ್ತು. ಈ ಎರಡು ಸಂಘಗಳಿಗೆ ಭಾಷಣಮಾಡಲು ಶಾಂತವೇರಿ ಗೋಪಾಲಗೌಡರು, ಬಸವಾನಿ ರಾಮಶರ್ಮರು, ಕಾಂಗ್ರೆಸ್ಸಿನ ಕಡಿದಾಳು ಮಂಜಪ್ಪಗೌಡರು, ಕಮ್ಯುನಿಸ್ಟ್ ಪಕ್ಷದ ಕೋಲಾರದ ವೆಂಕಟಗಿರಿಯಪ್ಪನವರು, ಪ್ರಜಾಸಮಾಜವಾದಿ ಪಕ್ಷದ ದಿನಕರ ದೇಸಾಯಿಯವರು, ಹೀಗೆ ಅನೇಕರನ್ನ ಆಹ್ವಾನಿಸಲಾಗುತ್ತಿತ್ತು. ಎಲ್ಲರಿಗಿಂತ ಹೆಚ್ಚಾಗಿ ಗೋಪಾಲಗೌಡರ ಭಾಷಣವನ್ನು ನಮ್ಮ ರೈತರು ಮೆಚ್ಚಿಕೊಳ್ಳುತ್ತಿದ್ದರು. ೧೯೪೮ರ ಜನವರಿಯಲ್ಲಿ ಆರಂಭವಾದ ಸಾಗರ ತಾಲ್ಲೂಕು ರೈತ ಸಂಘ ೧೯೫೧ರ ಕಾಗೋಡು ಚಳುವಳಿಯವರೆಗೂ ಗೋಪಾಲಗೌಡರ ಪಾತ್ರ ಹಿರಿದಾದದ್ದು. ಅವರ ರೈತ ಪ್ರೀತಿ ಅಗಾಧವಾದದ್ದು. ಸಂಘಟನೆ, ಹೋರಾಟದ ತೀವ್ರತೆ ಯುವಕರಿಗೆ ಆದರ್ಶವಾಗಿತ್ತು. ಗಾಂಧೀಜಿಯವರ ಸರಳತೆ, ಸಜ್ಜನಿಕೆಯ ಪ್ರಭಾವ ಇವರ ಮೇಲೆ ಗಾಢವಾಗಿತ್ತು. ಡಾ.ಲೋಹಿಯಾ ಸಿದ್ಧಾಂತಗಳಿಗೆ ಮುನ್ನುಡಿಯಾಗಿದ್ದ ಗೋಪಾಲಗೌಡರು ಆ ರೀತಿಯೇ ಬಾಳಿ ಬದುಕಿದವರು. ಹೆಚ್. ಗಣಪತಿಯಪ್ಪನವರು ಗೌಡರ ಬಗ್ಗೆ ಮೆಚ್ಚುಗೆಯ ಮಾತು ಹೃದಯದಿಂದ ಮೂಡಿದಂತದ್ದಾಗಿದೆ.

ಪ್ರಬಂಧಕ್ಕೆ ಸಂಬಂಧಪಟ್ಟಂತೆ ಶ್ರೀ ಕಾಗೋಡು ತಿಮ್ಮಪ್ಪನವರನ್ನು ಸಂದರ್ಶಿಸಿದಾಗ ಗೋಪಾಲಗೌಡರು, ಮತ್ತು ಕಾಗೋಡು ಚಳುವಳಿ ಒಂದಕ್ಕೊಂದರ ಸಂಬಂಧ ಯಾವ ರೀತಿ ಇತ್ತು. ಗೌಡರನ್ನ ಹೇಗೆ ನಾಯಕರೆಂದು ಗುರುತಿಸಿದ್ದಿರಿ ಎಂಬಿತ್ಯಾದಿ ಪ್ರಶ್ನೆಗಳಿಗೆ ಅವರು 'ಕಾಗೋಡು ಸತ್ಯಾಗ್ರಹ' ಆರಂಭವಾದಾಗ ನಾನು ಹೈಸ್ಕೂಲು ವಿದ್ಯಾರ್ಥಿಯಾಗಿದ್ದೆ. ಗೋಪಾಲಗೌಡರು ರೈತ ಚಳುವಳಿಯ ಕಾರಣದಿಂದಾಗಿ ನಮ್ಮಲ್ಲಿಗೆ (ತಂದೆ ಸವಾಜಿ ಬೀರನಾಯಕರ ಮನೆಗೆ) ಅಂದರೆ ಕಾಗೋಡಿನ ನಮ್ಮ ಮನೆಗೆ ಬರುತ್ತಿದ್ದರು. ದೀವರಲ್ಲಿ ವಿದ್ಯಾವಂತರ

ಸಂಖ್ಯೆ ಬಹಳ ಕಡಿಮೆ ಇತ್ತು. ಹೈಸ್ಕೂಲು ಓದುತ್ತಿದ್ದ ನನ್ನನ್ನು ಅವರು ಪ್ರೀತಿಯಿಂದ ಮಾತನಾಡಿಸಿ ಹೆಗಲ ಮೇಲೆ ಕೈ ಹಾಕಿ, ಸಲುಗೆಯಿಂದ ಮಾತನಾಡಿಸುತ್ತಿದ್ದುದು ಅವರ ಸರಳತೆಗೆ ಸಾಕ್ಷಿಯಂತಿತ್ತು. ನಮ್ಮ ಮನೆಯಲ್ಲೇ ಉಳಿದುಕೊಳ್ಳುತ್ತಿದ್ದರು. ಗೋಪಾಲಗೌಡರು ಮತ್ತು ನಮಗಿದ್ದ ಸಂಬಂಧ ಕೇವಲ ಪಕ್ಷ ಮತ್ತು ಸಿದ್ಧಾಂತಗಳ ಮೇಲೆ ನಿಂತಿರಲಿಲ್ಲ. ಇವುಗಳನ್ನೆಲ್ಲಾ ಮೀರಿ ಮನುಷ್ಯತ್ವದ ಮೇಲೆ ನಿಂತಿತ್ತು. ಸತ್ಯಾಗ್ರಹದ ಸಂದರ್ಭದಲ್ಲಿ ಗೌಡರು ಎಲ್ಲರಿಗು ಪರಿಚಿತರಾಗಿದ್ದುದು ಹೇಗೆಂದರೆ ಗೌಡರು ರೈತರನ್ನು ಸಂಘಟಿಸುವುದರ ಮೂಲಕ, ಕಾಗೋಡು ಸುತ್ತಮುತ್ತಲಿನ ಹತ್ತಾರು ಮೈಲುಗಳ ಗ್ರಾಮಗಳನ್ನು ಕಾಲ್ನಡಿಗೆಯಲ್ಲೇ ಸುತ್ತಾಡಿ ರೈತರಲ್ಲಿ ಜಾಗೃತಿ ಮೂಡಿಸಿ, ಸಂಘಟಿಸುತ್ತಿದ್ದರು. ಕಾಗೋಡು ಹೋರಾಟದ ನಂತರ ಸಮಾಜವಾದಿ ಪಕ್ಷ ಈ ಭಾಗದಲ್ಲಿ ಹೆಚ್ಚು ಬಲವಾಯಿತು. ಈ ಪಕ್ಷದ ಯಾವುದೇ ಸಭೆ ಸಮಾರಂಭಗಳಿಗೆ ಸಾಗರ-ಸೊರಬ ಕೇಂದ್ರಸ್ಥಳವಾದವು. ಅದರಲ್ಲೂ ಈ ಭಾಗದಲ್ಲಿ ಹೆಚ್ಚಿನ ಗೇಣಿರೈತರಲ್ಲಿ ದೀವರ ಸಂಖ್ಯೆ ಅಧಿಕವಾಗಿತ್ತು. ಸಮಾಜವಾದಿ ಪಕ್ಷ ಮತ್ತು ಗೇಣಿರೈತರ ಸಂಬಂಧ ಕೇವಲ ಪಕ್ಷವಾಗಿರದೆ ತುಂಬು ಕುಟುಂಬವೊಂದರ ಸಂಬಂಧದಂತೆ ಇತ್ತು. ಗೇಣಿ ಸಮಸ್ಯೆಯ ಬಗೆಗೆ ಹೋರಾಟ ಸಂಘಟಿಸಿದ ಪಕ್ಷದ ಘೋಷಣೆ 'ಉಳುವವನೆ ಹೊಲದೊಡೆಯ' ಎಂಬುದಾಗಿತ್ತು. ಕಾಗೋಡಿನಲ್ಲಿ ಪಕ್ಷ ಹೋರಾಟ ಮಾಡದೆ ಹೋಗಿದ್ದರೆ 'ಭೂಸುಧಾರಣಾ ಕಾನೂನು' ಜಾರಿಗೆ ಬರುತ್ತಿರಲಿಲ್ಲ. ಈ ಎಲ್ಲಾ ಹೋರಾಟದ ಅನುಭವ ನನಗಿತ್ತು. ೧೯೫೨ರ ಚುನಾವಣೆಯಲ್ಲಿ ನಾನು ಸಕ್ರಿಯವಾಗಿ ಪಾಲ್ಗೊಂಡಿದ್ದೆ. ಕೆಂಪು ಬಾವುಟ, ಕೆಂಪು ಟೋಪಿ ಎಲ್ಲಾ ಕಡೆಯು ಕಾಣುತ್ತಿತ್ತು. ರೈತರಲ್ಲಿ ಜಾಗೃತಿ ಮೂಡಿದ್ದರಿಂದ ಅವರ್‍ಯಾರು ಜಮೀನುದಾರರ ಆಮಿಷಗಳಿಗೆ ಬಲಿಯಾಗದೆ ಗೋಪಾಲಗೌಡರ ಪರವಾಗಿ ನಿಂತು ಗೌಡರು ಜಯಶಾಲಿಯಾಗಲು ಸಹಕಾರವಿತ್ತರು. ಶ್ರೀಮಂತ ಜಮೀನ್ದಾರ ಬದರಿನಾರಾಯಣ ಅಯ್ಯಂಗಾರ ಸೋತರು. ಗೌಡರು ಗೆದ್ದರು. ನನ್ನ ಕಾಲೇಜು ಶಿಕ್ಷಣಕ್ಕೆ ಗೌಡರು ಸಹಕಾರ ಕೊಟ್ಟರು. ವಿದ್ಯಾರ್ಥಿನಿಲಯದಲ್ಲಿ ಸೀಟು ಕೊಡಿಸಿದರು. ನಾನು ವ್ಯಕ್ತಿಯಾಗಿ, ಸಮಾಜದ ಶಕ್ತಿಯಾಗಲು ಅವರೆ ಕಾರಣ. ೧೯೬೭ರ ಚುನಾವಣೆಯಲ್ಲಿ ಸಮಾಜವಾದಿ ಪಕ್ಷದಿಂದ ಸ್ಪರ್ಧಿಸಿ ಸೋತೆ. ೧೯೭೨ರ ಚುನಾವಣೆಯಲ್ಲಿ ಗೆದ್ದು ವಿಧಾನ ಸಭೆಗೆ ಬಂದೆ ಆದರೆ ನನ್ನಲ್ಲಿ ಶಕ್ತಿ ತುಂಬಿದ ಗೌಡರು ನನ್ನೊಂದಿಗಿರಲಿಲ್ಲ. ಈ ಕೊರಗು ನನಗೆ ಇಂದಿಗು ಇದೆ.

ಗೋಪಾಲಗೌಡರ ಸರಳತೆ, ಸಜ್ಜನಿಕೆ, ಮಾನವ ಪ್ರೇಮ ಮುಂತಾದ ಗುಣಗಳ ಬಗ್ಗೆ ಎಲ್ಲರು ಮೆಚ್ಚುಗೆಯಿಂದಲೇ ಮಾತನಾಡುವುದು ಅವರ ನೇರ ನಡೆಗೆ ಸಂದ ಗೌರವವಾಗಿದೆ. ಕಡಿದಾಳು ಶಾಮಣ್ಣನವರು ಗೌಡರ ರಾಜಕೀಯ ಕ್ಷೇತ್ರದ ಬಗ್ಗೆ ಬರೆಯುತ್ತಾ 'ಶುದ್ಧ ಆಲೋಚನೆ, ನಡವಳಿಕೆ, ಪ್ರಾಮಾಣಿಕತೆಯಿರುವ ವ್ಯಕ್ತಿಯು ಯಾವ ವರ್ಗ, ಇಲ್ಲವೇ ಯಾವ ಜಾತಿಯವನೇ ಆಗಿದ್ದರೂ, ಒಂದು ಪ್ರಾಂತ್ಯದ ಮುಖಂಡ ಅಥವಾ ಜನತೆಯ ಪ್ರತಿನಿಧಿಯಾಗಬಹುದು. 'ಬದುಕಿಗು-ರಾಜಕೀಯಕ್ಕೂ ನೇರ ಸಂಬಂಧವಿದೆ ಎಂಬ ವಿಚಾರ ಜನರಲ್ಲಿ ಮೂಡಲು ಪ್ರಾರಂಭವಾಯಿತು. ಮೂಢನಂಬಿಕೆಗಳ ಬಗ್ಗೆ ಜಾತಿ-ವರ್ಗದ ಬಗ್ಗೆ ಎಲ್ಲ ಬಗೆಯ ಅಸಮಾನತೆಗಳ ಬಗ್ಗೆ ಜನರ ನಡುವೆ ಚರ್ಚೆ ಮತ್ತು ಹೋರಾಟಗಳನ್ನು ಗೋಪಾಲಗೌಡರು ನಡೆಸಿದ್ದರು ಮತ್ತು ಅದರಂತೆ ಬಾಳಿ ಬದುಕಿದ್ದರು' (ಡಾ.ಕಾಳೇಗೌಡ ನಾಗವಾರ, ಜಿ.ವಿ.ಆನಂದಮೂರ್ತಿ (ಸಂ) ೧೯೯೭, ಪುಟ ೧೨) ಗೌಡರು ವೈಚಾರಿಕತೆ, ಮಾನವೀಯ ನಡವಳಿಕೆಯಿಂದ ಆಕರ್ಷಿತರಾಗಿದ್ದರು. ವಿಚಾರಕ್ರಾಂತಿ, ಸಾಮಾಜಿಕ ಕ್ರಾಂತಿಯನ್ನು

ಒಟ್ಟೊಟ್ಟಿಗೆ ಕೊಂಡೊಯ್ಯುವ ಗೌಡರ ಹೋರಾಟ ವಿಚಾರ ವೇದಿಕೆಯಾಗಿತ್ತು. ಗೌಡರಿಗೆ ಹತ್ತು ಹಲವು ವಿಷಯಗಳ ಬಗ್ಗೆ ಒಂದೇ ವೇದಿಕೆಯಲ್ಲಿ ಪ್ರಸ್ತಾಪಿಸುತ್ತಿದ್ದರು. ಗೇಣಿ ಸಮಸ್ಯೆ, ಭೂಮಿಯ ಅಸಮರ್ಪಕ ಹಂಚಿಕೆ, ಕೂಲಿ ಕಾರ್ಮಿಕರ ದುಃಸ್ಥಿತಿ, ಭ್ರಷ್ಟಾಚಾರ, ಜಡತನ ಎಲ್ಲಾ ವಿಷಯಗಳನ್ನು ಎಳೆ ಎಳೆಯಾಗಿ ಬಿಡಿಸಿ ಅರ್ಥವಾಗುವಂತೆ ಹೇಳುತ್ತಿದ್ದರು. ಈ ವೈಖರಿಯ ಬಗ್ಗೆ ಕಡಿದಾಳು ಶಾಮಣ್ಣನವರು 'ಗೋಪಾಲಗೌಡರ ಚುನಾವಣೆಯ ಕ್ಷೇತ್ರ ಪ್ರವಾಸವೆಂದರೆ ಅದೊಂದು ಬುದ್ಧಿಯ ಪ್ರಸಾರ ಯೋಜನೆಯ ಕಾರ್ಯಕ್ರಮ' ಎಂದೆನ್ನುತ್ತಿದ್ದರು. ಇವರ ಮಾತು ಅಕ್ಷರಶಃ ನಿಜ ಎಂಬುದು ನನಗೆ ಕ್ಷೇತ್ರಕಾರ್ಯದಿಂದ ತಿಳಿದುಬಂದಿತು.

ಇಂದಿನ ಸಂಕೀರ್ಣ ಸ್ವಾರ್ಥ ರಾಜಕಾರಣದಲ್ಲಿ ಇಂತವರು ಬಲು ಅಪರೂಪ. ತಮ್ಮ ೧೫ ವರ್ಷ ಚುನಾಯಿತ ರಾಜಕಾರಣದಲ್ಲಿ ಎಂದೆಂದಿಗೂ ಸ್ವಹಿತ ಲಾಭ ಚಿಂತನೆ ಮಾಡಿದ ವ್ಯಕ್ತಿಯಲ್ಲ. ಮೌಲ್ಯಯುತ ಆದರ್ಶದಲ್ಲಿ ಬದುಕು ಬಾಳಿದವರು. ತೀರ್ಥಹಳ್ಳಿ, ಅರಗ ಮುಂತಾದ ಕಡೆ ಸುತ್ತಾಡಿದಾಗ ಅವರ ಆದರ್ಶ ಬದುಕು ಕಣ್ಣೆದುರಿಗೆ ಕಂಡು ಬಂದಿತು. ಸುದೀರ್ಘ ಅವಧಿಯ ರಾಜಕಾರಣ ಬಂದ ಮೇಲೆ ಬಂಗಲೆಯಲ್ಲಿ ವಾಸ, ಹುಟ್ಟಿ ಬೆಳೆದ ಮನೆಯನ್ನು ಕೆಡವಿ ಹೊಸ ಮನೆಯ ನಿರ್ಮಾಣ, ಆಸ್ತಿಗಳಿಕೆ ಮುಂತಾದ ಸ್ಥಾವರಗಳನ್ನು ಹೊಂದಿರುವುದೆ ನಮ್ಮ ಗುರಿ ಎಂಬ ರಾಜಕಾರಣಿಗಳಲ್ಲಿ ಗೋಪಾಲಗೌಡರು ಭಿನ್ನವಾಗಿ ಕಾಣುತ್ತಾರೆ. ಅರಗದಲ್ಲಿ ಗುರುತು ಸಿಗದಂತಿರುವ ಮನೆ, ಸಂಬಂಧಿಕರೆಲ್ಲ ತಮ್ಮ ಹಿಡಿ. ದುಡಿಮೆಯ ಮುಖಾಂತರ ಬದುಕಿರುವುದನ್ನು ಕಣ್ಣಾರೆ ಕಂಡ ಮೇಲೆ ಗೌಡರ ಬಗೆಗಿನ ಗೌರವ ಇಮ್ಮಡಿಯಾಯಿತು. ನುಡಿದಂತೆ ಬಾಳಿದ ರಾಜಕಾರಣಿ ಎಂದರೆ ಗೋಪಾಲಗೌಡರೊಬ್ಬರೆ. ಈ ಕಾರಣಕ್ಕೆ ಅವರ ಸಂಬಂಧಿಕರಾದ ಎ.ಪಿ.ರಾಮಪ್ಪನವರನ್ನು ತೀರ್ಥಹಳ್ಳಿಯಲ್ಲಿ ಭೇಟಿ ಮಾಡಿದ ಸಂದರ್ಭದಲ್ಲಿ ಅವರಾಡಿದ ಮಾತುಗಳು ಇಂದಿನ ರಾಜಕಾರಣಿಗಳಿಗೆ, ಯುವಕರಿಗೆ, ವಿಚಾರವಂತರಿಗೆ ಸಲಹೆ ಕೊಟ್ಟಂತೆ "ಗೋಪಾಲಗೌಡರ ರಾಜಕೀಯ ಜೀವನದಲ್ಲಿ ಸಂಬಂಧಿಕರನ್ನ ಯಾರನ್ನು ಹತ್ತಿರ ಸೇರಿಸುತ್ತಿರಲಿಲ್ಲ. ಎ.ಪಿ.ರಾಮಪ್ಪನವರು ಶಿಕ್ಷಕರಾಗಿದ್ದರು. ಗೌಡರ ಪಕ್ಷ ಸಂಘಟನೆ ಮುಂತಾದ ಕೆಲಸಗಳಿಗೆ ಬಿಡುವಿನ ವೇಳೆಯಲ್ಲಿ ಸಹಾಯ ಮಾಡಲು ಹೊರಟರೆ, ನೀನು ಸರ್ಕಾರಿ ನೌಕರ. ನಿನಗೆ ನಿನ್ನ ವೃತ್ತಿಯೇ ಶ್ರೇಷ್ಠ, ವೃತ್ತಿ ಗೌರವವಿರಬೇಕು. ಸಂಬಂಧಗಳು ರಾಜಕೀಯದಲ್ಲಿ ಇರಬಾರದು ಮುಂತಾದ ಮಾತುಗಳಿಂದ ತಮ್ಮನ್ನು ದೂರವಿಟ್ಟಿದ್ದರು. ರಾಜಕಾರಣದ ನಂತರದ ಸಂಬಂಧ ಚೆನ್ನಾಗಿ ಇತ್ತು. ಬಹಳ ಆತ್ಮೀಯವಾಗಿ ಮಾತನಾಡಿಸುತ್ತಿದ್ದರು. ಇದರಿಂದಾಗಿ ಗೌಡರ ಪ್ರಭಾವ ನಮ್ಮ ಸಂಬಂಧಿಕರ ಯುವಕರ ಮೇಲಿತ್ತು. ಅವರು ನಮಗೆಲ್ಲಾ ಮಾರ್ಗದರ್ಶಕ ಕೂಡ. ಗೋಪಾಲ ಗೌಡರ ಪ್ರಭಾವದಿಂದಾಗಿ ಅನೇಕ ಮುಖಂಡರು, ನಾಯಕರು ಸೃಷ್ಟಿಯಾದರು. ಎಷ್ಟೋ ಜನರ ಜೀವನ ವಿಧಾನವನ್ನೆ ಬದಲಿಸಿದೆ. ಅಂತಹ ಶಕ್ತಿ ಅವರಲ್ಲಿತ್ತು. ಯುವಕರಿಗೆ ಆದರ್ಶವಾಗಿದ್ದರು. ಇಂದು ಏನಾಗಿದೆ, ಗಾಂಧೀಜಿ ಹುಟ್ಟಿದ ಅಹಿಂಸೆಯ ನಾಡಲ್ಲಿ ಹಿಂಸೆ ಅವತರಿಸಿದಂತೆ ಸಮಾಜವಾದದ ಭೂಮಿಯಲ್ಲಿ ಕೋಮುವಾದ ತಲೆ ಎತ್ತುತ್ತಿದೆ. ಗೋಪಾಲಗೌಡರ ಸಿದ್ಧಾಂತಗಳನ್ನು ಮುಂದಿಟ್ಟುಕೊಂಡು ಸ್ವಾರ್ಥ ರಾಜಕಾರಣ ಮಾಡುವವರು ನಮ್ಮಲ್ಲಿ ಕಂಡುಬರುವುದು ನಮ್ಮ ದೌರ್ಭಾಗ್ಯ ಎನ್ನಬೇಕಾಗುತ್ತದೆ' ಎಂದು ತಮ್ಮ ಅಸಮಾಧಾನವನ್ನು ತೋಡಿಕೊಳ್ಳುತ್ತಾರೆ. ಇವರ ಮಾತುಗಳು ಸತ್ಯವಾಗಿದೆ. ೧೯೪೨ರ ಕಾಲದಲ್ಲಿ ಗಾಂಧೀ, ನೆಹರು, ಲೋಹಿಯಾ ಮುಂತಾದ ಅನೇಕ ರಾಷ್ಟ್ರ

ನಾಯಕರಿದ್ದಂತೆ ರಾಜ್ಯ ರಾಜಕಾರಣದಲ್ಲಿ ಅವರ ನೆರಳಂತೆ ಗೋಪಾಲಗೌಡರು, ಪಾಪ್ರಿ ಶಾಮಣ್ಣ, ಜೆ.ಎಚ್.ಪಟೇಲ್, ಸದಾಶಿವ ರಾಯರು, ಕೆಂಗಲ್ ಹನುಮಂತಯ್ಯ, ಕಡಿದಾಳು ಮಂಜಪ್ಪನವರು ಮುಂತಾದ ನಾನಾ ಪಕ್ಷದ ಮುಖಂಡರಿದ್ದರು. ಕೆಲವರು ನುಡಿದಂತೆ ನಡೆದವರು, ಬಾಳಿ ಬದುಕಿದವರು. ಕೆಲವರು ಶ್ರೀಮಂತರ, ಅಧಿಕಾರದ ಆಕ್ಟೋಪಸ್ ಹಿಡಿತಕ್ಕೆ ಸಿಲುಕಿದವರು. ಗೋಪಾಲಗೌಡರು ೧೯೭೨ ಜೂನ್ ೯ ರಂದು ತಮ್ಮ ೪೯ನೇ ವಯಸ್ಸಿನಲ್ಲಿ ಅಕಾಲಮರಣವನ್ನಪ್ಪಿದರು. ಇಂದಿಗು ತಮ್ಮ ಸಿದ್ಧಾಂತಗಳ ಮುಖಾಂತರ, ಮುಖಂಡತ್ವದ ಮೂಲಕ ಸರಳ ಬದುಕಿನ ತತ್ವದಿಂದ ನಮ್ಮಲ್ಲಿ ಇಂದಿಗು ಜೀವಂತವಾಗಿದ್ದಾರೆ. ತಮ್ಮ ಜಂಗಮ ಬದುಕಿನಿಂದಾಗಿ ನಮ್ಮಲ್ಲಿ ಇಂದಿಗೂ ಜೀವಂತವಾಗಿದ್ದಾರೆ.

### ದೀವರ ಮೊದಲ ಪ್ರತಿಭಟನೆ

ದೇವರು, ಧರ್ಮ ಎಂಬುದು ಮನುಷ್ಯನ ಜೀವನದಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಅದ್ವಿತೀಯವಾದ, ಅಮೂರ್ತವಾದ, ದೈವಿಕ ಶಕ್ತಿಯನ್ನು ಮನುಷ್ಯ ನಂಬಿದ್ದಾನೆ. ಯಾವುದೋ ಒಂದು ಶಕ್ತಿ ಜಗತ್ತನ್ನು ನಡೆಸುತ್ತಿದೆ ಎಂದು ನಂಬಿಕೆಯನ್ನು ಇಟ್ಟಿದ್ದಾನೆ. ಇಂತಹ ಆಧ್ಯಾತ್ಮಿಕ ಶಕ್ತಿಯಿಂದ ಮನುಷ್ಯ ಬದುಕಿನಲ್ಲಿ ಶಾಂತಿ, ನೆಮ್ಮದಿಯನ್ನು ಕಂಡುಕೊಂಡಿದ್ದಾನೆ. ಹಾಗಾಗಿ ಸತ್ಯ ಎಂಬುದು ಜನರ ಜೀವನದ ವ್ರತವಾಗಿತ್ತು. ಜೀವನ ಭವ್ಯವಾಗಿಲ್ಲದಿದ್ದರೂ ದಿವ್ಯವಾಗಿತ್ತು. ಹೀಗೆ ಜನರು ನಂಬಿಕೆ, ಆಚರಣೆ ಸಂಪ್ರದಾಯಗಳಿಗೆ ಅಂಟಿ ಕೊಂಡು ಬಂದಿದ್ದಾರೆ.

ಹಿರೇನೆಲ್ಲೂರಿನ ಲಿಂಗಾಯಿತರಿಗೆ ಬೇಕಾಗಿದ್ದ ಗಣಪತಿಯಪ್ಪ ಅವರ ವಿರುದ್ಧವೇ ತಿರುಗಿ ಬೀಳುವ ಪ್ರಸಂಗವೊಂದು ನಡೆಯಿತು. ೧೯೪೮ರಲ್ಲಿ ಹಿರೇನೆಲ್ಲೂರಿನಲ್ಲಿ ರೋಗರುಜಿನಗಳು ಕಂಡುಬಂದವು. ಇದಕ್ಕೆ ಕಾರಣವೇನು ಎಂದು ಗ್ರಾಮದ ಹಿರಿಯರು ಚಿಂತಿಸಿದರು. ಹಿರೇನೆಲ್ಲೂರಿನ ಈಶ್ವರ ದೇವಸ್ಥಾನ ಶಿವಲಿಂಗವು ಬಿರುಕು ಬಿಟ್ಟಿತ್ತು. ಹೀಗೆ ಭಿನ್ನವಾದ ಶಿವಲಿಂಗ ಇರುವುದು ಊರಿಗೆ ಕೇಡು. ದೈವದ ಅವಕೃಪೆಗೆ ನಮ್ಮ ಊರು ಗುರಿಯಾಗಿದೆ ಎಂದು ತಿಳಿದ ಜನ, ಹೊಸ ಲಿಂಗ ಪ್ರತಿಷ್ಠಾಪನೆಗೆ ಮುಂದಾದರು. ಹೊಸ ಲಿಂಗವೊಂದನ್ನು ರಾಣೆಬೆನ್ನೂರಿನಲ್ಲಿ ಮಾಡಿಸಿ ತಂದು ಹುಬ್ಬಳ್ಳಿಯ ಮೂರು ಸಾವಿರದ ಮಠದ ಸ್ವಾಮಿಗಳಿಂದ ಅದನ್ನು ಶಾಸ್ತ್ರೋಕ್ತವಾಗಿ ಪುನಃ ಪ್ರತಿಷ್ಠಾಪಿಸುವುದೆಂದು ಊರಿನ ಹಿರಿಯರು ತೀರ್ಮಾನ ತೆಗೆದುಕೊಂಡರು. ಇದರ ಖರ್ಚಿಗೆ ಊರಿನಲ್ಲಿ ವರಾಡ್ ಎತ್ತುವುದೆಂದು ತೀರ್ಮಾನವಾಯಿತು. ೧೯೪೮ರಲ್ಲಿ ಹಿರೇನೆಲ್ಲೂರಿನಲ್ಲಿ ೯೬ ದೀವರ ಮನೆಗಳು, ೯ ಲಿಂಗಾಯಿತರ ಮನೆಗಳು ೩ ಬಡಗಿಯವರ ಮನೆ, ೧ ಜೋಗಿ, ೧೦ ಹರಿಜನ ಮನೆಗಳು ಇದ್ದವು. ಎಲ್ಲರು ಅವರ ಶಕ್ತಿಗೆ ತಕ್ಕಷ್ಟು ಅಂದರೆ ಭತ್ತ ಇದ್ದವರು ಭತ್ತ, ನಗದು ಇದ್ದವರು ನಗದು ವರಾಡ ಕೊಟ್ಟರು. ಆದರೆ ಸಮಾರಂಭದ ಆಹ್ವಾನ ಪತ್ರಿಕೆ ಮಾತ್ರ 'ವೀರಶೈವ ಮಂಡಳಿ' ಹಿರೇನೆಲ್ಲೂರು ಎಂದು ಅಚ್ಚುಹಾಕಿಸಲಾಯಿತು. ಈ ವಿಷಯವನ್ನು ಗಣಪತಿಯಪ್ಪನವರು ದೀವರಿಗೆ ಮನದಟ್ಟು ಮಾಡಿಕೊಟ್ಟರು. ಹೀಗೆ ಹಿರೇನೆಲ್ಲೂರು ದೀವರು ಅಸಮಾಧಾನಗೊಂಡರು. ದೀವರ ಕೇರಿಯಲ್ಲಿ 'ವೀರಶೈವ ಮಂಡಳಿ' ಅಂತ ಯಾಕಿರಬೇಕು? ನಾವೇನು ವರಾಡ ಕೊಟ್ಟಿಲ್ಲವೇ? ಎಂಬ ಮಾತು ಹೊರಟಿತು. ಎಲ್ಲಾ ದೀವ ನಾಯಕರು ಗಣಪತಿಯಪ್ಪನವರ ಮುಂದಾಳತ್ವದಲ್ಲಿ ಸಭೆ ಸೇರಿ ನಾವು ಆಹ್ವಾನ ಪತ್ರಿಕೆ ಮಾಡಿಸುವ

ದೆಂದು, ಅದಕ್ಕೆ 'ದೀವ ಮಂಡಳಿ' ಹಿರೇನೆಲ್ಲೂರು ಎಂದು ಹಾಕಿಸುವುದು ಎಂದು ತೀರ್ಮಾನ ತೆಗೆದುಕೊಂಡು ಅದರಂತೆ ಆಹ್ವಾನ ಪತ್ರಿಕೆ ಮಾಡಿಸಿ ತಂದು, ನೆಂಟರಿಷ್ಟರಿಗೆಲ್ಲಾ ಹಂಚಲಾಯಿತು. ಎಲ್ಲರಲ್ಲೂ ಅದೇನೋ ಒಂದು ರೀತಿಯ ಆತ್ಮತೃಪ್ತಿ ಎದ್ದು ಕಾಣಲು ಶುರುವಾಯಿತು.

ದೀವರ ಆಹ್ವಾನ ಪತ್ರಿಕೆ ಲಿಂಗಾಯಿತರ ಕೈ ಸೇರಿತು. ಮೊದಲ ಬಾರಿಗೆ ಲಿಂಗಾಯಿತರ ಕೆಂಗಣ್ಣಿಗೆ ಗಣಪತಿಯಪ್ಪನವರು ಗುರಿಯಾದರು. ಲಿಂಗಾಯಿತರ ಮನೆಯ ಆಳುಗಳೆಲ್ಲ ಸೇರಿ ಗಣಪತಿಯಪ್ಪನವರ ಮನೆಗೆ ಮುತ್ತಿಗೆ ಹಾಕಿದರು. ಅದೃಷ್ಟವಶಾತ್ ಗಣಪತಿಯಪ್ಪನವರು ಸಿದ್ದಾಪುರ ಸಂತೆಗೆ ಹೋಗಿದ್ದರು. ನಂತರ ನಡೆದ ಶಿವಲಿಂಗ ಉತ್ಸವದಲ್ಲಿ ಗಣಪತಿಯಪ್ಪನವರಿಗೆ ಪ್ರವೇಶ ಕೊಡಲಿಲ್ಲ. ಮುಗದೂರು ಗೌಡರ ಅಟ್ಟದ ಮೇಲಿಂದ ಶಾಲೆ ರಸ್ತೆಗೆ ಬಂದು ತಲುಪಿತು. ಮಾಸ್ತರು ಊರಿನ ಮಾರಿಗುಡಿಯಲ್ಲಿ ತನ್ನ ಶಾಲೆ ಆರಂಭಿಸಿದರು. ಲಿಂಗಾಯಿತ ಹುಡುಗರು ಶಾಲೆಗೆ ಬರುವುದನ್ನು ನಿಲ್ಲಿಸಿದರು.

ಆಹ್ವಾನ ಪತ್ರಿಕೆಯ ಪ್ರಕರಣದಿಂದ ಸುತ್ತಮುತ್ತಲಿನ ಹಳ್ಳಿಯ ದೀವರ ಕೇರಿಯಲ್ಲಿ ಮನೆಮಾತಾದರು. ದೀವರಲ್ಲಿ ವೈಚಾರಿಕ ಪ್ರಜ್ಞೆ ಜಾಗೃತವಾಯಿತು. ೧/೧೦ ಭಾಗದಷ್ಟಿದ್ದ ಲಿಂಗಾಯಿತರು ನಮ್ಮನ್ನು ನಿಕೃಷ್ಟವಾಗಿ ಕಾಣುತ್ತಾರೆ ಎಂಬುದು ಅವರಿಗೆ ಮನದಟ್ಟಾಯಿತು. ದೀವರೆಲ್ಲ ಒಗ್ಗಟ್ಟಾದರು. ದೀವರಲ್ಲಿ ಮೊದಲು ಪ್ರತಿಭಟನೆ ಚಿಗುರಿದ್ದು ಹೀಗೆ. ವಿದ್ಯಾವಸ್ಥೆಯಲ್ಲಿದ್ದ ಜನಾಂಗ ಮಾಸ್ತರ ಸಹವಾಸದಿಂದ ಜಾಗೃತವಾದದ್ದು 'ದೀವ ಮಂಡಳಿ' ಹುಟ್ಟಿಗೆ ಕಾರಣವಾಯಿತು. ಲಿಂಗಾಯಿತರ ವಿರುದ್ಧ ದೀವರನ್ನು ಒಟ್ಟುಗೂಡಿಸಿ ಒಂದು ಸಂಘ ಕಟ್ಟಲು ಈಶ್ವರ ದೇವಸ್ಥಾನದ ಘಟನೆ ಕಾರಣವಾಯಿತು.

## ಮಲೆನಾಡು ಗೇಣಿದಾರರ ಸಂಘ

'ಮಲೆನಾಡು ಗೇಣಿದಾರ ಸಂಘ' ೧೯೪೬ರಲ್ಲಿ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿಯಲ್ಲಿ ಜನ್ಮ ತಾಳಿತು. ಇದರ ಅಧ್ಯಕ್ಷರಾಗಿ ಕಡಿದಾಳ ಮಂಜಪ್ಪನವರು ಕೆಲಕಾಲ ಕಾರ್ಯ ನಿರ್ವಹಿಸಿದರು. ಕಡಿದಾಳ ಮಂಜಪ್ಪನವರು ಶಿವಮೊಗ್ಗ ಜಿಲ್ಲೆಯ ಪ್ರಮುಖ ಕಾಂಗ್ರೆಸ್ ನಾಯಕರು. ಇವರು ಬಡ ಬಡ ಗೇಣಿದಾರನ ಮಗ. ಇವರಿಗೆ ಭೂಮಾಲಿಕರ ದರ್ಪ, ದೌರ್ಜನ್ಯದ ಅರಿವು ಸಣ್ಣವರಿರುವಾಗಲೇ ಪರಿಚಯವಾಗಿತ್ತು. ಭೂಮಿ ಮತ್ತು ಅದರ ಬವಣೆಯ ದಟ್ಟ ಅನುಭವದ ಅರಿವಿತ್ತು. ೧೯೪೭ರ ಆಸುಪಾಸು ಭೂಮಾಲಿಕರು ಹಿಂಸೆಗಿಳಿದಿದ್ದರು. ಒಕ್ಕಲುಗಳನ್ನು ಒಕ್ಕಲೆಬ್ಬಿಸುವುದು ಅತಿಯಾಗಿತ್ತು. ರೈತರಲ್ಲಿ ಆತಂಕಗಳು ಹೆಚ್ಚಾಗಿದ್ದವು. ಇಂತಹ ಸಮಯದಲ್ಲಿ 'ಮಲೆನಾಡು ಗೇಣಿದಾರರ ಸಂಘ' ಹುಟ್ಟಿಕೊಂಡಿತು.

೧೯೪೮ರಲ್ಲಿ ಇದರ ಪ್ರಥಮ ಅಧಿವೇಶನ ನಡೆಯಿತು. ಈ ಅಧಿವೇಶನದಲ್ಲಿ ಸೋಷಿಯಲಿಸ್ಟ್ ಧುರೀಣರಾದ ರಾಮನಂದನ ಮಿಶ್ರ, ಕಮಲಾದೇವಿ ಚಟ್ಟೋಪಾಧ್ಯಾಯರಲ್ಲದೆ, ಕಾಗೋಡಿನ ಕೆ.ಜಿ.ಒಡೆಯರು ಮೈಸೂರು ಸಂಸ್ಥಾನದ ಅನೇಕ ಕಾಂಗ್ರೆಸ್ ಮುಖಂಡರು ಭಾಗವಹಿಸಿದ್ದರು. ಈ ಸಂಘವು ೧೯೪೭ರಲ್ಲಿ 'ಮೈಸೂರು ಸೊಸೈಟಿಗಳ ರಿಜಿಸ್ಟ್ರೇಷನ್ ಆಕ್ಟ್' (೧೯೦೪) ಪ್ರಕಾರ ನೋಂದಣಿ ಕೂಡಾ ಆಯಿತು. ಈ ಸಂಘಕ್ಕೆ ತೀರ್ಥಹಳ್ಳಿ, ಕೊಪ್ಪ, ಶೃಂಗೇರಿ, ಹೊಸನಗರ, ಸಾಗರ ತಾಲ್ಲೂಕಿನಲ್ಲಿಯೂ ಅನೇಕ ಅಭಿಮಾನಿಗಳಿದ್ದರು. ಸಂಘದ ಸದಸ್ಯರನ್ನು ಹೊಂದಿತ್ತು, ಈ ಸಂಘದ ಸಭೆ ಸಮಾರಂಭಗಳಿಗೆ ಅಧ್ಯಕ್ಷರಾಗಿರುತ್ತಿದ್ದವರು ಹೆಚ್ಚಾಗಿ ಕಾಂಗ್ರೆಸ್ ಮುಖಂಡ

ರುಗಳು ಅಥವಾ ಭಾರಿ ಭೂಮಾಲೀಕರು ಆಗಿರುತ್ತಿದ್ದರು. ಕಾಗೋಡು ಒಡೆಯರು, ಬರವಳ್ಳಿ ಗೌಡರು, ಬದರೀನಾರಾಯಣ ಕಾಂಗ್ರೆಸ್ ಧುರೀಣರು ಭಾಗವಹಿಸುತ್ತಿದ್ದರು. ಇದೊಂದು ವಿಪರ್ಯಾಸವೇ ಆಗಿತ್ತು.

ಕಡಿದಾಳ್ ಮಂಜಪ್ಪನವರು ವಕೀಲಿ ಡಿಗ್ರಿ ತೆಗೆದುಕೊಂಡು ಶಿವಮೊಗ್ಗದಲ್ಲಿ ವಕೀಲಿ ವೃತ್ತಿ ಆರಂಭಿಸಿದರು. ೧೯೩೫ರಲ್ಲಿ ಕಾಂಗ್ರೆಸ್ ಸೇರಿ ೧೯೩೮ರಲ್ಲಿ ಶಿವಮೊಗ್ಗ ಜಿಲ್ಲಾ ಕಾಂಗ್ರೆಸ್‌ನ ಕಾರ್ಯದರ್ಶಿ ಆದರು. ಕ್ವಿಟ್ ಇಂಡಿಯಾ ಸತ್ಯಾಗ್ರಹದಲ್ಲಿ ಭಾಗವಹಿಸಿ ಒಂದು ವರ್ಷಕಾಲ ಜೈಲಿನಲ್ಲಿ ಇದ್ದರು. ಮೈಸೂರು ಸಂಸ್ಥಾನದ ಪ್ರಜಾಪ್ರತಿನಿಧಿ ಸಭೆ ಲೆಜಿಸ್ಲೇಟಿವ್ ಕೌನ್ಸಿಲ್ ಸಂಸ್ಥಾನದ ಕಂದಾಯ ಮಂತ್ರಿಗಳೂ ಆದ ಕಡಿದಾಳ್ ಮಂಜಪ್ಪ ತುಂಬ ವಿರೋಧ ಎದುರಿಸಿಯೂ ಇನಾಂ ಮತ್ತು ಧಾರ್ಮಿಕ ಜಹಾಗೀರ್ ರದ್ದತಿ ಶಾಸನವನ್ನು ಜಾರಿಗೆ ತಂದರು. ಬಡ ರೈತ ಕುಟುಂಬದಿಂದ ಬಂದ ಇವರು ರೈತರ ಬಗ್ಗೆ ಕಾಳಜಿ ಹೊಂದಿದ್ದರು. ರೈತರು ಮತ್ತು ಭೂಮಾಲಿಕರು ಸಂಧಾನದಲ್ಲಿ ರಾಜಿಯಾಗಬೇಕು. ಗಾಂಧಿ ಮಾರ್ಗದಲ್ಲಿ ತಮ್ಮ ಸಮಸ್ಯೆಗಳನ್ನು ಪರಿಹರಿಸಿ ಕೊಳ್ಳಬಹುದು. ಭೂಸುಧಾರಣಾ ಶಾಸನವನ್ನು ಭೂಮಾಲೀಕರ ಹಿತಕ್ಕೆ ಧಕ್ಕೆ ಬರದ ರೀತಿ ನೀತಿಯೊಂದನ್ನು ರೂಪಿಸಬೇಕು. ಸಂಘರ್ಷಕ್ಕೆ ಎಡೆಮಾಡಿಕೊಡದೆ ಶಾಸನವನ್ನು ಜಾರಿಗೆ ತರಬೇಕು ಎಂಬ ದೂರದೃಷ್ಟಿ ಹೊಂದಿದ್ದರು. ಸಮಾಜವಾದಿ ನಾಯಕರ ಪ್ರವೇಶದಿಂದಾಗಿ ಇವರು ಕಾಗೋಡು ಸತ್ಯಾಗ್ರಹಕ್ಕೆ ಪ್ರತ್ಯಕ್ಷ ಬೆಂಬಲ ನೀಡಲಾಗುವುದಿಲ್ಲ. ಇಲ್ಲಿ ಪಕ್ಷ ರಾಜಕೀಯದ ಒತ್ತಡ ಬಂದಿರಲೂಬಹುದು. ಆದರೆ 'ಉಳುವವನೆ ಹೊಲದೊಡೆಯ' ಕಾನೂನಿನ ಮೊಳಕೆ ಚಿಗುರೊಡೆದಿದ್ದೇ ಈ ಸಂದರ್ಭದಲ್ಲಿ ಎಂದರೆ ತಪ್ಪಾಗಲಾರದು. ಮಲೆನಾಡು ಗೇಣಿದಾರರ ಸಂಘದ ಮುಖ್ಯ ಬೇಡಿಕೆಗಳು ಈ ರೀತಿ ಇವೆ.

೧. ಗೇಣಿ ಒಕ್ಕಲು ಮತ್ತು ದಣಿಯ ನಡುವೆ ಗೇಣಿ ನೆಲದ ಕರಾರು ಪತ್ರ ಮುಂತಾದ ಲಿಖಿತ ದಾಖಲೆಗಳು ಇರಬೇಕು.

೨. ಗೇಣಿ ವಸೂಲಿಯ ಬಗ್ಗೆ ಭೂ ಮಾಲೀಕ ಒಕ್ಕಲಿಗೆ ಬರಹದ ಮೂಲಕ ರಶೀದಿ ಕೊಡಬೇಕು.

೩. ಗೇಣಿಯ ಪ್ರಮಾಣ ಫಸಲಿನ ಮೂರನೇ ಒಂದು ಭಾಗಕ್ಕಿಂತ ಜಾಸ್ತಿ ಇರಕೂಡದು

೪. ಮಠ, ದೇವಸ್ಥಾನಗಳ ಬ್ರಹ್ಮಸ್ವ, ಇನಾಂ ಜಮೀನುಗಳು, ಖಾಸಗೀ ಜಮೀನುಗಳ ಗೇಣಿ ಹರಾಜು ಪದ್ಧತಿ ನಿಲ್ಲಬೇಕು. ಇಲ್ಲ ಹರಾಜಿನ ಕಾಲವಧಿಯಾದರೂ ಜಾಸ್ತಿ ಆಗಬೇಕು.

೫. ದಣಿಗಳು ಒಕ್ಕಲುಗಳಿಂದ ವಿನಾಕಾರಣ (ಅಂದರೆ ಒಕ್ಕಲು ಗೇಣಿ ಬಾಕಿ ಮಾಡಿಕೊಂಡಿದ್ದರೆ ನೆಲ ಹಾಳು ಗೆಡವಿದ್ದರೆ ಇತ್ಯಾದಿ ಕಾರಣಗಳನ್ನು ಬಿಟ್ಟು) ಭೂಮಿ ಬಿಡಿಸಿಕೊಳ್ಳುವುದು ನಿಲ್ಲಬೇಕು.

ಹೀಗೆ ಮುಂತಾದ ಬೇಡಿಕೆಗಳನ್ನು ಸಂಘ ಮುಂದಿಟ್ಟಿತ್ತು. ಬೇಡಿಕೆಗಳು ಆಮೂಲಾಗ್ರವಾಗಿ ಯಾವುದೇ ಭೂಮಾಲಿಕನ ಮತ್ತು ಗೇಣಿದಾರನ ಸಂಬಂಧ ಬದಲಾಗದೆ ಯಥಾಸ್ಥಿತಿ ಕಾಯ್ದುಕೊಂಡು ಹೋಗುವುದಕ್ಕೆ ಸಹಕಾರಿಯಾಗಿತ್ತು. ಒಕ್ಕಲು ಒಕ್ಕಲುಗಳಾಗಿಯೇ ಇದ್ದು, ಭೂಮಾಲಿಕ ಭೂಮಾಲಿಕರಾಗಿಯೇ ಉಳಿಯು ವಂತಹ ಬೇಡಿಕೆಗಳಾಗಿದ್ದವು. ಯಾಕೆ ಗೇಣಿ ಕೊಡಬೇಕು? ಉಳುವವನೆ ಹೊಲದೊಡೆಯ ಆಗಬೇಕು ಇಂತಹ

ಆಲೋಚನೆಗಳು ಸಂಘಕ್ಕೆ ಬರಲೇ ಇಲ್ಲ. ಕಾರಣ ಸ್ಪಷ್ಟ ಎಲ್ಲರಲ್ಲೂ ಆ ಕಾಲದಲ್ಲಿ ಭೂಮಿ ಎಂಬುದು ಭೂಮಾಲಿಕರ ದೈವದತ್ತ ಕೊಡುಗೆ ಎಂದು ತಿಳಿದಂತಹ ಸಮಯದಲ್ಲಿ ಉಳುವವನೇ ಭೂಮಾಲಿಕ ಎಂದೊಡನೆ ಬಾರಿ ಸಂಘರ್ಷಗಳಾಗಬಹುದು. ಅಥವಾ ಜನರನ್ನೆಲ್ಲಾ ಈ ದಿಕ್ಕಿಗೆ ತರುವುದು ಬಹಳ ಕಷ್ಟ ಸಾಧ್ಯ. ಪರಿವರ್ತನೆ ಎಂಬುದು ನಿಧಾನವಾಗಿದ್ದರೆ ಪ್ರಧಾನ ಎಂಬ ಅಂಶವೂ ಇರಬಹುದು. ಆಗಿನ ಕಾಲದಲ್ಲಿ ಜನ ತಲತಲಾಂತರದಿಂದ ಗುಲಾಮಿ ಪದ್ಧತಿಗೆ ತಮ್ಮನ್ನು ತಾವೇ ಅರ್ಪಿಸಿಕೊಂಡಂತ ಕಾಲವಾಗಿತ್ತು. ದಾಸ್ಯ ಪದ್ಧತಿಯ ಕರಾಳ ಹಸ್ತ ಆವರಿಸಿದಂತಹ ಕಾಲಘಟ್ಟ ಅಲ್ಲದೆ ದೇಶದ ಮುಖಂಡರ ಕಣ್ಣು ಭಾರತದ ಬಂಧ ಮುಕ್ತಿಯ ಕಡೆಗೆ ಇದ್ದಂತಹ ಸಂದರ್ಭದಲ್ಲಿ, ಸ್ಥಳೀಯ ಅನೇಕ ಸಮಸ್ಯೆಗಳು ಇದ್ದರು ಇದರ ಕಡೆಗೆ ಯಾರ ಗಮನವೂ ಇರಲಿಲ್ಲ. ಇವರಲ್ಲಿಯೇ ಒಬ್ಬ ನಾಯಕ ಹುಟ್ಟಿ (ಯಾವುದೇ ಪಕ್ಷವಲ್ಲದ) ಹೋರಾಟ ಮಾಡುವಾಗ ಕಣ್ಣಿಗೆ ಕಾಣುವ ಸಮಸ್ಯೆಯ ಕಡೆಗೆ ದೃಷ್ಟಿ ಇರುತ್ತದೆ. ಆದರಲ್ಲು ಸಂಘ ಸಂಸ್ಥೆಗಳಿಗೆ ಆರ್ಥಿಕ ಬೆಂಬಲ ಮತ್ತು ಜನರ ಬೆಂಬಲ (ಹೋರಾಟದ ಮನೋಭಾವ) ಇರಬೇಕಾಗುತ್ತದೆ. 'ಈ ಸಂಘ ಮಲೆನಾಡಿನಲ್ಲಿ ಭೂಮಾಲಿಕತ್ವದ ವಿರುದ್ಧ ಯಾವುದೇ ಸಂಘಟಿತ ಹೋರಾಟವನ್ನು ನಡೆಸಲಿಲ್ಲ. ಸಂಘದ ಬೇಡಿಕೆಗಳು ಸೀಮಿತವಾಗಿದ್ದವು. ಈ ಸಮಸ್ಯೆಗಳ ಇತ್ಯರ್ಥಕ್ಕೆ ಸಂಘವು ಮಲೆನಾಡಿನ ಗೇಣಿದಾರರನ್ನು ವ್ಯಾಪಕವಾಗಿ ದೊಡ್ಡ ಸಂಖ್ಯೆಯಲ್ಲಿ ಸಂಘಟಿಸಬಹುದಿತ್ತು. ಕಾನೂನಿನಲ್ಲಿ ಅಳವಡಿಸಿಕೊಳ್ಳಲು, ಚಳುವಳಿಯ ಮುಖಾಂತರ ಸರಕಾರದ ಮೇಲೆ ಒತ್ತಡ ಹೇರಬಹುದಾಗಿತ್ತು. ಕೆಲವು ತಕರಾರುಗಳನ್ನು ಪಂಚಾಯಿತಿ ನಡೆಸಿ ತೀರ್ಮಾನ ಮಾಡುವುದನ್ನು ಬಿಟ್ಟರೆ ಬೇರೆ ಯಾವ ಕೆಲಸವನ್ನು ಮಾಡಲಿಲ್ಲ. ಸಂಘದ ಚಟುವಟಿಕೆ ಏನಿದ್ದರು 'Just verbal' ಕರಪತ್ರ ಹೊರಡಿಸುವುದು. ಅಲ್ಲಿ ಇಲ್ಲಿ ಸಭೆ ಮಾಡುವುದು, ಭಾಷಣ ಮಾಡುವುದು, ಕೋರ್ಟು ಕೇಸು ಹಾಕುವುದು ಇತ್ಯಾದಿ (ರಾಜಶೇಖರ ಜಿ. ೧೯೮೦, ಪುಟ ೭೪)

ಇಲ್ಲಿ ಗಮನಿಸಬೇಕಾದ ಅಂಶ ಎಂದರೆ 'ಪ್ರತಿಭಟನೆ' ಎಂದರೆ ಏನೂ ಎಂಬುದು. ಯಾವುದಕ್ಕೂ ಬಗ್ಗದ ಆರ್ಥಿಕವಾಗಿ ಬಲಾಢ್ಯರಾಗಿರುವ, ರಾಜಕೀಯ ಶಕ್ತಿಯಿರುವ, ಅವರನ್ನು ಪಂಚಾಯಿತಿಗೆ ಕರೆಯುವುದೇ ಆಗಿನ ಕಾಲದಲ್ಲಿ ದೊಡ್ಡ ವಿಷಯವೇ ಆಗಿತ್ತು. 'ಪ್ರತಿಭಟನೆ' ಎಂದರೆ ಏನು ಎಂಬುದನ್ನು ತಿಳಿದ ಜನಕ್ಕೆ ಚಳುವಳಿಯ ಮುಖವಾಹಿನಿಗೆ ತರುವುದು ಬಹಳ ಕಷ್ಟಕರವಾದ ಅಂಶ. ನಾವು ಎಲ್ಲವನ್ನು ಪರಾಂಬರಿಸಿ ಗೇಣಿದಾರರ ಸಂಘವನ್ನು ನೋಡಬೇಕಾಗುತ್ತದೆ.

## ಮಲೆನಾಡಿನ 'ದೀವರ ರೈತಸಂಘ'

ಮಲೆನಾಡಿನ ದೀವರ ಸಾಮಾಜಿಕ, ಆರ್ಥಿಕ, ಧಾರ್ಮಿಕ ಸ್ಥಿತಿಗೆ ಮೂಲ ಕಾರಣ, ಭೂ ಒಡೆತನದ ಪದ್ಧತಿ ಹಾಗೂ ಜೂಳಿಗಮಾನ್ಯ ಪದ್ಧತಿ ನಮ್ಮ ಸಮಾಜದಲ್ಲಿ ವರ್ಗಶೋಷಣೆಯ ಹೀನಾಯ ಸ್ಥಿತಿ ನಿರ್ಮಾಣವಾಗಿತ್ತು. ವ್ಯಕ್ತಿ ಗೌರವ ನಶಿಸಿಹೋಗಿತ್ತು. ಪ್ರಬಲವಾದ ಕೋಮಿನ ಎದುರು ಏಕ ವ್ಯಕ್ತಿ ಪರಿವರ್ತನೆಗೆ ಹೋರಾಡುವುದು ಸಮುದ್ರದಲ್ಲಿ ಮುತ್ತು ತೆಗೆದಂತೆ. ಇಲ್ಲಿ ಸಂಘಟನೆ ಇದ್ದರೆ ಏನನ್ನಾದರು ಸಾಧಿಸಬಹುದು ಎಂಬುದು ಹಿರೇನೆಲ್ಲೂರು ದೇವಸ್ಥಾನದ ಘಟನೆಯೇ ಸಾಕ್ಷಿ.

'ಮಲೆನಾಡಿನ ಗೇಣಿದಾರರ' ಸಂಘದ ಮಾದರಿಯಲ್ಲಿ ಸಾಗರದಲ್ಲಿ 'ಸಾಗರ ತಾಲ್ಲೂಕು ರೈತ ಸಂಘ' ೧೯೪೮ರ ಜನವರಿಯಲ್ಲಿ ಹುಟ್ಟಿಕೊಂಡಿತು. ಮಲೆನಾಡು ಗೇಣಿದಾರರ ಸಂಘದಲ್ಲಿ ಹವ್ಯಕರು, ಲಿಂಗಾಯಿತರು, ಒಕ್ಕಲಿಗರು, ಮುಸ್ಲಿಮರು ಎಲ್ಲಾ ಜನಾಂಗದವರು ಇದ್ದರು. ಆದರೆ ಸಾಗರ ತಾಲ್ಲೂಕು ರೈತಸಂಘದಲ್ಲಿ ನೂರಕ್ಕೆ ನೂರರಷ್ಟು ದೀವರ ಸಂಘವೇ ಆಗಿತ್ತು. ಮೊದಲು ಇದು ದೀವರ ಸಂಘವೆಂದೇ ಇತ್ತು. ಮಾಸ್ತರವರ ಅಪೇಕ್ಷೆಯಂತೆ 'ಸಾಗರ ತಾಲ್ಲೂಕು ರೈತ ಸಂಘ'ವೆಂದು ನಾಮಕರಣಗೊಂಡಿತು. ದೀವರ ಜಾತಿಯಲ್ಲಿ ಆಗ ತುಂಬ ಗಣ್ಯರಾಗಿದ್ದ ಮರತ್ತೂರಿನ ಪಟೇಲ ಮೂಕಪ್ಪನವರು, ಹಿರೇನೆಲ್ಲೂರಿನ ಬರಸಿನ ದ್ಯಾವಪ್ಪನವರು, ಹಿರೇನೆಲ್ಲೂರು ಸಮೀಪದ ಮನೆ ಘಟ್ಟದ ಚೌಡಪ್ಪನವರು ಮುಂತಾದ ದೀವ ಮುಖಂಡರು ಸೇರಿ ಸಂಘ ಸ್ಥಾಪಿಸಿದರು.

ಸಾಗರತಾಲ್ಲೂಕಿನ ರೈತ ಸಂಘಕ್ಕೆ ಮೂಕಪ್ಪನವರು ಅಧ್ಯಕ್ಷರೆಂದು ಗಣಪತಿಯಪ್ಪನವರು ಕಾರ್ಯದರ್ಶಿ ಎಂದೂ ನಿಶ್ಚಯವಾಯಿತು. ಸಂಘದ ಕಾರ್ಯಕಾರಿ ಸಮಿತಿಗೆ ಮೂಕಪ್ಪ, ಗಣಪತಿಯಪ್ಪ, ಚೌಡಪ್ಪ, ಮೇಳವರಿಗೆ ನಾಗಪ್ಪ, ಮಾಲ್ವೆ ಮಂಜಪ್ಪ, ಸೈದೂರು ಕಲ್ಲಪ್ಪ, ಮುಂಡಗಳಲೆ ದ್ಯಾವಪ್ಪ, ಬರದವಳ್ಳಿ ರಾಮನಾಯ್ಕ, ಶಿರವಾಳದ ಹೊನ್ನಪ್ಪ ಎಲ್ಲಾ ದೀವರು ಸದಸ್ಯರಾದರು. ಈ ಸಂಘದ ಪ್ರಥಮ ಸಭೆ ಮರತ್ತೂರಿನಲ್ಲಿ ನಡೆಯಿತು. ಸಾಗರದ ವಕೀಲರಾಗಿದ್ದ ಮೃತ್ಯುಂಜಯ ಬಾಪಟ್‌ರವರು ಭಾಗವಹಿಸಿದ್ದರು. ಸಭೆಗೆ ಹೆಚ್ಚಿನ ಸಂಖ್ಯೆಯಲ್ಲಿ ಗೇಣಿರೈತರು ಬಂದಿದ್ದರು. ಈ ದೀವರ ಸಂಘ ತಾಲ್ಲೂಕಿನ ಅನೇಕ ಹಳ್ಳಿಗಳಲ್ಲಿ ಸಭೆಗಳನ್ನು ನಡೆಸಿತು. ಸಂಘವು ಜನರಲ್ಲಿ ಜಾಗೃತಿ ಮೂಡಿಸುವುದು, ಭಾಷಣಗಳನ್ನು ಏರ್ಪಡಿಸುವುದು, ಕರಪತ್ರ ಹಂಚುವುದು ಮುಂತಾದ ಚಟುವಟಿಕೆಯಿಂದ ಕೂಡಿತ್ತು. 'ಮಲೆನಾಡು ಗೇಣಿದಾರರ' ಸಂಘಕ್ಕಿಂತಲೂ ಹೆಚ್ಚು ಚುರುಕಾಗಿತ್ತು. ಗಣಪತಿಯಪ್ಪನವರ ನೆಲ್ಲೂರಿನ ಒಡನಾಟ ಸ್ವಲ್ಪ ಕಡಿಮೆಯಾಯಿತು. ಅನೇಕ ಗಣ್ಯರು ಸಭೆ ಸಮಾರಂಭಗಳಿಗೆ ಭಾಗವಹಿಸುತ್ತಿದ್ದರು. ಅವರಲ್ಲಿ ರೈತ ಮುಖಂಡರು, ಜಮೀನುದಾರರು ಸಾಗರ, ಶಿವಮೊಗ್ಗದ ವಕೀಲರು, ಡಾಕ್ಟರರು ಭಾಗವಹಿಸಿ ಮಾತನಾಡುತ್ತಿದ್ದರು. ೧೯೫೦ರಲ್ಲಿ ನಡೆದ ಸಂಘಟನೆಯ ಸಭೆಯೊಂದರಲ್ಲಿ ತೀರ್ಥಹಳ್ಳಿಯ ಸದಾಶಿವರಾಯರು, ರಾಮನಂದನ ಮಿಶ್ರ, ಶಾಂತವೇರಿ ಗೋಪಾಲಗೌಡರು ಭಾಗವಹಿಸಿದ್ದರು. ಕ್ಷೇತ್ರಕಾರ್ಯದಲ್ಲಿ ಹೆಚ್.ಗಣಪತಿಯಪ್ಪನವರು ವಿವರ ಒದಗಿಸಿದ್ದಾರೆ.

ನಮ್ಮ ಅನೇಕ ಸಂಘ ಸಂಸ್ಥೆಗಳಿಗೆ ನಿರ್ದಿಷ್ಟ ಬೇಡಿಕೆಗಳಾಗಲಿ, ಖಚಿತವಾದ ಸ್ವರೂಪವಾಗಲಿ, ನಿರ್ದಿಷ್ಟ ಕಾರ್ಯಕ್ರಮಗಳು ಇರುವುದಿಲ್ಲ. ಆದರೆ ಸಾಗರ ತಾಲ್ಲೂಕಿನ ರೈತ ಸಂಘ ಈ ನಿಟ್ಟಿನಲ್ಲಿ ಮಾದರಿ ಸಂಘವಾಗಿತ್ತು. ಈ ಸಂಘದ ಬೇಡಿಕೆಗಳು ತೀವ್ರಗಾಮಿತ್ವದಿಂದ ಕೂಡಿರಲಿಲ್ಲ. ಗೇಣಿ ಒಕ್ಕಲುಗಳ ಸ್ಥಿತಿಯತ್ತ, ಗೇಣಿ ಕೊಡುವ ಮಾಪಕದತ್ತ ದೃಷ್ಟಿ ಹರಿಸಿದ್ದವೆ ವಿನಃ 'ಭೂಮಿ ನಮ್ಮದು ದುಡಿಮೆ ನಮ್ಮದು' ಎಂಬ ನೀತಿಯತ್ತ ಗಮನಹರಿಸಿರಲಿಲ್ಲ. ಇಲ್ಲಿ ಗೇಣಿ ಸಮಸ್ಯೆಯೇ ಬೃಹದಾಕಾರವಾಗಿತ್ತು. ಈ ರೈತ ಸಂಘಗಳ ಆಲೋಚನೆ ಕೇವಲ ಪ್ರಾಥಮಿಕ ಹಂತದಲ್ಲಿತ್ತು. ಕಾರಣ ತಲೆತಲಾಂತರಗಳಿಂದ ನಡೆದು ಬಂದ ಶೋಷಣೆಯ ಮರವನ್ನು ಒಮ್ಮೆಗೆ ಕತ್ತರಿಸುವುದು ಬಹಳ ಕಷ್ಟಸಾಧ್ಯವಾದ ಮಾತಾಗಿತ್ತು. ನಮ್ಮ ದೇಶದ ಕೃಷಿ ಭೂಮಿಯ ಹಂಚಿಕೆಯೇ ತಾರತಮ್ಯದಿಂದ ಕೂಡಿತ್ತು. ರೈತರ ಸ್ಥಿತಿ ಕಷ್ಟದಿಂದ ಕೂಡಿದ್ದರೆ, ಕೂಲಿಗಳ ಸ್ಥಿತಿಯಂತೂ ಅತ್ಯಂತ ಶೋಚನೀಯ

ವಾಗಿತ್ತು. ಈ ಭೂಮಿಯ ಸಮಸ್ಯೆ ಕೇವಲ ಕಾಗೋಡಿಗೆ, ಸಾಗರಕ್ಕೆ, ಮಾತ್ರ ಸೀಮಿತವಾಗಿದ್ದಿಲ್ಲ. ಇದು ಗಡಿಯನ್ನು ಮೀರಿ ನಾಡಿನ ಸಮಸ್ಯೆಯಾಗಿತ್ತು. ಈ ರೈತ ಸಂಘ ಕೇವಲ ಬೇಡಿಕೆಗಳನ್ನು ಜಮೀನ್ದಾರರ ಮುಂದೆ ತರಲು ಪ್ರಯತ್ನಿಸಿತು.

ಸಾಗರ ತಾಲ್ಲೂಕು ರೈತಸಂಘ ತನ್ನ ಸಭೆಗಳಲ್ಲಿ ಪ್ರಚಾರ ಮಾಡುತ್ತಿದ್ದ ಕರಪತ್ರಗಳಲ್ಲಿ ಅಚ್ಚು ಹಾಕುತ್ತಿದ್ದ, ಮಂತ್ರಿಗಳಿಗೆ ಕೊಡುವ ಮನವಿಯಲ್ಲಿ ನಿವೇದಿಸಿಕೊಳ್ಳುತ್ತಿದ್ದ ಬೇಡಿಕೆಗಳು ಈ ಕೆಳಗಿನಂತಿದ್ದವು.

೧. ಗೇಣಿ ಪ್ರಮಾಣ ನಿಗದಿಯಾಗಬೇಕು. ಅದು ಫಸಲಿನ ಮೂರನೆ ಒಂದಕ್ಕಿಂತ ಜಾಸ್ತಿ ಇರಕೂಡದು.

೨. ಒಕ್ಕಲುಗಳಿಗೆ ದಣಿಗಳು ಭೂಮಿ ಕರಾರು ಪತ್ರ, ಗೇಣಿ ರಶೀದಿ ಮುಂತಾದ ಲಿಖಿತ ದಾಖಲೆಗಳನ್ನು ಕೊಡಲೇಬೇಕು. ಹಾಗೆಂದು ಕಾನೂನು ಆಗಬೇಕು.

೩. ಒಕ್ಕಲಿಗೆ ಗೇಣಿ ಜಮೀನಿನ ರಕ್ಷಣೆ ಸಿಗಬೇಕು. ಜಮೀನ್ದಾರರು ಒಕ್ಕಲುಗಳ ಭೂಮಿ ಬಿಡಿಸಿಕೊಳ್ಳದಂತೆ ಕಾನೂನು ಆಗಬೇಕು.

೪. ಇನಾಂ ಭೂಮಿ, ಮಠ ದೇವಸ್ಥಾನಗಳ ಜಮೀನಿನ ಗೇಣಿ ಹರಾಜು ಪದ್ಧತಿ ನಿಂತು ಖಾಯಂ ಗೇಣಿಪದ್ಧತಿ ಜಾರಿಗೆ ಬರಬೇಕು. ಅಥವಾ ಗೇಣಿ ಹರಾಜಿನ ಅವಧಿ ಜಾಸ್ತಿ ಆಗಬೇಕು. ಸಾಗರ ತಾಲ್ಲೂಕಿನ ತಾಳಗುಪ್ಪ ಹೋಬಳಿಯಲ್ಲಿ ಕೆಲವೆಡೆ ಪ್ರಚಲಿತವಿದ್ದ ಖಾಸಗೀ ಜಮೀನಿನ ಗೇಣಿ ಹರಾಜು ಪದ್ಧತಿ ನಿಲ್ಲಬೇಕು

೫. ಮಲೆನಾಡಿನ ಒಕ್ಕಲುಗಳಿಗೆ ವನ್ಯ ಮೃಗಗಳಿಂದ ತಮ್ಮ ಪೈರು ರಕ್ಷಿಸಿಕೊಳ್ಳಲು ಬಂದೂಕು ಲೈಸನ್ಸ್ ಕೊಡಬೇಕು

೬. ಬಿಟ್ಟಿ ಬೇಗಾರು ದುಡಿಮೆ ಪೂರ್ತಿಯಾಗಿ ನಿಲ್ಲಬೇಕು.

೭. ಸರಕಾರದ ಗೊಬ್ಬರ, ಸಾಲ ವಗೈರೆ ವಿತರಣೆ ಆಗುವಾಗ ಗೇಣಿರೈತರಿಗೆ ಅದು ನೇರವಾಗಿ ದೊರೆಯುವಂತಾಗಬೇಕು. ಜಮೀನ್ದಾರರ ಮುಖಾಂತರ ಅವರಿಗೆ ಈ ಸೌಲಭ್ಯಗಳನ್ನು ಕೊಡುವ ಪದ್ಧತಿ ನಿಲ್ಲಬೇಕು.

ಇವು ಸಾಗರ ತಾಲ್ಲೂಕು ರೈತ ಸಂಘದ ಪ್ರಮುಖ ಬೇಡಿಕೆಯಾಗಿತ್ತು. ಈ ಸಂಘವು ನಿಶ್ಚಿತವಾದ ಸ್ವರೂಪ, ನಿರ್ದಿಷ್ಟವಾದ ಗುರಿಗಳು, ಕಾರ್ಯಕ್ರಮಗಳನ್ನು ಹೊಂದಿದ ಒಂದು ಸಂಘಟನೆಯಾಗಿ ರೂಪುಗೊಂಡಿತು. ಸಮಾಜ ಕಲ್ಯಾಣವೆಂಬುದು ಒಂದು ನಿರಂತರ ಪ್ರಕ್ರಿಯೆ. ಇದರ ಮೂಲಭೂತ ಗುರಿ, ನೆಮ್ಮದಿ, ಆರ್ಥಿಕ ಭದ್ರತೆ, ಈ ಸಂಘಟನೆ ನಾಗರೀಕ ಪ್ರಜ್ಞೆ, ಕ್ರಿಯಾಶೀಲ ನಡುವಳಿಕೆಯಿಂದಾಗಿ ಬಹುಬೇಗನೆ ಜನರ ವಿಶ್ವಾಸ ಪ್ರೀತಿಗಳಿಸಿತು. ಹೋರಾಟದಲ್ಲಿ ತನ್ನದೆ ಆದ ಛಾಪು ಮೂಡಿಸಿತು.

ರೈತಸಂಘ ಒಡೆಯ-ಒಕ್ಕಲುಗಳ ಸಂಬಂಧವನ್ನು ನಾಶಪಡಿಸದೆ ಕೇವಲ ಸುಧಾರಣೆಯತ್ತ ಗಮನ ಕೇಂದ್ರಿಕರಿಸಿತು. ರೈತಸಂಘ ಕೃಷಿ ಕಾರ್ಮಿಕರನ್ನು ಪೂರ್ತಿಯಾಗಿ ಅಲಕ್ಷಿಸಿತ್ತು. ಕಾರಣ ದೀವರೆಲ್ಲರು ಹೆಚ್ಚಾಗಿ

ಗೇಣಿರೈತರಾಗಿದ್ದರು. ಮತ್ತು ಸಂಘದ ಎಲ್ಲಾ ಸದಸ್ಯರು ಗೇಣಿ ಭೂಮಿಯನ್ನು ಹೊಂದಿದ್ದರು. ಸಂಘದ ಘೋಷ ವಾಕ್ಯವೇ ಆ ರೀತಿ ಇದೆ. ಸಂಘದ ಸದಸ್ಯರಾಗುವವರು 'ಉಳುವವರಾಗಿರಬೇಕು. ದುಡಿಯುವ ರೈತನ ಏಳಿಗೆಯೇ ಸಂಘದ ಮುಖ್ಯ ಗುರಿ' ಎಂಬ ವಾಕ್ಯದೊಂದಿಗೆ ಮುದ್ರಣಗೊಂಡಿತು. ಇವರ ಸಂಘ ಸೀಮಿತ ಉದ್ದೇಶ ಗುರಿಯನ್ನು ಹೊಂದಿದೆ. ಆದರೆ ಗಣಪತಿಯಪ್ಪನವರು ಕೂಲಿಕಾರ್ಮಿಕರ ಬಗ್ಗೆ ನಿಜವಾದ ಕಾಳಜಿಗಳು ಇದ್ದವು. ೧೯೫೧ರ ಮಾರ್ಚ್‌ನಲ್ಲಿ ಸಂಘದ ವತಿಯಿಂದ ಪ್ರಕಟವಾದ 'ರೈತನ ಕಷ್ಟಗಳನ್ನು ರೈತನೇ ಬಲ್ಲ' ಎಂಬ ಕಿರು ಹೊತ್ತಿಗೆಯಲ್ಲಿ ಆಗ ಜಾರಿಯಲ್ಲಿದ್ದ ಆಹಾರ ಧಾನ್ಯಗಳ ರೇಷನ್ ವ್ಯವಸ್ಥೆಯ ಬಗ್ಗೆ ಬರೆಯುತ್ತಾ, ಈ ರೀತಿ ಬರೆದಿದ್ದರು. 'ಕಂಟ್ರೋಲ್ ಮಾಡಿದವರು. ಪೇಟೆಯವರಿಗೆ ಮಾತ್ರ ರೇಷನ್ ಕೊಡಲಾರಂಭಿಸಿದರು. ಹಳ್ಳಿಯವರನ್ನು ಮರತೇ ಬಿಟ್ಟರು. ಹಳ್ಳಿಯಲ್ಲಿ ಬರೀ ಕೂಲಿಯಿಂದಲೇ ಜೀವನ ಮಾಡುವ ಲಕ್ಷಾಂತರ ಜನರಿದ್ದಾರೆ. ಅಲ್ಪ ಸ್ವಲ್ಪ ಜಮೀನಿದ್ದರೂ ಜಮೀನ್ದಾರರಲ್ಲಿ ಮತ್ತು ಸ್ಥಿತಿವಂತರಲ್ಲಿ ಕೂಲಿ ಮಾಡಿ ಜೀವಿಸುತ್ತಾರೆ. ಅಲ್ಲದೆ ಬಡಗಿ, ಕಮ್ಮಾರ, ಕ್ಷೌರಿಕ ಮೊದಲಾದವರೂ ಇದ್ದಾರೆ. ಇವರು ಅತ್ತ ರೈತರೂ ಅಲ್ಲ ಇತ್ತ ಕೂಲಿಕಾರರು ಅಲ್ಲ ಎಂಬ ಸ್ಥಿತಿಯಲ್ಲಿದ್ದಾರೆ. ಪಟ್ಟಣದ ಕಾರ್ಖಾನೆಗಳಲ್ಲಿ ಕೆಲಸ ಮಾಡುವವರು ಮಾತ್ರ ಕೂಲಿಕಾರರು ಹಳ್ಳಿಯಲ್ಲಿದ್ದವರೆಲ್ಲಾ ರೈತರು ಎಂದು ಕೆಲವರ ಭಾವನೆಯಿದ್ದಂತೆ ತೋರುತ್ತದೆ. ಹಳ್ಳಿಯಲ್ಲಿರುವ ಇಂತಹ ಜನಗಳಿಗೆ ಇತ್ತ ಸರ್ಕಾರದ ರೇಷನ್ನು ಇಲ್ಲ ಅತ್ತ ರೈತರ ಮನೆಯಲ್ಲಿ ಕೊಡೋಣವೆಂದರೆ ಅಲ್ಲಿಯು ಉಳಿಯಲಿಲ್ಲ. ಇವರನ್ನು ಗೋವಿಂದನೆ ಕಾಪಾಡಬೇಕು' (ರಾಜಶೇಖರ.ಜಿ. ೧೯೮೦, ಪುಟ ೬೩) ಈ ರೀತಿಯ ವಿಚಾರವಂತಿಕೆ ಮಾಸ್ತರದ್ದು ಆದರೆ ರೈತಸಂಘದಲ್ಲಿ ಈ ನಿಟ್ಟಿನಲ್ಲಿ ಯೋಚನಾಲಹರಿ ಹರಿಯಲಿಲ್ಲ. ಈ ರೀತಿಯ ಅರಿವನ್ನು ಹೊಂದಿದ್ದರು ರೈತ ಸಂಘದ ಧ್ಯೇಯ ಧೋರಣೆಗಳು ಬದಲಾಗಲಿಲ್ಲ.

೧೯೫೧ರ ಫೆಬ್ರವರಿಯಲ್ಲಿ ಮಲೆನಾಡು ಗೇಣಿದಾರರ ಸಂಘ ಮತ್ತು ಸಾಗರ ತಾಲ್ಲೂಕು ರೈತಸಂಘಗಳು 'ಮಲೆನಾಡು ರೈತಸಂಘ' ಎಂಬ ಒಂದೇ ಹೆಸರಿನಲ್ಲಿ ಒಗ್ಗೂಡಿದವು. ಇವುಗಳೆರಡು ಸಂಘಗಳು ಒಂದೇ ಉದ್ದೇಶಕ್ಕಾಗಿ ಸ್ಥಾಪನೆಗೊಂಡಂತವು. ಆದುದರಿಂದ ಒಂದು ಸಂಘವಾಗಿ ಹೊರಹೊಮ್ಮಿತು. ಸಂಘದ ಕೇಂದ್ರ ಕಛೇರಿ ತೀರ್ಥಹಳ್ಳಿಯು, ಸಾಗರದ ಕಛೇರಿ ಶಾಖೆಯಾಯಿತು. ಪ್ರಖ್ಯಾತ ವಕೀಲರು, ಜನಾನುರಾಗಿ ರಾಜಕೀಯ ಮುಖಂಡರು, ಮೈಸೂರು ಶಾಸನಸಭೆಯ ಸದಸ್ಯರು ಆದ ಶಿವಮೊಗ್ಗದ ಶ್ರೀ ಕಡಿದಾಳ ಮಂಜಪ್ಪನವರು ಸಂಘದ ಅಧ್ಯಕ್ಷರೆಂದೂ ಆಯ್ಕೆ ಮಾಡಲಾಯಿತು.

'ಸಾಗರ ತಾಲ್ಲೂಕು ರೈತ ಸಂಘ' ಮತ್ತು 'ಮಲೆನಾಡು ರೈತ ಸಂಘ' ಹೆಚ್ಚು ಕಡಿಮೆ ಸಮಾನ ಗುಣಗಳನ್ನು, ಗುರಿಗಳನ್ನು, ಆಶಯಗಳನ್ನು, ಸ್ವರೂಪವನ್ನು ಹೊಂದಿರುವುದರಿಂದ ಎರಡು ಸಂಘಗಳು ಒಂದಾಗುವುದು ಸಹಜವೇ ಆಗಿತ್ತು. ಹೀಗೆ 'ಮಲೆನಾಡು ರೈತಸಂಘ' ಎಂದು ನಾಮೀಕರಣಗೊಂಡಿತು.

ಮಲೆನಾಡು ಗೇಣಿದಾರರ ಸಂಘದವರು ಸರ್ಕಾರದ ಅವಗಾಹನೆಗೆ ತರಲು ೧೯೯೯ರಲ್ಲಿ ತಯಾರಿಸಿದ ಬೆಳೆಗಳಿಗೆ ಬೆಲೆ, ಮತ್ತು ಖರ್ಚು ಲಾಭ-ನಷ್ಟಗಳ ವರದಿ: ತೀರ್ಥಹಳ್ಳಿ ತಾಲ್ಲೂಕಿನ ವಿವರ ಕಾಗೋಡು ಚಳುವಳಿ, ಸುವರ್ಣ ಸಂಪುಟ.

| ವರಮಾನ | ಯುದ್ಧಪೂರ್ವಬೆಲೆ | ಯುದ್ಧ ಕಾಲದ ಬೆಲೆ ಮತ್ತು ನಂತರದ ಬೆಲೆ |
|---|---|---|
| ೧. ೯೪,೮೦೦ ಪಲ್ಲಾಭತ್ತದ ಬೆಲೆ (ಗೇಣಿದಾರರು ೨೩,೭೦೦ ಎಕರೆಯಷ್ಟು ಭೂಮಿಯನ್ನು ಉಳುಮೆ ಮಾಡುವರು ೨.೦೧.೪೫೦ ಪಲ್ಲಾ ಬೆಳೆಯಲ್ಲಿ ಎಕರೆಗೆ ೪ ೧/೨ ಪಲ್ಲಾದಂತೆ ಗೇಣಿ ಕೊಡಬೇಕಾಗಿತ್ತು. ೧ ಪಲ್ಲಾ ಭತ್ತದ ಬೆಲೆ ೬ (ಯು.ಪೂ) - ೧೧.೮೦ (ಯು.ಕಾ) | ೫,೬೮,೮೦೦ | ೧೦,೯೦,೨೦೦ |
| ೨. ೩೦,೦೦೦ ಮಣ ಆಪಿ ಅಡಿಕೆಯ ಬೆಲೆ (೩೦ ರೂ (ಯು.ನಂ.) ರೂ ದರದಂತೆ ೧೦ ರೂ (ಯು. ಪೂ) ಮಣವೊಂದಕ್ಕೆ ) | ೩,೦೦,೦೦೦ | ೯,೦೦,೦೦೦ |
| ೩. ೩೦,೦೦೦ ಮಣ ಬೆಟ್ಟೆ ಅಡಿಕೆಯ ಬೆಲೆ (ಮಣವೊಂದಕ್ಕೆ - ೪ ರೂ (ಯು.ಪೂ) ೧೨ ರೂ (ಯು.ನಂ) | ೧,೨೦,೦೦೦ | ೩,೬೦,೦೦೦ |
| ೪. ಯಾಲಕ್ಕಿ, ಮೆಣಸು, ಬಾಳೆಹಣ್ಣು, ಮತ್ತು ಗಾಡಿಬಾಡಿಗೆ ಹುಲ್ಲು, ಕೂಲಿಯಿಂದ ಸಂಸಾರ ಒಂದಕ್ಕೆ (೧ ವರ್ಷಕ್ಕೆ ೨೦ ರೂ) ೭,೯೦೦ ಗೇಣಿದಾರರು | ೧,೫೮,೦೦೦ | ೧,೫೮,೦೦೦ |
| ಒಟ್ಟು ರೂ. | ೧೧,೪೬,೮೦೦ | ೨೫,೦೮,೨೦೦ |

ಸಂಸಾರವೊಂದರ ವಾರ್ಷಿಕ ವರಮಾನ - ೧೪೫ ರೂ., ೩.೧೭ ರೂಪಾಯಿ

(೭,೯೦೦ ಗೇಣಿದಾರರು) ಒಟ್ಟು ಆದಾಯ / ಗೇಣಿದಾರರು

ಒಟ್ಟು ಸಂಸಾರ - ೧೦,೫೯೯

ಸ್ವತಃ ಭೂಮಿಯಿರುವ ಉಳುಮೆಗಾರರು ೭೦೦

ಉಳುಮೆಯಿಲ್ಲದೆ ಬೇರೆ ಮಾರ್ಗದಿಂದ ಜೀವಿಸುವವರು. ೧,೦೦೦

ಜಮೀನ್ದಾರರು - ೧,೦೦೦

ಗೇಣಿದಾರರು ೭,೯೦೦

೧೯೪೧ರ ಜನಗಣತಿಗೆ ಸಂಬಂಧಿಸಿದ ವಿವರ ೫೫ ಸಾವಿರ ಜನ ಸಂಖ್ಯೆಗೆ ೪೦ ಸಾವಿರ ಜನ ಎಂದರೆ ಶೇ ೯೦ ರಷ್ಟು ಮಂದಿ ಗೇಣಿದಾರರು ಇರುವುದು ಕಂಡುಬರುತ್ತದೆ (ತೀರ್ಥಹಳ್ಳಿ ಜನಗಣತಿ ವಿವರ ೧೯೪೧)

## ಜೀವನ ವೆಚ್ಚದ ಅಂದಾಜು ಪಟ್ಟಿ

| | ಯುದ್ಧ ಪೂರ್ವ | ಯುದ್ಧ ಕಾಲದ ಮತ್ತು ನಂತರ |
|---|---|---|
| ಸಂಸಾರವೊಂದಕ್ಕೆ ತಗಲುವ ೧೨ ಪಲ್ಲಾ ಭತ್ತದ ಬೆಲೆ (೧ ಪಲ್ಲಾ - ೬ರೂ ಯು.ಪೂ) - ೧೧.೮೦ ರೂ (ಯು.ನಂ) | ೭.೨೦೦ | ೧೩,೮೦೦ |
| ಕಂಬಳಿ | ೩.೦೦ | ೮೦೦ |
| ಬಟ್ಟೆ | ೪೦೦ | ೯೦೦ |
| ಸೀರೆ | ೪೦೦ | ೧೨೦೦ |
| ಹೊದಿಕೆ | ೧೦೦ | ೩.೦೦.೦೦ |
| ಉಪ್ಪು, ಸೀಮೆ ಎಣ್ಣೆ | ೭೮೦ | ೨೦೦೦.೦೦ |
| ಚಿಲ್ಲರೆ ಖರ್ಚು | ೫೦೦ | ೧೨೦೦.೦೦ |
| ಒಟ್ಟು ಖರ್ಚು | ೯,೫೮೦ | ೨೦,೨೦೦ |

## ಉಳುಮೆಗೆ ತಗಲುವ ಖರ್ಚು

| ೩/೪ ಎಕರೆ ತೋಟದ ಸಾಗುವಳಿ ಖರ್ಚು | ಯುದ್ಧ ಪೂರ್ವ | ಯುದ್ಧ ಕಾಲ ನಂತರ |
|---|---|---|
| ೧) ಕಳೆ ಕೀಳಲು | ೯೦೦ | ೧೮೦೦ |
| ೨) ಅಡಿಕೆ ಸುಲಿತದ ಖರ್ಚು | ೧೩೮೦ | ೨೨೦೦ |
| ೩) ಸಾಗುಮಾಡಲು, ಅಗೆಯಲು | ೨೪೦೦ | ೪೦೦೦ |
| ೪) ಕೊಳೆ ಔಷಧಿ ಹೊಡೆಸಲು | ೧೨೮೦ | ೯೦೦೦ |
| ೫) ಹತಾರುಗಳಿಗೆ | ೧೦೦೦ | ೩.೦೧೪ |
| ಖರ್ಚಿನ ಒಟ್ಟು ಮೊತ್ತ | ೭೦೦೦ | ೨೦,೫,೧೪೦ |

| ೩. ಎಕರೆ ತರಿ ಜಮೀನನ್ನು ಸಾಗುಮಾಡಲು | ಯುದ್ಧ ಪೂರ್ವ | ಯುದ್ಧ ಕಾಲ ನಂತರ ತಗಲುವ ಖರ್ಚು |
|---|---|---|
| ೧) ಎಕರೆಗೆ ೫೦ ಸೇರಿನಂತೆ ಬೀಜಕ್ಕೆ ೩ ಎಕರೆಗೆ ೧೫೦ ಸೇರು (೧೧/೨ಪಲ್ಲ) ( ೧ಪಲ್ಲ ೬ರೂ) ಯುದ್ಧಪೂ, ೧೧.೮೦ ಯು.ಕಾ | ೯೦೦ | ೧೭೪೦ |
| ೨) ಬಿತ್ತನೆ ಮತ್ತು ಕೊಯಿತದ ಕಾಲದಲ್ಲಿ ಕೊಡಬೇಕಾದ ೧೫ ದಿನಗಳ ಕೂಲಿ | ೭೮೦ | ೧೮೧೦ |
| ೩.) ನೇಗಿಲು ಮುಂತಾದ ಉಪಕರಣಕ್ಕೆ | ೨೮೦ | ೮೦೦ |
| ೪) ಎತ್ತುಗಳಿಗೆ | ೧೬೦೦ | ೨೫೦೦ |
| ಖರ್ಚಿನ ಒಟ್ಟು ಮೊತ್ತ | ೩೫೬೦ | ೬೮೫೦ |

ವರಮಾನ ಮತ್ತು ಖರ್ಚು

| ವರಮಾನ | | ಖರ್ಚು | | |
|---|---|---|---|---|
| ಯುದ್ಧಪೂರ್ವ | ಯುದ್ಧಕಾಲ | ಯುದ್ಧ ಪೂರ್ವ | | ಯುದ್ಧಕಾಲ |
| ೧೪,೫೦೦ | ೩೧,೭೦೦ | ಸಾಲ | ೪,೯೮೦ | ೪,೯೮೦ |
| | | ಜೀವನ | ೯,೫೮೦ | ೨,೦೨,೧೪೦ |
| | | ಸಾಗುವಳಿ ಮಾಡಲು | ೧೦,೫೦೦ | ೨೭,೪೦೦ |
| | | | ೨೫,೦೦೦ | ೫೨,೬೬೦ |

ಹೀಗೆ ಕೃಷಿಯಲ್ಲಿ ಸಾಲದ ಹೊರೆ ಹೆಚ್ಚಾಗಿ ಕಂಡುಬರುತ್ತಿತ್ತು ಎಂದು ಗೇಣಿದಾರರ ಸಂಘದವರು ಅಂದಾಜು ಮಾಡಿದ್ದರು. ಸರಾಸರಿ ಒಂದು ಸಂಸಾರ ೪,೯೮೦ ರಷ್ಟು ಸಾಲ ಮಾಡಬೇಕಾಗುವುದು. ಅದಕ್ಕಾಗಿಯೇ ಮಲೆನಾಡು ಗೇಣಿದಾರರ ಸಂಘದವರು ೧/೪ ಭಾಗದಷ್ಟು ಗೇಣಿಕೊಡುತ್ತೇವೆ ಎಂದು ನ್ಯಾಯಬದ್ಧವಾದ, ಸರ್ವಸಮ್ಮತವಾದ, ಹೇಳಿಕೆಯನ್ನು ಮುಂದಿಟ್ಟರು. ಗೇಣಿಯಲ್ಲಿ ಸುಧಾರಣೆಯಾದರೆ ರೈತರಲ್ಲಿ ಉಳಿತಾಯದ ಶಕ್ತಿ ಹೆಚ್ಚುತ್ತದೆ. ೧/೪ ಭಾಗದಷ್ಟು ಗೇಣಿಯಿಂದ ಜಮೀನ್ದಾರರಿಗೆ ಯಾವ ನಷ್ಟವು ಇಲ್ಲ. ಒಂದು ತೋಟದ ಕಂದಾಯ ಸರಾಸರಿ ರೂ. ೧೨ ರಂತೆ ತರೀ ಜಮೀನಿನ ಕಂದಾಯ ರೂ. ೩.೮ರಂತೆಯು ಕೊಡಬೇಕಾಗುವುದು ಹೀಗಿದ್ದರೂ ಜಮೀನ್ದಾರನಿಗೆ ಅವನು ಸಲ್ಲಿಸುವ ಕಂದಾಯದ ನಾಲ್ಕರಷ್ಟು ಗೇಣಿ ಸಿಕ್ಕುತ್ತದೆ. ರೈತರಲ್ಲಿ ಉತ್ಸಾಹ ತುಂಬಲು

ಇರುವ ಮಾರ್ಗವೆಂದರೆ ಇದೊಂದೆ. ಇದರಿಂದ ಹೆಚ್ಚು ಜಮೀನು ಪ್ರತಿವರ್ಷವೂ ಹಾಳು ಬೀಳುವುದು ನಿಲ್ಲುತ್ತದೆ. ಹತ್ತು ವರ್ಷದೊಳಗೆ ಪಾಳು ಬಿದ್ದ ಭೂಮಿಯು ಕೃಷಿಯೋಗ್ಯವಾಗುತ್ತದೆ. (ಟಿ.ಜಿ.ಜೋರಲಿಂಗಯ್ಯ, ಎಸ್.ಹುಚ್ಚಪ್ಪ ಮಾಸ್ತರ್, ೨೦೦೩, ಪುಟ ೮೫) ಈ ಲೆಕ್ಕಾಚಾರವನ್ನು ಮಲೆನಾಡು ಗೇಣಿದಾರರ ಸಂಘದವರು, ತೀರ್ಥಹಳ್ಳಿ (ತಾಲ್ಲೂಕು) ಕೃಷಿ ಅಂದಾಜು ಲೆಕ್ಕವನ್ನು ತಯಾರಿಸಿ ಸರ್ಕಾರದ ಅವಗಾಹನೆಗೆ ತರಲು ಸಿದ್ಧಪಡಿಸಿದ ಪಟ್ಟಿ ಇದಾಗಿದೆ. ಈ ಖರ್ಚು ಪಟ್ಟಿ ಕೇವಲ ತೀರ್ಥಹಳ್ಳಿ ತಾಲ್ಲೂಕಿನದಾಗಿರದೆ ಎಲ್ಲಾ ತಾಲ್ಲೂಕುಗಳಿಗೆ (ಮಲೆನಾಡಿನ) ಅನ್ವಯಿಸುತ್ತದೆ.

**ಕೊಳಗದ ಸಂಘರ್ಷ**

'ಸಾಗರ ತಾಲ್ಲೂಕು ರೈತಸಂಘ' ಮತ್ತು 'ಮಲೆನಾಡು ಗೇಣಿದಾರ ಸಂಘ'ಗಳ ನಿರಂತರ ಚಟುವಟಿಕೆ, ಸಮಾರಂಭ, ಭಾಷಣಗಳ ಮೂಲಕ ಜನ ಜಾಗೃತಿಯಾಯಿತು. ರೈತರ ಬೇಡಿಕೆಗಳು ರೈತಸಂಘದ ಮೂಲಕ ಕ್ರಮಬದ್ಧವಾಗಿ, ರೂಪಿಸುತ್ತಾ ಬಂದಂತೆ ರೈತರಲ್ಲಿ ಆಲೋಚನಾಶಕ್ತಿ ಬೆಳೆಯಿತು. ಅಲ್ಲದೆ ಸಂಘದ ಪ್ರಣಾಳಿಕೆಯಲ್ಲಿ ಭೂಮಾಲೀಕರು ೬ ಸೇರಿನ ಕೊಳಗದಲ್ಲಿಯೇ ಗೇಣಿಯನ್ನು ಕೊಡಬೇಕು. ರಶೀದಿ ಕೊಡಬೇಕು. ಭೂಮಿಯನ್ನು ಬದಲಾಯಿಸಬಾರದು. ಬಿಟ್ಟಿ ಆಳು ದುಡಿಸಿಕೊಳ್ಳಬಾರದು. ದಾಖಲಾತಿ ಇಡಬೇಕು ಮುಂತಾದ ಬೇಡಿಕೆಗಳು ಜಮೀನುದಾರರ ಮತ್ತು ರೈತರ ನಡುವೆ ಬಿರುಕು ಬಿಡಲು ಕಾರಣವಾಯಿತು.

ಸರಕಾರಿ ಲೆಕ್ಕದ ಕೊಳಗಕ್ಕೆ ೬ ಸೇರು. ಆದರೆ ಜಮೀನ್ದಾರರ ಮನೆಯ ಕೊಳಗಕ್ಕೆ ೬.೫೦ ಸೇರು. ೧/೨ ಕೆ.ಜಿ. ಭತ್ತ ಜಾಸ್ತಿ ಕೊಡಬೇಕಿತ್ತು. ಒಂದು ಪಲ್ಲ ಭತ್ತಕ್ಕೆ ೧೦೦ ಸೇರು. ಒಂದು ಖಂಡುಗಕ್ಕೆ ೨೦ ಕೊಳಗ, ಈ ರೀತಿಯ ಅಳತೆಯ ಮಾನ ಮಲೆನಾಡುಭಾಗದಲ್ಲಿತ್ತು. ಕೆಲವು ಜಮೀನ್ದಾರರ ಮನೆಯ ಅಳತೆಯ ಮಾನ ೬ ೧/೨ ಸೇರು ೬ ೬/೪ ಸೇರಿನಿಂದಲೂ ಅಳತೆ ಮಾಡುತ್ತಿದ್ದರು. ಗೇಣಿ ರೈತರಿಗೆ ಭತ್ತ ಕೊಡುವಾಗ ಮೂರು ಸೇರಿನಿಂದ ಭತ್ತವನ್ನು ಕೊಟ್ಟು ಭತ್ತ ವಸೂಲಿ ಮಾಡುವಾಗ ಮೂರುವರೆ ಸೇರಿನ ಕೊಳಗದಿಂದ ಲೆಕ್ಕ ಮಾಡಿ ಪಾತವನ್ನು ವಸೂಲು ಮಾಡುತ್ತಿದ್ದರು. ಕೊಳಗದ ವ್ಯತ್ಯಾಸದಿಂದಾಗಿ ಜಮೀನ್ದಾರರಿಗೆ ೬೯ ಸೇರು ಭತ್ತ ಲಾಭವಾಗುತ್ತಿತ್ತು. ಅಂದರೆ ೨೬ ಕೊಳಗ ಅಥವಾ ಒಂದು ಚೀಲ ಭತ್ತಕ್ಕೆ ಸ್ವಲ್ಪ ಜಾಸ್ತಿ. ಕಾಗೋಡು ಒಡೆಯರು ಬರಿ ಸೇರಿನ ವ್ಯತ್ಯಾಸದಿಂದಾಗಿ ೧೧೫೦ ಚೀಲ ಭತ್ತ ಅಂದರೆ ೬೬೯ ಕ್ವಿಂಟಾಲ್ ಭತ್ತವನ್ನು ರೈತರಿಂದ ಪಡೆಯುತ್ತಿದ್ದರು.

ಈ ಎಲ್ಲಾ ಬಗೆಯ ವ್ಯತ್ಯಾಸ ರೈತರ ಗಮನಕ್ಕೆ ಬಂದಾಗ ಅವರು ಜಾಸ್ತಿ ಪ್ರಮಾಣದ ಕೊಳಗದಲ್ಲಿ ಕೊಡಲು ಸಾಧ್ಯವಿಲ್ಲ ಸರಕಾರ ಅಳತೆಯಲ್ಲಿ ಕೊಡುತ್ತೇವೆ ಎಂದರು. ಕೆಲವು ಜಮೀನ್ದಾರರು ಈ ವ್ಯತ್ಯಾಸಕ್ಕೆ ಸಮ್ಮತಿಸಿದರು. ಕಾಗೋಡು ಗೌಡರು ಸಹ ಮೂರುವರೆ ಸೇರಿನ ಕೊಳಗದಲ್ಲಿ ಭತ್ತ ಅಳೆಸುತ್ತಿದ್ದರು. ಇವರು ಮೂರು ಸೇರಿನ ಕೊಳಗದಲ್ಲಿ ಭತ್ತ ಅಳೆಯಿಸಿಕೊಳ್ಳುವುದನ್ನು ತಿರಸ್ಕರಿಸಿದರು.

ಕೆಳದಿ ಪ್ರಾಂತ್ಯದಲ್ಲಿ ಬಲಾಢ್ಯ ಜಮೀನ್ದಾರರಾದ ಕಾಗೋಡು ಗೌಡರ ಸಮ್ಮುಖದಲ್ಲಿ ದೀವರ ಕೆಲ ಹಿರಿಯರು ಕೊಳಗದ ಪ್ರಸ್ತಾಪ ಮುಂದಿಟ್ಟರು. ಗರುವಯ್ಯ ಗೌಡರು ಹೀನಾಯವಾಗಿ ಮಾತಾಡಿ ಕಳುಹಿಸಿ

ಬಿಟ್ಟರು. ಎಲ್ಲಾ ಕೇರಿಯ ಜನರೆಲ್ಲ ಮೂರು ಸೇರಿನ ಕೊಳಗದಲ್ಲಿ ಗೇಣಿಯನ್ನು ಕೊಡುವುದು ಎಂದು ತೀರ್ಮಾನಿಸಿದರು. ಆಗಿನ ಕಾಲದಲ್ಲಿ ಸರಕಾರ ಭೂಮಾಲೀಕರಿಗೆ ಕಡ್ಡಾಯ ಲೇವಿ ವಿಧಿಸಿ ಭತ್ತ ಸಂಗ್ರಹಿಸುತ್ತಿತ್ತು. ರೇಷನ್ ಪದ್ಧತಿ ಜಾರಿಯಲ್ಲಿದ್ದರಿಂದ ಲೇವಿ ವಿಧಿಸುತ್ತಿದ್ದರು. ಗುರುವಪ್ಪ ಗೌಡರು ತಕರಾರಿಗೆ ಒಪ್ಪದೆ ಇದ್ದರಿಂದ ರೈತರು ಮಿಲ್ಲಿಗೆ ಭತ್ತ ಹಾಕಿ ರಶೀದಿ ಪಡೆಯುವುದು ಎಂದು ತೀರ್ಮಾನಿಸಿ ಭತ್ತವನ್ನು ಮಿಲ್ಲಿಗೆ ಹಾಕಿ ರಶೀದಿ ಪಡೆದರು. ಇದರಿಂದ ಕೆರಳಿದ ಗುರುವಪ್ಪ ಗೌಡರು ನೀವು ೩ ಸೇರಿನಲ್ಲಿ ಗೇಣಿ ಅಳೆಯುವುದಾದರೆ ನಮ್ಮ ಜಮೀನಿನಲ್ಲಿ ನೀವು ಬೇಸಾಯ ಮಾಡುವುದು ಬೇಡ, ಜಮೀನು ನಮ್ಮದು ಹಾಳು ಬಿಡುತ್ತೇವೆ, ಜಮೀನು ಬಿಟ್ಟುಬಿಡಿ ಎಂದು ಬಿಟ್ಟರು. ಹೀಗೆ ಕಾಗೋಡಿನಲ್ಲಿ ಸಂಘರ್ಷಕ್ಕೆ ದಾರಿ ಮಾಡಿಕೊಟ್ಟಿತು.

೧೯೫೦ರ ಡಿಸೆಂಬರ್‌ನಲ್ಲಿ ಮಲೆನಾಡು ರೈತಸಂಘದ ಒಂದು ನಿಯೋಗ ಬೆಂಗಳೂರಿನ ರೆವಿನ್ಯೂ ಸಚಿವ ಸಿದ್ಧಯ್ಯ ಮತ್ತು ಗೃಹಸಚಿವ ಮರಿಯಪ್ಪನವರನ್ನು ಭೇಟಿ ಮಾಡಿತು. ನಿಯೋಗದಲ್ಲಿ ಕಡಿದಾಳ ಮಂಜಪ್ಪ, ಗಣಪತಿಯಪ್ಪ (ಕಾರ್ಯದರ್ಶಿ), ಬರಸಿನ ದ್ಯಾವಪ್ಪ, ಡಿ.ಮೂಕಪ್ಪ ಮುಂತಾದವರು ಇದ್ದರು. ಇವರೆಲ್ಲಾ ಮಂತ್ರಿಗಳ ಎದುರು ಚರ್ಚಿಸಿದರು. ಮಂತ್ರಿಗಳು ಆಯಿತು, ರಿಪೋರ್ಟ್ ತರಿಸಿ ಕಮಿಟಿ ಮಾಡುತ್ತೇವೆ ಎಂಬ ಉತ್ತರ ಇವರಿಂದ ದೊರೆಯಿತು. ಕಾಗೋಡು ಗ್ರಾಮದಲ್ಲಿ ಮಾತ್ರವಲ್ಲದೆ ಮಲೆನಾಡಿನ ಸುತ್ತಮುತ್ತ ಕೊಳಗದ ಸಮಸ್ಯೆ ಧ್ವನಿಸಿತು. ರಷ್ಯಾಕ್ರಾಂತಿ ರೈತನ ಒಂದು ಹೊಸ ಯುಗವನ್ನು ಸ್ಥಾಪಿಸಿತು. ರೈತನಿಗೆ ಗುಲಾಮಿತನದಿಂದ ಮುಕ್ತಿ ಮತ್ತು ಇವನಿಗೆ ಆಳುವ ಅಧಿಕಾರ ಸಿಕ್ಕಿತು. ಭೂಮಿಯ ಮೇಲಿನ ಎಲ್ಲಾ ಕಾಯಿದೆಗಳನ್ನು ಕಿತ್ತೊಗೆಯಿತು. ಭೂಮಿ ಸರಕಾರದ ಆಸ್ತಿ, ಎಲ್ಲರ ಆಸ್ತಿ ಎನಿಸಿತು. ರೈತನಿಗೆ ರಾಜಕೀಯ ಪ್ರಾಮುಖ್ಯತೆ ಸಿಕ್ಕಿತು. ಪ್ರಪಂಚದ ಕೃಷಿಯನ್ನು ಅವಲಂಬಿಸಿದ ಎಲ್ಲಾ ರಾಷ್ಟ್ರಗಳಲ್ಲಿ ಜಮೀನ್ದಾರರ ಪತನ ಅವರ ವಿರುದ್ಧ ಹೋರಾಟದ ಕಹಳೆ ಊದಲು ಪ್ರಾರಂಭಿಸಿತು. ಜಮೀನ್ದಾರರು ಅನುಭವಿಸಿಕೊಂಡು ಬಂದಿದ್ದ ವಿಶೇಷ ಸವಲತ್ತುಗಳು ಪ್ರಶ್ನಾರ್ಹವಾದವು. ಅವರ ನಿರ್ಮೂಲನ ಪ್ರಾರಂಭವಾಯಿತು. ಫ್ರೆಂಚ್ ಕ್ರಾಂತಿಯು ಊಳಿಗಮಾನ್ಯ ಪದ್ಧತಿಯನ್ನು ನಿವಾರಿಸಿತು. ಎಲ್ಲೆಲ್ಲೂ ಸಮತಾವಾದ (ಸಮಾಜವಾದ) 'ಭೂಮಿಯು ಬಲಾಢ್ಯರ ಆಸ್ತಿ, ಗೇಣಿಯನ್ನು ಒದಗಿಸುವುದು' ಮುಂತಾದ ಭಾವನೆಯನ್ನು ತೊಡೆದು ಹಾಕಿತು.

೧೯೩೭ರಲ್ಲಿ ಭಾರತದ ಬೇರೆ ಪ್ರಾಂತ್ಯದಲ್ಲಿ ಸರಕಾರ ರೈತರಿಗೆ ಮತದಾನದ ಹಕ್ಕನ್ನು ನೀಡಿತು. ಜಮೀನ್ದಾರರು ಮತಕ್ಕೆ ರೈತರನ್ನು ಕೇಳುವ ಸ್ಥಿತಿ ನಿರ್ಮಾಣವಾಯಿತು. ಈ ಸಮಯದಲ್ಲಿ ಪ್ರಬಲವಾದ ರೈತ ಚಳುವಳಿಯು 'ರೈತರ ಉಚ್ಚಾಟನೆ, ಒಕ್ಕಲೆಬ್ಬಿಸುವುದು, ಗೇಣಿ ಕಾನೂನು ಪರಿಷ್ಕರಣ' ಮುಂತಾದ ಪದ್ಧತಿಯ ಬಗ್ಗೆ ನಡೆಯಿತು. ಈ ಎಲ್ಲಾ ಕಾರಣಗಳಿಂದ ರೈತರಿಗೆ ಕಾಂಗ್ರೆಸ್ ಮಾನ್ಯತೆ ನೀಡಿತು. ಹೀಗಾಗಿ ಕಾಂಗ್ರೆಸ್ ಗ್ರಾಮೀಣ ಪ್ರದೇಶದಲ್ಲಿ ಜನರ ವಿಶ್ವಾಸ ಗಳಿಸಿತು. ೧೯೨೧, ೧೯೩೧, ೧೯೪೧ರಲ್ಲಿ ರೈತ ಚಳುವಳಿಗಳು ರಾಷ್ಟ್ರವ್ಯಾಪಿ ಪಸರಿಸಿದವು. ಇವುಗಳನ್ನು ಸಾಗರ ತಾಲ್ಲೂಕು ಗೇಣಿದಾರರ ಸಂಘದ ಅಧ್ಯಕ್ಷರು, ಕಾರ್ಯದರ್ಶಿಗಳು ಮನಗಂಡಿದ್ದರು. ಅವರಿಗೆ ನಾಡಿನ ಕ್ರಾಂತಿಗಳ ಅರಿವಿತ್ತು.

'ಊಳಿಗ ಮಾನ್ಯ ಪದ್ಧತಿ'ಯು ತಲೆತಲಾಂತರದಿಂದ ರಾಜರುಗಳಿಂದ ಪ್ರೋತ್ಸಾಹಿಸಿಕೊಂಡು ಬಂದಿತ್ತು. ರಾಜರು ಅಗ್ರಹಾರ, ದಾನ ದತ್ತಿ, ಮಠ ಮಂದಿರಗಳಿಗೆ, ಬ್ರಹ್ಮಾದಾಯ, ದೇವಾದಾಯ, ಹೀಗೆ ಅನೇಕ ಶೋಷಕರ

ಸೃಷ್ಟಿಗೆ ಕಾರಣರಾದರು. ಅನೇಕ ರಾಜ ಪ್ರತಿನಿಧಿಗಳನ್ನು ಸೃಷ್ಟಿ ಮಾಡಿದರು. ಮೈಸೂರು ಸಂಸ್ಥಾನದಲ್ಲಿ ದೇವಾಲಯದ ಇನಾಂ ಜಮೀನು ೧ ಲಕ್ಷ ೪೪ ಸಾವಿರ ಎಕರೆ, ಬ್ರಹ್ಮಾದಾಯ ಜಮೀನು ೫ ಲಕ್ಷ ಎಕರೆ ವೈಯುಕ್ತಿಕ ಇನಾಂ ಜಮೀನು ೩ ಲಕ್ಷ ೩೭ ಸಾವಿರ ಎಕರೆ, ಪೋಟಕೆ ಇನಾಂ ಜಮೀನು ೮ ಸಾವಿರ ಎಕರೆ, ಇತರೆ ೯ ಸಾವಿರ ಎಕರೆ, ಗ್ರಾಮ ಸೇವೆಗಾಗಿ ೨ ಸಾವಿರ ಎಕರೆ ಜಮೀನು ಇತ್ತು. ಜಮೀನುದಾರ, ಜೋಡಿದಾರ, ಇನಾಂದಾರ, ಜಹಗಿರದಾರ ಮುಂತಾದ ಪ್ರಭಾವಿ ಪಾಳೆಗಾರರನ್ನು, ಮಧ್ಯವರ್ತಿಗಳನ್ನು ಸೃಷ್ಟಿ ಮಾಡಿತು. ಒಡೆಯ-ಒಕ್ಕಲು, ಯಜಮಾನ - ಆಳು ಇಂತಹ ವ್ಯವಸ್ಥೆಗೆ ಕಾರಣವಾಯಿತು.

ಈ ವ್ಯವಸ್ಥೆಯನ್ನು ಬುಡಮೇಲು ಮಾಡಲು ಹೊರಟ ರೈತ ಸಂಘದವರ ಮೇಲೆ ಜಮೀನ್ದಾರರು ಕೋಪಗೊಂಡರು. ಅನೇಕ ಕೇಸುಗಳನ್ನು ಗಣಪತಿಯಪ್ಪ ಮತ್ತು ಪದಾಧಿಕಾರಿಗಳ ಮೇಲೆ ದಾಖಲು ಮಾಡಿದರು. ರೈತಸಂಘಕ್ಕೆ ಸಮಾನಾಂತರವಾಗಿ 'ಭೂಮಾಲಿಕರ ಸಂಘ' ಸ್ಥಾಪಿಸಿದರು.

ಮೊದಲು ಕೊಳಗದ ತಕರಾರಿನ ಸಮಸ್ಯೆ ತಲೆ ದೋರಿದ್ದು ತಡಗಳಲೆ ಗ್ರಾಮದಲ್ಲಿ. ರೈತರು ೩ ಸೇರಿನ ಕೊಳಗದಲ್ಲಿ ಗೇಣಿ ಕೊಡುವುದಾಗಿ ತಿಳಿಸಿದರು. ಗೌಡರು ಸಾಧ್ಯವಿಲ್ಲ ಭೂಮಿ ಬಿಟ್ಟುಬಿಡಿರಿ ಎಂದರು. ವಾದ ವಿವಾದ ತಾರಕಕ್ಕೇರಿತು. ರೈತರು ಗೇಣಿದಾರರ ಸಂಘಕ್ಕೆ ದೂರು ಸಲ್ಲಿಸಿದರು. ಸಂಘದವರು ರೈತರಿಗೆ ಉಳುಮೆ ಮಾಡಲು ತಿಳಿಸಿದರು. ಅದೇ ರೀತಿ ತಡಗಳಲೆ ಗ್ರಾಮದ ರೈತರು ಗದ್ದೆಗೆ ಇಳಿದರು. ಈ ಗ್ರಾಮದಲ್ಲಿ ೬-೭ ಮನೆಯ ಭೂಮಾಲಿಕರು ಒಟ್ಟಾಗಿ ರೈತರು ಉಳುಮೆ ಮಾಡುವಲ್ಲಿ ಹೋಗಿ ಗಲಾಟೆ ಮಾಡಿದರು. 'ಭೂಮಾಲಿಕರು ಕತ್ತಿ ಕೊಡಲಿಯೊಂದಿಗೆ ತೆರಳಿ ಇದು ಖಾತೆ ಭೂಮಿ ಅಜ್ಜ ಅಜ್ಜಿಯರ ಕಾಲದಿಂದ ಬಂದದ್ದು ಎಂದು ರೈತರ ಹಗ್ಗ, ನೇಗಿಲ ಈಸು, ನೊಗ ಕಡಿದರು. ಇವರ ಅರ್ಭಟಕ್ಕೆ ರೈತರು ಬೆರಗಾದರು. ತುಂಡು ನೇಗಿಲು, ನೊಗಗಳನ್ನು ಸಾಗರ ರೈತಸಂಘಕ್ಕೆ ತಂದು ದೂರು ಕೊಟ್ಟರು. ಈ ಸುದ್ದಿ ತಾಲ್ಲೂಕಿನಾದ್ಯಂತ ವ್ಯಾಪಿಸಿತು. ಸಂಘದವರು ಸಭೆ ಸೇರಿ ತಹಸೀಲ್ದಾರರಿಗೆ ಮನವಿ ಸಲ್ಲಿಸಿದರು. ಗಾಂಧಿ ಮೈದಾನದಲ್ಲಿ ಸಭೆ ಸೇರಿತು. ಇದರ ಅಧ್ಯಕ್ಷತೆಯನ್ನು ವಹಿಸಿದ ಗಣಪತಿಯಪ್ಪನವರು ಇದು ಗೇಣಿದಾರನ ಅಳಿವು ಉಳಿವಿನ ಪ್ರಶ್ನೆ. ರೈತಸಂಘ ಇದರಿಂದ ಪಲಾಯನ ಮಾಡಬಾರದು, ಗಾಂಧೀಜಿಯವರ ತತ್ವವನ್ನು ಅಳವಡಿಸಿಕೊಳ್ಳ ಬೇಕು. ನನ್ನ ನಾಯಕತ್ವದಲ್ಲಿ ಯಾರು ಹಿಂಸೆಗಿಳಿಯಬಾರದು, ಹಿಂಸಾ ಮಾರ್ಗಕ್ಕೆ ನೀವು ಇಳಿದ ಪಕ್ಷದಲ್ಲಿ ನಾನು ಅದೃಶ್ಯನಾಗುತ್ತೇನೆ ಎಂದು ಸಭೆಯ ಮುಂದೆ ವಿಚಾರ ಮುಂದಿಟ್ಟರು. ಎಲ್ಲರು ಒಕ್ಕೊರಲಿನಿಂದ ಇವರ ನಿಲುವನ್ನು ಸಮರ್ಥಿಸಿದರು.

ಭೂಮಾಲಿಕರ ಸಂಘದ ನೇತೃತ್ವ ವಹಿಸಿದವರು ಕಾಗೋಡು ಒಡೆಯರು ಆದ್ದರಿಂದ ಹೋರಾಟ ತಡಗಳಲೆ ಗ್ರಾಮದಿಂದ ಕಾಗೋಡು ಗ್ರಾಮಕ್ಕೆ ವರ್ಗಾಯಿಸಿದರು. ಗಣಪತಿಯಪ್ಪನವರು ಸಿದ್ಧಲಿಂಗಯ್ಯನವರಿಗೆ ಆಗಿನ ಮೈಸೂರು ಕಾಂಗ್ರೆಸ್ ಅಧ್ಯಕ್ಷರು, ಮಂತ್ರಿಗಳು ಆಗಿದ್ದ ಇವರಿಗೆ ಇಲ್ಲಿಯ ಸಮಸ್ಯೆಯನ್ನು ಈ ರೀತಿ ತಿಳಿಸಿದ್ದರು. 'ಕೊಳಗ, ಗೇಣಿ ಮುಂತಾದ ಸಮಸ್ಯೆಯನ್ನು, ಕಾಂಗ್ರೆಸ್‌ನಲ್ಲಿ ಗುರುತಿಸಲ್ಪಟ್ಟವರೇ ಆದ ಹಲವು ಜಮೀನುದಾರರಿಂದ ಸರಿಪಡಿಸಬಹುದೆಂದು, ರೈತರ ಮುಖಂಡರೆಲ್ಲ ಅವರನ್ನು ಭೇಟಿ ಮಾಡಿಕೊಂಡಿದ್ದಕ್ಕೆ ಇಂದು ಸಿಟ್ಟಿಗೆದ್ದ ಜಮೀನ್ದಾರರು ಕೆಲವು ಗ್ರಾಮಗಳಲ್ಲಿ ನಮ್ಮ ರೈತರಿಗೆ ಅನೇಕ ಕಿರುಕುಳ ನೀಡುವುದು ಕೃತಿಮ

ಕೇಸುಗಳನ್ನು ಮಾಡಿ ತೊಂದರೆ ಪಡಿಸುವುದು, ಜಮೀನು ಬಿಡಿಸುವುದು, ಜಮೀನಿನಲ್ಲಿ ಇರುವ ಫಸಲನ್ನು ಕಟಾವು ಮಾಡಲಿಕ್ಕೆ ಬಿಡದಿರುವುದು, ಫಸಲು ಒಕ್ಕಣೆ ಮಾಡಲು ತೊಂದರೆ ಕೊಡುವುದಲ್ಲದೇ ಅನೇಕ ಜನರ ಮೇಲೆ ಸುಳ್ಳು ಕೇಸು ದಾಖಲಿಸಿದ್ದಾರೆ' ಎಂದು ಗಣಪತಿಯಪ್ಪನವರು ಸಿದ್ದಲಿಂಗಯ್ಯನವರಿಗೆ ಬರೆದಿದ್ದರು. ಏನೇ ಬರೆದರು ಇಲ್ಲಿ ಕಂಡುಬರುವುದು. ಪರಿಶೀಲಿಸುತ್ತೇವೆ, ಕಮಿಟಿ ಮಾಡುತ್ತೇವೆ ಮುಂತಾದ ಉಡಾಫೇ ಮಾತುಗಳೇ ಉತ್ತರಗಳಾಗುತ್ತಿದ್ದವು.

ಕಾಗೋಡು ಗೌಡರು ಮತ್ತು ಕಾಗೋಡಿನ ಗೇಣಿರೈತರ ಸಂಬಂಧಗಳು ವೃದ್ಧಿಯಾಗದೆ ವ್ರಣವಾಯಿತು. ಇವರಿಬ್ಬರ ಮಧ್ಯೆ ವೈಮನಸ್ಸು ಮತ್ತಷ್ಟು ಜಾಸ್ತಿಯಾಯಿತು. ತಡಗಳಲೆ ಗ್ರಾಮದ ಗಲಾಟೆಯಿಂದ ಪರಿಸ್ಥಿತಿ ಸಂಧಾನ ಮಾರ್ಗಕ್ಕೆ ಬರದೆ ಹಟ, ಛಲ, ಪ್ರತಿಷ್ಠೆ ವಿಷಯವೇ ಪ್ರಬಲವಾಯಿತು. ಈ ಸಂದರ್ಭದಲ್ಲಿ ಕಾಗೋಡು ಗುರುವಯ್ಯ ಗೌಡರಿಗೆ ಸಾಗರ ತಾಲ್ಲೂಕು ರೈತಸಂಘ ಅಧಿಕೃತವಾಗಿ ಒಂದು ಮನವಿಯನ್ನು ಸಲ್ಲಿಸಿತು. ಇದಕ್ಕೆ ಗೌಡರು ಯಾವುದೇ ರೀತಿಯ ಪ್ರತಿಕ್ರಿಯೆ ನೀಡಲಿಲ್ಲ. ಈ ಗೇಣಿ ಪದ್ಧತಿ ಮತ್ತು ಅಳತೆ ಅನಾದಿಕಾಲದಿಂದ ಬಂದದ್ದು ಬದಲಾಯಿಸಲು ಸಾಧ್ಯವಿಲ್ಲ. ನಾವು ವಸೂಲು ಮಾಡುವ ಗೇಣಿಯೇ ಉಳಿದೆಡೆಗಿಂತ ಬಹಳ ಕಡಿಮೆ. ಉಳಿದ ಕಡೆ ಏಳು ಚೀಲ ಭತ್ತ ಇದ್ದರೆ ಇಲ್ಲಿ ೫ ಚೀಲ ಮಾತ್ರ. ಬೆಳೆ ಚೆನ್ನಾಗಿ ಆಗದ ಜಮೀನಿಗೆ ಗೇಣಿಯ ಬದಲು ಕಂದಾಯದ ಹಣ ಮಾತ್ರ ಪಡೆಯುತ್ತೇವೆ. ಮುಳುಗಡೆ ಭೂಮಿ ಹೊಂದಿದವರಿಗೆ ಒಳ್ಳೆ ಭೂಮಿ ಕೊಟ್ಟಿದ್ದೇವೆ, ಯಾರ ಹೊಟ್ಟೆಗೂ ಹೊಡೆದಿಲ್ಲ. ಕೊಳಗದ ಮಾತು ತೆಗೆದು ಗಲಾಟೆ ಮಾಡುವುದು ಸರಿ ಅಲ್ಲ. ಎಲ್ಲಾ ಕಡೆ ತಡಗಳಲೆ, ಸೈದೂರು, ಸುಳ್ಳೂರು, ಕಾನ್ಲೆ, ಬರದವಳ್ಳಿ, ಶಿರವಂತೆ ಹೀಗೆ ತಾಲ್ಲೂಕಿನಾದ್ಯಂತ ಇದೇ ಕೊಳಗದಲ್ಲಿ ಗೇಣಿ ಅಳೆಯಿಸಿ ಕೊಳ್ಳುವಾಗ ನಮ್ಮಲ್ಲಿ ತಕರಾರು ತೆಗೆಯುವುದು ಸರಿಯಲ್ಲ ಎಂದು ತಮ್ಮ ವಾದ ಮಂಡಿಸಿದರು. ಮನೆಯ ಅಂಗಳದಲ್ಲಿ ಕೂತಿದ್ದ ರೈತರಿಗೆ ನೀವು ಯಾರು ಜಮೀನಿಗೆ ಕಾಲಿಡುವಂತಿಲ್ಲ. ಕೊಳಗದ ಸಮಸ್ಯೆ ಏನಿದ್ದರೂ ಕೋರ್ಟಿನಲ್ಲಿ ನೋಡೋಣ ಎಂದು ತಿಳಿಸಿದರು.

೧೯೫೧ರ ಜನವರಿಯಲ್ಲಿ ಶಿವಮೊಗ್ಗ ಜಿಲ್ಲಾ ಕಲೆಕ್ಟರ್‌ರ ಎದುರಿನಲ್ಲಿ ಕಡಿದಾಳ್ ಮಂಜಪ್ಪ, ಗಣಪತಿಯಪ್ಪ ಮತ್ತು ಗುರುವಯ್ಯ ಗೌಡರು ಮಾತುಕತೆ ನಡೆಸಿದರೂ ಅದು ಫಲಕಾರಿಯಾಗಲಿಲ್ಲ. ಗುರುವಯ್ಯ ಗೌಡರು ಕೊಳಗದ ವಿಷಯದಲ್ಲಿ ಯಾವ ತೀರ್ಮಾನಕ್ಕೂ ಬರಲು ಸಿದ್ಧರಿರಲಿಲ್ಲ. ಅವರ ತೀರ್ಮಾನವೇ ಅಂತಿಮವಾಗಿತ್ತು. ಅಲ್ಲದೆ ಕಾಗೋಡು ದೀವರು ತಮ್ಮ ಜಮೀನನ್ನು ಬಿಟ್ಟು ಬಿಡಬೇಕು ಎಂಬ ನಿಲುವನ್ನು ತಾಳಿದರು.

ಆಗ ಮೈಸೂರು ರಾಜ್ಯದ ಸೋಷಲಿಸ್ಟ್ ನಾಯಕರಾಗಿದ್ದ ಸಿ.ಜಿ.ಕೆ.ರೆಡ್ಡಿಯವರು ೧೯೫೧ರ ಜುಲೈ ತಿಂಗಳಿನಲ್ಲಿ ನಡೆದ ಎ.ಐ.ಸಿ.ಸಿ. ಅಧಿವೇಶನದಲ್ಲಿ ಭಾಗವಹಿಸಿದ್ದ ಕಾಂಗ್ರೆಸ್ ನಾಯಕರಿಗೆ ಕಾಗೋಡು ಸತ್ಯಾಗ್ರಹದ ಬಗ್ಗೆ ಮುದ್ರಿತ ಕಿರುಹೊತ್ತಿಗೆ 'The geuesis of Kagodu'ವನ್ನು ಹಂಚಿದರು. ರೆಡ್ಡಿಯವರು ಹೇಳುವಂತೆ 'ಗುರುವಯ್ಯ ಗೌಡರ ಈ ನಿರ್ಧಾರ ಅವರೊಬ್ಬರದ್ದೇ ಆಗಿರಲಿಲ್ಲ. ಸಾಗರ ತಾಲ್ಲೂಕಿನ ಜಮೀನ್ದಾರರೆಲ್ಲರೂ ಒಗ್ಗಟ್ಟಾಗಿದ್ದರು ಮತ್ತು ಗೇಣಿದಾರ ಒಕ್ಕಲುಗಳ ಚಳುವಳಿಯನ್ನು ಹತ್ತಿಕ್ಕಲು ನಿಶ್ಚಯಿಸಿದ್ದರು. ಕಾಗೋಡನ್ನು ಅವರು ಗೇಣಿದಾರ ಒಕ್ಕಲುಗಳಿಗೆ ಪಾಠ ಕಲಿಸುವ ನಿರ್ಣಾಯಕ ಕೇಂದ್ರವೆಂದು ಭಾವಿಸಿದರು. ಜಮೀನು ಹಾಳು ಬಿದ್ದರು ಸರಿಯೆ, ಗೌಡರು ಒಕ್ಕಲುಗಳಿಗೆ ಮಣೆಯ ಕೊಡದು ಎಂಬುದು ಅವರ ನಿಲುವಾಗಿತ್ತು.

ರೆಡ್ಡಿಯವರ ಪ್ರಕಾರ ಎಂತಹ ಪ್ರಸಂಗ ಬಂದರೂ ಅದನ್ನು ಎದುರಿಸಲು ಕಾಗೋಡು ಗೌಡರ ಸಹಾಯಾರ್ಥ ತಾಲ್ಲೂಕಿನ ಜಮೀನ್ದಾರರು ಒಟ್ಟಾಗಿ ೪೬.೦೦೦ ರೂಪಾಯಿಗಳ ಒಂದು ನಿಧಿಯನ್ನು ಸಂಗ್ರಹಿಸಿದ್ದರು (ರಾಜಶೇಖರ ಜಿ. ೧೯೪೦ ಪುಟ ೬೮) ತಾಲ್ಲೂಕಿನ ಜಮೀನ್ದಾರರಲ್ಲಿ ಒಟ್ಟಾಗಿ ಹೋರಾಡುವ ಮನೋಭಾವ ವಂತೂ ಮೂಡಿತ್ತು.

ಇಲ್ಲಿ ಈ ವೇಳೆಗಾಗಲೇ ಕೊಳಗವ ತಕರಾರು ಒಂದೆ ಸರಿದು ದೀವರನ್ನು ಭೂಮಿ ಬಿಡಿಸುವ ಪ್ರಶ್ನೆಯೇ ಮುಖ್ಯ ಸಮಸ್ಯೆಯಾಯಿತು. ಈ ಸಂದರ್ಭದಲ್ಲಿ ಜಿಲ್ಲಾ ಕಲೆಕ್ಟರ್ ತಾಳಗುಪ್ಪಕ್ಕೆ ಬಂದಿದ್ದವರು ಕಾಗೋಡಿಗೂ ಬಂದು ಇಲ್ಲಿನ ಒಕ್ಕಲುಗಳಿಗೆ 'ನೀವೆಲ್ಲ ಗೌಡರ ಜಮೀನು ಬಿಟ್ಟು ಬಿಡಿ. ಇಲ್ಲವಾದರೆ ಅವರು ಹೇಳಿದ ಹಾಗೆ ಕೇಳಿಕೊಂಡು ಇರಿ' ಎಂದು ಹೆದರಿಸಿದರು. ಸರಕಾರ ಮತ್ತು ಸರಕಾರಿ ಅಧಿಕಾರಿಗಳು ಪ್ರತ್ಯಕ್ಷವಾಗಿ ಭೂಮಾಲಿಕರನ್ನು ಬೆಂಬಲಿಸಿದರು. ಚಳುವಳಿ ಪ್ರಾರಂಭದಿಂದ ಕೊನೆಯವರೆಗೂ ರೈತರ ಬಗ್ಗೆ ಯಾವುದೇ ಆಸಕ್ತಿ ತೋರಲಿಲ್ಲ.

ರೈತಸಂಘದ ಕಾರ್ಯದರ್ಶಿಯಾದ ಗಣಪತಿಯಪ್ಪನವರು ಕಾಂಗ್ರೆಸ್ ಪಕ್ಷಕ್ಕೆ, ಕಮ್ಯುನಿಸ್ಟ್ ಪಕ್ಷಕ್ಕೆ, ಹಿಂದು ಮುಖಂಡರಿಗೆ ಪತ್ರಗಳನ್ನು ಬರೆದು ಸತ್ಯಾಗ್ರಹ ಬೆಂಬಲಿಸುವಂತೆ ಕೇಳಿ ಪತ್ರ ಬರೆದರು. ಅದಕ್ಕೆ ಯಾರ್‍ಯಾರ ಮನಸ್ಥಿತಿ ಹೇಗಿತ್ತು ಎಂಬುದನ್ನು ನೋಡಬಹುದು. ಕಮ್ಯುನಿಸ್ಟ್ ಪಕ್ಷದವರು ಬೆಂಗಳೂರಿನಲ್ಲಿ ಕಾಗೋಡು ಒಕ್ಕಲುಗಳನ್ನು ಬೆಂಬಲಿಸುವ ಒಂದು ಠರಾವು ಪಾಸು ಮಾಡಿದರು. ಕಾಂಗ್ರೆಸ್ ಪಕ್ಷದ ಜಿಲ್ಲಾ ಕಾರ್ಯದರ್ಶಿಗಳು 'ಈ ವಿಷಯಕ್ಕೆ ಹೆಚ್ಚು ಗಮನ ಕೊಡಲು ಅಧ್ಯಕ್ಷರಿಗೆ ಬಿಡುವಿಲ್ಲ' ಎಂದೂ ಈ ಸ್ಥಳೀಯ ಸಮಸ್ಯೆಯನ್ನು ಜಮೀನುದಾರರು ಮತ್ತು ಗೇಣಿದಾರರು ತಮ್ಮ ತಮ್ಮಲ್ಲಿಯೇ ಸೌಜನ್ಯದಿಂದ ಸರಿ ಮಾಡಿ ಕೊಳ್ಳುವುದು ಬಹಳ ಶ್ರೇಷ್ಠವಾದ ಮಾರ್ಗವೆಂದೂ ಉಪದೇಶಿಸಿ ಪತ್ರ ಬರೆದರು. ಹಿಂದೂ ಮಹಾಸಭೆಯ ಭೂಪಾಲಂ ಚಂದ್ರಶೇಖರಯ್ಯನವರು ಸಾಧಾರಣವಾಗಿ ಹಿಂದೂ ಮಹಾಸಭೆಗೆ ಬಂಡವಾಳಶಾಹಿಯ ಬೆಂಬಲವಿಲ್ಲ ಬಡತನದ ಕಷ್ಟದಲ್ಲಿ ಬಳಲುತ್ತಾ ಧರ್ಮವೇ ಜಯವೆಂಬ ನಂಬುಗೆಯಿಂದ ಬಾಳು ಸಾಗಿಸುವ ರೈತರ ಮತ್ತು ಕೆಲಸಗಾರರ ಬೆಂಬಲವೇ ಹಿಂದೂ ಧರ್ಮಕ್ಕೆ ಮತ್ತು ಹಿಂದೂ ಮಹಾಸಭೆಗೂ ಬೆಂಬಲ. ಅವರುಗಳು ಪಾಕಿಸ್ತಾನಿಯರಿಗೂ ಮುಸ್ಲಿಂಲೀಗಿನವರಿಗೂ ಬೆದರುತ್ತಾರೆ. ಉತ್ತರ ಪ್ರದೇಶದಲ್ಲಿ ಜಮೀನುದಾರಿ ನಿರ್ಮೂಲನಕ್ಕೆ ಹಿಂದು ಮಹಾಸಭೆಯವರು ಸಂಪೂರ್ಣ ಬೆಂಬಲ ಕೊಟ್ಟಿದ್ದಾರೆ. ದಕ್ಷಿಣ ದೇಶದಲ್ಲಿ ಸಣ್ಣ ಹಿಡುವಳಿದಾರರಿಗೆ ಕಷ್ಟ ನಷ್ಟಗಳು ಆಗದಂತೆ ರೈತ ಸಂಘಟನೆ ಆಗಬೇಕಾಗಿದೆ ಎಂದು ಉತ್ತರಿಸಿದರು. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಹಿಂದೂ ಮಹಾಸಭೆಯವರಿಗೆ ಉತ್ತರ ಭಾರತದ ಸಮಸ್ಯೆಯೇ ದೊಡ್ಡ ವಿಷಯವಾಗಿತ್ತು ಮತ್ತು ಅಲ್ಲಿಯ ಭೂಮಾಲಿಕರು ಮತ್ತು ಇಲ್ಲಿಯ ಭೂಮಾಲಿಕರಿಗೂ ಬಹಳ ಆಸ್ತಿಯಲ್ಲಿ ಭಾರಿ ವ್ಯತ್ಯಾಸಗಳಿದ್ದವು. ಅವರಿಗೆ ಹೋಲಿಕೆ ಮಾಡಿದರೆ ಇವರ ಆಸ್ತಿ ಕಡಿಮೆಯೆ ಆಗಿತ್ತು. ಇಲ್ಲಿಯ ಭೂಮಾಲಿಕರು ಸಣ್ಣ ಹಿಡುವಳಿದಾರರು ಎಂಬ ವಿತಂಡವಾದ ಅವರದ್ದಾಗಿತ್ತು. ಇದೇ ರೀತಿಯ ನಿಲುವನ್ನು ಕಾಂಗ್ರೆಸ್ ಮತ್ತು ಇತರ ನಾಯಕರುಗಳು ತಾಳಿದ್ದರು. ಇವರ್‍ಯಾರಿಗೂ ರೈತನ ನೈಜ ಸಮಸ್ಯೆ ಏನು ಎಂಬುದರ

ಅರಿವು ಇರಲಿಲ್ಲ. 'ಹಡೆದವಳ ನೋವು ಹಡೆದವಳಿಗೆ ಗೊತ್ತು' ಎಂಬುದು ಸತ್ಯ. ಆದರೆ ಸಂಸ್ಥಾನದ ರಾಜಕೀಯ ಪಕ್ಷಗಳಲ್ಲಿ ಒಂದಾದ ಸೋಷಲಿಸ್ಟ್ ಪಕ್ಷ ಮಾತ್ರ ವಿವಾದದಲ್ಲಿ ಆಸಕ್ತಿ ವಹಿಸಿತು. ಸಕ್ರಿಯವಾಗಿ ಪಾಲ್ಗೊಂಡಿತು. ಸದಾಶಿವರಾಯರು ಮತ್ತು ಗೋಪಾಲಗೌಡರು ಕಾಗೋಡಿನ ವಿವಾದ ಸತ್ಯಾಗ್ರಹದ ರೂಪ ತಳೆಯುವ ಮೊದಲೇ ಕಾಗೋಡಿಗೆ ಹೋಗಿ ಅಲ್ಲಿನ ಸ್ಥಿತಿಗತಿ ನೋಡಿಕೊಂಡು ಬಂದಿದ್ದರು. ೧೯೫೧ ಏಪ್ರಿಲ್ ತಿಂಗಳಲ್ಲಿಯೇ ಕಾಗೋಡಿನ ಬಗ್ಗೆ ಪಕ್ಷ ಮುಂದಿನ ಕ್ರಮ ಕೈಗೊಳ್ಳಲು ಒಂದು ವರದಿಯನ್ನು ತಯಾರಿಸಿತು ಮತ್ತು ಸಮಿತಿಯನ್ನು ರಚಿಸಿತು. ಸೋಷಲಿಸ್ಟ್ ಪಕ್ಷ ರಾಜ್ಯದಲ್ಲಿ ಆಗ ತುಂಬ ಬಲಹೀನ ಸ್ಥಿತಿಯಲ್ಲಿತ್ತು. ವಾಸ್ತವವಾಗಿ ಬೆಂಗಳೂರಿನಲ್ಲಿ ಸಭೆ ಸೇರಿ ಕಾಗೋಡಿನ ಬಗ್ಗೆ ಠರಾವು ಹೊರಡಿಸಿದ ಕಮ್ಯುನಿಸ್ಟ್ ಪಕ್ಷಕ್ಕಿಂತ ಈ ಪಕ್ಷ ಬಲವಾಗಿ ಏನೂ ಇರಲಿಲ್ಲ. ಬಲದ ದೃಷ್ಟಿಯಿಂದ ನೋಡಿದರೆ ಸೋಷಲಿಸ್ಟ್ ಪಕ್ಷವೂ ಇದಕ್ಕಿಂತ ಹೆಚ್ಚಿನದನ್ನು ಮಾಡಲು ಸಾಧ್ಯವಿಲ್ಲ. ಆದರೆ ಹೋರಾಟದಲ್ಲಿ ಭಾಗಿಯಾಗಿ ಪಕ್ಷದ ಕಾಳಜಿಯನ್ನು ರೈತರ ಬಗೆಗಿನ ನಿಷ್ಠೆಯನ್ನು ತೋರಿತು.

## ಕಾಗೋಡಿನಲ್ಲಿ ಭೂಕ್ರಾಂತಿಯ ಸ್ಫೋಟ

೧೯೫೧ರ ಜನವರಿಯಲ್ಲಿ ನಡೆದದ್ದು ಕೊಳಗದ ತಕರಾರು. ಇಲ್ಲಿ ರೈತರು ಭತ್ತವನ್ನು ಮಿಲ್ಲಿಗೆ ಹಾಕಿ ಕಾಗೋಡು ಗೌಡರ ಹೆಸರಿನಲ್ಲಿ ರಶೀದಿ ಪಡೆದಿದ್ದರು. ಇದರಿಂದ ಕೆರಳಿದ ಕಾಗೋಡು ಗೌಡರು ನಮ್ಮ ಜಮೀನಿಗೆ ರೈತರ್‍ಯಾರು ಕಾಲಿಡಕೂಡದು ಎಂದು ತಾಕೀತುಮಾಡಿದರು. ರೈತರು ಜನವರಿಯಲ್ಲಿ ಒಕ್ಕಲು ಮುಗಿಸಿ ಭತ್ತವನ್ನು ಮನೆಗೆ ತಂದಾದ ಮೇಲೆ ಜಮೀನನ್ನು ಹೂಟಿ ಮಾಡಿ ಮಣ್ಣನ್ನು ಬಿಸಿಲಲ್ಲಿ ಕಾಯುವಂತೆ ಮಾಡುವರು. ಮಾಗಿಯಲ್ಲಿ ಹೂಟಿ ಮಾಡಿದರೆ ಜಮೀನು ಫಲವತ್ತತೆಯಿಂದ ಕೂಡಿರುತ್ತದೆ ಎಂಬ ನಂಬಿಕೆ ಇದೆ. ಆದರೆ ಗಲಾಟೆ ಆದ ಕಾರಣ ಜಮೀನಿನ ಹೂಟಿಯಾಗಿರಲಿಲ್ಲ. ಮಳೆಗಾಲಕ್ಕೆ ಮುನ್ನ ಗದ್ದೆಗೆ ಬೀಜ ಬಿತ್ತಲು ಗದ್ದೆ ಉಳುಮೆ ಮಾಡಲು ರೈತರು ಮಾರ್ಚ್. ಏಪ್ರಿಲ್ ತಿಂಗಳಲ್ಲಿ ಗದ್ದೆಗೆ ಇಳಿದರು. ಗೌಡರ ಕಡೆಯ ಜನ ತಡೆದರು. ರೈತರ ಎತ್ತುಗಳನ್ನು ಗದ್ದೆಯಿಂದ ಓಡಿಸಿ, ಒಕ್ಕಲುಗಳನ್ನು ಅಟ್ಟಿಸಿಕೊಂಡು ಹೋಗಿ ಹೊಡೆದಿದ್ದಲ್ಲದೆ, ಸಾಗರ ಕೋರ್ಟಿನಲ್ಲಿ ಅತಿಕ್ರಮ ಪ್ರವೇಶದ ಕೇಸು ಹಾಕಿದರು. ಕಾಗೋಡಿಗೆ ಸಾಗರದಿಂದ ಪೋಲಿಸರು ಬಂದು ಒಕ್ಕಲುಗಳ ನೊಗಗಳನ್ನು ವಶಪಡಿಸಿಕೊಂಡು, ರೈತರನ್ನು ಬಂಧಿಸಿ ಕೋರ್ಟಿನಲ್ಲಿ ಹಾಜರು ಪಡಿಸಲು ತೊಡಗಿದರು. ೧೮-೪-೧೯೫೧ರಂದು ರೈತ ಬಳಾವಳಿ ಗಣಪತಿಯಪ್ಪನವರ ಮುಖಂಡತ್ವ ದಲ್ಲಿ ಪ್ರಾರಂಭವಾಯಿತು. ರೈತರ ದಸ್ತಗಿರಿಯಾದ ಮೇಲೆ ಕಾಗೋಡಿನಲ್ಲಿ ಒಂದು ಪೋಲಿಸು ತಂಡವನ್ನೇ ಖಾಯಂ ಆಗಿ ಇಡಲಾಯಿತು. ತಲತಲಾಂತರದಿಂದ ಉಳುಮೆ ಮಾಡಿಕೊಂಡು ಬಂದಿದ್ದ ಜಮೀನಿಗೆ ಇಳಿಯುವುದು, ಭೂಮಿ ಉಳುಮೆ ಮಾಡುವುದು ಮಹಾಪರಾಧವಾಯಿತು. ಪೋಲಿಸರು ರೈತರನ್ನು ಮನ ಬಂದಂತೆ ದಂಡಿಸಿದರು. ಈ ಬೆಳವಣಿಗೆ ಕಾಗೋಡು ದೀವರ ಬದುಕಿನ ಮೇಲೆ ಭಾರಿ ಪರಿಣಾಮ ಬೀರಿತು. ೧೯-೪-೫೧ರಂದು ೨೫ ಜನರನ್ನು ೨೦-೪-೫೧ರಂದು ೨೧ ಜನರನ್ನು ಪೋಲೀಸರು ಬಂಧಿಸಿದರು. ಕಾಗೋಡಿನ ಅಮಾಯಕ ದೀವರು ಕ್ರಿಮಿನಲ್ ಕೇಸುಗಳಲ್ಲಿ ಮೊದಲಬಾರಿಗೆ ಸಿಕ್ಕಿಹಾಕಿಕೊಂಡರು. ೧೯೫೧ರ ಏಪ್ರಿಲ್ ೧೪ರಂದು ಕಾಗೋಡಿನಲ್ಲಿಯೇ ಸಾಗರ ತಾಲ್ಲೂಕು ರೈತಸಂಘದ ಒಂದು ಸಭೆ ನಡೆಯಿತು. ಸಭೆಗೆ ಆಸುಪಾಸಿನ ಹಳ್ಳಿಗಳಿಂದಲೂ

ಜನ ಕಾಗೋಡಿಗೆ ಬಂದಿದ್ದರು. ಸಭೆಯನ್ನು ಉದ್ದೇಶಿಸಿ ಕಡಿದಾಳ್ ಮಂಜಪ್ಪ ಮತ್ತು ಬಸವಾನಿ ರಾಮಶರ್ಮ ಮಾತನಾಡಿದರು. ಗೌಡರ ವರ್ತನೆಯನ್ನು ಖಂಡಿಸಿದರು.

ಸಂಸ್ಥಾನದ ಗೃಹ ಸಚಿವ ಮರಿಯಪ್ಪನವರು ಸಾಗರ ತಾಲ್ಲೂಕಿನ ಗ್ರಾಮಗಳ ಸ್ಥಿತಿಗತಿಯನ್ನು ಅಭ್ಯಾಸ ಮಾಡಲು ಮತ್ತು ಸಾಗರದಲ್ಲಿ ನಡೆಯುವ ರೈತಸಂಘದ ಸಭೆಯಲ್ಲಿ ಭಾಷಣ ಮಾಡಲು ೧೭-೪-೫೧ರಂದು ಬರುತ್ತಾರೆಂದು ಕರಪತ್ರಗಳನ್ನು ಹಂಚಲಾಗಿತ್ತು. ೧೭ರಂದು ಸಾಗರ ತಾಲ್ಲೂಕಿನಲ್ಲಿ ಜನರ ಜಾತ್ರೆ ನೆರೆದಿತ್ತು. ಮರಿಯಪ್ಪನವರು ಬರಲಿಲ್ಲ. ತಡಗಳಲೆ ಗ್ರಾಮದ ರೈತರ ಮೇಲೆ ದೌರ್ಜನ್ಯಗಳಾಗಿದ್ದವು. ಅವರು ೧೭ ರಂದು ಮುರಿದ ನೇಗಿಲು ನೊಗಗಳನ್ನು ತೆಗೆದುಕೊಂಡು ಬಂದು ಸಾಗರದಲ್ಲಿ ಮೆರವಣಿಗೆ ಮಾಡಿ ಸಭೆಯಲ್ಲಿ ಪಾಲ್ಗೊಂಡರು. ರೈತಸಂಘ ಈ ರೀತಿಯ ಅನ್ಯಾಯ ಅಕ್ರಮಗಳ ವಿರುದ್ಧ ಪ್ರಬಲ ಹೋರಾಟ ನಡೆಸುತ್ತದೆಂದು ಹೇಳಿದರು. ಗೌಡರ ಜಮೀನಿನಲ್ಲಿ ಬೇಸಾಯ ಮಾಡಿದ್ದಕ್ಕೆ ಗೇಣಿರೈತರಿಗೆ ಯಾವುದೇ ದಾಖಲೆಗಳಿರಲಿಲ್ಲ. ಹಾಗಾಗಿ ಕಾನೂನು ಜಮೀನ್ದಾರರ ಪರವಾಗಿತ್ತು. ಗೌಡರು ರೈತರ ವಿರುದ್ಧ ಕೇಸು ದಾಖಲಿಸಿ ಕೋರ್ಟಿನಲ್ಲಿ ದಾವಾ ಹಾಕಿದರು. ಕಾಗೋಡು ಗೌಡರ ಮನೆಯ ಜಮೀನಿಗೆ ಬೇಸಾಯ ಮಾಡಲು ಸೊರಬ, ಸಾಗರ, ಹೊಸನಗರ ತಾಲ್ಲೂಕಿನ ಲಿಂಗಾಯಿತರೆಲ್ಲ ನೇಗಿಲು ನೊಗ ಆಳುಕಾಳುಗಳೊಂದಿಗೆ ಗಾಡಿ ಕಟ್ಟಿಕೊಂಡು ಕಾಗೋಡಿಗೆ ಬರಲು ತೊಡಗಿದರು. ಈ ತಾಲ್ಲೂಕಿನ ಲಿಂಗಾಯಿತರಿಗೆ ರೈತರು ತಕರಾರು ಮಾಡಿದ್ದು ಪ್ರತಿಷ್ಠೆಯ ವಿಷಯವಾಗಿತ್ತು. ದೀವ ಒಕ್ಕಲುಗಳ ವಿರುದ್ಧ ಕಾರ್ಯಾಚರಣೆ ಮಾಡಲು ಬಂದಿದ್ದ ಲಿಂಗಾಯಿತರೆಲ್ಲಾ ಭಾರಿ ಜಮೀನ್ದಾರರಾಗಿರಲಿಲ್ಲ. ಸಾಮಾನ್ಯ ರೈತರು. ತೀರ ಬಡವರು ಆಗಿದ್ದರು. ೭ ಹಳ್ಳಿಯ ಜಮೀನುಗಳೆಲ್ಲ ಕಾಗೋಡು ಗೌಡರ ಮನೆಯವರದಾಗಿದ್ದರಿಂದ ಈ ಹಳ್ಳಿಗಳಲ್ಲಿದ್ದ ಕೆಲ ಲಿಂಗಾಯಿತರು ಬಹಳ ಬಡತನ ದಲ್ಲಿದ್ದರು. ಕೆಲವರಿಗೆ ಜಮೀನು ಸ್ವಲ್ಪ ಇದ್ದರೆ, ಕೆಲವರು ಜಮೀನು ಇಲ್ಲದೆ. ಸಣ್ಣ ಗುಮಾಸ್ತಗಿರಿ, ಮುಂತಾದ ಕೆಲಸದಲ್ಲಿ ತೊಡಗಿದ್ದರು. ಇದು ಜಾತಿ ನೆಲೆಯಲ್ಲಿಯೇ ನೆರವಾಗುವ ಈ ಪ್ರಕ್ರಿಯೆ ಶುರುವಾಯಿತು. ಈ ಭಾಗದ ಗೇಣಿ ರೈತರೆಲ್ಲಾ ಹೆಚ್ಚಾಗಿ ದೀವರೆ ಆಗಿದ್ದು, ಇದು ಲಿಂಗಾಯಿತರು ಮತ್ತು ದೀವರು ಎಂಬ ಜಾತಿ ಸಂಘರ್ಷಕ್ಕೆ ದಾರಿ ಮಾಡಿಕೊಟ್ಟಿತು. ಕಾಗೋಡಿನ ಒಡೆಯ - ಒಕ್ಕಲುಗಳ ಸಂಬಂಧ ಜಾತೀಯ ಸಂಘರ್ಷದ ಸ್ವರೂಪವನ್ನು ಪಡೆಯಿತು.

ಕಾಗೋಡಿನ ವಿವಾದವನ್ನು ಜಾತಿಯ ಘರ್ಷಣೆ ಎಂದು ಪರಿಗಣಿಸಿದ ಸರಕಾರ ಇದನ್ನು 'ಆರ್ಥಿಕ ಹೋರಾಟ', 'ಸಮಾನತೆಯ ಹೋರಾಟ' ಎಂದು ಪರಿಗಣಿಸಲಿಲ್ಲ ಬದಲಾಗಿ ಜಾತಿಯ ವಿವಾದ ಎಂದು ಪರಿಗಣಿಸಿತು. ಕೆಳವರ್ಗದಲ್ಲಿ ಸ್ವಲ್ಪ ವಿಚಾರ ಕ್ರಾಂತಿಯ ಚಲನೆ ಕಂಡರು ಅದನ್ನು ಕುತಂತ್ರದಿಂದ 'ಜಾತೀಯತೆ' ಎಂದು ವಿಶ್ಲೇಷಣೆ ಮಾಡಿದರು. ಕಾಂಗ್ರೆಸ್ ಇದು ಭೂಮಾಲಿಕರ ಮತ್ತು ಒಕ್ಕಲಿನ ಸಮಸ್ಯೆಯಲ್ಲ ಬರೀ ಕೆ.ಜಿ.ಒಡೆಯರ್ ಮನೆತನದ ಮೇಲಷ್ಟೆ ಹೋರಾಟ ನಡೆಯುತ್ತಿದೆ. ಇವರಿಗಿಂತ ಭಾರೀ ಭೂಮಾಲಿಕರು ಇದ್ದರೂ ಅವರ ಮೇಲೆ ಯಾವುದೇ ಹೋರಾಟವಿಲ್ಲ ಇದೊಂದು ಸಾರ್ವತ್ರಿಕ ಸಮಸ್ಯೆಯಲ್ಲ ಎಂದು ಹೇಳಿಕೆ ನೀಡಲು ಹಲವು ಕಾರಣ, ವೈಶಿಷ್ಟ್ಯಗಳಿದ್ದವು. ಇಲ್ಲಿ ಒಡೆಯ ಲಿಂಗಾಯಿತರಾದರೆ, ಒಕ್ಕಲು ಹೆಚ್ಚಾಗಿ ದೀವರು ಆಗಿದ್ದರು. ಹೀಗಾಗಿ ಇವರಿಬ್ಬರ ಮುಖಾಮುಖಿ ಜಾತೀಯ ಚೌಕಟ್ಟಿಗೆ ಸಿಲುಕಿತು.

ಈ ಚಳುವಳಿಯ ಬಗ್ಗೆ ಸರ್ಕಾರದ ಅಧಿಕೃತ ಪ್ರಕಟಣೆಯೊಂದು ಈ ರೀತಿ ಇದೆ. 'ಸಾಗರ ತಾಲ್ಲೂಕಿನಲ್ಲಿ ಮುಖ್ಯವಾಗಿ ದೀವರ ಕೋಮಿನವರು ಗೇಣಿದಾರರು, ಅವರಲ್ಲಿ ಪರಸ್ಪರ ತುಂಬಾ ಹೊಂದಾಣಿಕೆ ಇದೆ. ಸಾಗರ ತಾಲ್ಲೂಕಿನಲ್ಲಿ ೭೨ ಸಾವಿರ ಜನಸಂಖ್ಯೆಯಲ್ಲಿ ಅವರು ಸುಮಾರು ೧೭ ಸಾವಿರ ಜನರಿದ್ದಾರೆ. ಇವರಲ್ಲದೆ ಮುಸ್ಲಿಮರು, ಒಕ್ಕಲಿಗರು, ಅಗಸರು ಮತ್ತಿತರ ಗೇಣಿದಾರರಿದ್ದಾರೆ; ಅವರು ಈ ಪ್ರಶ್ನೆ (ಕೋಳಗದ್ದು) ಎತ್ತಿಲ್ಲ. ಕಾಗೋಡು ಗ್ರಾಮಲ್ಲಿ ಪರೀಕ್ಷಾರ್ಥವಾಗಿ ಶ್ರೀ ಕೆ.ಜಿ.ಒಡೆಯರ್ ಅವರ ಮನೆತನದ ಮೇಲೆ ಮಾತ್ರ ಚಳುವಳಿ ನಡೆಯುತ್ತಿದೆ'. (ಪ್ರಜಾವಾಣಿ ೨-೬-೫೧)

ಈ ರೀತಿಯ ವಿಶ್ಲೇಷಣೆಗೆ ಅನೇಕ ಕಾರಣಗಳಿದ್ದವು. ಇಲ್ಲಿ ಶುದ್ಧ ಆರ್ಥಿಕ ಪ್ರಶ್ನೆ ಪ್ರಶ್ನೆಯಾಗಿ ಉಳಿಯಲು ಅನೇಕ ಕಾರಣಗಳಿದ್ದವು. ಕಾಗೋಡಿನಲ್ಲಿ ದೀವರು ಮತ್ತು ಲಿಂಗಾಯಿತರು ಮುಖಾಮುಖಿಯಾಗಿ ನಿಂತಿದ್ದರು. ಏಳು ಹಳ್ಳಿಯ ಗೌಡರು ಆಗಿದ್ದ ಒಡೆಯರ ಮನೆತನದ ಊರಿನ ಸಮೀಪವೇ ಇರುವ ಹಾಗಲಪುರದಲ್ಲಿ ೧೨ ಮಡಿವಾಳ ಕೋಮಿನವರ ಮನೆಗಳಿದ್ದವು. ಈಗ ೨೮ ಮನೆಗಳಿವೆ. ಇವರ್‍ಯಾರು ಗೌಡರ ಒಕ್ಕಲುಗಳಾಗಿರಲಿಲ್ಲ. ಇವರೆಲ್ಲಾ ಹವ್ಯಕರ ಒಕ್ಕಲುಗಳಾಗಿದ್ದರು. ಇವರ್‍ಯಾರು ಕಾಗೋಡಿನ ಸತ್ಯಾಗ್ರಹದಲ್ಲಿ ಭಾಗವಹಿಸಲಿಲ್ಲ. ಮಣಗದ್ದೆ ತಟ್ಟೆಗುಂಡಿಯಲ್ಲಿ ಕಾಗೋಡು ಗೌಡರಿಗೆ ಅನೇಕ ಒಕ್ಕಲುಗಳಿದ್ದರು. ಅವರು ಒಕ್ಕಲಿಗ ಜಾತಿಗೆ ಸೇರಿದ ಜನ. ಕುಂಬಾರರು ಇದ್ದರು. ಸುಮಾರು ೪೦ ಮನೆಯ ಒಕ್ಕಲುಗಳಿದ್ದರೂ ಇವರ್‍ಯಾರು ಸತ್ಯಾಗ್ರಹದಲ್ಲಿ ಭಾಗವಹಿಸಲಿಲ್ಲ. ಸೊರಬ, ಹೊಸನಗರ, ಶಿಕಾರಿಪುರ, ಸಿದ್ದಾಪುರದ ಪೂರ್ವಭಾಗದ ದೀವರು ಈ ಸತ್ಯಾಗ್ರಹಕ್ಕೆ ಬೆಂಬಲಕೊಟ್ಟರು. ಸೋಷಲಿಸ್ಟ್ ಪಕ್ಷ ಸತ್ಯಾಗ್ರಹಕ್ಕೆ ಇಳಿಯುವವರೆಗೆ ಬೇರೆ ಯಾವ ಕೋಮಿನವರು ಸತ್ಯಾಗ್ರಹದಲ್ಲಿ ಭಾಗವಹಿಸಲಿಲ್ಲ. ಸೋಷಲಿಸ್ಟ್ ಪಕ್ಷ ಸತ್ಯಾಗ್ರಹಕ್ಕೆ ಇಳಿದ ನಂತರದಲ್ಲಿ ಹೊರಗಿನ ತಾಲ್ಲೂಕಿನ ಲಿಂಗಾಯಿತ, ಒಕ್ಕಲಿಗ, ಬ್ರಾಹ್ಮಣ ಮುಂತಾದ ಎಲ್ಲಾ ಜಾತಿಯ ಜನರು ಪಾಲ್ಗೊಂಡಿದ್ದರು. ಕೆಲ ಯುವಕರು ಜೆ.ಪಿ, ಮತ್ತು ಲೋಹಿಯಾ ಚಿಂತನೆಗಳಿಗೆ ಮಾರುಹೋದವರು.

ಸಿ.ಬಿ.ಚಂದ್ರಶೇಖರ್‌ರವರು 'ಕಾಗೋಡು ಒಂದು ನೆನಪು' ಲೇಖನದಲ್ಲಿ '೨೦ ವರ್ಷದ ತರುಣನಾಗಿದ್ದ ನಾನು ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎಸ್ಸಿ. ವಿದ್ಯಾರ್ಥಿ ನೇತಾಜಿ, ಜೈಪ್ರಕಾಶ ನಾರಾಯಣ, ಲೋಹಿಯಾ, ಅರುಣಾ ಅಸಫ್ ಅಲಿ, ಯೂಸುಫ್ ಮೆಹರಾಲಿ ಮೊದಲಾದ ಕ್ರಾಂತಿಕಾರಿ ನಾಯಕರು ನನ್ನ ಆರಾಧ್ಯ ದೈವಗಳಾಗಿದ್ದರು. ಜೈ ಪ್ರಕಾಶ್ ನಾರಾಯಣರ ಸಂಪಾದಕತ್ವದಲ್ಲಿ ಬರುತ್ತಿದ್ದ ನಾಲ್ಕಾಣೆ ಬೆಲೆಯ 'ಜನತಾ' ಎನ್ನುವ ವಾರಪತ್ರಿಕೆಯನ್ನು ಬಳೇಪೇಟೆ ಚೌಕದಿಂದ ಮೆಜೆಸ್ಟಿಕ್ ಚೌಕದವರೆಗೆ ಮಾರುತ್ತಿದ್ದೆವು' (ಸುಧಾ ೩, ಮೇ ೨೦೦೧, ಪುಟ, ೩೭).

ಹೊರ ತಾಲ್ಲೂಕಿನಿಂದ ಬಂದ ಸತ್ಯಾಗ್ರಹಿಗಳಲ್ಲಿ ಬೇಸಾಯ ಮಾಡಿದ ಯಾವ ಅನುಭವವು ಇರಲಿಲ್ಲ. ಬಿಟ್ಟಾರೆ ಸೋಷಲಿಸ್ಟ್ ಪಕ್ಷದ ಕಾರ್ಯಕರ್ತರಲ್ಲಿ ದೀವರು ಅದಕ್ಕಿಂತ ಕೆಳವರ್ಗದವರು ಯಾರು ಇರಲಿಲ್ಲ. ಕಾಂಗ್ರೆಸ್ ಪಕ್ಷಕ್ಕೆ ಟೀಕಿಸಲು ಮತ್ತು ಜಾತೀಯ ಘರ್ಷಣೆ ಎಂದು ಹೇಳಲು ಬಹಳ ಸುಲಭವಾಗಿತ್ತು.

ಕಾಗೋಡಿನ ದೀವರಿಗೆ ಮೊದಲ ಬಾರಿಗೆ 'ಅತಿಕ್ರಮ ಪ್ರವೇಶ' ಎಂದರೆ ಏನು ಎಂಬುದು ಗೊತ್ತಾಯಿತು. ೧೯೫೧ ರ ಏಪ್ರಿಲ್‌ನಲ್ಲಿ ಕಾರ್ಯದರ್ಶಿ ಗಣಪತಿಯಪ್ಪ, ಮೂಕಪ್ಪ, ಚೌಡಪ್ಪ, ದೇವಪ್ಪ, ಇವರುಗಳ

ಮೇಲೆ ಅರೆಸ್ಟ್ ವಾರೆಂಟ್ ಹೊರಡಿಸಲಾಗಿತ್ತು. ಕಾಗೋಡಿನಲ್ಲಿ ಒಂದು ಪೋಲೀಸ್ ತಂಡ ಖಾಯಂ ಆಗಿ ಇಡಲಾಗಿತ್ತು. ೧೮-೪-೫೧ರಂದು ಕಾಗೋಡಿನ ೫೧ ಜನರನ್ನು, ೧೯-೪-೫೧ರಂದು ೨೫ ಜನರನ್ನು, ೨೦-೪-೫೧ರಂದು ೨೧ ಜನರನ್ನು ಅರೆಸ್ಟ್ ಮಾಡಿ ಕೋರ್ಟಿನಲ್ಲಿ ಕೇಸ್ ಹಾಕಲಾಯಿತು. ಹೀಗೆ ಬಂಡವಾಳಶಾಹಿ ಜನರಿಗೆ ಸರ್ಕಾರದ ಅಧಿಕಾರಿಶಾಹಿ ಜನಾಂಗ ಕಾನೂನಿನ ಅಡಿಯಲ್ಲಿ ಹೇಗೆ ಜೊತೆಯಾಗಿ ನಿಲ್ಲುತ್ತದೆ ಎಂಬುದಕ್ಕೆ ಕಾಗೋಡು ಒಂದು ನಿದರ್ಶನ.

ಸಾಗರ ಕೋರ್ಟಿನಲ್ಲಿ ಸಾಗರ ತಾಲ್ಲೂಕು ರೈತಸಂಘದ ಅಧ್ಯಕ್ಷ ಮೂಕಪ್ಪನವರು ಜಾಮೀನಿನ ಮೇಲೆ ೧೯-೪-೫೧ರಲ್ಲಿ ಬಿಡುಗಡೆಯಾದರು. ಇವರು ಸಾಗರ ಅಮಲ್ದಾರರ ಜೊತೆ ಮತ್ತೆ ಸಂಧಾನಕ್ಕೆಂದು ಗುರುವಪ್ಪ ಗೌಡರ ಹತ್ತಿರ ಹೋದರು, ಅವರು ಸಂಧಾನಕ್ಕೆ ಒಪ್ಪಲಿಲ್ಲ. ಅವರು ತಮ್ಮ ಹಠ ಬಿಡಲಿಲ್ಲ. ಏಪ್ರಿಲ್, ಮೇ ತಿಂಗಳಲ್ಲಿ ರೈತರು ನೊಗ ನೇಗಿಲು, ಸಮೇತ ಗೌಡರ ಗದ್ದೆಗಳಿಗೆ ಇಳಿದು ಉಳುಮೆ ಮಾಡುವುದು, ಪೋಲೀಸರು ಅವರನ್ನು ಅಟ್ಟಿಸಿಕೊಂಡು ಹೋಗಿ ಹೊಡೆಯುವುದು ಬಂಧಿಸುವುದು ನಡೆಯುತ್ತಿತ್ತು. ಕೋರ್ಟಿನಲ್ಲಿ ನೇಗಿಲು ನೊಗಗಳನ್ನು ರೈತರ ಜೊತೆಗೆ ಹಾಜರು ಪಡಿಸುತ್ತಿದ್ದರು. ಕೋರ್ಟಿನೆದುರು ನೇಗಿಲು ನೊಗಗಳ ರಾಶಿಯೇ ಬಿದ್ದಿತ್ತು ಎಂದು ಸತ್ಯಾಗ್ರಹಿಗಳು ಹೇಳುತ್ತಾರೆ. ರೈತರು ನೇಗಿಲು ನೊಗಗಳ ಬದಲಿಗೆ ತೆಂಗಿನ ಹ್ಯಾಡಗಳನ್ನು ನೇಗಿಲು ನೊಗಗಳಂತೆ ಬಳಸಿ ಜಮೀನು ಉಳುಮೆ ಮಾಡಲು ತೊಡಗಿದರು.

ಸಾಗರದ ಮ್ಯಾಜಿಸ್ಟ್ರೇಟ್ ಕೋರ್ಟಿನ ಕ್ರಿಮಿನಲ್ ಕೇಸು ರಿಜಿಸ್ಟರ್ ಪ್ರಕಾರ ೫೦-೫೧ರಲ್ಲಿ ಮುಂದುವರಿದ ಕೇಸುಗಳು ಸೇರಿದಂತೆ ದಾಖಲಾದ ಒಟ್ಟು ಕೇಸುಗಳು ೧೫೦೦. ಈ ಕೇಸುಗಳು ಕಾನೂನಿನ ಕ್ಷುಲ್ಲಕ ಉಲ್ಲಂಘನೆಯೇ ಹೊರತು ಗಂಭೀರ ಅಪಾದನೆಗಳಾಗಿರಲಿಲ್ಲ. ಅಕ್ರಮವಾಗಿ ಛತ್ರ ಸಾಗಿಸಿದ್ದು, ಕಳ್ಳಭಟ್ಟಿ ಗಾಂಜಾನೆಟ್ಟಿದ್ದು, ಚಿಲ್ಲರೆ ಕಳ್ಳತನ, ವ್ಯಭಿಚಾರ, ಬಸ್ಸು ಲಾರಿಗಳಲ್ಲಿ ಓವರ್ ಲೋಡ್ ಮಾಡಿದ್ದು, ಲೈಸೆನ್ಸ್ ಇಲ್ಲದೆ ಹೋಟೆಲ್ಲು ನಡೆಸಿದ್ದು ಇತ್ಯಾದಿ. ಹೀಗೆ ಇಡೀ ತಾಲ್ಲೂಕು ಶಾಂತವಾಗಿದ್ದರೆ ಕಾಗೋಡು ಗ್ರಾಮದಲ್ಲಿ ದಿನಕ್ಕೆ ಇಪ್ಪತ್ತು ಜನರ ಬಂಧನ, ಅನೇಕ ವಿಧವಾದ ಕೇಸುಗಳನ್ನು ಹಾಕಿದ್ದರು. ಮನೆಯಲ್ಲಿದ್ದ ಗಂಡಸರೆಲ್ಲರ ಮೇಲು ಕೇಸುಗಳು ಇದ್ದವು. ಅನೇಕ ಗಂಭೀರತರ ಅಪಾದನೆಗಳನ್ನು ಬಡ ರೈತರ ಮೇಲೆ ಹಾಕಲಾಗಿತ್ತು. ರೈತ ನಾಯಕರಾಗಿದ್ದ ಗಣಪತಿಯಪ್ಪನವರ ಮೇಲೆಯೇ ೨೭ ಕೇಸುಗಳು ದಾಖಲಾಗಿದ್ದವು.

ಭೂಮಿಯನ್ನು ಕೆಲವರು ಮಾತ್ರ ದುಡಿಯದೆ (ಶ್ರಮಿಸದೆ) ಅನುಭೋಗಿಸುವ ಪ್ರವೃತ್ತಿಯಿಂದಾಗಿ ಭೂಹಿಡುವಳಿಗಳ ಅಸಮಾನತೆ ಮುಂತಾದ ಆರ್ಥಿಕ ಕಾರಣಗಳನ್ನು ಸೃಷ್ಟಿಸುತ್ತಿತ್ತು. ಇದಕ್ಕೆ ಸಮಗ್ರ ಬದಲಾವಣೆಗೆ ಭೂಮಾಲಿಕರ ವಿರುದ್ಧ ಹೋರಾಟ ನಡೆದರೆ ಮಾತ್ರ ಅಸಮಾನತೆ ನಿವಾರಣೆಯಾಗುತ್ತದೆ. ಇದಕ್ಕೆ ಸಂಘಟನೆ ಬೇಕು. ಇದು ಸಾಗರ ತಾಲ್ಲೂಕು ರೈತಸಂಘದ ಮೂಲಕ ಯಶಸ್ವಿಯಾಗಿ ನಡೆಯಿತು. ರೈತರಲ್ಲಿ ವಿಚಾರಶೀಲತೆ, ಬಲಸಂವರ್ಧನೆ ಬೆಳೆಯಲು ಕಾರಣವಾಯಿತು. ಶೋಷಣೆ ಆಧಾರಿತ ಸಮಾಜದ ವಿರುದ್ಧ ಹೋರಾಟ, ಚಳುವಳಿ, ಕ್ರಾಂತಿ, ಯಾವುದೇ ಸ್ವರೂಪ ಸಂಘರ್ಷವಿದ್ದಾಗ ಬದಲಾವಣೆ ಸಾಧ್ಯ. ಮಲೆನಾಡಿನಲ್ಲಿ ಅಂತಹ ಕ್ರಾಂತಿ ಕಾಗೋಡಿನ ಗ್ರಾಮದಲ್ಲಿ ರೈತರೆ ಸಂಘಟಿಸಿ ಹೋರಾಡಿದ್ದು ಅವಿಸ್ಮರಣೀಯವಾದ ಹೋರಾಟವಾಗಿದೆ.

## ೮.೨. ಕಾಗೋಡು ಹೋರಾಟದಲ್ಲಿ ಸಮಾಜವಾದದವರ ಹಾಗೂ ಸರಕಾರದ ಪಾತ್ರ

ಕಾಗೋಡು ಹೋರಾಟದಲ್ಲಿ ಸಮಾಜವಾದದವರ ಪ್ರವೇಶವಾದ ಮೇಲೆ ಜನರಲ್ಲಿ ಹೊಸ ಹುರುಪು ತುಂಬಿತು. ಸಮಾಜವಾದ ಎಂಬುದೊಂದು ಸಿದ್ಧಾಂತ, ಶ್ರೇಷ್ಠವಾದ ಚಿಂತನೆಯ ಕೊಡುಗೆ, ಎಲ್ಲರಿಗು ಸಮಾನವಾದ ಅವಕಾಶಗಳಿರಬೇಕು, ಸಮಾನತೆ ಇರಬೇಕು. ಹೀಗೆ ಅನೇಕ ಆದರ್ಶಗಳನ್ನು ಹೊಂದಿತ್ತು. ಸಂಪತ್ತು, ಭೂಮಿ, ಸಮಾಜದ್ದು, ಅದು ಸಮಸ್ತರಿಗೂ ಲಭ್ಯವಾಗಬೇಕು. ಹೀಗೆ ಉತ್ಪಾದನೆಯಲ್ಲಿ ಹೆಚ್ಚಳ ಮತ್ತು ಸಮೃದ್ಧಿ ಸಾಧಿಸುವುದು. ದುಡಿಯದೆ ಸಕಲ ವೈಭವವನ್ನು ಅನುಭೋಗಿಸುವವರಿಗೆ ಇದು ಶತ್ರುವಾಗಿ ಕಂಡು ಬಂದರೂ ತಪ್ಪೇನಿಲ್ಲ. ಸರ್ವಜನತೆಯ ಸಮಾನತೆಗಾಗಿ ಶ್ರಮಿಸುತ್ತದೆ. ಮನುಷ್ಯ ಜನ್ಮ ಅಪರೂಪ ವಾದದ್ದು. ಮನುಷ್ಯ ಗೌರವಕ್ಕೆ ಧಕ್ಕೆಯಾಗಬಾರದು. ಹೀಗೆ ಸಮಾಜದಲ್ಲಿ ಕ್ರಾಂತಿಯನ್ನು ಸಮಾಜವಾದ ಉಂಟುಮಾಡಿತು.

ಈ ಕಾಲಘಟ್ಟದಲ್ಲಿ ಕೆಲ ದಶಕಗಳ ಹಿಂದೆ ಅನೇಕ ಮಹಾಕ್ರಾಂತಿಗಳು ಜಗತ್ತಿನಲ್ಲಿ ಉಂಟಾದವು. ಮಹಾಯುದ್ಧ ನಡೆದವು. ಜನರಲ್ಲಿ ವಿಚಾರ ಕ್ರಾಂತಿ ಬೆಳೆಯಿತು. ತಾಂತ್ರಿಕ ಕೌಶಲ್ಯ, ಕೈಗಾರಿಕೆ ಹೆಚ್ಚಿತು. ಹೀಗೆ ಮನುಕುಲದ ಉದ್ಧಾರಕ್ಕೆ ಅನೇಕ ವಾದಗಳು ಸೃಷ್ಟಿಯಾದವು. ಅದರಲ್ಲಿ ಸಮಾಜವಾದ ಒಂದು.

ಅನೇಕ ಕ್ರಾಂತಿಯಿಂದಾಗಿ ದೇಶದಲ್ಲಿ ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವ ಮುಂತಾದ ಬೆಳವಣಿಗೆಗೆ ಕಾರಣ ವಾಯಿತು. ಈ ತತ್ವಗಳ ಮೇಲು ಕ್ರಾಂತಿಯಾಯಿತು. ಕೆಲ ತತ್ವಗಳು ಹೊಸ ಆಲೋಚನೆ ಹೊಸ ಮಾರ್ಪಾಟು ವಿನೊಂದಿಗೆ ಮನುಕುಲದ ಉದ್ಧಾರಕ್ಕೆ ಶ್ರಮಿಸಿದವು. ತಲತಲಾಂತರಗಳಿಂದ ಬಂದಿದ್ದ ಅವೈಜ್ಞಾನಿಕ ಸಿದ್ಧಾಂತ ಗಳು ಬುಡಮೇಲು ಆದವು. ವಸಾಹತುಶಾಹಿ, ಬಂಡವಾಳಶಾಹಿ, ಗುಲಾಮಗಿರಿ ಪದ್ಧತಿಗಳು ಕುಸಿದು ಬಿದ್ದವು. ಸಾಮೂಹಿಕ ಏಳಿಗೆಯ ವಿಕಾಸವಾದ ಬೆಳೆಯಿತು. ಈ ಕಾಲದಲ್ಲಿ ಸಮಾಜವಾದಿ ವಿಚಾರ ಮತ್ತು ಆಂದೋಲನ ಹೊಸ ಆಯಾಮ-ವಿಸ್ತಾರವನ್ನು ಪಡೆಯುತ್ತಾ ಮುನ್ನಡೆಯಿತು.

ಬಂಡವಾಳಶಾಹಿ ಎಂಬುದು ಸಮಾಜದ ಉತ್ಪಾದನೆ-ವಿತರಣೆಯ ಸಾಧನಗಳ ಮೇಲೆ ಹತೋಟಿ ಹೊಂದಿದೆ. ಉದ್ದೇಶ ಲಾಭಗಳಿಸುವುದು. ಎಲ್ಲಾ ಸರಂಜಾಮುಗಳನ್ನು ಉತ್ಪಾದಿಸುವ ಶ್ರಮಿಕ ವರ್ಗ, ಶೋಷಿತ ನತದೃಷ್ಟರು, ಇವರ ಆಶೀರ್ವಾದದಲ್ಲಿ ನರಳಬೇಕಾದ ಸ್ಥಿತಿ ಇತ್ತು. ಶೋಷಕ-ಶೋಷಿತ, ಒಡೆಯ-ಒಕ್ಕಲು, ಧನಿಕ-ಆಳು, ಬಡವ-ಬಲ್ಲಿದ ಈ ತಾರತಮ್ಯದ ವಿರುದ್ಧ ಹೋರಾಟವನ್ನು ಮಾಡಿ ಎಲ್ಲರಲ್ಲು ಸಮಾನತೆ ಕಾಣುವುದು ಸಮಾಜವಾದದ ಗುರಿ ಆಗಿತ್ತು.

ಜಗತ್ತಿನ ಪ್ರತಿಯೊಂದು ಭಾಗದಲ್ಲಿಯ ಸಮಾಜದಲ್ಲಿ ಶೋಷಕರು ಮತ್ತು ಶೋಷಿತ ವರ್ಗ ಕಂಡು ಬರುತ್ತದೆ. ಕೆಲವೇ ಕೆಲವು ಸಿರಿವಂತರ ಕೈಯಲ್ಲಿ ಹೆಚ್ಚಿನ ಶೋಷಿತವರ್ಗ ನರಳಬೇಕಾದ ದುಃಸ್ಥಿತಿ ಇದೆ. ಭಾರತದಂತಹ ದೇಶದಲ್ಲಿ ಜಾತೀಯತೆ ವರ್ಗ ಭೇದದಿಂದಾಗಿ ಶೂದ್ರ ವರ್ಗ ಹೀನಾಯ ಸ್ಥಿತಿಯಲ್ಲಿತ್ತು. ಸವರ್ಣೀಯರು ಮತ್ತು ಅಧಿಕಾರಿಗಳ ಕೈಯಲ್ಲಿ ಸಿಕ್ಕಿ ನಲುಗಿ ಹೋಗಿತ್ತು. ಇಂತಹ ಸಂದರ್ಭದಲ್ಲಿ 'ಸಮಾಜ ವಾದಿ ಪಕ್ಷ' ದೇಶದಲ್ಲಿ ಕಾಂಗ್ರೆಸ್ ಸಂಸ್ಕೃತಿಯ ವಿರುದ್ಧವಾಗಿ ಹುಟ್ಟಿಕೊಂಡಿತು. 'ಸಮಾಜವಾದಿ ಚಿಂತನೆಯಲ್ಲಿ ಸಾಂಸ್ಕೃತಿಕವಾದ, ಆಧ್ಯಾತ್ಮಿಕವಾದ ಅಂಶಗಳು ಮಿಳಿತಗೊಂಡಿದ್ದವು ಹೊಸಜಗೆಯ ಮನುಷ್ಯನನ್ನು ಕಾಣುವ

ಆಶಯ ಎಲ್ಲಾ ಜಾತಿಯವರೂ ಎಲ್ಲಾ ವರ್ಗದವರೂ ಸಮಾನಾಸಕ್ತಿಯಿಂದ ಒಂದು ಕಡೆ ಸೇರಿ ಬಾಳುವುದಕ್ಕಾಗಿ ಆಶಿಸುವ ಒಂದು ಪರಂಪರೆ ಆಗಿನ ಆಂದೋಳನಕ್ಕೆ ಪ್ರೇರಕ' (ಯು.ಆರ್.ಅನಂತಮೂರ್ತಿ, ೨೦೦೨, ಆಶಯ ನುಡಿಯಿಂದ) ಸಮಾಜವಾದಿ ಪಕ್ಷ ಎಲ್ಲಾ ಜನಾಂಗದವರನ್ನು ಒಂದೇ ವೇದಿಕೆಯಡಿ ತಂದು, ಸಹಬಾಳ್ವೆ ನಡೆಸುವ ಚಿಂತನೆಯನ್ನು ಬಿತ್ತಿತ್ತು. ವಿಶಿಷ್ಟ ವಿಚಾರಕ್ರಾಂತಿ ಸಮಾಜವಾದಿ ಪಕ್ಷದ ಚಿಂತನೆಯಾಗಿದೆ.

ಭಾರತದಲ್ಲಿ ಸಮಾಜವಾದಿ ಪಕ್ಷ ೧೯೩೪ರಲ್ಲಿ ಆಚಾರ್ಯ ನರೇಂದ್ರದೇವ ಅವರ ಅಧ್ಯಕ್ಷತೆಯಲ್ಲಿ 'ಕಾಂಗ್ರೆಸ್ ಸಮಾಜವಾದಿ ಪಕ್ಷ' ಎಂಬ ಹೆಸರಿನಡಿ ಅಸ್ತಿತ್ವಕ್ಕೆ ಬಂದಿತು. ಈ ಕಾಲಘಟ್ಟದಲ್ಲಿ ಕಾಂಗ್ರೆಸ್ ಪಕ್ಷ ಭಾರತದ ಸ್ವಾತಂತ್ರ್ಯಕ್ಕಾಗಿ ಅವಿರತ ಹೋರಾಟ ಮಾಡುತ್ತಿತ್ತು. ಈ ಪಕ್ಷದ ಅನೇಕ ಮುಖಂಡರು ನಾಸಿಕ್ ಜೈಲಿನಲ್ಲಿ ಸೆರೆಮನೆವಾಸ ಅನುಭವಿಸುತ್ತಿದ್ದರು. ಅವರು ಜಯಪ್ರಕಾಶ್ ನಾರಾಯಣ್, ಡಾ.ರಾಮ ಮನೋಹರ ಲೋಹಿಯಾ, ಅಶೋಕ ಮೆಹ್ತಾ, ಮೀನುಮಸಾನಿ, ಯೂಸುಫ್ ಮೆಹ್ರಾಲಿ, ಅಚ್ಯುತ ಪಟವರ್ಧನ, ಎಸ್.ಎಂ.ಜೋಷಿ, ಎನ್.ಜಿ.ಗೋರೆ ಮೊದಲಾದವರು. ಕಾಂಗ್ರೆಸ್ ಪಕ್ಷದಲ್ಲಿ ಇದ್ದವರು ಕಾಂಗ್ರೆಸ್ ಸಮಾಜವಾದಿ ಪಕ್ಷ ಸ್ಥಾಪಿಸಲು ಚರ್ಚಿಸಿದರು. ಹೀಗೆ ಭಾರತದಲ್ಲಿ ಸಮಾಜವಾದಿ ಪಕ್ಷ ಜನ್ಮ ತಾಳಿತು.

೧೯೩೬ರಲ್ಲಿ ಗುಜರಾತಿನಲ್ಲಿ ನಡೆದ ಕಾಂಗ್ರೆಸ್ ಸಮಾಜವಾದಿ ಪಕ್ಷದ ಸಮ್ಮೇಳನದಲ್ಲಿ 'ಸ್ವಾತಂತ್ರ್ಯ ಮತ್ತು ಸಮಾಜವಾದಿಗಳ ನಡುವೆ ಸಂಘರ್ಷವಿಲ್ಲ. ರಾಜಕೀಯ ಅಧಿಕಾರವನ್ನು ವಶಪಡಿಸಿಕೊಳ್ಳದ ಹೊರತು ಸಮಾಜವಾದಿ ಸಮಾಜದ ನಿರ್ಮಾಣ ಅಸಾಧ್ಯ. ದೇಶದ ಬಗ್ಗೆ ಸಮಾಜವಾದಿಗಳಿಗೆ ಅಪಾರ ವಿಶ್ವಾಸ, ಕಾಳಜಿ, ಪ್ರೀತಿ ಇದೆ. ಸಂಕುಚಿತ ರಾಷ್ಟ್ರೀಯತೆಯನ್ನು ಎಂದಿಗೂ ಒಪ್ಪುವುದಿಲ್ಲ. ರಾಷ್ಟ್ರದ ಸ್ವಾತಂತ್ರ್ಯ ಮತ್ತು ಸಮಾಜವಾದಿ ಸಮಾಜ ನಿರ್ಮಾಣಕ್ಕಾಗಿ ಸಂಕಲ್ಪ ಬದ್ಧವಾಗಿದೆ' ಎಂದು ಸಾರಲಾಯಿತು. ಹೀಗೆ ದೇಶದಲ್ಲಿ ಸಮಾಜವಾದಿ ಆಂದೋಲನ ಚಿಂತನೆ ಬೆಳೆಯಿತು. ಸಮಾಜವಾದಿಗಳು ಕಾಂಗ್ರೆಸ್‌ನಲ್ಲಿ ಇದ್ದುಕೊಂಡೇ ಕಾರ್ಮಿಕರನ್ನು, ರೈತಾಪಿವರ್ಗದವರನ್ನು, ಕೃಷಿ ಕೂಲಿಕಾರರನ್ನು ಸಂಘಟಿಸತೊಡಗಿತು. ಕಾಂಗ್ರೆಸ್‌ಗೆ ಸಮಾಜವಾದಿ ವರ್ಚಸ್ಸು ಕೊಡುವ ಸಲುವಾಗಿ ಆರ್ಥಿಕ ಕಾರ್ಯಕ್ರಮಗಳನ್ನು ನೀಡಿತು. ಹೀಗೆ ಕಾಂಗ್ರೆಸ್ ಸಮಾಜವಾದಿಗಳು, ರಾಷ್ಟ್ರೀಯ ವಿಮೋಚನೆಗೆ ಮತ್ತು ಸಮಾಜವಾದಿ ಚಳುವಳಿಯನ್ನು ಒಟ್ಟೊಟ್ಟಿಗೆ ಬೆಳೆಸಿದರು.

ಗಾಂಧೀಜಿ ಹೇಳುವಂತೆ 'ರೈತ ದೇಶದ ಬೆನ್ನೆಲುಬು' ಎಂಬ ಸತ್ಯದ ಜಾಡು ಹಿಡಿದ ಸಮಾಜವಾದಿಗಳು ದೇಶದ ಚೈತನ್ಯ ಚಿಲುಮೆಯಾದ ಕಾರ್ಮಿಕವರ್ಗ ಮತ್ತು ರೈತಾಪಿ ವರ್ಗದ ಸಂಘಟನೆಗೆ ತೊಡಗಿತು. ೧೯೪೮ರಲ್ಲಿ ದೇಶಕ್ಕೆ ಸ್ವಾತಂತ್ರ್ಯ ಬಂದ ನಂತರ ಸಮಾಜವಾದಿಗಳು ಕಾಂಗ್ರೆಸ್‌ನಿಂದ ಹೊರಬಂದು 'ಸಮಾಜ ವಾದಿ ಪಕ್ಷ' ಕಟ್ಟಿದರು. ರಾಜಕೀಯ ಪಕ್ಷಕ್ಕೆ ಮೂಲಭೂತ ಬದಲಾವಣೆಯ ಹಂಬಲವೊಂದೇ ಇದ್ದರೆ ಸಾಲದು ಸಂಘಟನೆ ಮುಖಾಂತರ ಅದಕ್ಕೊಂದು ಸ್ವರ ಎತ್ತಿಸುವುದಕ್ಕೆ ಜನ ಬೆಂಬಲವೂ ಬೇಕು. ಪ್ರಾಂತ್ಯದಲ್ಲಿ ಆಗ ಸೋಷಲಿಸ್ಟ್ ಪಕ್ಷಕ್ಕೆ ಇಂತಹ ಹಂಬಲ ಮಾತ್ರ ಇದ್ದಿತು. ಜನ ಬೆಂಬಲ ಬಹಳ ಕಡಿಮೆ ಇತ್ತು.

ಜನತಂತ್ರದ ಮೂಲ ಬೇರು ಇರುವುದು ಸಾಮಾನ್ಯರೆಂದು ತಿಳಿದಿರುವ ಅಸಾಮಾನ್ಯ ಜನರಲ್ಲಿ, ಇವರ ಸಂಘಟನೆ ಕಷ್ಟ ಸಾಧ್ಯ. ಹೀಗಾದಲ್ಲಿ ಪಕ್ಷ ಬಲಗೊಳ್ಳಲು ತೊಡಗುತ್ತದೆ ಎಂಬ ಅರಿವು ಈ ಪಕ್ಷಕ್ಕೆ ಇತ್ತು.

ಜನತೆಯ ಒಳಿತಿನ ಬಗ್ಗೆ ಅತೀವ ಕಾಳಜಿ ವಹಿಸಬೇಕು. ಅವರ ಪ್ರೀತಿ ವಿಶ್ವಾಸ ಪಡೆಯಬೇಕೆಂಬ ನಿಟ್ಟಿನಲ್ಲಿ ಸಮಾಜವಾದಿಗಳ ಪ್ರಯತ್ನ ಶ್ಲಾಘಿಸುವಂತಹದ್ದು. ಸಮಾಜವಾದಿಗಳು ರೈತಾಪಿ ವರ್ಗದಲ್ಲಿ ಹುದುಗಿರುವ ಕ್ರಾಂತಿಕಾರಿತನವನ್ನು ಮೊಟ್ಟಮೊದಲು ಕಂಡುಕೊಂಡರು. ಆದಕ್ಕಾಗಿಯೇ 'ಕಿಸಾನ್ ಸಭಾ' 'ಮಜ್ದೂರ್ ಸಂಘ'ಗಳನ್ನು ಸ್ಥಾಪಿಸಿದರು. ರೈತಾಪಿವರ್ಗ ಮತ್ತು ಕಾರ್ಮಿಕವರ್ಗವನ್ನು ಸಂಘಟಿಸಿದರು.

ಗುಲಾಮಿ ಸಂಸ್ಕೃತಿಯ ವ್ಯವಸ್ಥೆ ಸಮಗ್ರವಾಗಿ ಬದಲಾಗುವುದಿಲ್ಲ. ಇದಕ್ಕೆ ಹೋರಾಟ ಬೆತ್ತಾಯಬೇಕು. ವ್ಯವಸ್ಥೆ ಇಲ್ಲಿ ಜಾತಿಪದ್ಧತಿಯ ಮೇಲೆ ನಿಂತಿದೆ. ಮೇಲು ವರ್ಗಗಳು ಸಾಮಾಜಿಕವಾಗಿ, ಆರ್ಥಿಕವಾಗಿ, ಸಾಂಸ್ಕೃತಿಕವಾಗಿ ಬಹಳ ಮುಂದುವರಿದಿದೆ. ಅತ್ಯಂತ ಕೆಳವರ್ಗಗಳು ಎಲ್ಲಾ ವಿಭಾಗದಲ್ಲೂ ಬಹಳ ಹೀನಾಯ ಸ್ಥಿತಿಯಲ್ಲಿದ್ದವು. ಈ ರೂಢಿಬದ್ಧ ವ್ಯವಸ್ಥೆ ಬದಲಾಗಬೇಕಾದರೆ ಪ್ರತಿಯೊಬ್ಬ ಜನರಲ್ಲೂ ವಿಚಾರಕ್ರಾಂತಿ ಇರಬೇಕು. ಈ ನಿಟ್ಟಿನಲ್ಲಿ ಸಮಾಜವಾದಿಗಳು ಪ್ರಯತ್ನಿಸಿದರು.

ಕಾಗೋಡು ಸತ್ಯಾಗ್ರಹವು ಮಲೆನಾಡು ರೈತಸಂಘದ ಅಧ್ಯಕ್ಷ ಕಬಿವಾಳ್ ಮಂಜಪ್ಪ, ಸಾಗರ ರೈತ ಸಂಘದ ಗಣಪತಿಯಪ್ಪನವರ ನೇತೃತ್ವದಲ್ಲಿ ತೀವ್ರ ಸ್ವರೂಪದಲ್ಲಿ ನಡೆಯುತ್ತಿತ್ತು. ದಿನಾಪ್ರತಿ ಅನೇಕ ರೈತರ ಬಂಧನ, ಹೋರಾಟದ ಸುದ್ದಿ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿತ್ತು. ಕಾಗೋಡಿನಲ್ಲಿ ನಡೆಯುವ ರೈತ ಸಭೆಗಳಿಗೆ ಸಮಾಜವಾದಿ ಪಕ್ಷದವರು ಬಂದು ಭಾಷಣ ಮಾಡುತ್ತಿದ್ದರು. ಹೀಗೆ ಗೇಣಿರೈತರಪರ ಒಲವು ತೋರುತ್ತಿದ್ದರು. ಜಮೀನುದಾರರ ವಿರುದ್ಧ ಕರಪತ್ರ ಹಂಚುವುದು, ಗೌಡರ ವಿರುದ್ಧ ಘೋಷಣೆ ಕೂಗುವುದು, ಗೌಡರ ಗದ್ದೆಗಳ ಸುತ್ತ ಹಾಕಿದ ಬೇಲಿ ಕೀಳುವುದು. ಅನೇಕ ಸಮಾಜವಾದಿ ಪಕ್ಷದ ಕಾರ್ಯಕರ್ತರನ್ನು ಪೋಲೀಸರು ಲಾಕಪ್ಪಿಗೆ ಹಾಕಿದ್ದರು ಆದರೆ ಎಂದಿಗೂ ಸತ್ಯಾಗ್ರಹಿಗಳು ಗೌಡರ ಮತ್ತು ಪೋಲೀಸರ ಮೇಲೆ ದೈಹಿಕ ಆಕ್ರಮಣ ನಡೆಸಲಿಲ್ಲ. ಸತ್ಯಾಗ್ರಹಿಗಳ ಸಂಯಮ ಮೆಚ್ಚುವಂತಹದ್ದು. ಇದಕ್ಕೆ ಕಾರಣವು ಇದೆ. ಭಾರತದ ಹೆಚ್ಚಿನ ಎಲ್ಲಾ ಮುಖಂಡರು ಗಾಂಧೀವಾದದ ನೆರಳಲ್ಲಿ ಬಂದವರು.

ಸಮಾಜವಾದಿಗಳು ಕಾಗೋಡು ಗೌಡರ ವಿರುದ್ಧ ಹೊರಡಿಸಿದ ಕರ ಪತ್ರಗಳು ಈ ರೀತಿ ಇದ್ದವು (೩.೫.೧೯೫೧)

೧. ಕಾಗೋಡು ರೈತರು ನೂರಾರು ವರ್ಷಗಳಿಂದ ಸಾಗುವಳಿ ಮಾಡುತ್ತಾ ಬಂದಿರುವ ಜಮೀನುಗಳಲ್ಲಿ ಪ್ರವೇಶಿಸಿದೊಡನೆ ದಸ್ತಗಿರಿ ಮಾಡಲಾಗುತ್ತಿದೆ.

೨. ಈವರೆಗೂ ಯಾವ ರೈತರೂ ಜಮೀನನ್ನು ಬಿಟ್ಟಿರುವುದಾಗಿ ಹಿಡುವಳಿದಾರರಿಗೆ ಬರೆದುಕೊಟ್ಟಿರುವುದಿಲ್ಲ. ಇಲ್ಲವೆ ಬಿಡುತ್ತೇವೆಂದು ಹೇಳಿಕೆ ಕೊಟ್ಟಿರುವುದಿಲ್ಲ.

೩. ಹಿಡುವಳಿದಾರರು ರೈತರಿಗೆ ಯಾವುದೇ ವಿಧವಾದ ಲೀಗಲ್ ನೋಟೀಸ್‌ಗಳನ್ನು ಕೊಟ್ಟು ಜಮೀನು ಬಿಡುವುದಕ್ಕೆ ತಿಳಿಸಿರುವುದಿಲ್ಲ.

೪. ೧೯೪೩ನೇ ಸಾಲಿನಿಂದೀಚೆಗೆ ಶೇಕಡಾ ೩೦ ರಷ್ಟು ಗೇಣಿ ಹೆಚ್ಚಿಸಿದ್ದಾರೆ. ಆದರೆ ಆ ಜಮೀನಿನಲ್ಲಿ ಯಾವ ಹೊಸ ಕಾಮಗಾರಿಯನ್ನು ಮಾಡಿಸಿರುವುದಿಲ್ಲ.

೫. ಪ್ರತಿಯೊಂದು ರೈತ ಕುಟುಂಬದಿಂದ ವರ್ಷಕ್ಕೆ ೨೦ ಆಳುಗಳವರೆಗೆ ಬಿಟ್ಟಿ ದುಡಿಮೆ ಮಾಡಿಸಿ ಪ್ರಯೋಜನ ಹೊಂದುತ್ತಿದ್ದಾರೆ. ಈ ಬಿಟ್ಟಿ ದುಡಿಮೆಯ ಸಂದರ್ಭದಲ್ಲಿ ರೈತರ ಆತ್ಮಗೌರವಕ್ಕೂ, ಸಾಮಾಜಿಕ ಗೌರವಕ್ಕೂ ಕುಂದು ಬರುವ ರೀತಿಯಲ್ಲಿ ಕೆಲಸಗಳನ್ನು ಮಾಡಿಸುತ್ತಿದ್ದರು. ಇಂಥಾ ಅಗೌರವಯುತವಾದ ಕೆಲಸವನ್ನು ಮಾಡಲು ಒಪ್ಪದೇ ಇರುವಾಗ ಬಯ್ಯುವುದು. ಹೊಡೆಯುವುದು ಮತ್ತು ಕುಡಿಯುವ ನೀರಿನ ಬಾವಿಗೆ ಮುಳ್ಳು ಬೇಲಿ ಹಾಕಿ ನೀರಿಲ್ಲದಂತೆ ಮಾಡುವುದು ಎಲ್ಲದಕ್ಕಿಂತ ಹೆಚ್ಚಾಗಿ ಜಮೀನು ಕೊಡುವುದಿಲ್ಲವೆಂದೂ ಊರು ಬಿಡಿಸುವೆವೆಂದೂ ಹೆದರಿಸುವುದು ವಗೈರೆ ಪದ್ಧತಿಗಳು ಈವರೆಗೂ ಜಾರಿಯಲ್ಲಿದ್ದವು.

೬. ಅಳತೆಯ ವಿಷಯದಲ್ಲಿ ವಿವಾದವಿರುವುದರಿಂದ ೧೯೪೯-೫೦ ಮತ್ತು ೧೯೫೦-೫೧ನೇ ಸಾಲಿನಲ್ಲಿ ಹಿಡುವಳಿದಾರರಿಗೆ ಕೊಡಬೇಕಾದ ಗೇಣಿಯ ಧಾನ್ಯವನ್ನು ಹಿಡುವಳಿದಾರರು ತೆಗೆದುಕೊಂಡು ಕ್ರಮವಾದ ರಶೀದಿ ಕೊಡಲು ಒಪ್ಪದಿರುವುದರಿಂದ ಸರಕಾರಿ ಡಿಪೋಕ್ಕೆ ಹಿಡುವಳಿದಾರರ ಹೆಸರಿನಲ್ಲಿ ಪಾವತಿ ಮಾಡಿ ರಶೀದಿ ಪಡೆಯಲಾಗಿದೆ. ಡಿಪೋದಲ್ಲಿಯ ಈ ಬಾಬ್ತು ಹಣವನ್ನೆಲ್ಲ ಹಿಡುವಳಿದಾರರು ತೆಗೆದುಕೊಂಡಿರುತ್ತಾರೆ.

ಹೀಗೆ ಕ್ರಿಯಾಶೀಲ ಚಟುವಟಿಕೆಯಲ್ಲಿ ಸಮಾಜವಾದಿ ಪಕ್ಷವು ತೊಡಗಿತ್ತು. ತಲೆಗೆ ಕೆಂಪು ಟೋಪಿ ಧರಿಸಿ, ಕೆಂಪುಧ್ವಜ ಕೈಯಲ್ಲಿ ಹಿಡಿದುಕೊಂಡು 'ಇಂಕಿಲಾಬ್ ಜಿಂದಾಬಾದ್' 'ಜಮೀನ್ದಾರರಿಗೆ ಧಿಕ್ಕಾರ' ಉಳುವವನೇ ಹೊಲದೊಡೆಯ ಮುಂತಾದ ಘೋಷಣೆಗಳನ್ನು ಕೂಗುತ್ತಿದ್ದರು. ಜಮೀನ್ದಾರರ ಕಡೆಯಿಂದ ಸಾಕಷ್ಟು ಕಿರುಕುಳ ಹಿಂಸೆ ಅನುಭವಿಸಿದರು. ಈ ಸತ್ಯಾಗ್ರಹಿಗಳು ಬಹಳ ಸಂಯಮದಿಂದ ನಡೆದುಕೊಂಡರು. ಅಹಿಂಸಾತ್ಮಕ ನಿಲುವು ತಳೆದಿದ್ದರು.

ಬೆಂಗಳೂರು, ಕೋಲಾರ, ದಾವಣಗೆರೆ, ಚಿತ್ರದುರ್ಗ, ಶಿವಮೊಗ್ಗ, ತೀರ್ಥಹಳ್ಳಿ ಮುಂತಾದ ಊರುಗಳಿಂದ ಸಮಾಜವಾದಿ ಕಾರ್ಯಕರ್ತರು ಚಳುವಳಿಯಲ್ಲಿ ಪಾಲ್ಗೊಂಡರು. ಅನೇಕ ಉತ್ಸಾಹಿ ಕಾರ್ಯಕರ್ತರ ಮೇಲೆ ವಾರೆಂಟ್ ಇದ್ದವು. ಗೋಪಾಲಗೌಡರ ಮೇಲೂ ವಾರೆಂಟ್ ಹೊರಡಿಸಲಾಗಿತ್ತು. ಗೌಡರು ಚಳುವಳಿಯಲ್ಲಿ ಸಕ್ರೀಯವಾಗಿ ಪಾಲ್ಗೊಂಡರು. ಇವರು ಅನೇಕ ಯುವ ತರುಣರನ್ನು ಚಳುವಳಿಯಲ್ಲಿ ಪಾಲ್ಗೊಳ್ಳುವಂತೆ ಪ್ರಚೋದಿಸಿದರು. ೩-೭-೫೧ ರಂದು ಗೌಡರನ್ನು ಬಂಧಿಸಲಾಯಿತು. ಚಳುವಳಿಗೆ ಸ್ವಲ್ಪ ಹಿನ್ನಡೆ ಉಂಟಾಯಿತು. ಬೆಂಗಳೂರಿನ ಕಾರ್ಯಕರ್ತರಾದ ಗರುಡ ಶರ್ಮ, ಬಾ.ಸು.ಕೃಷ್ಣಮೂರ್ತಿ, ಶಿವಮೊಗ್ಗದ ಸೀತಾರಾಮ ಅಯ್ಯಂಗಾರ್, ಸಾಗರದ ಗುರುರಾಜ, ಸತ್ಯಾಗ್ರಹದಲ್ಲಿ ಭಾಗವಹಿಸಿದ್ದಕ್ಕೆ ವಾರೆಂಟ್ ಇತ್ತು. ಇವರು ತಲೆಮರೆಸಿಕೊಂಡು ಚಳುವಳಿ ಚುರುಕಾಗಿರುವಂತೆ ಕೆಲಸ ಮಾಡಿದ ಪ್ರಮುಖರು. ಸಿದ್ದಾಪುರ ತಾಲ್ಲೂಕಿನ ಖ್ಯಾತ ಸ್ವಾತಂತ್ರ್ಯ ಹೋರಾಟಗಾರ ದೀವ ಮುಖಂಡ ಈರಾ ಮಾಸ್ತ್ಯ ಕತ್ತಿ ಕೂಡಾ ಸತ್ಯಾಗ್ರಹದಲ್ಲಿ ಭಾಗವಹಿಸಿ ಜೈಲುವಾಸ ಅನುಭವಿಸಿದರು. ಸೋಷಲಿಸ್ಟರ ಪ್ರಭಾವದಿಂದಾಗಿ ಸಾಗರ ತಾಲ್ಲೂಕಿನ ಗ್ರಾಮಗಳಾದ ಹಿರೇನೆಲ್ಲೂರು, ಸೂರಗುಪ್ಪೆ, ಯಲಕುಂದ್ಲಿ, ತಡಗಳಲೆ, ಹುಣಸೂರು, ಸುಳ್ಳೂರು, ಸೈದೂರು, ಮಂಡಗಳಲೆ, ಕಾನ್ಲೆ, ಮರ್ತೂರು, ಬಳೇಗಾರು, ಹುಣಸೂರು, ಮನೆಘಟ್ಟ, ಕೆಳದಿ, ಅವರಂತೆ, ಮೆಳವರಿಗೆ, ಸೊರಬ ತಾಲ್ಲೂಕಿನ ಹಳೆ ಸೊರಬ, ಸೊರಬ, ಕುಪ್ಪಗದ್ದೆ ಮುಂತಾದ ಕಡೆಯಿಂದ ದೀವ ಒಕ್ಕಲುಗಳು ಸತ್ಯಾಗ್ರಹದಲ್ಲಿ ಭಾಗವಹಿಸಿದ್ದರು.

ಸೋಷಲಿಸ್ಟರ ಕೆಲ ಘೋಷಣೆಗೂ ಮತ್ತು ರೈತ ಸಂಘದ ಬೇಡಿಕೆಗೂ ಅನೇಕ ವ್ಯತ್ಯಾಸಗಳಿದ್ದವು. ಒಡೆಯ-ಒಕ್ಕಲು ಸಂಬಂಧದಲ್ಲಿ ಬಿರುಕುಂಟಾಗಿರುವುದು ಕೋಳಗದ ಸಮಸ್ಯೆ, ಗೇಣಿ ಸಮಸ್ಯೆ ಸಮಾಜವಾದಿಗಳ ಘೋಷಣೆ 'ಉಳುವವನೆ ಹೊಲದೊಡೆಯ' ಉಳುವವ ಎಲ್ಲಾ ಜನಾಂಗದವರು ಜಮೀನು ಉಳುಮೆ ಮಾಡುತ್ತಿದ್ದರು. ಅನೇಕ ಗೇಣಿದಾರ ದೀವರ ಮನೆಗೆ ಹರಿಜನ ಮುಂತಾದ ಕೆಲ ಜನಾಂಗಗಳ ಕೂಲಿ ವರ್ಗವು ಒಡೆಯ-ಒಕ್ಕಲು ಇಬ್ಬರ ಮನೆಯ ಗದ್ದೆಯನ್ನು ಉಳುಮೆ ಮಾಡುತ್ತಿದ್ದರು. ರೈತಸಂಘದ ಬೇಡಿಕೆಗೂ ಸಮಾಜವಾದಿಗಳ ಘೋಷಣೆಗೂ ಅಜಗಜಾಂತರ ವ್ಯತ್ಯಾಸವೇ ಇತ್ತು. ಕ್ರಾಂತಿಕಾರಿ ವಿದ್ಯಾವಂತರಾದ ಸಮಾಜವಾದಿಗಳಿಗೆ ಮಲೆನಾಡಿನ ಕೃಷಿವ್ಯವಸ್ಥೆಯ ಆಳವಾದ ಪರಿಜ್ಞಾನವಿರಲಿಲ್ಲ. ಉಳುವವ ಎಂಬ ಶಬ್ದದ ವಿಶಾಲ ಅರ್ಥದ ಕಡೆಗೆ ಇವರ ಗಮನವಿರಲಿಲ್ಲ. ಈ ಚಳುವಳಿ ಕಾಗೋಡು ಒಡೆಯರ ವಿರುದ್ಧವೇ ನಡೆಯಿತು. ಇವರಿಗಿಂತ ನಿಕೃಷ್ಟ, ನಿರ್ದಯಿ ಭೂಮಾಲೀಕರ ವಿರುದ್ಧ ಬೇರೆ ಬೇರೆ ಊರುಗಳಲ್ಲಿ ಸತ್ಯಾಗ್ರಹ ಮರುಕಳಿಸದೆ ಹೋಯಿತು. ಸತ್ಯಾಗ್ರಹದಲ್ಲಿ ಭಾಗವಹಿಸಿದ್ದ ಬೇರೆ ಬೇರೆ ತಾಲ್ಲೂಕಿನ ರೈತರಿಗೆ ತಮ್ಮ ಊರಲ್ಲಿಯೇ ಇರುವ ಜಮೀನುದಾರರ ವಿರುದ್ಧ ಹೋರಾಡಬೇಕು ಎಂಬ ಪ್ರಚೋದನಾಕಾರಿ ಹಂಬಲ ಬೆಳೆಯಲಿಲ್ಲ. ಕಾರಣ ಹೊರಗಿನಿಂದ ಬಂದ ಯುವ ಮುಂದಾಳುಗಳಿಗೆ ಬೇರೆ ಬೇರೆ ದೇಶದ ಕೃಷಿ ವ್ಯವಸ್ಥೆಯ ಬಗ್ಗೆ ಅರೆ ಬರೆ ಜ್ಞಾನ ಹೊಂದಿದ್ದರು. ಆದರೆ ಮಲೆನಾಡಿನ ಹಳ್ಳಿಗಳ ಬಗ್ಗೆ ಆಳವಾದ ಅರಿವು ಇರಲಿಲ್ಲ. ಗಾಂಧಿ, ಮಾರ್ಕ್ಸ್, ರಸೆಲ್, ಲೋಹಿಯಾ, ವಿನೋಬಾ ಭಾವೆ ಮುಂತಾದವರ ವಿಚಾರಕ್ರಾಂತಿಯ ವಿಚಿತ್ರ ಜ್ಞಾನವನ್ನು ಪಡೆದಿದ್ದರು. ಗ್ರಾಮೀಣ ಬದುಕು, ಅರ್ಥವ್ಯವಸ್ಥೆಯ ಬಗ್ಗೆ ಯಾವುದೇ ವಿವರಗಳನ್ನು ಇವರು ಪಡೆದಿರಲಿಲ್ಲ. ಗೋಪಾಲಗೌಡರು ಮತ್ತು ಕಾಂಗ್ರೆಸ್‌ನ ಕಡಿದಾಳ್ ಮಂಜಪ್ಪನವರು ಮುಂತಾದವರಿಗೆ ಜಮೀನುದಾರರ ದಬ್ಬಾಳಿಕೆ ಅರಿವು ಚೆನ್ನಾಗಿ ಇತ್ತು. ಕಡಿದಾಳ ಮಂಜಪ್ಪನವರು ಸಮಾಜವಾದಿ ಪಕ್ಷವು ಸಕ್ರಿಯವಾಗಿ ಭಾಗವಹಿಸಿದ ಮೇಲೆ ಹಿಂದೆ ಸರಿದರು. ಗೋಪಾಲಗೌಡರ ಬಂಧನವಾದ ಮೇಲೆ ಚಳುವಳಿ ಕಾವು ತಣ್ಣಗಾಗುತ್ತಾ ಬಂದಿತು.

ಸಮಾಜವಾದಿಗಳು ಹೆಚ್ಚಾಗಿ ಮಧ್ಯಮ ವರ್ಗದಿಂದ ಬಂದವರು. ಮೇಲುಜಾತಿಗಳಾದ ಬ್ರಾಹ್ಮಣ, ಲಿಂಗಾಯತ, ಒಕ್ಕಲಿಗ ಜಾತಿಗೆ ಸೇರಿದ ಜನರೇ ಜಾಸ್ತಿ. ಕೆಳವರ್ಗದವರ ಪಾಲು ಬಹಳ ಕಡಿಮೆ. ಈ ವರ್ಗದವರಿಗೆ ಹಸಿವು, ದಾರಿದ್ರ್ಯಗಳ ಸ್ವಾನುಭವ ಸಾಧ್ಯವೇ ಇಲ್ಲ. ವಿದ್ಯಾಭ್ಯಾಸದಿಂದಾಗಿ (ಇಂಗ್ಲಿಷ್) ಈ ವರ್ಗದ ಜನತೆ ತತ್‌ಕ್ಷಣ ಬದಲಾವಣೆಯನ್ನು ಬಯಸುತ್ತದೆ. ಅದು ಅಸಾಧ್ಯವಾದ ಮಾತು. ಸಾಗರದಲ್ಲಿ ಸೋಷಲಿಸ್ಟ್ ಪಕ್ಷ ಪ್ರಬಲವಾಗಿರಲಿಲ್ಲ. ಸಾಗರ ಪಟ್ಟಣದ ಮುನಿಸಿಪಲ್ ಕಾರ್ಮಿಕರ ಒಂದು ಸಣ್ಣ ಯೂನಿಯನ್ ಬಿಟ್ಟರೆ ಬೇರೆ ಯಾವ ಸಂಘಟನೆಯು ಇರಲಿಲ್ಲ. ಶಿವಮೊಗ್ಗ ಜಿಲ್ಲೆಯ ಸಮಾಜವಾದಿಗಳಲ್ಲಿ ಗೋಪಾಲಗೌಡರು ಈ ಚಳುವಳಿಯಲ್ಲಿ ಸಕ್ರೀಯವಾಗಿ ತಮ್ಮನ್ನು ತೊಡಗಿಸಿದರು. ಸಿ.ಜಿ.ಕೆ ರೆಡ್ಡಿಯವರು ಸಮಾಜವಾದಿ ಪಕ್ಷದ ಅಧ್ಯಕ್ಷರಾಗಿದ್ದರು. ಇವರು ಗೃಹಸಚಿವ ಟಿ.ಮರಿಯಪ್ಪನವರಿಗೆ ಕಾಗೋಡ ಹೋರಾಟದ ವಿಷಯವಾಗಿ ಸುದೀರ್ಘವಾದ ಪತ್ರವನ್ನು ಬರೆದು. ಕೆಲವು ನಿರ್ಧಾರಗಳನ್ನು ಮುಂದಿಟ್ಟರು. (ಡಾ.ಕಾಳೇಗೌಡ ನಾಗವಾರ, ಜಿ.ಪಿ.ಆನಂದಮೂರ್ತಿ, ೧೯೯೭, ಪುಟ ೪೯೩.)

೧. ಕಾಗೋಡು ಸತ್ಯಾಗ್ರಹದಲ್ಲಿ ಬಂಧಿತರಾಗಿರುವವರನ್ನೆಲ್ಲ ಕೂಡಲೇ ಬಿಡುಗಡೆ ಮಾಡಬೇಕು. ಮತ್ತು ಕುಂಟು ನೆಪಗಳ ಮೇಲೆ ಅವರ ಮೇಲೆ ಹೂಡಿರುವ ಮೊಕದ್ದಮೆಗಳನ್ನು ತಕ್ಷಣವೇ ವಾಪಸು ಪಡೆಯಬೇಕು.

೨. ಧಾನ್ಯ ವಸೂಲಿಯ ಸಂಬಂಧದಲ್ಲಿ ನಡೆದ ಅತ್ಯಾಚಾರಗಳ ಬಗ್ಗೆ ತನಿಖೆ ಆಗಬೇಕು. ಜಮೀನುದಾರರ ಪರವಾಗಿ ರೆವಿನ್ಯೂ ಅಧಿಕಾರಿಗಳು ಗೇಣಿದಾರರಿಂದ ವಸೂಲು ಮಾಡಿರುವ ಭತ್ತವನ್ನು ಆಯಾ ರೈತರಿಗೆ ಕೊಡಬೇಕು. ಅಂಥ ಅಧಿಕಾರಿಗಳ ಮೇಲೆ ಸೂಕ್ತ ಕ್ರಮ ಕೈಗೊಳ್ಳಬೇಕು.

೩. ಕಾಗೋಡು ಗ್ರಾಮದಲ್ಲಿ ಇಟ್ಟಿರುವ ಪೋಲಿಸು ಪಡೆಯನ್ನು ಕೂಡಲೇ ಹಿಂತೆಗೆಯಬೇಕು

೪. ರೈತರಿಂದ ಪೋಲಿಸರು ಹಾಗೂ ಜಮೀನುದಾರರು ಕಿತ್ತಿಟ್ಟುಕೊಂಡಿರುವ ವ್ಯವಸಾಯದ ಉಪಕರಣಗಳನ್ನು ಕೂಡಲೇ ವಾಪಾಸು ಮಾಡಬೇಕು.

೫. ಸರಕಾರ ಗೇಣಿದಾರರನ್ನು ಒಕ್ಕಲೆಬ್ಬಿಸದಂತೆ ತುರ್ತು ಶಾಸನ ಮಾಡಬೇಕು.

ಸೋಷಲಿಸ್ಟ್ ಪಕ್ಷದ ಸಿ.ಜಿ.ಕೆ.ರೆಡ್ಡಿ ಮತ್ತು ಗೋಪಾಲಗೌಡರು ಪರೋಕ್ಷ ಮತ್ತು ಪ್ರತ್ಯಕ್ಷವಾಗಿ ಕಾಗೋಡು ಸತ್ಯಾಗ್ರಹಕ್ಕೆ ಬೆಂಬಲ ನೀಡಿದರು. ೧೯೪೮ರ ಜನವರಿಯಲ್ಲಿ ಆರಂಭವಾದ ಸಾಗರ ತಾಲ್ಲೂಕು ರೈತಸಂಘ ೧೯೫೧ರ ಏಪ್ರಿಲ್ ತಿಂಗಳಲ್ಲಿ ಕಾಗೋಡು ಸತ್ಯಾಗ್ರಹವನ್ನು ಪ್ರಾರಂಭಿಸುವವರೆಗೂ ತನ್ನ ಸಭೆಗಳಿಗೆ ಅನೇಕ ಬಾರಿ ಗೋಪಾಲಗೌಡರನ್ನು ಆಹ್ವಾನಿಸಿತು. ಗೋಪಾಲಗೌಡರು ಸತ್ಯಾಗ್ರಹದ ಉದ್ದಕ್ಕೂ ತಮ್ಮನ್ನು ತಾವು ತೊಡಗಿಸಿಕೊಂಡರು.

೧೯-೫-೫೧ರಂದು ಸಮಾಜವಾದಿ ಪಕ್ಷದ ಕಾರ್ಯದರ್ಶಿಗಳಾಗಿದ್ದ ಜಿ.ಸದಾಶಿವರಾಯರು ಕಾಗೋಡಿಗೆ ತೆರಳಿ, ಐದು ಜನ ರೈತರೊಂದಿಗೆ ಸತ್ಯಾಗ್ರಹ ಆಚರಿಸಿ ಬಂಧಿಸಲ್ಪಟ್ಟರು. ೩೦-೫-೫೧ರಂದು ಶಿವಮೊಗ್ಗೆಯ ಪ್ರಸಿದ್ಧ ಸಮಾಜವಾದಿ ಎಸ್.ರಾಮಯ್ಯನವರೂ ಕಾಗೋಡಿಗೆ ತೆರಳಿ ಆರು ಜನ ರೈತರೊಡನೆ, ಸತ್ಯಾಗ್ರಹ ಮಾಡಿ ಜೈಲು ಸೇರಿದರು.

೨೦-೫-೧೯೫೧ರಂದು ಕಾಗೋಡಿನಲ್ಲಿ ರೈತರ ಸಭೆಗೆ ಗೋಪಾಲಗೌಡರು ಮತ್ತು ಗಣಪತಿಯಪ್ಪನವರು ಭಾಷಣ ಮಾಡಿ ಇಲ್ಲಿಯವರೆಗೆ ನಡೆದುಬಂದ ವಿದ್ಯಮಾನಗಳನ್ನು ಚರ್ಚಿಸಿ. ರೈತಸಂಘ ಮತ್ತು ಸಮಾಜವಾದಿ ಪಕ್ಷಗಳೆರಡು ಸೇರಿ ಸತ್ಯಾಗ್ರಹ ನಡೆಸಬೇಕೆಂದು ತೀರ್ಮಾನಿಸಲಾಯಿತು.

ದಿನಾಂಕ ೨೨-೫-೧೯೫೧ರಂದು ದಾವಣಗೆರೆಯ ಸಮಾಜವಾದಿ ವಕೀಲ. ಕೆ.ವೀರಭದ್ರಪ್ಪ ಮತ್ತು ಶಿವಮೊಗ್ಗದ ವಕೀಲ ಎಸ್.ಜಿ.ಗೋವಿಂದಪ್ಪನವರು ಮತ್ತು ಮೂವತ್ತು ಜನ ರೈತರೊಡನೆ ಗಣಪತಿಯಪ್ಪನವರ ನಾಯಕತ್ವದಲ್ಲಿ ಕಾಗೋಡಿಗೆ ತೆರಳಿ ಸತ್ಯಾಗ್ರಹ ಮಾಡಿ ಬಂಧಿಸಲ್ಪಟ್ಟು ಸೆರೆಮನೆ ಸೇರಿದರು.

ಪ್ರತಿದಿನವೂ ಈ ರೀತಿ ಚಳುವಳಿಗಾರರು ಕಾಗೋಡಿಗೆ ತೆರಳಿ ರೈತರೊಡನೆ ಸೇರಿ ಸತ್ಯಾಗ್ರಹಕ್ಕೆ ಇಳಿಯುವುದು, ಬಂಧಿಸುವುದು ನಡೆಯಿತು. ಪತ್ರಿಕೆಗಳಲ್ಲಿ ಪರ-ವಿರೋಧ ಸುದ್ದಿಗಳೂ ಪ್ರಕಟಗೊಂಡು ಜನರಲ್ಲಿ ಜಾಗೃತಿ ಮೂಡಿಸಿದವು. ಸರ್ಕಾರದ ನಿಲುವಿನಲ್ಲಿ ಮತ್ತಷ್ಟು ಬಿಗುವು ಹೆಚ್ಚಿತು.

ಸಿದ್ದಾಪುರ ತಾಲ್ಲೂಕಿನ ಕೋಲಸಿರ್ಸಿಯ ನೂರಾರು ರೈತರನ್ನು ಕರೆದುಕೊಂಡು ಮಲೆನಾಡು ರೈತಸಂಘ ಪ್ರಧಾನ ಕಾರ್ಯದರ್ಶಿ ಬಸವಾನಿ ರಾಮಶರ್ಮರೂ ದಿನಾಂಕ ೫-೬-೧೯೫೧ರಂದು ಕಾಗೋಡಿಗೆ ತೆರಳಿ

ಸತ್ಯಾಗ್ರಹದಲ್ಲಿ ಭಾಗವಹಿಸಿ ಬಂಧನಕ್ಕೆ ಒಳಗಾದರು. ಗೋಪಾಲಗೌಡರ ಬೆಂಬಲಿಗರಾದ ಅವರದೆ ಊರಿನವರಾದ ಆರಗದಿಂದ ಎಸ್. ನಾರಾಯಣಮೂರ್ತಿ, ಶಾಂತವೇರಿ ಧರ್ಮಣ್ಣ, ಸೂರಣ್ಣ, ದಾವೂದ್ ಸಾಹೇಬ್, ಕಾಳಮ್ಮನ ಗುಡಿ ವೆಂಕಟರಮಣ, ಕೋಣಂದೂರು ಕಡೆಯಿಂದ ಆರಗದ ದೇವರ ಗುಡಿ ಕೃಷ್ಣಪ್ಪ, ಕರಿಯೋಗಣ್ಣಗೌಡ, ಗೂರನ ಮನೆ ನಾಗಪ್ಪ, ಪೇಟೆಯ ವಿಠಲ್ ಶೆಟ್ಟರು, ಹಾದಿಗಲ್ಲು ರಾಮಣ್ಣ, ಹರಿಜನರ ಮುಖಂಡ ನಾಗಣ್ಣ, ಗುಬ್ಬಿಗದ ಸುಬ್ಬಯ್ಯ, ಅರಳಾಪುರದ ಬೀರಪ್ಪ, ಕೋಲಿಗೆ ಶಿವಪ್ಪ, ಗುತ್ತೆಕೊಪ್ಪದ ಸಂಜೀವ ಶೆಟ್ಟಿ ಮುಂತಾದ ಸೋಷಲಿಸ್ಟ್ ಕಾರ್ಯಕರ್ತರು ಕಾಗೋಡು ಸತ್ಯಾಗ್ರಹದಲ್ಲಿ ಭಾಗವಹಿಸಿದರು.

ಸಾಗರಕ್ಕೆ ಡಾ.ರಾಮಮನೋಹರ ಲೋಹಿಯಾರವರು ದಿನಾಂಕ ೧೩-೬-೧೯೫೧ರಂದು ಜೈಲಿಗೆ ಭೇಟಿಕೊಟ್ಟು, ಗಣಪತಿಯಪ್ಪ ಮುಂತಾದವರಿಗೆ ಸಾಂತ್ವನ ಹೇಳಿ ಬೆಂಬಲ ಸೂಚಿಸಿದರು. ಸಾಗರದ ಗಾಂಧಿ ಮೈದಾನದಲ್ಲಿ ಸೇರಿದ್ದ ಭಾರಿ ಸಭೆಯನ್ನುದ್ದೇಶಿಸಿ ಭಾಷಣ ಮಾಡಿ, ಜಮೀನುದಾರರ ನಿಲುವನ್ನು, ರೈತರ ಮೇಲೆ ನಡೆಯುತ್ತಿರುವ ದೌರ್ಜನ್ಯವನ್ನು ಖಂಡಿಸಿದರು. ಅಧಿಕ ಸಂಖ್ಯೆಯ ಬೆಂಬಲಿಗರೊಡನೆ ಕಾಗೋಡಿಗೆ ತೆರಳಿ, ಸರ್ಕಾರದ ತಡೆಯನ್ನು ಮುರಿದು ಭೂಮಿ ಪ್ರವೇಶ ಮಾಡಿದರು. ಸರ್ಕಾರ ಲೋಹಿಯಾರವರನ್ನು ಮತ್ತು ಜೊತೆಗಿದ್ದವರನ್ನು ಬಂಧಿಸಿತು. ಕಾಗೋಡು ರೈತರ ಮೇಲೆ ಪೋಲೀಸರ ದೌರ್ಜನ್ಯಗಳು ಹೆಚ್ಚಿದವು. ಶಾಂತವೇರಿ ಗೋಪಾಲಗೌಡರು ಮತ್ತು ಗರುಡಶರ್ಮರು ಬಂಧನದ ವಾರಂಟಿಗೆ ತಲೆತಪ್ಪಿಸಿಕೊಂಡು ಕಾಗೋಡು ಸುತ್ತಮುತ್ತ ಹಳ್ಳಿಗಳಲ್ಲಿ ಸಂಚರಿಸಿ ರೈತರನ್ನು ಸಂಘಟಿಸಿ ಸತ್ಯಾಗ್ರಹ ಜೀವಂತವಾಗಿರಲು ಶ್ರಮಿಸಿದರು. ಬಿಹಾರದ ಪ್ರಸಿದ್ಧ ರೈತ ನಾಯಕ ರಾಮನಂದ ಮಿಶ್ರರವರು ಸಾಗರಕ್ಕೆ ಬಂದು ರೈತ ಹೋರಾಟ ವನ್ನು ಬೆಂಬಲಿಸಿ, ರೈತರನ್ನು, ಚಳುವಳಿಗಾರರನ್ನು ಹುರಿದುಂಬಿಸಿದರು. ೩-೭-೫೧ರಂದು ಗೋಪಾಲಗೌಡರು ಮತ್ತು ಗರುಡಶರ್ಮರನ್ನು ಬಂಧಿಸಿದರು.

ದಿನಾಂಕ ೧೧-೭-೫೧ರಂದು ಎಸ್.ಕೆ.ಸೀತಾರಾಮಯ್ಯಂಗಾರ್‌ರವರು, ಸಾಗರದಲ್ಲಿ ರೈತರ ಭಾರಿ ಮೆರವಣಿಗೆಯನ್ನು ಮಾಡಿ ಭೂಮಾಲೀಕರ ಮತ್ತು ಸರ್ಕಾರದ ವಿರುದ್ಧ ಪ್ರತಿಭಟಿಸಿ ಇವರಿಬ್ಬರ ನಿಲುವನ್ನು ಖಂಡಿಸಿದರು. ಕಾಂಗ್ರೆಸ್ ಅಧಿವೇಶನ ದಿನಾಂಕ ೧೮-೭- ೫೧ರಂದು ಬೆಂಗಳೂರಿನಲ್ಲಿ ಹಮ್ಮಿಕೊಳ್ಳಲಾಗಿತ್ತು. ರೈತರು ಅಲ್ಲಿಗೂ ತೆರಳಿ ಪ್ರತಿಭಟನೆ ವ್ಯಕ್ತಪಡಿಸಿದರು. ಸೊರಬ ತಾಲ್ಲೂಕಿನ ಸಾವಿರಾರು ರೈತರು ಚಳುವಳಿಯಲ್ಲಿ ಭಾಗವಹಿಸಿದರು. ೧೦-೮-೫೧ರಂದು ಸೊರಬದಿಂದ ಸಾಗರಕ್ಕೆ ಬಂದು ಪ್ರತಿಭಟನೆ ಮಾಡಿ ಕಾಗೋಡಿಗೆ ತೆರಳಿದರು. ಕಾಗೋಡಿನಲ್ಲಿದ್ದ ಪೋಲಿಸರು ಇವರನ್ನೆಲ್ಲ ಬಂಧಿಸಿ ರಾತ್ರಿ ದೂರದ ಕಾಡಿನ ಸಮೀಪ ಬಿಟ್ಟು ಬಂದರು. ಸತ್ಯಾಗ್ರಹಿಗಳನ್ನು ಬಂಧಿಸಿ ಇಡಲು ಸಾಗರದಲ್ಲಿ ಜೈಲುಗಳು ತುಂಬಿಹೋಗಿದ್ದವು. ಶ್ರೀಗಂಧದ ಸಂಕೀರ್ಣದಲ್ಲಿ (ಗಂಧದ ಕೋಟೆ) ಕೆಲ ರೈತರನ್ನು ಬಂಧಿಸಿದರು. ಸತ್ಯಾಗ್ರಹಿಗಳು ದಿನೇ ದಿನೇ ಜಾಸ್ತಿಯಾದಂತೆ ಅವರನ್ನು ದೂರದ ಊರಿಗೆ ತೆಗೆದುಕೊಂಡು ಹೋಗಿ ಬಿಡಲಾಗುತ್ತಿತ್ತು.

ಜಯಪ್ರಕಾಶ್ ನಾರಾಯಣ್‌ರವರು ಸಾಗರಕ್ಕೆ ದಿನಾಂಕ ೨೧-೫-೧೯೫೧ರಂದು ಬಂದರು. ಸಾಗರದಲ್ಲಿ ಇವರಿಗೆ ಅಭೂತಪೂರ್ವ ಸ್ವಾಗತ ಲಭಿಸಿತು. ಇವರ ಆಗಮನದಿಂದ ರೈತರಲ್ಲಿ ಹೊಸಹುರುಪು ಬಂದಿತು. ಜೆ.ಪಿ.ಯವರು ಸಾರ್ವಜನಿಕ ಸಭೆಯಲ್ಲಿ ಕಾಗೋಡು ರೈತ ಹೋರಾಟವನ್ನು ಬೆಂಬಲಿಸಿ ಮಾತನಾಡಿದರು.

ಗಣಪತಿಯಪ್ಪನವರು ಹೇಳುವಂತೆ 'ಇವರು ನಾವಿದ್ದ ಜೈಲಿಗೆ ಬಂದು ಎಲ್ಲಾ ಸತ್ಯಾಗ್ರಹಿಗಳನ್ನು ಮಾತನಾಡಿಸಿದರು. ನಿಮ್ಮ ಹೋರಾಟದ ವಿಷಯ ಇಡೀ ದೇಶಕ್ಕೆ ತಿಳಿದಿದೆ ನೀವೇನು ಚಿಂತೆ ಮಾಡಬೇಕಾಗಿಲ್ಲ. ನಿಮಗೆ ಜಯ ಸಿಕ್ಕೇ ಸಿಗುತ್ತದೆ' ಎಂದು ಹೇಳಿದರು. ಅದೊಂದು ಅವಿಸ್ಮರಣೀಯ ದಿನ ಎಂದು ಗಣಪತಿಯಪ್ಪನವರು ಹೇಳುತ್ತಾರೆ.

ಅನೇಕ ಪ್ರಮುಖ ನಾಯಕರ ಭೇಟಿಯಿಂದಾಗಿ ಕಾಗೋಡು ಸತ್ಯಾಗ್ರಹ ದೇಶವ್ಯಾಪ್ತ ವ್ಯಾಪಿಸಿತು. ಎಲ್ಲಾ ಕಡೆಯಿಂದಲು ರೈತರಿಗೆ ಬೆಂಬಲ ಸಿಗಲು ಪ್ರಾರಂಭವಾಯಿತು. ರೈತರ ಹೋರಾಟ ಹಿಂಸಾತ್ಮಕವಾಗಿರದೆ ಅಹಿಂಸಾತ್ಮಕವಾಗಿತ್ತು. ಈ ರೀತಿಯ ಹೋರಾಟ ದೇಶದಲ್ಲಿ ಮಾದರಿಯಾಯಿತು. ಗಾಂಧೀಯವರ ಹೋರಾಟದ ಮಾದರಿಯನ್ನು ಅನುಸರಿಸಿದ ಕೀರ್ತಿ ಕಾಗೋಡು ಹೋರಾಟಕ್ಕಿದೆ.

## ಸಂಧಾನಗಳು

೧೯೫೧ನೇ ಏಪ್ರಿಲ್ ೧೧ ರಂದು ಮುಂಜಾನೆ ಅಧಿಕೃತವಾಗಿ ಕಾಗೋಡು ಒಡೆಯರ ಜಮೀನಿನಲ್ಲಿ ತಾಲ್ಲೂಕು ರೈತ ಸಂಘದವರಿಂದ ಸತ್ಯಾಗ್ರಹ ಪ್ರಾರಂಭವಾಯಿತು. ಗೇಣಿರೈತರು ಮತ್ತು ಭೂಒಡೆಯರ ಮಧ್ಯೆ ಗೇಣಿ ಕೊಡುವುದರ ಬಗ್ಗೆ ಕೆಲವು ನ್ಯಾಯಯುತವಾದ ಬೇಡಿಕೆಗಳಿದ್ದವೆ ವಿನಃ 'ಉಳುವವನೆ ಹೊಲ ದೊಡೆಯ' ಎಂಬ ಬೇಡಿಕೆ ಇರಲಿಲ್ಲ. ಗೇಣಿಯ ರೂಪದಲ್ಲಿ ಕಾಗೋಡು ಗೌಡರು ನಿಗದಿ ಮಾಡಿದ ಭತ್ತ ಮತ್ತು ಅದನ್ನು ಅಳೆಯುವ ಸಾಧನ ಕೊಳಗದ ವಿರುದ್ಧದ ಹೋರಾಟ ಇದಾಗಿತ್ತು. ಈ ದೀರ್ಘ ಹೋರಾಟ ಮಧ್ಯಕ್ಕೂ ಅನೇಕ ಸಂಧಾನಗಳು, ಮಾತುಕತೆಗಳು ನಡೆದವು. ಅವುಗಳೆಲ್ಲಾ ಕಾಗೋಡು ಗುರುವೇ ಗೌಡರ ಬಿಗು ನಿಲುವಿನಿಂದಾಗಿ ಸಂಧಾನಗಳು ಮುರಿದು ಬಿದ್ದವು.

ಡಿ.ಮೂಕಪ್ಪನವರು ಮತ್ತು ಮರತ್ತೂರಿನ ಕಗ್ಗರಾಮನಾಯ್ಕರು ಜೊತೆಗೂಡಿ ಸಾಗರ ತಹಸೀಲ್ದಾರರಾಗಿದ್ದ ನಂದೀಶ್ವರರ ಜೊತೆಗೂಡಿ ದಿನಾಂಕ ೨೧-೪-೧೯೫೧ರಂದು ಕಾಗೋಡಿಗೆ ಬಂದು ಜಮೀನುದಾರರು ಮತ್ತು ರೈತರಿಗೂ ರಾಜೀ ಮಾಡುವ ಪ್ರಯತ್ನವನ್ನು ತಹಸೀಲ್ದಾರರು ಮಾಡಿದರು. ಸರ್ಕಾರದ ಪೂರ್ಣ ಬೆಂಬಲ ಪಡೆದು ಕಾಗೋಡು ಗೌಡರು ಸಂಧಾನಕಾರರಿಗೆ ಅವಮಾನವಾಗುವಂತೆ ಮಾತನಾಡಿ ಹಿಂದಕ್ಕೆ ಕಳುಹಿಸಿದರು.

ಶ್ರೀಯುತ ಗಣಪತಿಯಪ್ಪನವರು ದಿನಾಂಕ ೩೦-೪-೧೯೫೧ರಂದು ಜೋಗಕ್ಕೆ ಬಂದಿದ್ದ ಐ.ಜಿ.ಪಿ. ಯವರನ್ನು ಕಂಡು ಕಾಗೋಡು ಪರಿಸ್ಥಿತಿ ಬಗ್ಗೆ ಮಾತನಾಡಿದರು. ಐ.ಜಿ.ಪಿ.ಯವರು ಸಾವಧಾನದಿಂದ ಗಣಪತಿಯಪ್ಪನವರು ಹೇಳಿದ್ದನ್ನೆಲ್ಲಾ ಕೇಳಿ ಸಹಾನುಭೂತಿ ವ್ಯಕ್ತಪಡಿಸಿದರು. ರೈತ ಹೋರಾಟಕ್ಕೆ ಯಾವುದೇ ಪ್ರತಿಕ್ರಿಯೆ ವ್ಯಕ್ತಪಡಿಸಲಿಲ್ಲ. ಗಣಪತಿಯಪ್ಪನವರ ಮೇಲೆ ವಾರೆಂಟ್ ಇದ್ದರೂ ಬಂಧಿಸದೆ ಬಿಟ್ಟಿದ್ದು ಒಂದು ವಿಶೇಷವೇ ಆಗಿತ್ತು.

೧೭-೫-೫೧ರಂದು ಶಿವಮೊಗ್ಗದ ಸರ್ಕ್ಯೂಟ್ ಹೌಸಿನಲ್ಲಿ ಕಾಗೋಡು ವಿವಾದದ ಬಗ್ಗೆ ಸರಕಾರ ಒಂದು ಸಂಧಾನ ಸಭೆಯನ್ನು ಕರೆಯಿತು. ಸಂಧಾನದಲ್ಲಿ ರಾಜ್ಯದ ರೆವಿನ್ಯೂ ಕಮಿಷನರು ಬಳ್ಳಾಡಕೆರೆ ಇಲಾಖೆಯ ಉಪಕಾರ್ಯದರ್ಶಿಗಳು, ಶಿವಮೊಗ್ಗ ಜಿಲ್ಲೆಯ ಕಲೆಕ್ಟರ್, ಗುರುವಯ್ಯ ಗೌಡರು, ಕವಿದಾಳ್ ಮಂಜಪ್ಪ,

ಗಣಪತಿಯಪ್ಪ ಮತ್ತು ಮೂಕಪ್ಪ ಭಾಗವಹಿಸಿದ್ದರು. ಗುರುವಯ್ಯ ಗೌಡರು ಕೊಳಗದ ಅಳತೆಯ ವಿಷಯದಲ್ಲಿ ಯಾವ ರಾಜೀ ಮಾತುಕತೆಗೆ ಸಿದ್ಧರಿರಲಿಲ್ಲ. ಒಕ್ಕಲುಗಳಿಗೆ ಭೂಮಿ ಬಿಟ್ಟು ಕೊಡುವುದಕ್ಕೂ ಸಿದ್ಧರಿರಲಿಲ್ಲ. ಬಿತ್ತನೆ ಕಾಲ ಬೇರೆ. ಈ ಸಮಯದಲ್ಲಿ ಭೂಮಿ ಹದಗೊಳಿಸಿ ಬಿತ್ತನೆ ಕಾರ್ಯ ಮಾಡದಿದ್ದರೆ ರೈತರು ವರ್ಷವಿಡಿ ಊಟಕ್ಕೆ ಪರದಾಡುವ ಸ್ಥಿತಿ ನಿರ್ಮಾಣವಾಗುತ್ತದೆ. ಈ ನಿಟ್ಟಿನಲ್ಲಿ ರೈತ ಸಂಘದವರು ಗುರುವಯ್ಯ ಗೌಡರಿಗೆ ರೈತರಿಗೆ ಬಿತ್ತನೆ ಮಾಡಲು ರೈತರಿಗೆ ಅವಕಾಶ ಕೊಡಿ ಉಳಿದಿದ್ದನ್ನು ಚರ್ಚಿಸೋಣ ಎಂದರು. ಅದಕ್ಕೆ ಗೌಡರು 'ಕಾಗೋಡು ರೈತರಿಗೆ ಒಂದು ದಿನದ ಮಟ್ಟಿಗೂ ಭೂಮಿ ಬಿಟ್ಟುಕೊಡುವುದಿಲ್ಲ' ಎಂದರು. ಒಂದು ಎಕರೆಯ ಜಮೀನಿನಲ್ಲಿ ಅರ್ಧ ಎಕರೆ ಜಮೀನನ್ನು ರೈತರಿಗೆ ಬಿಟ್ಟು ಕೊಡಿ ಎಂದು ರೈತ ಸಂಘದವರು ಕೇಳಿದ್ದಕ್ಕೆ ಗುರುವಯ್ಯ ಗೌಡರು 'ಒಂದು ಇಂಚು ನೆಲವನ್ನೂ ಬಿಡುವುದಿಲ್ಲ ಅದು ನನ್ನ ಕೈಯಲ್ಲೂ ಇಲ್ಲ. ಅದನ್ನು ಬೇರೆಯವರಿಗೆ ಕರಾರು ಮಾಡಿದ್ದೇನೆ. ಜಮೀನು ಬಿಟ್ಟುಕೊಡಿ ಎಂದು ಕೇಳುವುದಕ್ಕೆ ಅದು ಯಾರಪ್ಪನ ಸ್ವತ್ತು ಅಲ್ಲ' ಎಂದು ಉಡಾಫೆ ಮಾತನಾಡಿದರು. ತದನಂತರ ಗೌಡರು ಭೂಮಿಯನ್ನ ಒಕ್ಕಲುಗಳಿಗೆ ಬಿಟ್ಟುಕೊಡಲು ಒಪ್ಪಿದರು. ಆದರೆ ಒಕ್ಕಲುಗಳು ಮಾಡಿಕೊಂಡಿದ್ದ ಜಮೀನಿನಲ್ಲಿ ೨೦ ಎಕರೆ ಭೂಮಿಯನ್ನು ಸ್ವಂತ ಸಾಗುವಳಿ ಮಾಡಲು ಇಟ್ಟುಕೊಳ್ಳುವುದಾಗಿ ಹೇಳಿದರು. ರೈತ ಸಂಘದವರು ಉಭಯ ಸಂಕಟಕ್ಕೆ ಸಿಲುಕಿದರು. ಯಾವ ಒಕ್ಕಲಿನ ಭೂಮಿಯನ್ನು ಬಿಡಿಸಿಕೊಡುವುದು ಅವರಿಗೆ ಪರ್ಯಾಯ ಮಾರ್ಗವೇನು ಎಂಬುದರ ಬಗ್ಗೆ ಚರ್ಚಿಸಿ ಈ ತೀರ್ಮಾನಕ್ಕೆ ಒಪ್ಪುವುದು ತಮ್ಮಿಂದಾದ ಕೆಲಸವಲ್ಲ ಎಂದು ತಿಳಿಸಿದರು. ಈ ಸಂದರ್ಭದಲ್ಲಿ ಸರಕಾರದ ಪ್ರತಿನಿಧಿಗಳು ಕಾಗೋಡು ಒಕ್ಕಲು ಕಾಗೋಡು ಗೌಡರ ಜಮೀನನ್ನು ಪೂರ್ತಿ ಬಿಡುವುದಾದರೆ, ಸರಕಾರ ಕಾಗೋಡಿನದಕ್ಕಿಂತಲೂ ಒಳ್ಳೆಯದಾದ, ಫಲವತ್ತಾದ, ನೀರಾವರಿ ಇರುವ ದರಖಾಸ್ತು ಜಮೀನನ್ನು ಸಾಗರ ತಾಲ್ಲೂಕಿನ ಕೆಂಜಿಗಾಪುರ ಎಂಬ ಹಳ್ಳಿಯಲ್ಲಿ ಕೊಡುವುದಾಗಿ ಹೇಳಿದರು. ಕಾಗೋಡಿನಲ್ಲಿ ಮಾಡಿಕೊಂಡಿದ್ದ ಜಮೀನಿನಷ್ಟೆ ಭೂಮಿಯನ್ನು ಕೆಂಜಿಗಾಪುರದಲ್ಲಿ ಕೊಡಿಸುವುದು ಮತ್ತು ಸಾಗಾಣಿಕೆ ವೆಚ್ಚವನ್ನು ಭರಿಸಲಾಗುತ್ತದೆ ಎಂದು ತಿಳಿಸಿದರು.

ಈ ಸಂಧಾನವು ಮುರಿದು ಬಿತ್ತು. ಒಂದೆರಡು ದಿನಗಳಲ್ಲಿ ಸತ್ಯಾಗ್ರಹದಿಂದ ದೂರ ಉಳಿಯುವುದಾಗಿ ಕಡಿದಾಳು ಮಂಜಪ್ಪನವರು ಒಂದು ಪತ್ರಿಕಾ ಹೇಳಿಕೆ ನೀಡಿದರು. 'ಕಾಗೋಡಿನ ರೈತರೆಲ್ಲರೂ ಭೂಮಿ ಬಿಡುವುದಕ್ಕೆ ರೈತರ ಪರವಾಗಿ ತಾವು ಒಪ್ಪಿಕೊಳ್ಳುತ್ತೇವೆ ಎಂದು ಗಣಪತಿಯಪ್ಪ ಮತ್ತು ಮೂಕಪ್ಪ ತಿಳಿಸಿದರು. ಆದರೆ ಅವರು ಕೆಂಜಿಗಾಪುರದ ಜಮೀನಿನ ಸರ್ವೇನಂಬರುಗಳನ್ನು ತಿಳಿಸುವುದಾಗಿ ಹೇಳಿ ಹೋದವರು ಬರಲಿಲ್ಲ' ಈ ಮಾತುಗಳನ್ನು ಗಣಪತಿಯಪ್ಪನವರು ನಿರಾಕರಿಸುತ್ತಾರೆ. ನಾನು ಮತ್ತು ಮೂಕಪ್ಪನಾಗಲಿ ಶರಣಾಗತಿಯ ಪ್ರಸ್ತಾಪ ಮುಂದಿಟ್ಟವರು ನಾವಲ್ಲ. ಕಲೆಕ್ಟರ್ ಸಾಹೇಬರು, ನಾವು ಇದಕ್ಕೆ ಒಪ್ಪಲಿಲ್ಲ ಎಂದು ಹೇಳುತ್ತಾರೆ. ಗಣಪತಿಯಪ್ಪನವರೆ ಬರೆದಿರುವ 'ಕಾಗೋಡು ರೈತ ಸತ್ಯಾಗ್ರಹ ಮತ್ತು ಗೋಪಾಲಗೌಡರು' (ಡಾ.ಕಾಳೇಗೌಡ ನಾಗವಾರ, ಜಿ.ವಿ.ಆನಂದಮೂರ್ತಿ, ೧೯೯೭, ಪುಟ ೧೪೬) ಎಂಬ ಲೇಖನದಲ್ಲಿ ಸಂಧಾನದಲ್ಲಿ ಸರ್ಕಾರಿ ಅಧಿಕಾರಿಗಳು ತಿಳಿಸಿದಿಷ್ಟು. ೧. ಬಂಧನದಲ್ಲಿರುವ ಸತ್ಯಾಗ್ರಹಿಗಳನ್ನೆಲ್ಲಾ ಬಿಟ್ಟು ಬಿಡುತ್ತೇವೆ. ೨. ಭೂಮಾಲಿಕರಿಗೆ ಅವರ ಭೂಮಿಯನ್ನು ಕೊಟ್ಟು, ರೈತರಿಗೆ ಪುನರ್ವಸತಿಯ ಸೌಲಭ್ಯವನ್ನು ಕಲ್ಪಿಸಿ ಕೊಡಲಾಗುವುದು. ನಮ್ಮ ಪರವಾಗಿ ನಾಯಕತ್ವವಹಿಸಿದ ಸದಾ ರೈತರ ಹಿತವನ್ನೇ ಚಿಂತಿಸುತ್ತಿದ್ದ

ಅವರ ಮನಸ್ಸಿಗೆ ನೋವು ಉಂಟುಮಾಡುವುದು ಸಾಧ್ಯವಿರಲಿಲ್ಲ. ಸರ್ಕಾರದ ಪ್ರತಿನಿಧಿಗಳ ಮಾತಿನಿಂದ ಭೂಮಾಲಿಕರು ಮತ್ತಷ್ಟು ಬಿಗುವಾದರು. ಅವರ ದರ್ಪಕ್ಕೆ ಪ್ರತಿ ಉತ್ತರ ನೀಡುವ ಸಾಮರ್ಥ್ಯ ರೈತ ಸಂಘಕ್ಕೆ ಇರಲಿಲ್ಲ. ಸಂಕಟದಿಂದ ಕೂಡಿದ ನಮ್ಮ ಅಸಹಾಯಕ ಪರಿಸ್ಥಿತಿಯ ಮೌನವನ್ನು ಶರಣಾಗತಿಯ ಒಪ್ಪಿಗೆಯೆಂದೇ ಅಧಿಕಾರಿಗಳು ತಿಳಿದಿರಬಹುದು. ಈ ರೀತಿ ಹೇಳಿದ್ದಾರೆ.

ಇದರ ನಂತರ ಸೋಷಲಿಸ್ಟರು ಸಾಗರ ರೈತ ಸಂಘದವರೊಂದಿಗೆ ಸೇರಿ ಸತ್ಯಾಗ್ರಹ ಹೂಡಬೇಕೆಂದು ನಿರ್ಣಯ ಮಾಡಿರುವುದಾಗಿ, ಮಲೆನಾಡು ರೈತ ಸಂಘದವರೇ ನಿಸ್ಸಹಾಯಕತೆಯಿಂದ ಜಮೀನು ಬಿಟ್ಟುಕೊಡುವ ನಿರ್ಧಾರಕ್ಕೆ ಬಂದರೆಂದು ಸೋಷಲಿಸ್ಟರು ಅಪಪ್ರಚಾರದಲ್ಲಿ ತೊಡಗಿದರು. (ಪ್ರಜಾವಾಣಿ ೩೧-೫-೫೧ ಕಡಿದಾಳ್ ಮಂಜಪ್ಪನವರ ಪತ್ರಿಕಾ ಹೇಳಿಕೆ)

ಕಾಗೋಡು ಹೋರಾಟದ ಆರಂಭದಲ್ಲಿಯೇ ಮುರುಟಿ ಹೋಗುವಂತ ಇಂತಹ ಇಕ್ಕಟ್ಟಿನ ಪರಿಸ್ಥಿತಿ ನಿರ್ಮಾಣವಾದಾಗ ಸೋಷಲಿಸ್ಟರ ಪ್ರವೇಶದಿಂದಾಗಿ ಮರುಜನ್ಮ ಪಡೆಯಿತು. 'ಮೂಕಪ್ಪ ಗೌಡರು ಹೇಳುವ ಪ್ರಕಾರ ಶಿವಮೊಗ್ಗದಲ್ಲಿ ಈ ಸಂಧಾನ ನಡೆದ ದಿನ ರಾತ್ರಿಯೇ ಆಕಸ್ಮಾತಾಗಿ ಗೋಪಾಲಗೌಡರು ಇವರಿಗೆ ಸಿಕ್ಕಿದರು. (ಮೂಕಪ್ಪ ಮತ್ತು ಗಣಪತಿಯಪ್ಪ) ಇವರಿಬ್ಬರಿಂದ ಸಂಧಾನ ವಿಚಾರ ಕೇಳಿ ಇಬ್ಬರಿಗೂ ಚೆನ್ನಾಗಿ ಛೀಮಾರಿ ಹಾಕಿದರು. ಗೌಡರು ಸಿಟ್ಟಿನಲ್ಲಿ 'ಎಂತಹ ದಡ್ಡರಯ್ಯ ನೀವು? ಇವತ್ತು ಕಾಗೋಡಿನಲ್ಲಿ ಒಕ್ಕಲುಗಳ ಭೂಮಿ ಬಿಡಿಸಿದರೆ ನಾಳೆ ಪ್ರಾಂತ್ಯದಲ್ಲಿ ಎಲ್ಲ ಜಮೀನ್ದಾರರೂ ತಮ್ಮ ಒಕ್ಕಲುಗಳನ್ನು ಹೊಡೆದು ಓಡಿಸ್ತಾರೆ. ಇಷ್ಟು ಗೊತ್ತಾಗಲ್ವಾ? ಸತ್ಯಾಗ್ರಹ ಮುಂದುವರೆಸಿಕೊಂಡು ಹೋಗೋದು ನಿಮ್ಮ ಕೈಲಾಗದಿದ್ದರೆ ನಾವು ನಡೆಸ್ತೀವಿ. ಬೇರೆ ಬೇರೆ ಕಡೆಯಿಂದ ಜನರನ್ನು ತರಿಸಿ ಸತ್ಯಾಗ್ರಹ ಮಾಡ್ತೀವಿ ಮುಂತಾಗಿ ಗದರಿಸಿದರಂತೆ' (ರಾಜಶೇಖರ ಜಿ. ೧೯೮೦, ಪುಟ ೬೬) ಈ ರೀತಿಯಾಗಿ ಶಿವಮೊಗ್ಗ ಸಂಧಾನ ಮುರಿದು ಬಿತ್ತು. ಗಣಪತಿಯಪ್ಪನವರು ರೈತ ಸಂಘದವತಿಯಿಂದ ಸತ್ಯಾಗ್ರಹ ಮುಂದುವರಿಸಿದರು. ಮೇ ೨೧ರ ಸಂಜೆ ಸಾಗರದಲ್ಲಿ ನಡೆದ ರೈತಸಂಘದ ಸಭೆಯಲ್ಲಿ 'ಸಂಧಾನ ವಿಫಲವಾದ ಪ್ರಯುಕ್ತ ನಾಳೆಯಿಂದ ಸೋಷಲಿಸ್ಟ್ ಪಾರ್ಟಿಯ ಬೆಂಬಲ ಪಡೆದು ಸಂಘದ ಬೇಡಿಕೆಗಳ ಪೂರೈಕೆಗಾಗಿ ಹೋರಾಟ ನಡೆಸುವ ನಿರ್ಣಯವಾಯಿತು. ಸಭೆಯನ್ನು ಉದ್ದೇಶಿಸಿ ಗಣಪತಿಯಪ್ಪ ಮತ್ತು ಗೋಪಾಲಗೌಡರು ಮಾತನಾಡಿ 'ಹೋರಾಟ ಅನಿವಾರ್ಯ ರೈತರ ಆಜನ್ಮ ಸಿದ್ಧ ಹಕ್ಕಾದ ಉಳುಮೆ ಹಕ್ಕಿನ ರಕ್ಷಣೆಗಾಗಿ ಹೋರಾಡುವುದು ನಮ್ಮ ಆದ್ಯ ಕರ್ತವ್ಯ. ಬೇಡಿಕೆಗಳು ನ್ಯಾಯಬದ್ಧವಾಗಿವೆ. ಶಾಂತಿಭಂಗಕ್ಕೆ ಸತ್ಯಾಗ್ರಹಿಗಳು ಯಾರು ಆಸ್ಪದ ಕೊಡಬಾರದು' ಎಂದು ತಿಳಿಸಿದರು (ಪ್ರಜಾವಾಣಿ ೨೫-೫-೫೧) ಮಲೆನಾಡು ರೈತಸಂಘದ ಅಧ್ಯಕ್ಷರಾದ ಕಡಿದಾಳ್ ಮಂಜಪ್ಪನವರು ಸತ್ಯಾಗ್ರಹದಿಂದ ಹಿಂದೆ ಸರಿದರು. ಆದರೆ ಈ ಸಂಘದ ಕಾರ್ಯದರ್ಶಿ ಬಸವಾನಿ ರಾಮಶರ್ಮರು ಸತ್ಯಾಗ್ರಹದಲ್ಲಿ ಭಾಗವಹಿಸಿದರು.

ಮಲೆನಾಡು ರೈತಸಂಘ ಮತ್ತು ಸಾಗರ ರೈತಸಂಘ ಈ ಬೆಳವಣಿಗೆಯಿಂದಾಗಿ ಬೇರೆ ಬೇರೆಯಾದವು. ಇದನ್ನು ಗಮನಿಸಿದ ಸೋಷಲಿಸ್ಟ್ ಪಕ್ಷವು ಒಂದು ಕರಪತ್ರವನ್ನು ಹೊರಡಿಸಿ ಮಲೆನಾಡು ರೈತಸಂಘವನ್ನು ಕಟುವಾಗಿ ಟೀಕಿಸಿತು.

'ಮೇ ೧೮ ಮತ್ತು ಮೇ ೧೯ ರಂದು ನಡೆದ ರೆವಿನ್ಯೂ ಕಮಿಷನರ್ ಮಧ್ಯಸ್ಥಿಕೆಯಲ್ಲಿ ಜಮೀನ್ದಾರರಿಗೆ ಹೊಲ ಬಿಟ್ಟು ಕೊಡಬೇಕೆಂಬ ನಿಸ್ಸಹಾಯಕ ನಿರ್ಧಾರಕ್ಕೆ ಬಂದು ಮಲೆನಾಡು ರೈತಸಂಘ, ರೈತರ ಬೆಂಬಲವನ್ನು ಸಂಪೂರ್ಣ ಕಳೆದುಕೊಂಡಿದೆ...'ಇತ್ಯಾದಿ ಆ ಕರಪತ್ರದ ಸಾಲುಗಳಿದ್ದವು.

ಹೆಚ್.ಗಣಪತಿಯಪ್ಪ ಮತ್ತು ಅಧ್ಯಕ್ಷ ಮೂಕಪ್ಪನವರು ಮೇಲಿನ ಹೇಳಿಕೆಗೆ ಜೊತೆಯಾಗಿ ಧ್ವನಿಗೂಡಿಸಿದರು. ಮೇ ೧೮-೧೯ರಂದು ನಡೆದ ಸಂಧಾನ ವಿಫಲವಾಗಿದೆ. ಮಲೆನಾಡು ರೈತಸಂಘವು ನಿಸ್ಸಹಾಯಕ ಸ್ಥಿತಿಯಲ್ಲಿ ಜಮೀನು ಬಿಡುವುದಾಗಿ ತಿಳಿಸಿದೆ. ಸೋಷಲಿಸ್ಟ್ ಪಕ್ಷದ ಜೊತೆಗೂಡಿ ಸಾಗರ ತಾಲ್ಲೂಕು ರೈತ ಸಂಘ ಹೋರಾಟವನ್ನು ಮುಂದುವರೆಸುತ್ತೇವೆ ಎಂದು ಹೇಳಿಕೆ ನೀಡಿದರು.

ಈ ಸಂಧಾನದಲ್ಲಿ ಭಾಗವಹಿಸಿದ ಮೂರು ಜನ ಮುಖಂಡರುಗಳಿಗೆ, ಅಧಿಕಾರಿಗಳ ಬೆಣ್ಣೆ ಸುದ್ದಿ, ಜಮೀನುದಾರರ ಅಹಂಕಾರ ಒಂದು ರೀತಿಯ ಅಸಹಾಯಕ ಪರಿಸ್ಥಿತಿ ನಿರ್ಮಾಣವಾಗಿರುವುದರಿಂದ, ಇವರುಗಳು ಸಂಧಾನಕ್ಕೆ ಒಪ್ಪಿರಬಹುದು. ಅಲ್ಲದೆ ಮೇ ತಿಂಗಳಲ್ಲಿ ರೈತರು ಬಿತ್ತನೆ ಕಾರ್ಯ ಮಾಡದಿದ್ದರೆ ಹಾಗೂ ರೈತರಿಗೆ ಬಲವಾದ ಆರ್ಥಿಕ ಹೊಡೆತ ಬೀಳಬಹುದೆಂದು ನಿಶ್ಚಯಿಸಿ ಒಪ್ಪಿಕೊಂಡಿರಬಹುದು. ಒಂದು ಶ್ರೀಮಂತ ಜಮೀನುದಾರರು ಮತ್ತು ಸರ್ಕಾರ, ಇನ್ನೊಂದೆಡೆ ಬಡ ರೈತರು ಮತ್ತು ಬೆಂಬಲಿಗ ರೈತ ಸಂಘಗಳು ಇಂತಹ ಹೋರಾಟಗಳು ಅನೇಕ ಇಕ್ಕಟ್ಟಿನ ಪರಿಸ್ಥಿತಿಯನ್ನು ನಿರ್ಮಾಣ ಮಾಡಿ ಬಂಡವಾಳಗಾರರು ಮತ್ತು ಅಧಿಕಾರಿ ವರ್ಗಕ್ಕೆ ಜಯ ಸಿಗುತ್ತದೆ. ಭಾರತದಂತಹ ದೇಶದಲ್ಲಿ ಜಾತಿ ವ್ಯವಸ್ಥೆ ಮತ್ತು ಭೂ ಹಂಚಿಕೆ ಅಸಮತೋಲನ ದಿಂದ ಕೂಡಿದ್ದು, ಪರಿವರ್ತನೆಯಾಗಬೇಕು ಎಂದರೆ ಸರ್ಕಾರ ಮತ್ತು ಕಾನೂನುಗಳಿಂದ ಸಾಧ್ಯ. ಹೋರಾಟ ಗಳಿಂದ ಅನೇಕ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಬಹುದು. ಅದಕ್ಕೆ ಸರಿಯಾದ ಭೂಮಿಕೆ ಇರಬೇಕು ಮತ್ತು ಸರ್ಕಾರ ಹೋರಾಟಕ್ಕೆ ಸ್ಪಂದಿಸಬೇಕು.

ಎಣ್ಣೆಕೊಪ್ಪದ ಮಲ್ಲಿಕಾರ್ಜುನಪ್ಪಗೌಡರು, ಸೊರಬ ತಾಲ್ಲೂಕಿನ ರೈತ ಮುಂದಾಳು ಚಿತ್ರಟ್ಟೆಹಳ್ಳಿ ಭೀಮಣ್ಣನವರನ್ನು ಜೊತೆಯಲ್ಲಿ ಕರೆದುಕೊಂಡು ಸಂಧಾನದ ಮಾತುಕತೆಗಾಗಿ ದಿನಾಂಕ ೧೨-೬-೧೯೫೧ ರಂದು ಗಣಪತಿಯಪ್ಪನವರಿದ್ದ ಜೈಲಿಗೆ ಬಂದರು. ಆದರೆ ಯಾವ ತೀರ್ಮಾನಕ್ಕೂ ಬರಲಾಗಲಿಲ್ಲ.

ಅನೇಕ ಸಂಧಾನಗಳು ನಡೆದರು ಅವುಗಳೆಲ್ಲಾ ರೈತರ ಹಿತಕ್ಕೆ ವಿರುದ್ಧವಾಗಿರುವುದರಿಂದ ಎಲ್ಲಾ ಸಂಧಾನಗಳು ಮುರಿದು ಬಿದ್ದವು. ಹೋರಾಟವೊಂದೆ ಇದಕ್ಕೆ ಸರಿಯಾದ ಮಾರ್ಗವೆಂದು ತಿಳಿದು ಹೋರಾಟ ಮಾಡಿದರು. ಅನೇಕ ರೈತ ಮುಖಂಡರು, ಮೇಧಾವಿಗಳು, ವಿಚಾರವಾದಿಗಳು, ದೇಶನಾಯಕರುಗಳೆಲ್ಲ ಹಾಗೂ ಸತ್ಯಾಗ್ರಹದಲ್ಲಿ ಭಾಗವಹಿಸಿ ಜೈಲುವಾಸ ಅನುಭವಿಸಿದರು. ಅಹಿಂಸಾತ್ಮಕ ಹೋರಾಟಕ್ಕೆ ಪ್ರತಿಸ್ಪಂದಿಸಿದ ನ್ಯಾಯಾಲಯ ಅಕ್ರಮ ಪ್ರವೇಶದ ಆಪಾದನೆಯನ್ನು ತಿರಸ್ಕರಿಸಿ, ಪ್ರತಿದಿನವೂ ರೈತ ಸತ್ಯಾಗ್ರಹಿಗಳನ್ನು ಬಿಡುಗಡೆಗೊಳಿಸಲು ಪ್ರಾರಂಭಿಸಿತು. ಇದರಿಂದ ಆಪಾದನೆ ಹೊರಿಸಿದ್ದ ಸರ್ಕಾರ ಮತ್ತು ಭೂಮಾಲೀಕರಿಗೆ ಮುಖಭಂಗವಾಯಿತು. ಸಾಗರ ಸಬ್‌ಜೈಲಿನಲ್ಲಿದ್ದ ಗಣಪತಿಯಪ್ಪ ಮುಂತಾದ ಮುಖಂಡರನ್ನು ೧೬-೧೦-೫೧ರಂದು ಭೇಟಿ ಮಾಡಿದ ಜೈಲಿನ ಅಧಿಕಾರಿಗಳು ಒಂದು ಮುಚ್ಚಳಿಕೆಗೆ ರುಜು ಹಾಕಿಸಿಕೊಂಡು, ಕೇಸ್ ಇರುವವರು ಕೋರ್ಟಿಗೆ ಹಾಜರಾದರೆ ಸಾಕು ಎಂದರು. ಬಹಳಷ್ಟು ಕೇಸುಗಳು ವಜಾ ಆದವು. ಗಣಪತಿಯಪ್ಪ ನವರ ಮೇಲೆ ಏಳು ಕೇಸುಗಳು ಮತ್ತು ೧೦೭ನೇ ಸೆಕ್ಷನ್ ಕೇಸುಗಳು ಸೇರಿ ಒಟ್ಟು ೧೪ ಕೇಸುಗಳು ಕೋರ್ಟಿನಲ್ಲಿ ದಾಖಲಾಗಿದ್ದವು. ೧೬-೧೦-೫೧ರಂದು ಎಲ್ಲರ ಬಿಡುಗಡೆಯಾಯಿತು.

## ಕಾಗೋಡು ಸತ್ಯಾಗ್ರಹದಲ್ಲಿ ಲೋಹಿಯಾ

ಭಾರತೀಯ ಸಮಾಜವಾದದ ಪ್ರಮುಖ ಚಿಂತಕ -ರಾಜಕಾರಣಿ ಡಾ. ರಾಮಮನೋಹರ ಲೋಹಿಯಾ ೧೯೧೦ ಮಾರ್ಚ್ ೨೩ರಂದು ಉತ್ತರ ಪ್ರದೇಶದ ಫೈಜಾಬಾದ್ ಜಿಲ್ಲೆಯ ಅಕ್ಬರ್‌ಪುರದಲ್ಲಿ ಹುಟ್ಟಿದರು. ತಂದೆ ಹೀರಾಲಾಲ್, ತಾಯಿ ಚಂದಿರಾ. ಮುಂಬಯಿ. ಕಾಶಿ, ಕಲ್ಕತ್ತಾದಲ್ಲಿ ವಿದ್ಯಾಭ್ಯಾಸ ಮಾಡಿದ ಲೋಹಿಯಾ ೧೯೩೨ರಲ್ಲಿ ಜರ್ಮನಿಯ ಬರ್ಲಿನ್ ವಿಶ್ವವಿದ್ಯಾಲಯದಲ್ಲಿ ಉಪ್ಪಿನ ಸತ್ಯಾಗ್ರಹ ಕುರಿತು ಪ್ರೌಢಪ್ರಬಂಧ ಬರೆದು ಅರ್ಥಶಾಸ್ತ್ರದಲ್ಲಿ ಪಿಎಚ್.ಡಿ ಪದವಿ ಪಡೆದರು. ೧೯೩೪ರಲ್ಲಿ ಕಾಂಗ್ರೆಸ್ ಸಮಾಜವಾದಿ ಪಕ್ಷದ ಸ್ಥಾಪನೆಗೆ ದುಡಿದರು. ೧೯೩೬-೩೮ರವರೆಗೆ ಭಾರತ ರಾಷ್ಟ್ರೀಯ ಕಾಂಗ್ರೆಸ್‌ನ ವಿದೇಶಾಂಗ ವ್ಯವಹಾರ ವಿಭಾಗದ ಕಾರ್ಯದರ್ಶಿಯಾಗಿದ್ದರು. ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದರು. ಲೋಹಿಯಾ ಕಾಂಗ್ರೆಸ್ ವಿರೋಧಿ ವಾದದ ತೀವ್ರ ಪ್ರತಿಪಾದಕರಾಗಿದ್ದರು. ೧೯೬೨ರಲ್ಲಿ ನೆಹರೂ ವಿರುದ್ಧ ಲೋಕಸಭೆಗೆ ಸ್ಪರ್ಧಿಸಿ ಸೋತರು. ೧೯೬೩ರಲ್ಲಿ ಫರೂಕ್‌ಬಾದ್ ಲೋಕಸಭಾ ಕ್ಷೇತ್ರದಿಂದ ಲೋಕಸಭೆಗೆ ಆಯ್ಕೆಯಾದರು. ೧೯೬೭ ರಲ್ಲಿ ಕನೌಜ್ ಕ್ಷೇತ್ರದಿಂದ ಆಯ್ಕೆಯಾದರು. ಅನೇಕ ಕೃತಿಗಳನ್ನು ಬರೆದಿದ್ದರು. 'ಮ್ಯಾನ್‌ಕೈಂಡ್' (ಇಂಗ್ಲೀಷ್) ಮತ್ತು 'ಚೌಕಂಭಾ (ಹಿಂದಿ) ನಿಯತಕಾಲಿಕ ಪತ್ರಿಕೆಗಳ ಸಂಪಾದಕರಾಗಿದ್ದರು. ಅವಿವಾಹಿತರಾಗಿಯೇ ಉಳಿದಿದ್ದ ಲೋಹಿಯಾ ೧೯೬೭ರ ಅಕ್ಟೋಬರ್ ೧೨ರಂದು ವಿಧಿವಶರಾದರು.

ಸಮಾಜವಾದದ ಹರಿಕಾರರಾಗಿದ್ದ ಲೋಹಿಯಾ ದೇಶದ ಮಹಾನ್ ವ್ಯಕ್ತಿಯಾಗಿದ್ದರು. ವಿಶ್ವ ಸಮಾಜವಾದಿ ಕೂಟದಲ್ಲಿ ಪ್ರಮುಖರಾಗಿದ್ದ ಇವರು ವಿಕಾಸವಾದ. ಸಮಾಜವಾದ. ವಿಚಾರವಾದದ ಸಂಕೇತ ಎನಿಸಿದವರು. ಅನೇಕ ತರುಣರನ್ನು ಸಮಾಜವಾದದ ಅಡಿಯಲ್ಲಿ ಹದಗೊಳಿಸಿದವರು. ಗಾಂಧೀಜಿಯವರ ಪ್ರೀತಿಗೆ ಪಾತ್ರರಾದವರು. ಡಾ. ರಾಮಮನೋಹರ ಲೋಹಿಯಾ ದಿಟ್ಟ ದಿಟ್ಟ ವ್ಯಕ್ತಿ. ಕ್ರಿಯಾಶೀಲರೂ, ಧೀಮಂತರೂ ಆದ ಇವರು ಹಿಡಿದದ್ದು ತ್ಯಾಗ ಮತ್ತು ಸೇವೆಯ ಹಾದಿ. ತಾಯ್ನಾಡಿನ ಮೇಲಿನ ಪ್ರೀತಿಗಾಗಿ ತಮ್ಮ ಲೌಕಿಕ ಬದುಕನ್ನು ತ್ಯಾಗ ಮಾಡಿದ ಅಪರೂಪದ ದೇಶ ಭಕ್ತ. ಲೋಹಿಯಾರವರು ರಾಷ್ಟ್ರ ಅಂತರಾಷ್ಟ್ರೀಯ ಮಟ್ಟದಲ್ಲಿ ಪ್ರತಿಷ್ಠೆಗಳಿಸಿದ ಮಹಾನ್ ವ್ಯಕ್ತಿ ಆಗಿದ್ದರು.

ಲೋಹಿಯಾರವರ ಸಮಾಜವಾದದ ಬಗೆಗಿನ ಅರಿವು ಅಗಾಧವಾದುದು. ಲೋಹಿಯಾ ಹೇಳುವಂತೆ 'ಬಂಡವಾಳಶಾಹಿ ಹಾಗೂ ಕಮ್ಯುನಿಸಂ ಈ ಎರಡೂ ಕೂಡ ಸಂಪೂರ್ಣವಾದ ಸಮಗ್ರವಾದ ರಾಜಕೀಯ ಸಂಪ್ರದಾಯಗಳು. ಇಡೀ ಜಗತ್ತು ಎರಡರ ಕೈಯಲ್ಲಿದೆ. ಮೂರನೆಯೊಂದರ ಕಲ್ಪನೆ ಜಾಗತಿಕ ವೇದಿಕೆ ಮೇಲಿದೆ. ಅದು ಇನ್ನೂ ಅಸಮಗ್ರವೂ ಅಸಂಪೂರ್ಣವೂ ಆದರೆ ತೆರೆದುದೂ ಆಗಿದೆ. ಸತ್ಯ ಮತ್ತು ಪ್ರಗತಿಗಳಿಗೆ ತೆರೆದ ಪದ್ಧತಿಯಲ್ಲಿ ಇನ್ನೂ ಸಾಧ್ಯತೆ ಇರುತ್ತದೆ. ಆದರೆ ಮುಚ್ಚಿದ ಅಥವಾ ನಿಷ್ಠುರವಾದ ಸಂಪ್ರದಾಯಗಳು ವಾಸ್ತವಾಂಶವನ್ನು ಮಲಿನಗೊಳಿಸಿ, ಅವುಗಳನ್ನು ನಿರರ್ಥಕ ಮಾಡಲು ಅಪಾರ ಹಿಂಸೆಗೆ ಇಳಿಯುತ್ತವೆ. ತೆರೆದ ಪದ್ಧತಿಗಳು, ನವೀನ ಘಟನೆಗಳು ವಾಸ್ತವಾಂಶಗಳ ಆಧಾರದ ಮೇಲೆ ಬದುಕುತ್ತವೆ. ಹಾಗೂ ಪುನಶ್ಚೈತನ್ಯ ಗೊಳ್ಳುತ್ತವೆ. ಇದೇ ಸಮಾಜವಾದದ ಕಲ್ಪನೆ. ಬಂಡವಾಳಭಿವೃದ್ಧಿಗಿಂತ ಸಭ್ಯಜೀವನ ಒಳ್ಳೆಯದು, ಸಮಾಜವಾದವು ಪರಿಸರವನ್ನು ಮುಖ್ಯವೆಂದು ಪರಿಗಣಿಸುತ್ತದೆ. ಗಾಂಧೀಜಿಯವರ ಜೀವನ ಧ್ಯೇಯಗಳನ್ನು

ಸಮಾಜವಾದದ ವಸ್ತ್ರದೊಡನೆ ನೇಯ್ದರೆ ನವೀನ ಸಮಾಜವೊಂದು ನಿರ್ಮಾಣವಾದೀತು. ಕೆಲವರು ಗಾಂಧಿಯಿಂದ ಒಂದೆಳೆಯನ್ನೂ, ಮಾರ್ಕ್ಸ್‌ನಿಂದ ಒಂದೆಳೆಯನ್ನು ತೆಗೆದು ಹೊಸೆದು ಹಗ್ಗ ಮಾಡುವ ಯತ್ನಗಳು ನಡೆಯುತ್ತಿವೆ. ನನ್ನ ಮನಸ್ಸಿಗೆ ಇದು ಫಲಿತಾಂಶರಹಿತವಾದ ಪ್ರಯತ್ನವೆಂದು ತೋರುತ್ತದೆ. ಸಮಾಜವಾದವು ಈಗಾಗಲೇ ಜಾಗತಿಕ ರಂಗದ ಮೇಲಿದೆ'(ಕೆ.ಪಿ.ಪೂರ್ಣಚಂದ್ರ ತೇಜಸ್ವಿ (ಅನು) ೧೯೬೬ ಪುಟ ೨೧೬).

ರಾಮಮನೋಹರ ಲೋಹಿಯಾ ೧೨-೬-೫೧ರಂದು ಶಾಂತವೇರಿ ಗೋಪಾಲಗೌಡ, ಸಾಹುಕಾರ್ ಚನ್ನಯ್ಯ, ಎಂ.ಪಿ. ಈಶ್ವರಪ್ಪ, ಬಿ.ಶ್ರೀಕಂಠಪ್ಪ, ಮುಲ್ಕಾ ಗೋವಿಂದರೆಡ್ಡಿಯವರೊಂದಿಗೆ ಸಾಗರಕ್ಕೆ ರೈಲಿನಲ್ಲಿ ಬಂದಿಳಿದರು. ಡಾ.ಲೋಹಿಯಾ ಸಾಗರದ ಜೈಲಿಗೆ ಭೇಟಿ ಕೊಟ್ಟು ಅಲ್ಲಿದ್ದ ಗಣಪತಿಯಪ್ಪ ಮತ್ತು ರೈತರನ್ನು ಮಾತಾಡಿಸಿ, ಅವರ ಯೋಗಕ್ಷೇಮವನ್ನು ವಿಚಾರಿಸಿ ಹೋರಾಟಕ್ಕೆ ಬೆಂಬಲ ಸೂಚಿಸಿದರು. ದೇಶದಲ್ಲಿಯೇ ನಿಮ್ಮ ಹೋರಾಟ ಮಹತ್ವಪೂರ್ಣವಾದುದು ಎಂದು ಹೇಳಿದರು.

೧೯೫೧ರ ಜೂನ್ ೧೪ರಂದು ಡಾ. ಲೋಹಿಯಾ ಕಾಗೋಡಿಗೆ ಅನೇಕ ಸಂಗಡಿಗರೊಂದಿಗೆ ತೆರಳಿ ರೈತರನ್ನು ಹುರಿದುಂಬಿಸಿ, ಗುರುವಯ್ಯ ಗೌಡರ ಜಮೀನಿಗೆ ಪ್ರವೇಶ ಮಾಡಿದರು. ಅಧಿಕ ಸಂಖ್ಯೆಯಲ್ಲಿ ರೈತರು ಭಾಗವಹಿಸಿದರು. ಪ್ರಜಾವಾಣಿಯ ವರದಿಯ ಪ್ರಕಾರ ಕಾಗೋಡಿನಲ್ಲಿ ಲೋಹಿಯಾರವರ ಮೆರವಣಿಗೆಯಲ್ಲಿ ೨೦೦೦ ಜನರಿದ್ದರು. (ಪ್ರಜಾವಾಣಿ ೧೬-೬-೧೯೫೧) ಕಾಗೋಡಿನ ಜನತೆ ಇಂದಿಗೂ ತಮ್ಮ ಜೀವಮಾನದಲ್ಲೇ ತಾವು ಕಂಡಂತಹ ಒಂದು ಅದ್ಭುತವೆಂಬಂತೆ ಬಣ್ಣಿಸುತ್ತಾರೆ. ಲೋಹಿಯಾ ಬಗ್ಗೆ ಅಪಾರ ಗೌರವವಿದೆ. ತಮ್ಮ ಸಲುವಾಗಿ ದೆಹಲಿಯಿಂದ ಕಾಗೋಡಿಗೆ ಬಂದಿರುವುದೊಂದು ಹೃದಯಸ್ಪರ್ಶಿ ಸನ್ನಿವೇಶವಾಗಿತ್ತು. ಎಲ್ಲಾ ರೈತ ಮುಖಂಡರು ಜೈಲಿನಲ್ಲಿರುವ ಸಂದರ್ಭದಲ್ಲಿ ಡಾ.ಲೋಹಿಯಾ ಬಂದು ಹೋರಾಟಕ್ಕೆ ಬೆಂಬಲಿಸಿ, ಹೋರಾಟ ಮಾಡುವುದರ ಮೂಲಕ ರೈತರಲ್ಲಿ ಚೈತನ್ಯ ತುಂಬಿದರು.

ಜೂನ್ ೧೪ರ ರಾತ್ರಿ ಒಂದು ಗಂಟೆಯ ಸುಮಾರಿಗೆ ಸಾಗರ ರೈಲ್ವೆ ನಿಲ್ದಾಣದಲ್ಲಿ ಕಾಗೋಡಿನಿಂದ ವಾಪಸಾಗಿದ್ದ ಲೋಹಿಯಾರನ್ನು ಅವರ ಜೊತೆ ಇದ್ದ ಶಾಂತವೇರಿ ಗೋಪಾಲಗೌಡ, ಮುಲ್ಕಾಗೋವಿಂದ ರೆಡ್ಡಿ, ಎಂ. ಪಿ. ಈಶ್ವರಪ್ಪ, ಗುರುರಾಜ್ (ಸಾಗರ) ಇವರುಗಳನ್ನೆಲ್ಲಾ ಪೋಲಿಸರು ಬಂಧಿಸಿದರು. ಈ ಬಂಧನಕ್ಕೆ ಮೈಸೂರು ಸರಕಾರ ಕೊಟ್ಟ ಹೇಳಿಕೆ ಪ್ರಕಾರ 'ಡಾ.ಲೋಹಿಯಾರವರು ತಮ್ಮ ಹಿಂದಿನ ಘೋಷಣೆಗೆ ಅನುಸಾರವಾಗಿ, ತಮ್ಮ ೯ ಮಂದಿ ಸಂಗಡಿಗರುಗಳೊಂದಿಗೆ  ಮತ್ತು ನೂರು ಮಂದಿ ಇತರರೊಂದಿಗೆ ಶ್ರೀ ಗುರುವಯ್ಯ ಗೌಡರ ಜಮೀನಿಗೆ ಅತಿಕ್ರಮ ಪ್ರವೇಶ ಮಾಡಿ, ಬೇಲಿಯನ್ನು ಕಿತ್ತರೆಂದೂ, ಕಾನೂನು ವಿರುದ್ಧ ಸಭೆ ನಡೆಸಿದರೆಂದು ಪೋಲೀಸು ವರದಿಯಿಂದ ತಿಳಿದು ಬರುತ್ತದೆ. ಇದರಿಂದ ಕಾನೂನು ಪಾಲಕರ ಕಣ್ಣಿಗೆ ಬಿದ್ದ ಅವರನ್ನು ಅವರ ಕೆಲವು ಮಿತ್ರರನ್ನು ಗಣನೀಯ ಅಪರಾಧಕ್ಕಾಗಿ ಬಂಧಿಸಲಾಯಿತು' (ಪ್ರಜಾವಾಣಿ ೨೧-೬-೫೧ ಮತ್ತು ೨೩-೬-೫೧).

ಡಾ.ಲೋಹಿಯಾರವರ ಮೇಲೆ ಕಾನೂನು ಸಮರ ಹೂಡಲಾಯಿತು. ಪೋಲಿಸರು ಲೋಹಿಯಾರನ್ನು ಸಾಗರ ಕೋರ್ಟ್‌ನಲ್ಲಿ ಹಾಜರುಪಡಿಸಿ ಕೇಸು ದಾಖಲಿಸಿ, ಅಂದೇ ಇವರನ್ನು ಸಾಮಾನ್ಯ ಖೈದಿಯಂತೆ ಮೂರನೆದರ್ಜೆಯ ಭೋಗಿಯಲ್ಲಿ ಬೆಂಗಳೂರಿಗೆ ಒಯ್ದು ಕ್ರೆಸೆಂಟ್‌ಹೌಸಿನಲ್ಲಿ ಬಂಧನದಲ್ಲಿಟ್ಟರು. ಲೋಹಿಯಾರವರು ಭವ್ಯ

ಸೆರೆಮನೆಯಲ್ಲಿ ಇರಲು ನಿರಾಕರಿಸಿದಾಗ ಅವರನ್ನು ಸೆಂಟ್ರಲ್ ಜೈಲಿನಲ್ಲಿ ಇಡಲಾಯಿತು. ಸಾಗರದ ಮ್ಯಾಜಿಸ್ಟ್ರೇಟ್ ಕೋರ್ಟಿನಲ್ಲಿ ಲೋಹಿಯಾರನ್ನು ಹಾಜರುಪಡಿಸಿದರು. ಲೋಹಿಯಾರವರು ಜಾಮೀನಿನ ಮೇಲೆ ಬಿಡುಗಡೆಯಾಗಲು ನಿರಾಕರಿಸಿದರು. ಇವರ ಜೊತೆಯಲ್ಲಿ ೨೯ ಜನರ ಮೇಲೆ ಕೇಸು ಹಾಕಲಾಗಿತ್ತು. ಕೋರ್ಟಿಗೆ ಬರಿ ೯ ಜನರನ್ನು ಹಾಜರುಪಡಿಸಿ ಉಳಿದವರು ತಲೆ ತಪ್ಪಿಸಿಕೊಂಡಿದ್ದಾರೆ ಎಂದು ಪೋಲಿಸರು ವರದಿ ಮಾಡಿದರು. ಇದರಿಂದಾಗಿ ಕೇಸನ್ನು ಸಾಗರ ಕೋರ್ಟಿನಲ್ಲಿ ಮೊಕದ್ದಮೆಯನ್ನು ಜುಲೈ ೩ಕ್ಕೆ ಹಾಕಲಾಯಿತು. ಲೋಹಿಯಾರವರನ್ನು ಸೆಂಟ್ರಲ್ ಜೈಲಿಗೆ ತರಲಾಯಿತು (ಪ್ರಜಾವಾಣಿ ೨೧-೬-೫೧).

ಜೂನ್ ೨೨ ರಂದು ಸರಕಾರ ಲೋಹಿಯಾರವರ ಮೇಲಿದ್ದ ಎಲ್ಲಾ ಕೇಸುಗಳನ್ನು ಹಿಂದಕ್ಕೆ ತೆಗೆದುಕೊಂಡು ಇವರನ್ನು ಜೈಲಿನಿಂದ ಬಿಡುಗಡೆ ಮಾಡಿತು. ಬಿಡುಗಡೆಯಾದ ದಿನವಂದು ಪತ್ರಿಕಾಗೋಷ್ಠಿಯಲ್ಲಿ ಮಾತನಾಡುತ್ತಾ ಲೋಹಿಯಾರವರು, 'ಕಾಗೋಡು ಪ್ರಕರಣದಲ್ಲಿ ಭೂಮಿಯ ಒಡೆತನದ ಪ್ರಶ್ನೆ ಅಡಕವಾಗಿರಲಿಲ್ಲವೆಂದೂ, ಅದರ ಸ್ವಾದೀನ ಪ್ರಶ್ನೆ ಮಾತ್ರವೆಂದೂ, ಅಕ್ರಮವಾಗಿ ಹೊರದೂಡಲ್ಪಟ್ಟಿರುವ ರೈತರಿಗೆ ಭೂಮಿ ಸೇರಿರುವುದರಲ್ಲಿ ಯಾವ ಸಂದೇಹವೂ ಇಲ್ಲವೆಂದೂ, ಮೈಸೂರು ಲ್ಯಾಂಡ್ ರೆವಿನ್ಯೂ ಕೋಡಿನ ೭೯ನೇ ವಿಧಿ ತಮ್ಮ ನಿಲುವನ್ನು ಪೂರ್ಣವಾಗಿ ಸಮರ್ಥಿಸುವುದಾಗಿಯೂ ತಿಳಿಸಿದರು. ವಿವಾದ ಆರಂಭವಾದಾಗ ರೈತರ ಮತ್ತು ಭೂಮಾಲಿಕರ ಮಧ್ಯೆ ಸರಕಾರ ತಟಸ್ಥ ಧೋರಣೆ ತಳೆದಿದ್ದರೆ, ಈ ಸಮಸ್ಯೆ ಸಿವಿಲ್ ದಾವಾದ ಮೂಲಕ ಪ್ರಶ್ನೆ ಇತ್ಯರ್ಥಗೊಳ್ಳುತ್ತಿತ್ತೆಂದೂ ತಿಳಿಸಿದರು. ತಾವು ಹಿಂದೆ ಅನೇಕ ಬಾರಿ ಕಾನೂನು ಉಲ್ಲಂಘಿಸಿರುವುದಾಗಿಯೂ ಮುಂದೆಯು ಉಲ್ಲಂಘಿಸಬೇಕಾಗಿ ಬರಬಹುದಾಗಿಯೂ ತಿಳಿಸಿ ನ್ಯಾಯ ಹಾಗೂ ಸಮಾಜದ ಅವಶ್ಯಕತೆಗಳಿಗೆ ವಿರುದ್ಧವಾಗಿರುವ ಕಾನೂನುಗಳನ್ನು ಉಲ್ಲಂಘಿಸಲೇಬೇಕು ಎಂದೂ ತಿಳಿಸಿದರು' (ಪ್ರಜಾವಾಣಿ ೨೪-೬-೫೧).

ಡಾ.ಲೋಹಿಯಾ ಬೆಂಗಳೂರಿನಿಂದ ರಾಂಚಿಗೆ ತೆರಳುವ ಮುನ್ನ ಸತ್ಯಾಗ್ರಹದಲ್ಲಿ ತಾವು ಭಾಗವಹಿಸಿದ್ದರ ಬಗ್ಗೆ ಹೀಗೆ ಹೇಳಿದರು. 'ಸಣ್ಣದಾಗಲಿ ದೊಡ್ಡದಾಗಲಿ, ಎಲ್ಲ ರೀತಿಯ ಅನ್ಯಾಯ ಕೃತ್ಯಗಳನ್ನು ವಿರೋಧಿಸಬೇಕೆಂದು ನಾನು ಜೂನ್ ೩ನೆಯ ತಾರೀಖು ರಾಜಘಾಟಿನಲ್ಲಿ ಜನಗಳಿಗೆ ಬೋಧಿಸಿದ ನಂತರ ಅಂತಹ ಕಾರ್ಯವನ್ನು ನಾನೇ ನಿರ್ವಹಿಸಬೇಕಾದ ಪ್ರಸಂಗ ಬಂದೀತೆಂದು ಸ್ವಲ್ಪವೂ ಯೋಚಿಸಿರಲಿಲ್ಲ. ಶತಮಾನಗಳಿಂದ ಜಡಾವಸ್ಥೆಗೆ ತಳ್ಳಲ್ಪಟ್ಟಿರುವ ಆಸ್ತಿ ಮತ್ತು ಭೂಮಿ ಕಾಣಗಳಿಗೆ ನೇರವಾಗಿ ಸಂಬಂಧಿಸಿದ ಚಳುವಳಿಯಲ್ಲಿ ಭಾಗವಹಿಸಲು ಅವಕಾಶ ಮಾಡಿಕೊಟ್ಟ ಈ ಸುಂದರ ಮೈಸೂರು ನಾಡಿಗೆ ನಾನು ಕೃತಜ್ಞ ಕಾಗೋಡಿನ ಮಾಸ್ತಿಗಳು ಮತ್ತು ಕೆಂಚಪ್ಪಗಳು ಮಾತ್ರವಲ್ಲ ಭಾರತದ ಎಲ್ಲರೂ ತಮ್ಮ ಹಕ್ಕು ತಮಗೆ ದೊರೆಯಬೇಕೆಂದು ಒತ್ತಾಯಪಡಿಸುತ್ತಿದ್ದಾರೆ. ರಾಷ್ಟ್ರ ಬೆಳೆಯಬೇಕಾದರೆ ಇಂತಹವರ ಆತ್ಮಕ್ಕೆ ಸ್ವಾತಂತ್ರ್ಯ ದೊರೆಯಬೇಕು. ಆದರೆ ಕಾಲ ಮಿಂಚಿನ ವೇಗದಿಂದ ಸಾಗುತ್ತಿದೆ. ಅಭಾವ ಹಸಿವುಗಳ ಪ್ರಕೃತಿ ವರ್ಷದಲ್ಲಿ ಕಾಗೋಡಿನ ೩೦೦ ಎಕರೆ ಜಮೀನು ಸಾಗಾಗದೆ ಉಳಿಯಕೂಡದು. ಇನ್ನೊಂದೆರಡು ದಿನಗಳಲ್ಲಿ ಈ ಜಮೀನುಗಳನ್ನು ಸಾಗು ಮಾಡಲು ರೈತರಿಗೆ ಅವಕಾಶ ಮಾಡಿಕೊಡಬೇಕು. ನೆರೆಯ ಗ್ರಾಮದವರು ಸಸಿಗಳನ್ನು ಉಚಿತವಾಗಿ ಕೊಡಬೇಕು. ನನ್ನ ಮೇಲಿನ ಮೊಕದ್ದಮೆಯನ್ನು ವಾಪಾಸು ಪಡೆದು ನನ್ನನ್ನು ಮಾತ್ರ ಬಿಟ್ಟು ನನ್ನಂತಹದ್ದೆ

ಆಪಾದನೆಗಳಿಗೆ ಗುರಿಯಾಗಿರುವ ಇತರರನ್ನು ಸೆರೆಮನೆಯಲ್ಲಿ ಉಳಿಸುವುದು ಪ್ರಜಾಸತ್ತೆಗೆ ಅಥವಾ ಕಾನೂನಿನ ಮುಂದೆ ಎಲ್ಲರೂ ಸಮನೆಂಬ ತತ್ವಕ್ಕೆ ಸಲ್ಲದು' (ಪ್ರಜಾವಾಣಿ ೨೭-೬-೫೧)

ಮೇಲಿನ ಮಾತು ಗಮನಾರ್ಹವಾದ ಹೇಳಿಕೆಯಾಗಿದೆ. ಸರ್ಕಾರ ಸಾಮಾನ್ಯ ಜನರನ್ನು ಅತ್ಯಂತ ನಿಕೃಷ್ಟವಾಗಿ ಕಂಡಿತು. ಅವರ ಆಹಾರ, ವಾಸದ ಕಡೆಗೆ ಸರ್ಕಾರ ಗಮನಹರಿಸಲಿಲ್ಲ. ಪೋಲಿಸರು ಅತ್ಯಂತ ಕೆಟ್ಟದಾಗಿ ವರ್ತಿಸಿದರು. ಆದರೆ ಲೋಹಿಯಾರನ್ನು ಮೊದಲು ಕ್ರೆಸೆಂಟ್‌ಹೌಸಿನಲ್ಲಿಡಲು ಸರ್ಕಾರ ಯೋಚಿಸಿತ್ತು. ಇದಕ್ಕೆ ಲೋಹಿಯಾರವರು ಒಪ್ಪದಿದ್ದ ಕಾರಣ ಅವರನ್ನು ಸೆಂಟ್ರಲ್ ಜೈಲಿನಲ್ಲಿ ಇಡಲಾಯಿತು. ಜೂನ್ ೧೪ರ ರಾತ್ರಿಯಿಂದ ಜೂನ್ ೨೧ರವರೆಗೆ ಬಂಧನದಲ್ಲಿ ಇಡಲಾಯಿತು. ನಂತರ ಸರ್ಕಾರ ಎಲ್ಲಾ ಕೇಸುಗಳನ್ನು ವಾಪಾಸು ಪಡೆದು ಲೋಹಿಯಾರನ್ನು ಬಿಡುಗಡೆ ಮಾಡಿತು. ಇಂತಹದೆ ಅಪರಾಧ ಮಾಡಿದ ರೈತ ಸಂಘದ ನಾಯಕರು, ರೈತರನ್ನು ಮೂರು, ನಾಲ್ಕು ತಿಂಗಳಿಗಿಂತ ಜಾಸ್ತಿ ಜೈಲಿನಲ್ಲಿ ಇಡಲಾಯಿತು. ಲೋಹಿಯಾ ಹೇಳುವಂತೆ ಈ ಎರಡು ನೀತಿ 'ಪ್ರಜಾಸತ್ತೆಗೆ ಅಥವಾ ಕಾನೂನಿನ ಮುಂದೆ ಎಲ್ಲರೂ ಸಮನೆಂಬ ತತ್ವಕ್ಕೆ ವಿರುದ್ಧವಾದುದು.' ಡಾ.ಲೋಹಿಯಾರವರ ಹೇಳಿಕೆಗಳನ್ನೆಲ್ಲಾ ಸರ್ಕಾರ ತನ್ನ ಮಾಮೂಲು ದಾಟಿಯಲ್ಲಿ ನಿರಾಕರಿಸಿತು. ಲೋಹಿಯಾ ವಿಚಾರದ ಬಗ್ಗೆ, ಬಂಧನದ ಬಗ್ಗೆ ಸರ್ಕಾರ ಈ ರೀತಿಯ ಹೇಳಿಕೆ ಮುಖಾಂತರ ತನ್ನನ್ನು ತಾನು ಸಮರ್ಥಿಸಿಕೊಂಡಿತು. ಅದೇನೆಂದರೆ "ಮೈಸೂರು ಪ್ರಾಂತ್ಯದ ಜಮೀನುದಾರರು ಅತ್ಯಂತ ಸಣ್ಣ ಹಿಡುವಳಿದಾರರು. ಉತ್ತರ ಭಾರತದ ಮತ್ತು ಇನ್ನಿತರ ಭಾಗಗಳಂತೆ ಭಾರೀ ಜಮೀನ್ದಾರರಲ್ಲ. ಕೇವಲ ಹತ್ತು ಎಕರೆಗಳಿಗಿಂತ ಕಡಿಮೆ ಭೂಮಿ ಹೊಂದಿದವರಾಗಿದ್ದಾರೆ. ಆದ್ದರಿಂದ ಇದು ರೈತವಾದೀ ಪ್ರದೇಶವೆಂದೂ ವಾದಿಸಿತು.' ಆದರೆ ಸರ್ಕಾರ ಕಾಗೋಡು ಒಡೆಯರ ಬಿಟ್ಟಿ ವಿನ್ಯೋಗದ ಬಗ್ಗೆ ಯಾವುದೇ ಪ್ರಸ್ತಾಪ ಮಾಡಲಿಲ್ಲ. ಕಾಗೋಡು ರೈತ ಚಳುವಳಿ ರಾಜ್ಯಾಂಗ ಬಾಹಿರ ಚಟುವಟಿಕೆಯಲ್ಲಿ ಸಾಗಿದೆ ಎಂದೂ, ರೈತರು ಭೂಮಿಯ ಸಾಗುವಳಿ ನಿಲ್ಲಿಸಿದ್ದರಿಂದ, ಆಗ ಜಮೀನುದಾರರು ತಮ್ಮ ಜನರಿಂದಲೇ ಬೇಸಾಯ ಮಾಡಿಸಿದಾಗ ತಮ್ಮ ಯೋಜನೆಗನುಸಾರವಾಗಿ ರೈತರು ಬೇಲಿಗಳನ್ನು ಮುರಿದು ಅತಿಕ್ರಮ ಪ್ರವೇಶ ಮಾಡಿದರು. ಆದ್ದರಿಂದ ರೈತರ ಮೇಲೆ ಕಾನೂನು ಕ್ರಮ ಜರುಗಿಸಬೇಕಾಯಿತು ಎಂದೂ ರೈತರ ಮೇಲೆ, ಚಳುವಳಿಯ ಮೇಲೆ ಆಪಾದನೆ ಹೊರಿಸಿತು.

ರೈತರು ಗೇಣಿಯನ್ನು ಕೊಡುವುದಿಲ್ಲ ಎಂದೂ ಎಲ್ಲಿಯು ಹೇಳಿರಲಿಲ್ಲ. 'ಉಳುವವನೆ ಹೊಲದೊಡೆಯ' ಎಂಬ ಕ್ರಾಂತಿಕಾರಿ ಹೇಳಿಕೆಯನ್ನು ಕೊಟ್ಟಿರಲಿಲ್ಲ. ಮೂರು ಸೇರಿನ ಕೊಳಗದಲ್ಲಿ ಗೇಣಿ ಕೊಡುತ್ತೇವೆ. ಕೊಟ್ಟಿದ್ದಕ್ಕೆ ರಸೀದಿ ಬೇಕು. ಬಿಟ್ಟಿ ಬೇಗಾರು ಮಾಡುವುದಿಲ್ಲ ಎಂಬ ಕಾರಣಗಳಿದ್ದವು. ರೈತರು ಸಾಗುವಳಿಯನ್ನು ಬಿಟ್ಟಿರಲಿಲ್ಲ. ಜಮೀನ್ದಾರರೆ, ಸಾಗುವಳಿ ಮಾಡುವ ರೈತರ ನೇಗಿಲು ನೊಗಗಳನ್ನು ಧ್ವಂಸ ಮಾಡಿದರು. ಪ್ರತಿಗಾಮಿ ಧೋರಣೆ ತಳೆದವರೆ ಜಮೀನುದಾರರು. ಇಂತಹ ಕಟು ಸತ್ಯವನ್ನು ಸರಕಾರ ಮರೆಮಾಚಿತು. ಸಾರ್ವಜನಿಕರಿಗೆ ತಿಳಿಸಲಿಲ್ಲ. 'ಕೆಲವು ವ್ಯಕ್ತಿಗಳ ಹಿಂಸಾತ್ಮಕ ಚಟುವಟಿಕೆ, ರೈತರಿಗೆ ಪ್ರೋತ್ಸಾಹ ಕೊಟ್ಟಿದ್ದರ ಫಲವಾಗಿ ಕಾನೂನು ಮತ್ತು ಸುವ್ಯವಸ್ಥೆ ಹದಗೆಟ್ಟಿತು' ಎಂದು ಹೇಳಿತು.

ಅನೇಕ ಜಮೀನುದಾರರು, ಶ್ರೀಮಂತರು ಬೇರೆ ಬೇರೆ ರಾಜ್ಯಗಳಿಗೆ ಆಹಾರ ಧಾನ್ಯಗಳನ್ನು ಕದ್ದು ಮಾರುತ್ತಿದ್ದರು ಅವರ ಮೇಲೆ ಯಾವುದೇ ಕಾನೂನು ಕ್ರಮವನ್ನು ಸರ್ಕಾರ ಮತ್ತು ಅಧಿಕಾರಿಗಳು ಜರುಗಿ ಸಲಿಲ್ಲ. ಇದನ್ನು ಲೋಹಿಯಾ ಸರ್ಕಾರಕ್ಕೆ ಮನದಟ್ಟು ಮಾಡಲು ಪ್ರಯತ್ನಿಸಿದರು. ಇದನ್ನು ಸರ್ಕಾರ ತಿರಸ್ಕರಿ ಸಿತು. 'ಸ್ವಾತಂತ್ರ್ಯ ಸಾಧನೆಯ ಬಳಿಕ ಅನೇಕ ಸುಧಾರಣೆಗಳನ್ನು ತರಲು ಪ್ರಜಾಸತ್ತಾತ್ಮಕ ಹಾಗೂ ಘಟನಾತ್ಮಕ ಮಾರ್ಗಗಳು ಜನರಿಗೆ ದೊರಕಿರುವಾಗ, ಜನರು ಕಾನೂನನ್ನು ಧಿಕ್ಕರಿಸುವುದು ತಪ್ಪು, ಕಾನೂನಿನ ವಿರುದ್ಧ ಜನರನ್ನು ಒಗ್ಗೂಡಿಸುವುದು ಕಾನೂನಿಗೆ ವಿರುದ್ಧ' ಎಂದು ಸರ್ಕಾರ ಲೋಹಿಯಾರವರಿಗೆ ಉಪದೇಶ ಮಾಡಿತು. (ಪ್ರಜಾವಾಣಿ ೨೧-೬-೫೧)

ಡಾ.ಲೋಹಿಯಾರವರು ಬಂದು ಹೋಗಿರುವ ನೆನಪು ಕಾಗೋಡಿನ ಒಕ್ಕಲುಗಳಲ್ಲಿ ಹಚ್ಚಹಸುರಾಗಿ ಇರಲು ಎರಡು ಕಾರಣಗಳಿವೆ. ಡೆಲ್ಲಿಯಿಂದ ಮಹಾನುಭಾವರು ತಮ್ಮ ಕಷ್ಟಕ್ಕೆ ಸ್ಪಂದಿಸಿ ಬಂದಿದ್ದಾರೆ ಎನ್ನುವ ಗೌರವ ಒಂದುಕಡೆಯಾದರೆ, ಲೋಹಿಯಾ ಬಂದ ದಿನ ರಾತ್ರಿ ಪೋಲಿಸರು ಕಾಗೋಡು ಒಕ್ಕಲುಗಳ ಮೇಲೆ ಪೈಶಾಚಿಕ ಹಿಂಸಾಚಾರ ನಡೆಸಿರುವುದು. ಹಿಂದೆಂದು ಈ ರೀತಿಯ ಲಾಠಿಚಾರ್ಜ್, ನಡೆದಿರಲಿಲ್ಲ. ಮಕ್ಕಳು, ಮಹಿಳೆಯರು, ಮುದುಕರು ಎನ್ನದೆ ಥಳಿಸಿರುವುದು ಪೋಲಿಸರ ದೌರ್ಜನ್ಯವನ್ನು ತೋರಿಸುತ್ತದೆ. ಲೋಹಿಯಾ ಬಂದು ಹೋದ ನಂತರ ಸತ್ಯಾಗ್ರಹದ ಕಾವು ಇಳಿಮುಖವಾಗುತ್ತಾ ಬಂದಿತು. ಹೆಚ್ಚಿನ ಮುಖಂಡರೆಲ್ಲಾ ಜೈಲಿನಲ್ಲಿ ಬಂಧಿಗಳಾಗಿದ್ದರು. ಸೋಷಲಿಸ್ಟ್ ಪಕ್ಷದ ರೈತ ಸಂಘಟನೆ 'ಹಿಂದ್‌ಕಿಸಾನ್ ಪಂಚಾಯತ್'ನ ಕಾರ್ಯದರ್ಶಿ ರಮಾನಂದ ಮಿಶ್ರ ಬೆಂಗಳೂರಿಗೆ ಬಂದು ಮುಖ್ಯಮಂತ್ರಿ ಕೆ.ಸಿ.ರೆಡ್ಡಿ ಮತ್ತು ಗೃಹ ಸಚಿವ ಮರಿಯಪ್ಪನವರೂಡನೆ ಕಾಗೋಡು ವಿವಾದದ ಇತ್ಯರ್ಥದ ಬಗ್ಗೆ ಮಾತುಕತೆಯಾಡಿದರು. "ಪ್ರಜೆಗಳು ಸಂಘಟಿತರಾಗಬೇಕು, ಹಕ್ಕುಬಾಧ್ಯತೆಗಳಿಗೆ ಹೋರಾಟ ಮಾಡಿ ಶಾಸನಸಭೆಯ ಹೊರಗೆ ಈಡೇರಿಸಿಕೊಳ್ಳಬೇಕು" ಎಂದು ಹೇಳುತ್ತಿದ್ದ ರಮಾನಂದ ಮಿಶ್ರರವರು, ಕಾಗೋಡಿನ ವಿಷಯದಲ್ಲಿ 'ಒಂದು ಟ್ರಿಬ್ಯೂನಲ್ ಏರ್ಪಡಿಸುವುದು ಹಿತಕರ, ಕಾಂಗ್ರೆಸ್ ಅಧ್ಯಕ್ಷರು ನಿಷ್ಪಕ್ಷಪಾತವಾಗಿ ವರ್ತಿಸಿದರೆ ಕಾಗೋಡಿನ ಸಮಸ್ಯೆಯನ್ನು ಇತ್ಯರ್ಥ ಪಡಿಸಲು ಅವರಿಗೆ ವಹಿಸಲು ತಾವು ಸಿದ್ಧ' ಎಂಬ ಮಾತುಗಳು ಗೊಂದಲಕ್ಕೆಡೆ ಮಾಡುತ್ತದೆ. (ಪ್ರಜಾವಾಣಿ ೨೫-೬-೫೧) ಕಟುವಾಸ್ತವದೆದುರು ಅನೇಕ ನಿಲುವುಗಳು ಬದಲಾಗುತ್ತವೆ ಎಂಬುದಕ್ಕೆ ಮೇಲಿನ ಎರಡು ಮಾತುಗಳು ಕಾರಣವಾಗುತ್ತವೆ.

ಕಾಗೋಡು ಗೇಣಿದಾರರು ಮತ್ತು ಹಿಡುವಳಿದಾರರ ಮಧ್ಯೆ ವ್ಯಾಜ್ಯ ಪರಿಹಾರದ ಬಗ್ಗೆ ಆಶಾದಾಯಕ ಬೆಳವಣಿಗೆಗಳು ಕಾಣುತ್ತಿವೆ ಎಂದು ಮುಖ್ಯಮಂತ್ರಿಯವರು ಒಂದು ಸಮಿತಿ ನೇಮಿಸುವುದಾಗಿ ಭರವಸೆ ಕೊಟ್ಟಿದ್ದಾರೆಂದು ಪ್ರಜಾವಾಣಿ ೨೬ ಜೂನ್ ೫೧ರ ಪತ್ರಿಕೆಯ ಮುಖಪುಟದಲ್ಲಿ ವರದಿ ಮಾಡಿತು.

ಶಿವಮೊಗ್ಗ ಸಂಧಾನವನ್ನು ಧಿಕ್ಕರಿಸಿ ಸತ್ಯಾಗ್ರಹ ಸೃಷ್ಟಿಮಾಡಿದರೆ. ಸರಕಾರ ರಾಜಿ ಮಾಡಬೇಕು, ಸತ್ಯಾಗ್ರಹಗಳನ್ನು ಬಿಡಬೇಕು, ಸರಕಾರದ ಮಧ್ಯ ಪ್ರವೇಶದಿಂದ ರೈತರಿಗೆ ನ್ಯಾಯ ಸಿಗಬೇಕು ಎಂಬ ಹೇಳಿಕೆ ಕೊಡಲು ಶುರುಮಾಡಿದರು. ಸರ್ಕಾರ ಮೊದಲು ಸಂಧಾನಕ್ಕೆ ಪ್ರಯತ್ನಿಸಿತ್ತಾದರೂ ಸೋಷಲಿಸ್ಟರ ಆಗಮನದ ನಂತರ ರೈತರ ಹಿತಕ್ಕೆ ವಿರುದ್ಧವಾಗಿ ವರ್ತಿಸಿತು.

ಪ್ರದೇಶ ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಕೆಂಗಲ್ ಹನುಮಂತಯ್ಯನವರು ೨-೭-೫೧ ರ ಪ್ರಜಾವಾಣಿ ಪತ್ರಿಕೆ ಈ ರೀತಿಯಾದ ಹೇಳಿಕೆ ಕೊಟ್ಟರು. 'ಕಾಗೋಡು ಸತ್ಯಾಗ್ರಹ ಅನಾವಶ್ಯಕವಾಗಿತ್ತು. ರೈತರ ನ್ಯಾಯವಾದ ಹಕ್ಕುಭಾದ್ಯತೆಗಳನ್ನು ರಕ್ಷಿಸಲು ಕಾಂಗ್ರೆಸ್ ಸದಾಸಿದ್ಧವಾಗಿದೆ. ಕಾಗೋಡು ರೈತರ ಬೇಡಿಕೆಗಳು ಏನೆಂಬುದು ನನಗೆ ಗೊತ್ತು. ಅವುಗಳನ್ನು ಸಲ್ಲಿಸಲು ಸಹಾಯ ಮಾಡಲು ಸಿದ್ಧನಿದ್ದೇನೆ. ಈಗಲೂ ಆ ರೈತರಿಗೂ, ತಮಗೂ, ಹಿಡುವಳಿದಾರರಿಗೂ ಉಂಟಾಗಿರುವ ಭಿನ್ನಾಭಿಪ್ರಾಯಗಳನ್ನು ಬಗೆಹರಿಸಿಕೊಳ್ಳುವುದು ಸಾಧ್ಯವಿದೆ' ಎಂಬುದಾಗಿ ಹೇಳಿದರು. (ಪ್ರಜಾವಾಣಿ ೨-೭-೫೧) ಇದಕ್ಕೆ ಪ್ರತ್ಯುತ್ತರವಾಗಿ. ಸಿ.ಜಿ.ಕೆ. ರೆಡ್ಡಿಯವರು 'ತಲತಲಾಂತರದಿಂದ ಸಾಗುವಳಿ ಮಾಡಿಕೊಂಡು ಬಂದಿದ್ದ ಭೂಮಿಯನ್ನು ರೈತರ ಸ್ವಾದೀನಕ್ಕೆ ಕೊಡಬೇಕು ಎಂಬ ಒಂದಂಶದ ರಾಜೀ ಸೂತ್ರವನ್ನು ಮುಂದಿಟ್ಟರು. ಇದಕ್ಕೆ ಎಲ್ಲರ ಸಹಮತವಿತ್ತು. ಹಿಡುವಳಿದಾರರಿಗೆ ಭೂಮಿ ಸ್ವಾದೀನಪಡಿಸಿಕೊಂಡರೆ ಉಳುಮೆ ಮಾಡುವುದು, ಮಾಡಿಸುವುದು ದುಸ್ತರವಾದ ಸಂಗತಿಯಾಗಿತ್ತು. ಇವರಿಗೂ ಸ್ವಾದೀನ ಪಡಿಸಿಕೊಳ್ಳುವ ಇಚ್ಛೆ ಇರಲಿಲ್ಲ ಎಂದು ಗೃಹ ಮಂತ್ರಿಯವರು ಸಿ.ಜಿ.ಕೆ.ರೆಡ್ಡಿಯವರಿಗೆ ತಿಳಿಸಿದರು. ಸಿ.ಜಿ.ಕೆ. ರೆಡ್ಡಿಯವರು 'ಒಮ್ಮತದಂತೆ ಭೂಮಿ ಸ್ವಾದೀನವಾಗಿ ಬಿಟ್ಟರೆ ಮಿಕ್ಕೆಲ್ಲಾ ಅಂಶಗಳೂ ಮಧ್ಯಸ್ಥಿಕೆಗೆ ಒಪ್ಪಿಸಲ್ಪಡಬಹುದೆಂದೂ ಸರಕಾರವು ಈಗ ತನ್ನ ಹೊಣೆ ನಿರ್ವಹಿಸಬೇಕೆಂದೂ' ಮರಿಯಪ್ಪನವರಿಗೆ ಪತ್ರ ಬರೆದು ತಿಳಿಸಿದರು(ಪ್ರಜಾವಾಣಿ ೫-೮-೫೧).

೧೯೫೧ ಆಗಸ್ಟ್, ಸೆಪ್ಟೆಂಬರ್ ವೇಳೆಗಾಗಲೇ ಕಾಗೋಡು ಪರಿಸ್ಥಿತಿ ಸಂಪೂರ್ಣವಾಗಿ ಶಾಂತವಾಗಿತ್ತು. ಹೆಚ್ಚಿನ ಮುಖಂಡರೆಲ್ಲಾ ಜೈಲಿನಲ್ಲಿದ್ದರು. ಅಕ್ಟೋಬರ್ ವೇಳೆಗಾಗಲೆ ಜೈಲಿನಲ್ಲಿದ್ದ ಮುಂಖಡರೆಲ್ಲಾ ಜಾಮೀನಿನ ಮೇಲೆ ಬಿಡುಗಡೆಯಾಗತೊಡಗಿದರು. ೧೯೫೨ರ ಜನವರಿಯಲ್ಲಿ ಸರಕಾರ ರೈತರ ಮೇಲಿದ್ದ ಎಲ್ಲಾ ಕೇಸುಗಳನ್ನು ಹಿಂದಕ್ಕೆ ಪಡೆಯಿತು. ಜೈಲಿನಲ್ಲಿದ್ದ ಕೆಲವರನ್ನು ಬಿಡುಗಡೆಗೊಳಿಸಿತು.

ಹೆಚ್.ಗಣಪತಿಯಪ್ಪನವರು ಹೇಳುವಂತೆ ೧೯೫೧ರ ಸೆಪ್ಟೆಂಬರ್ ತಿಂಗಳ ೨೧ರಂದು ಜಯಪ್ರಕಾಶ ನಾರಾಯಣ ಸಾಗರಕ್ಕೆ ಭೇಟಿಕೊಟ್ಟು, ಸತ್ಯಾಗ್ರಹಿಗಳ ಹೆಸರು, ವಿಳಾಸ ಕೇಳಿ ತಿಳಿದುಕೊಂಡರು. 'ನಿಮ್ಮ ಸತ್ಯಾಗ್ರಹದ ವಿಷಯ ಇಡೀ ದೇಶಕ್ಕೆ ತಿಳಿದಿದೆ ನೀವು ಧೈರ್ಯವಾಗಿ ಹೋರಾಡಿ ಜಯ ನಿಮ್ಮದೆ' ಎಂದು ಹೇಳಿದರು. (ಜೆ.ಪಿ.ಸೋಷಲಿಸ್ಟ್ ಪಕ್ಷದ ಅಧ್ಯಕ್ಷರು) ಆಗ ಜೈಲಿನಲ್ಲಿ ೩೩ ಜನರಿದ್ದರು. ೧-೧೦-೧೯೫೧ರ ದಿನದಂದು ಸಾಗರ ಜೈಲಿಗೆ ಜಿ.ಸದಾಶಿವರಾಯರು, ಮರಿಯಪ್ಪ, ಭೀಮಪ್ಪ ಮೊದಲಾದವರು ಬಂದಿದ್ದರು. ಮಾತುಕತೆಯಾಗಿದೆ ಇನ್ನೂ ಮುಂದೆ ನೀವು ಜೈಲಿನಲ್ಲಿ ಇರಬೇಕಾದ ಅವಶ್ಯಕತೆ ಇಲ್ಲ, ೪-೬ ದಿನಗಳಲ್ಲಿ ಮುಚ್ಚಳಿಕೆ ಬರೆದುಕೊಟ್ಟು ಹೊರಗೆ ಬರಬೇಕೆಂದೂ ನಿಶ್ಚಯಿಸಲಾಯಿತು. ಅದರಲ್ಲೂ ೧೯೫೨ರ ಪ್ರಥಮ ಚುನಾವಣೆಯಲ್ಲಿ ಘೋಷಿತವಾಗಿದ್ದವು. ಸಮಾಜವಾದಿ ಪಕ್ಷವು ಈ ಚುನಾವಣೆಯಲ್ಲಿ ಭಾಗವಹಿಸಲು ನಿರ್ಧರಿಸಿತ್ತು. ಈ ಎಲ್ಲಾ ಕಾರಣಗಳಿಂದಾಗಿ ಜೈಲಿನಲ್ಲಿದ್ದ ಸತ್ಯಾಗ್ರಹಿಗಳು ಬಿಡುಗಡೆಯಾದರು.

ಸ್ವಾತಂತ್ರ್ಯೋತ್ತರದ ಮೊದಲ ದಿನಗಳಲ್ಲಿ ಕಾಂಗ್ರೆಸ್ ಪಕ್ಷದಲ್ಲಿದ್ದವರು ಪ್ರಭುತ್ವದ ಪ್ರತಿನಿಧಿಗಳು. ಕೆಲವರು ಭಾರಿ ಭೂಮಾಲಿಕರು, ರೈತರ ಬಗ್ಗೆ ಕಳಕಳಿ ವ್ಯಕ್ತಪಡಿಸುವ ಕಡಿದಾಳ ಮಂಜಪ್ಪನಂತವರು ವಿರಳ. ಬಹುಸಂಖ್ಯಾ ಬಲಾಢ್ಯರ ವಿರುದ್ಧ ಪ್ರಬಲ ಮಲೆನಾಡು ಗೇಣಿ ರೈತ ಸಂಘ ಮುಂತಾದ ಸಂಘಗಳಿದ್ದರು.

ಹೋರಾಟ ನಡೆಸಲು ಸಾಧ್ಯವಾಗುವುದಿಲ್ಲ. ಒಂದು ಕಡೆ ಪಕ್ಷದ ಶಿಸ್ತನ್ನು ಕಾಪಾಡಬೇಕು. ಇನ್ನಿತರ ಮುಜುಗರಕ್ಕೆ ಒಳಗಾಗಿ ಹಿಂದೆ ಸರಿಯುವುದು ಅನಿವಾರ್ಯವಾಗಿತ್ತು. ನಂತರ ಗಣಪತಿಯಪ್ಪನವರ ತಾಲ್ಲೂಕು ರೈತಸಂಘ ಮತ್ತು ಸಮಾಜವಾದಿ ಪಕ್ಷ ಒಂದಾಗಿ ಹೋರಾಟ ನಡೆಸಿದರು. ಇವುಗಳೆರಡರ ಆರ್ಥಿಕ ಸ್ಥಿತಿ ಮತ್ತು ರೈತರ ಸ್ಥಿತಿ ಬಹಳ ಕೆಳಮಟ್ಟದಲ್ಲಿದ್ದವು. ಮಲೆನಾಡು ಭಾಗದ ರೈತರ ಆರ್ಥಿಕ ವಾಸ್ತವಾಂಶಗಳು ಹೆಚ್ಚಿನ ಸಮಾಜ ವಾದಿ ಮುಖಂಡರಿಗೆ ಇರಲಿಲ್ಲ. ಅದರಲ್ಲೂ ಸಮಾಜವಾದಿ ಪಕ್ಷ ಸ್ವಾತಂತ್ರ್ಯಾನಂತರ ಡಾ.ಲೋಹಿಯಾ ಮುಂತಾದ ಮುಖಂಡರಿಂದಾಗಿ ಸೃಷ್ಟಿಯಾದಂತಹದು. ಕೆಲ ವಿದ್ಯಾವಂತರಿಗೆ ಸಮಾಜವಾದ ಎಂದರೆ ಮಾರ್ಕ್ಸ್‌ವಾದ ಎಂಬ ಭ್ರಮೆ ಇತ್ತು. ಸಮಾಜವಾದ ಎಂದರೆ ಸಮಾಜದಲ್ಲಿ ಸಭ್ಯ ಜೀವನ ನಡೆಸುವುದು ಎಂಬಿತ್ಯಾದಿ ಹೇಳಿಕೆಗಳಿದ್ದವು. ಅನೇಕ ಸಮಾಜವಾದಿ ತರುಣರು ಸ್ಥಿತಿವಂತರಾಗಿದ್ದರು ಮತ್ತು ಅನೇಕರಲ್ಲಿ ವಿಚಾರವಾದ ಒಂದು ಫ್ಯಾಷನ್ ಆಗಿತ್ತು. ಈ ಎಲ್ಲಾ ಕಾರಣಗಳಿಂದ ಕಾಗೋಡು ಹೋರಾಟಕ್ಕೆ ಸುದೀರ್ಘ ನೆಲೆಯನ್ನು ನೀಡುವುದು ಸಾಧ್ಯವಾಗಲಿಲ್ಲ. ಆದರೆ ಸಮಾಜವಾದಿ ಪಕ್ಷದ ಪ್ರವೇಶದಿಂದಾಗಿ ಕಾಗೋಡು ಸತ್ಯಾಗ್ರಹಕ್ಕೆ ಒಂದು ಸೈದ್ಧಾಂತಿಕ. ಜಾತ್ಯಾತೀತ ನೆಲೆ ದೊರಕಿದಂತಾಯಿತು. ಮೊದಲು ಬರೀ ದೀವರ ಮತ್ತು ಲಿಂಗಾಯಿತರ ಗೊಂದಲ ಎನ್ನಿಸಿಕೊಂಡಿದ್ದು, ಸಮಾಜವಾದಿಗಳ ಪ್ರವೇಶದಿಂದಾಗಿ ಈ ಹೋರಾಟಕ್ಕೆ ರಾಷ್ಟ್ರೀಯ ನೆಲೆ ದೊರಕಿದಂತಾಯಿತು. ಅನೇಕ ಕ್ರಾಂತಿಕಾರಿ ನಾಯಕರ ಸೃಷ್ಟಿಗೆ ಕಾರಣವಾಗುತ್ತದೆ. ಡಾ.ಲೋಹಿಯಾ ಮತ್ತು ಜೆ.ಪಿ. ಪ್ರವೇಶ ಕಾಗೋಡು ಸತ್ಯಾಗ್ರಹಕ್ಕೆ ಹೆಮ್ಮೆಯ ಸಂಗತಿ. ಕುಗ್ರಾಮವಾಗಿದ್ದ ಕಾಗೋಡು ದೇಶವ್ಯಾಪಿ ಪರಿಚಯಗೊಂಡದ್ದು ಕಾಗೋಡು ರೈತರ ಪರಿಶ್ರಮದ ಫಲ. ಈ ಸಂಘಟನೆ ಹೋರಾಟವನ್ನು ಮೊದಲಿಂದ ಕೊನೆಯವರೆಗೆ ಜೀವಂತಗೊಳಿಸಿದ ಕೀರ್ತಿ ಎಚ್.ಗಣಪತಿಯಪ್ಪ, ಶಾಂತವೇರಿ ಗೋಪಾಲ ಗೌಡರು ಮುಂತಾದವರಿಗೆ ಸಲ್ಲುತ್ತದೆ. ಕಾಗೋಡು ಸತ್ಯಾಗ್ರಹ ಬಹಳ ಬಿರುಸಿನಿಂದ ಶುರುವಾದದ್ದು ಶಾಂತವಾಗಿ ಬಗೆಹರಿಯಿತು.

## ಕಾಗೋಡು ಸತ್ಯಾಗ್ರಹದಲ್ಲಿ ಸರಕಾರದ ಪಾತ್ರ

ಕಾಗೋಡು ಸತ್ಯಾಗ್ರಹ ನಡೆಯುವಾಗ ಮೈಸೂರು ಸರ್ಕಾರ ರಾಜ್ಯದ ಚುಕ್ಕಾಣಿ ಹಿಡಿದಿತ್ತು. ಕರ್ನಾಟಕ ರಾಜ್ಯ ಸ್ಥಾಪನೆಯಾಗಿರಲಿಲ್ಲ. ಮೈಸೂರು ರಾಜ್ಯದ ಕೊನೆಯ ರೈಲ್ವೆ ನಿಲ್ದಾಣದಿಂದ ೫ ಕಿ.ಮೀ. ದೂರದ ಹಳ್ಳಿಯಾದ ಕಾಗೋಡು ಎಲ್ಲರ ಗಮನ ಸೆಳೆದರು ಸರ್ಕಾರದ ಸಹಾನುಭೂತಿಯನ್ನು ಪಡೆಯಲಿಲ್ಲ. ಕಾಗೋಡು ಹೋರಾಟದುದ್ದಕ್ಕೂ ಸರ್ಕಾರ ಜಮೀನುದಾರರ ಪರವಾಗಿ ಮಾತನಾಡಿತು. ಇದಕ್ಕೆ ಕಾರಣವು ಇದೆ. ಕೆ.ಜಿ. ಒಡೆಯರ್ ಸರ್ಕಾರದ ಪ್ರತಿನಿಧಿಯಾಗಿದ್ದರು. ಕಾಂಗ್ರೆಸ್ ಪಕ್ಷದ ನಿಷ್ಠಾವಂತ ಕಾರ್ಯಕರ್ತರಾಗಿದ್ದರು. ನೆಹರು ರವರೊಂದಿಗೆ ನಿಕಟವಾದ ಸಂಪರ್ಕವಿತ್ತು. ಮೈಸೂರು ಸರಕಾರ ಕಾಗೋಡಿನ ಹೋರಾಟವನ್ನು ಕಾನೂನು ಮತ್ತು ಆಡಳಿತಕ್ಕೆ ಸಂಬಂಧಿಸಿದ ವಿಷಯವೆಂದು ಪರಿಗಣಿಸಿತು. ಮೈಸೂರು ಪ್ರತಿನಿಧಿ ಸಭೆಯಲ್ಲಿ ಕಾಗೋಡಿನ ಸತ್ಯಾಗ್ರಹವನ್ನು ಕೆಲವರು ಪ್ರಸ್ತಾಪಿಸಿದಾಗ ಸಚಿವ ಮರಿಯಪ್ಪನವರು 'ಈ ವಿಷಯ ಸಾಮಾನ್ಯ ಕಾನೂನಿನ ಅನ್ವಯದಲ್ಲಿ ನಡೆಯುತ್ತಿರುವುದು. ವಿಶೇಷವಾದ ಕಾರ್ಯವನ್ನೇನೂ ಮಾಡಿಲ್ಲ. ರೈತರು ಅತಿಕ್ರಮ ಪ್ರವೇಶ ಮಾಡುತ್ತಿದ್ದಾರೆಂಬ ಜಮೀನುದಾರರ ದೂರಿನ ಮೇಲೆ ಸಾಮಾನ್ಯವಾದ ಕಾನೂನು ಅನ್ವಯಿಸಿ ಕ್ರಮ ಜರುಗಿ

ಸಲಾಗುತ್ತಿದೆಯಲ್ಲದೆ, ಮತ್ತೇನೂ ಇಲ್ಲ. ಕೆಲವರ ಮೊಕದ್ದಮೆ ಇನ್ನೂ ಕೋರ್ಟು ಮುಂದೆ ಇದೆ. ವಿಷಯ ಚರ್ಚಿಸಿದರೆ ಸಬ್‌ಜ್ಯೂಡಿಸ್ ಕೂಡಾ ಆಗುತ್ತದೆ" ಎಂದು ಉತ್ತರ ಕೊಟ್ಟು ಆ ಚರ್ಚೆಯನ್ನು ತಳ್ಳಿಹಾಕಿದರು (ಪ್ರಜಾವಾಣಿ ೩೦-೫-೫೧).

ಮೈಸೂರಿನ ರೆವಿನ್ಯೂ ಕಾಯ್ದೆಯ ೭೯ನೆಯ ಕಲಂನ ಪ್ರಕಾರ '೨ ವರ್ಷಗಳಿಗಿಂತ ಜಾಸ್ತಿ ಗೇಣಿದಾರರಾಗಿದ್ದವರು ತಾವು ಗೇಣಿ ಮಾಡಿಕೊಂಡಿದ್ದ ಜಮೀನಿನ ಮೇಲೆ ಖಾಯಂ ಹಕ್ಕು ಪಡೆಯುವರು.' ಕಾಗೋಡಿನ ಒಕ್ಕಲುಗಳು ತಲತಲಾಂತರದಿಂದ ಜಮೀನು ಮಾಡಿಕೊಂಡು ಬಂದಿದ್ದು ೭೯ ನೆಯ ಕಲಂನ ಪ್ರಕಾರ ಜಮೀನಿನ ಮೇಲೆ ಹಕ್ಕು ಪಡೆಯುತ್ತಾರೆ. ಆದರೆ ಇಲ್ಲಿ ರೈತರ ಮೇಲೆ ಜಮೀನು ಅತಿಕ್ರಮ ಪ್ರವೇಶ ಮಾಡಿದ್ದಾರೆಂಬ ದೂರಿನ ಮೇಲೆ ಪೋಲಿಸರು ಕ್ರಮ ಕೈಗೊಂಡದ್ದಕ್ಕೆ ಯಾವ ಪುರಾವೆಯು ಇಲ್ಲ. ಇಲ್ಲಿ ಗೇಣಿರೈತರಿಗೆ ಗೇಣಿ ಮಾಡಿಕೊಂಡಿದ್ದಕ್ಕೆ ಯಾವ ಲಿಖಿತ ಆಧಾರವು ಇಲ್ಲ. ಇವರೆಲ್ಲಾ ಬಾಯಿಮಾತಿನ ಗೇಣಿದಾರರಾಗಿದ್ದರು. ಸರ್ಕಾರ ಇದನ್ನು ಮಾನ್ಯ ಮಾಡಿತ್ತು. ಇದು ಯಾವುದನ್ನು ಸರ್ಕಾರ ಗಣನೆಗೆ ತೆಗೆದುಕೊಳ್ಳಲಿಲ್ಲ. ಸಾಗರ ತಾಲ್ಲೂಕಿನ ಕೆಲಭಾಗದಲ್ಲಿ ಭೂಮಾಲಿಕರು ಮತ್ತು ಒಕ್ಕಲುಗಳ ನಡುವಿನ ತಕರಾರಿನ ಬಗ್ಗೆ ಸರ್ಕಾರ ಅನಾಸಕ್ತಿ ತೋರಿಸಿತು. ಹೋರಾಟ ತೀವ್ರವಾದಂತೆ ಜಮೀನುದಾರರ ಪರವಾಗಿ ನಿಂತು ಕಾನೂನಿನ ರಕ್ಷಣೆಯನ್ನು ಜಮೀನುದಾರರಿಗೆ ನೀಡಿತು.

ಕಾಗೋಡು ಗೌಡರನ್ನು ಸರ್ಕಾರ ಸಮರ್ಥಿಸಿಕೊಂಡು ಮಾತನಾಡಲು ತೊಡಗಿತು. ಕಾಗೋಡಿನಲ್ಲಿದ್ದ ಕೊಳಗದ ಪದ್ಧತಿ ಬೊಂಬಾಯಿ ಪ್ರಾಂತ್ಯದ ಸಿದ್ದಾಪುರದಲ್ಲಿಯು ಇದೆ. ಸಾಗರ, ಸೊರಬ, ಹೊಸನಗರ ಮಲೆನಾಡಿನ ಭಾಗದಲ್ಲಿ ಎಲ್ಲಾ ಕಡೆಯು ಇದೆ ಪ್ರಮಾಣದ ಅಳತೆ ಪದ್ಧತಿ ಇದ್ದು ಅದನ್ನು ಇಳಿಸುವುದು ತರವಲ್ಲ ಎಂದು ವಾದಿಸಿತು. ಕಾಗೋಡು ಒಡೆಯರು ಉತ್ತರ ಭಾರತದಲ್ಲಿರುವಂತೆ ಭಾರಿ ಜಮೀನುದಾರರಲ್ಲ, ಸಾಮಾನ್ಯ ಹಿಡುವಳಿದಾರರು. ಅವರ ವಿರುದ್ಧ ದುರುದ್ದೇಶದ ಹೋರಾಟ ಹಮ್ಮಿಕೊಂಡಿರುವುದು ತಪ್ಪು. ಸರಕಾರವೇ ಜಾರಿಗೆ ತರಲು ಉದ್ದೇಶಿಸಿರುವ ಭೂಸುಧಾರಣಾ ಕಾನೂನು ಸೆಲೆಕ್ಟ್ ಕಮಿಟಿಯ ಮುಂದೆ ಇರುವಾಗ ಸತ್ಯಾಗ್ರಹ ಅನಾವಶ್ಯಕ ಎಂದು ಹೇಳಿತು. 'ಅನೇಕ ಮಂದಿ ಹೊರಗಿನ ಶಕ್ತಿಗಳು ಉದ್ವೇಗ ಸ್ಥಿತಿಯನ್ನು ನಿರ್ಮಾಣ ಮಾಡಿದಾಗ, ಕಾನೂನು ಸುಸ್ಥಿರತೆ ಕಾಪಾಡಲು ಪೋಲಿಸರನ್ನು ಬಳಸಬೇಕಾಯಿತು. ಆಗ ಜಮೀನುದಾರರಿಂದ ಪೋಲಿಸರಿಂದ ಹಿಂಸೆ ನಡೆದಿರಬಹುದು. ಇದು ಶಾಂತಿ ರಕ್ಷಿಸಲು ಮಾಡಿದ ಪ್ರಯತ್ನ. ಕೆಲ ಹೊರಗಿನ ಮಂದಿ ಹಿಂಸಾಕೃತ್ಯಗಳನ್ನು ಮಾಡಿದ್ದರಿಂದ ಈ ಘಟನೆ ನಡೆದಿರಬಹುದು. ಶಾಂತಿ ಕಾಪಾಡಲು ಪೋಲಿಸರು ಸಂಯಮದಿಂದ ವರ್ತಿಸಿದ್ದಾರೆ' ಎಂದು ಪ್ರಚಾರ ಮಾಡಿತು' (ಪ್ರಜಾವಾಣಿ ೨-೬-೫೧ ಮತ್ತು ೨೨-೬-೫೧).

ಅನೇಕ ಕಾಂಗ್ರೆಸ್ ರಾಜಕಾರಣಿಗಳು ಸತ್ಯಾಗ್ರಹದ ವಿರುದ್ಧವಾಗಿ ಮಾತನಾಡಿದರು. ಭೂಮಾಲಿಕರನ್ನು ಬೆಂಬಲಿಸಿದರು. ಅಂದಿನ ಪ್ರದೇಶ ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಶ್ರೀ ಕೆಂಗಲ್ ಹನುಮಂತಯ್ಯನವರು ಭೂಮಾಲಿಕರ ಪರವಾಗಿ ಮಾತನಾಡಿದರು. 'ಇನ್ನು ಆರು ತಿಂಗಳಿನಲ್ಲಿ ಚುನಾವಣೆ ಇರುವಾಗ ಈ ಚಳುವಳಿಯ ಅಗತ್ಯವೇನು..? ಗುತ್ತಿಗೆಗೆ ಜಮೀನನ್ನು ಅನೇಕ ವರ್ಷಗಳಿಂದ ಮಾಡಿದಾಗ ಜಮೀನು ನನ್ನದೆಂದು ಹೇಳುವುದು, ಬಾಡಿಗೆ ಮನೆಯಲ್ಲಿ ಇರುವ ಬಾಡಿಗೆದಾರ ಬಾಡಿಗೆಮನೆಯನ್ನು ನನ್ನದು ಎಂದು ಹೇಳುವುದು ನ್ಯಾಯವಲ್ಲ.

ಕಾಗೋಡು ಚಳುವಳಿಯಲ್ಲಿ ಭಾಗವಹಿಸಿದ ಸಮಾಜವಾದಿಗಳನ್ನು ಬಗ್ಗು ಬಡಿಯುವುದು ಸರ್ಕಾರಕ್ಕೆ ಕಷ್ಟವಲ್ಲ. ಸಮಾಜವಾದಿಗಳು ಬಳಸುವ ಭಾಷೆ. ನಡೆಯುವ ರೀತಿ ನೋಡಿದರೆ ಅವರನ್ನು ಬಗ್ಗು ಬಡಿಯುವುದು ತಪ್ಪೇನು ಅಲ್ಲ...' ಎಂದು ಹೇಳಿದರು (ಪ್ರಜಾವಾಣಿ ೩೦-೬-೫೧).

ಇನ್ನೊಬ್ಬ ಕಾಂಗ್ರೆಸ್ ರಾಜಕಾರಣಿ ಹೆಚ್.ಎಂ.ಚನ್ನಬಸಪ್ಪನವರು ಸತ್ಯಾಗ್ರಹದ ಬಗ್ಗೆ ಮಾತನಾಡುತ್ತಾ ಸರ್ಕಾರದ, ಜಮೀನುದಾರ ನೀತಿಯನ್ನು ಸಮರ್ಥಿಸಿಕೊಂಡರು. 'ಕಾಗೋಡಿನ ಸತ್ಯಾಗ್ರಹ ಕೇವಲ ಅಳತೆ ಮತ್ತು ಗುತ್ತಿಗೆಯ ಪ್ರಮಾಣದ ವಿವಾದಕ್ಕೆ ಸಂಬಂಧಿಸಿದ್ದಲ್ಲ. ಅದಕ್ಕೆ ಆಳವಾದ ರಾಜಕೀಯ ಕಾರಣಗಳಿವೆ. ಅದು ರಾಜ್ಯದಲ್ಲಿ ಸೋಷಲಿಸ್ಟರು ಬಲವಾಗಲು ಮಾಡಿದ ಪ್ರಯತ್ನ. ಮೈಸೂರು ರಾಜ್ಯದಲ್ಲಿರುವುದು ರೈತವಾರಿ ಮಾತ್ರ. ಈ ಪದ್ಧತಿಯಲ್ಲಿ ಶಾಸನ ಪ್ರಕಾರ ಜಮೀನುದಾರ ತನ್ನ ಜಮೀನನ್ನು ಸೂಕ್ತ ಕಂಡರೀತಿಯಲ್ಲಿ ಅನುಭವಿಸುವ ಹಕ್ಕನ್ನು ಪಡೆದಿರುತ್ತಾನೆ. ಭೂಮಿಯನ್ನು ಕೊಡುವುದು, ಬಿಡುವುದು, ಗೇಣಿ ಬದಲಾಯಿಸುವುದು ಇಲ್ಲವೆ ಸ್ವತಃ ಸಾಗುವಳಿ ಮಾಡುವುದು ಇತ್ಯಾದಿ ಕಾರ್ಯಾಚರಣೆಗಳಲ್ಲಿ ಹಿಡುವಳಿದಾರ ಸಂಪೂರ್ಣ ಸ್ವಾತಂತ್ರ್ಯ ಹೊಂದಿರುವನು. ಆ ಬಗ್ಗೆ ಸರ್ಕಾರದ ರಕ್ಷಣೆ ಪಡೆಯಲು ಅರ್ಹನಾಗಿರುವವನು. ನೂತನ ರಾಜ್ಯಾಂಗ ಪ್ರಕಾರ ಉಳುವವನೇ ಭೂ ಸ್ವಾಮಿತ್ವವನ್ನು ಹೊಂದಲು ಅವಕಾಶವಿಲ್ಲ. ಈ ರೀತಿ ಒತ್ತಾಯ ಪಡಿಸುವುದು ರಾಜ್ಯಾಂಗ ವಿರುದ್ಧ' (ಪ್ರಜಾವಾಣಿ ೬-೭-೫೧) ಹೀಗೆ ಕಾಂಗ್ರೆಸ್‌ನ ಹೆಚ್ಚಿನ ನಾಯಕರೆಲ್ಲಾ ಜಮೀನುದಾರರ ಪರವಾಗಿ ಪತ್ರಿಕಾ ಹೇಳಿಕೆ ಕೊಡುತ್ತಿದ್ದರು.

ಕಾಂಗ್ರೆಸ್ ಪಕ್ಷದ ಇನ್ನೂ ಕೆಲ ಮುಖಂಡರಿಗೆ ಗೇಣಿದಾರರ ವಿಚಾರದಲ್ಲಿ ಸಹಾನುಭೂತಿ ಇತ್ತು. ಕಡಿದಾಳ್ ಮಂಜಪ್ಪನವರ ಮನವಿ ಮೇರೆಗೆ ಮೈಸೂರು ಸರಕಾರದ ರೆವಿನ್ಯೂ ಮಂತ್ರಿಗಳಾಗಿದ್ದ ಶ್ರೀ ಹೆಚ್. ಸಿದ್ದಯ್ಯನವರು ತುಂಬಾ ಆಸಕ್ತಿ ತೆಗೆದುಕೊಂಡು ಜಿಲ್ಲಾಧಿಕಾರಿಗಳನ್ನು ಕಾಗೋಡಿಗೆ ಭೇಟಿಕೊಡುವಂತೆ ಮಾಡಿದರು. ಇದಾದ ನಂತರ ಸ್ವತಃ ಶ್ರೀ ಹೆಚ್.ಸಿದ್ದಯ್ಯನವರು ಶಿವಮೊಗ್ಗಕ್ಕೆ ಆಗಮಿಸಿ ಮಲೆನಾಡು ರೈತ ಸಂಘದ ಅಧ್ಯಕ್ಷರಾಗಿದ್ದ ಕಡಿದಾಳ್ ಮಂಜಪ್ಪನವರನ್ನು ಇತರ ರೈತರು, ಭೂಮಾಲಿಕರನ್ನು ಮಾತುಕತೆಗೆ ಆಹ್ವಾನಿಸಿ ಒಂದು ಒಪ್ಪಂದಕ್ಕೆ ಬರಬೇಕೆಂದು ಸೂಚಿಸಿ, ಕೆಲವು ಸಲಹೆಗಳನ್ನು ಕೊಟ್ಟರು. ಆದರೆ ಯಾವುದೇ ಒಪ್ಪಂದಕ್ಕೆ ಹೆಚ್.ಸಿದ್ದಯ್ಯನವರ ಸಮ್ಮುಖದಲ್ಲಿ ಬರಲಾಗಲಿಲ್ಲ. ಸೋಷಲಿಸ್ಟರ ಆಗಮನವಾಗುವವರೆಗೆ ಕೆಲ ಕಾಂಗ್ರೆಸ್ ನಾಯಕರಲ್ಲಿ ಪ್ರಮುಖರು ಸಂಧಾನಕ್ಕೆ ಪ್ರಯತ್ನಿಸಿದರು. ಸಂಧಾನಗಳೆಲ್ಲಾ ವಿಫಲವಾಗಿ ಹೋರಾಟ ಅನಿವಾರ್ಯವಾಯಿತು. ಹೆಚ್ಚಿನ ಸಂಧಾನಗಳೆಲ್ಲಾ ಭೂಮಾಲಿಕರ ಪರವಾಗಿರುವುದರಿಂದ ಸಂಧಾನಗಳು ವಿಫಲವಾದವು.

ಮೈಸೂರು ರಾಜ್ಯದ ಪ್ರಥಮ ವಿಧಾನಸಭೆಯಲ್ಲಿ ಸಾಗರದ ಪ್ರತಿನಿಧಿಯಾಗಿ ಆಯ್ಕೆಯಾಗಿದ್ದ ಗೋಪಾಲ ಗೌಡರು ಕಾಗೋಡಿನ ಬಗ್ಗೆ ಹಾಕಿದ ಪ್ರಶ್ನೆಗೆ ಆಗ ಗೃಹ ಸಚಿವರಾಗಿದ್ದ ಸಿದ್ದವೀರಪ್ಪನವರು 'ಕಾಗೋಡಿನಲ್ಲಿ ಸತ್ಯಾಗ್ರಹ ಸಂದರ್ಭದಲ್ಲಿ ಜಮೀನುದಾರರಿಗೆ ಸರಕಾರ ಯಾವ ಸಹಾಯವನ್ನು ಒದಗಿಸಲಿಲ್ಲ'ವೆಂಬ ಅಪ್ಪಟ ಸುಳ್ಳು ಹೇಳಿದರು. ಅವರಿಬ್ಬರ ಪ್ರಶ್ನೋತ್ತರ ಹೀಗಿತ್ತು.

| | | |
|---|---|---|
| ಗೋಪಾಲಗೌಡರು | : | ಕಾಗೋಡಿನಲ್ಲಿ ಪೋಲಿಸ್ ಠಾಣೆ ಇದೆಯೆ? |
| ಸಿದ್ದವೀರಪ್ಪ | : | ಇಲ್ಲ. |
| ಗೋಪಾಲಗೌಡರು | : | ಹಾಗಾದರೆ ಪೋಲಿಸಿನವರು ಅಲ್ಲಿ ಆರು ತಿಂಗಳು ಇದ್ದುದೇಕೆ ? |
| ಸಿದ್ದವೀರಪ್ಪ | : | ನ್ಯಾಯ ಮತ್ತು ಶಿಸ್ತು ಪಾಲನೆಗಾಗಿ. |
| ಗೋಪಾಲಗೌಡರು | : | ಎಲ್ಲ ಪ್ರಜೆಗಳಿಗೂ ಅಥವಾ ಜಮೀನುದಾರರಿಗೆ ಮಾತ್ರವೋ? |
| ಸಿದ್ದವೀರಪ್ಪ | : | ಸರ್ವರಿಗೂ |

ಗೋಪಾಲಗೌಡರು ಸರ್ಕಾರವನ್ನು ಇಕ್ಕಟ್ಟಿಗೆ ಸಿಲುಕಿಸಿದ ಪ್ರಸಂಗ ಇದಾಗಿತ್ತು(ಪ್ರಜಾವಾಣಿ ೨೭-೬-೫೧).

೧೯೫೧ರ ಮೈಸೂರು ಪ್ರದೇಶ ಕಾಂಗ್ರೆಸ್ ಅಧಿವೇಶನದಲ್ಲಿ ಮುಖ್ಯಮಂತ್ರಿ ಕೆ.ಸಿ.ರೆಡ್ಡಿಯವರು ಕಾಗೋಡು ಸತ್ಯಾಗ್ರಹಿಗಳನ್ನು ಕಟುವಾಗಿ ಟೀಕಿಸಿದರು. ಸೋಷಲಿಸ್ಟರು ಮಧ್ಯೆ ಪ್ರವೇಶಿಸದೆ ಇದ್ದರೆ ಲೋಹಿಯಾ ಬರದೆ ಇದ್ದಿದ್ದರೆ ಸತ್ಯಾಗ್ರಹ ಒಂದು ತಿಂಗಳ ಮೊದಲೇ ಇತ್ಯರ್ಥವಾಗುತ್ತಿತ್ತೆಂದು ಹೇಳಿದ್ದರು.

ಒಂದು ಶುದ್ಧ ಆರ್ಥಿಕ ಬೇಡಿಕೆ ಸತ್ಯಾಗ್ರಹವನ್ನು ಹುಟ್ಟುಹಾಕಿತು. ಕೃಷಿಯ ಅರ್ಥ ವ್ಯವಸ್ಥೆಯನ್ನು ಬದಲಾಯಿಸಬೇಕೆಂಬ ಉದ್ದೇಶ ರೈತ ಸಂಘಕ್ಕಾಗಲಿ, ಸೋಷಲಿಸ್ಟ್ ಪಕ್ಷಕ್ಕಾಗಲಿ ಇರಲಿಲ್ಲ. ಭೂಮಾಲಿಕತ್ವದ ಸ್ವರೂಪವನ್ನು ಬದಲಾಯಿಸುವ ಸಮಗ್ರ ಹೋರಾಟವೇನು ಇರಲಿಲ್ಲ. ಇಲ್ಲಿ ಕಾಗೋಡು ಗೌಡರ ಒಣ ಪ್ರತಿಷ್ಠೆಯಿಂದಾಗಿ ಸತ್ಯಾಗ್ರಹ ನಡೆಯುವಂತಾಯಿತು. ಇನ್ನಿತರ ಕಡೆ ಕೆಲ ಬುದ್ಧಿವಂತ ಜಮೀನುದಾರರು ರೈತರ ಕೋಳಗದ ತಕರಾರಿಗೆ ಸಮ್ಮತಿಸಿ ರಾಜೀ ಮಾಡಿಕೊಂಡರು. ಇಂತಹ ಧೋರಣೆಗಳನ್ನು ಕಾಗೋಡು ಗೌಡರು ತಳೆದಿದ್ದರೆ ಚಳುವಳಿ ಆಗುತ್ತಿರಲಿಲ್ಲ. ಒಟ್ಟಾರೆ ಸತ್ಯಾಗ್ರಹದ ಬಗ್ಗೆ ಮೈಸೂರು ಸರ್ಕಾರ ನಿಲುವುಗಳು ಅಂದಿನ ಸನ್ನಿವೇಶಕ್ಕೆ ಸಹಜವೇ ಆಗಿತ್ತು. ಸ್ವಾತಂತ್ರ್ಯ ಎನ್ನುವುದು ಬ್ರಿಟಿಷ್ ಕೈಯಿಂದ ಬಂಡವಾಳಶಾಹಿ (ಸ್ವದೇಶಿ) ಕೈಗೆ ಬಂದಿತು. ಅಷ್ಟೆ ಹೊರತು ಬಡವನ ಕೈಗೆ ಸ್ವಾತಂತ್ರ್ಯ ಬಂದಿರಲಿಲ್ಲ. ಹಾಗಾಗಿ ಸ್ವಾತಂತ್ರ್ಯಬಂದ ಪೂರ್ವದಲ್ಲಿಯೇ ಇಂತಹ ರೈತ ಹೋರಾಟಗಳು ಇವರ ಪ್ರಭುತ್ವವನ್ನು ಪ್ರಶ್ನಿಸುವಂತೆ ಕಂಡುಬಂದರೆ ತಪ್ಪೇನು ಇಲ್ಲ. ಇಂತಹ ಚಳುವಳಿಯನ್ನು ಈ ವ್ಯವಸ್ಥೆ ಸಹಿಸುವುದಕ್ಕೆ ಸಿದ್ಧವಾಗಿರಲಿಲ್ಲ. 'ತೆಲಂಗಾಣದ ಕಮ್ಯುನಿಸ್ಟ್ ಪ್ರಚೋದಿತ ರೈತ ದಂಗೆಯನ್ನು ರಾಜಕೀಯವಾಗಿ ಎದುರಿಸುವ ಬದಲು ನೆಹರು ಸರ್ಕಾರ ಸೇನೆಯನ್ನು ಬಳಸಿ ಕ್ರೌರ್ಯದ ವಿಧಾನ ಬಳಸಿ ದಮನ ಮಾಡಿತು. ಇಂತಹ ಘಟನೆ ಕಣ್ಣೆದುರಿಗೆ ಇರುವಾಗ ಮೈಸೂರು ಸರಕಾರದ ಪ್ರತಿನಿಧಿಗಳು ಭೂಮಾಲಿಕರ ಪರವಾಗಿ ನಿಂತು ಕಾಗೋಡು ಸತ್ಯಾಗ್ರಹವನ್ನು ಟೀಕಿಸಿದ, ಕಾಗೋಡು ಗೌಡರಿಗೆ ಬೆಂಬಲ ವ್ಯಕ್ತಪಡಿಸಿದ ನೀತಿಯು ಅವರಿಗೆ ಸರಿಯಾಗಿ ಕಂಡಿರಬಹುದು. ಈ ಸತ್ಯಾಗ್ರಹ ರಾಜ್ಯದ ಉದ್ದಕ್ಕೂ ವ್ಯಾಪಿಸಿದರೆ ತಮ್ಮ ಪ್ರಭುತ್ವಕ್ಕೆ ಧಕ್ಕೆಯಾಗಬಹುದೆಂದು, ಇಂತಹ ಬೆಳವಣಿಗೆಗಳನ್ನು ಸಹಿಸುವುದು ಸರ್ಕಾರಕ್ಕೆ ಕಷ್ಟವಾಗಿರಬಹುದು. ಸಮತೆ ಮತ್ತು ಲಿಬರಲ್ ಆದರ್ಶಗಳನ್ನು ಸೊಗಸಾಗಿ ಮಾತನಾಡಬಹುದು ಅವುಗಳೇ ಕಣ್ಣೆದುರಿಗೆ ಮೂರ್ತ ಸ್ವರೂಪ ಪಡೆದುಕೊಳ್ಳಲು ಶುರುವಾದಾಗ ಅದನ್ನು ಮಾತನಾಡುವ ಜನರೆ ನಾಶ ಮಾಡುವುದು ಇತಿಹಾಸದಲ್ಲಿ ಹೊಸದೇನು ಅಲ್ಲ. ಅದನ್ನೆ ಕಾಂಗ್ರೆಸ್ ಸರ್ಕಾರ ಸ್ವಾತಂತ್ರ್ಯ ಪೂರ್ವದಲ್ಲಿ ಮಾಡಿತು ಎಂದರೆ ತಪ್ಪೇನು ಆಗಲಾರದು.' ರಾಜಶೇಖರ್ ಜಿ.ರವರ ಮಾತು ಸತ್ಯವಾಗಿದೆ.

## ಭೂಮಾಲಿಕ ಮತ್ತು ರೈತ ಸಂಘದ ಅಧ್ಯಕ್ಷರ ಹೇಳಿಕೆ - ಪ್ರತಿಹೇಳಿಕೆ

ಭೂಮಾಲಿಕ ಕೆ.ಜಿ.ಒಡೆಯರ್ ಹೇಳಿಕೆ : ಸಾಗರ ತಾಲ್ಲೂಕಿನ ಪ್ರಮುಖವಾಗಿ ಕಾಗೋಡಿನ ಅಕ್ಕ ಪಕ್ಕದ ಕೆಲವು ಗ್ರಾಮಗಳಲ್ಲಿ ಕಳೆದ ಸುಮಾರು ಎರಡು ವರ್ಷಗಳಿಂದ ಕೆಲವು ಗೇಣಿದಾರರಿಂದ ಚಳುವಳಿ ನಡೆಯುತ್ತಿದೆಯಷ್ಟೆ. ಇದನ್ನು ಆಗಾಗ್ಗೆ ಸಾರ್ವಜನಿಕರ ಹಾಗೂ ಸರ್ಕಾರದವರ ಗಮನಕ್ಕೆ ತರಲಾಯಿತು. ಆದರೂ ಕ್ರಮವನ್ನು ತೆಗೆದುಕೊಳ್ಳದೆ ಇದ್ದುದರಿಂದ ಪರಿಸ್ಥಿತಿ ವಿಕೋಪಕ್ಕೆ ಬಂದಿದೆ.

ಮಲೆನಾಡಿನಲ್ಲಿ ಜಮೀನಿನ ವಿಸ್ತೀರ್ಣ ಅಗಾಧವಾಗಿದೆ. ಆದರೆ ರೈತರ ಸಂಖ್ಯೆ ಕಮ್ಮಿ. ಹೀಗಾಗಿ ಅನೇಕ ಕಡೆಗಳಲ್ಲಿ ಜಮೀನು ಹಾಳು ಬಿದ್ದಿದೆ. ಫಲವತ್ತಾದ ಜಮೀನುಗಳು ಅನೇಕ ಎಕರೆ ವಿಸ್ತೀರ್ಣ ಕಾಡು ಪ್ರದೇಶಗಳಾಗಿವೆ. ಇಂತಹ ಪರಿಸ್ಥಿತಿಯಲ್ಲಿ ಒಂದೇ ಶರೀರದಲ್ಲಿನ ಬೇರೆ ಬೇರೆ ಅವಯವಗಳಂತೆ ಹಿಡುವಳಿ ದಾರನೂ ರೈತನೂ ಪ್ರಕೃತಿಯ ನಾನಾ ರೂಪದ ಕ್ರೌರ್ಯಗಳನ್ನು ಎದುರಿಸಿ ಸೌಂದರ್ಯ ಸೌಭಾಗ್ಯವನ್ನು ಅನುಭವಿಸಿಕೊಂಡು ಅಣ್ಣತಮ್ಮಂದಿರಂತೆ, ನಂಟರಿಕರಂತೆ ನಡೆದುಕೊಂಡು ಬಂದು ತಮ್ಮ ಜೀವನಯಾತ್ರೆಯನ್ನು ಸಾಧಿಸಿಕೊಂಡು ಸುಖ ಸಂತೋಷಗಳಿಂದ ಜೀವಿಸುತ್ತಿದ್ದರು. ಇಬ್ಬರೂ ಹೊಂದಿಕೊಳ್ಳದೆ ಗತ್ಯಂತರ'ವಿರಲಿಲ್ಲ: ಹಿಡುವಳಿದಾರನಿಗೆ ಜಮೀನಿನಲ್ಲಿ ಬೆಲೆಯಿಲ್ಲ ರೈತನಲ್ಲಿ ಬೆಲೆಯಿದೆ. ಅಂದಾಗ ಒಕ್ಕಲು ಒಡೆತನ ಮಧುರವಾಗಿರಲೇ ಬೇಕು. ಹಿಡುವಳಿದಾರನು ರೈತನಿಗೆ ಸಕಲ ಕಾಲದಲ್ಲೂ ನೆರವು ನೀಡುತ್ತಾ ಬಂದಿದ್ದಾನೆ. ಕಂದಾಯ ಕಾಣಿಕೆ ಸಕಾಲಕ್ಕೆ ಕಟ್ಟುತ್ತಾ ಬಂದಿದ್ದಾನೆ. ಅನೇಕ ಸಾರಿ ಸಾಲಸೋಲಗಳಿಗೆ ತುತ್ತಾಗಿ ಮನೆ ಮಠ ಕೂಡ ಮಾರಿಕೊಂಡಿದ್ದಾನೆ. ಒಂದು ರೀತಿ ದಯಾಮಯ ಯಜಮಾನತನವಿತ್ತು. ಇಂದು ಇಂತಹ ಪರಿಸ್ಥಿತಿ ಬಿಗಡಾಯಿಸಿದೆ. ಇದರಿಂದ ಉಭಯತಾದಿ ಅನುಕೂಲವಿಲ್ಲ.

ಆದರೆ ರೈತರಲ್ಲೇ ಕೆಲವರು ಏನೂ ತಿಳಿಯದ, ಹಿಂದುಳಿದ ಮತದ ಕಟ್ಟುನಿಟ್ಟುಗಳಿಗೆ ತಲೆಬಾಗುವ ವಿವೇಚನಾ ಶಕ್ತಿ ಇಲ್ಲದ, ಸತ್‌ಸಂಪ್ರದಾಯ ಅರಿಯದ ಈ ರೈತರಿಗೆ ಇಲ್ಲಸಲ್ಲದ ಭರವಸೆಗಳನ್ನೂ ಆಸೆಗಳನ್ನೂ ತೋರಿಸಿ ತಮ್ಮ ನಾಯಕತ್ವದಲ್ಲಿ ಇಂದ್ರಲೋಕವನ್ನು ಭೂಲೋಕಕ್ಕೆ ಇಳಿಸುವಂತಹ ನಂಬಿಕೆಗಳನ್ನು ಬೋಧಿಸಿ ಇವರಲ್ಲಿ ಜನ್ಮಜಾತ ಇದ್ದಂತಹ ನಂಬಿಕೆಯನ್ನು ಕಲಕಿ, ಅವರನ್ನು ತಪ್ಪುದಾರಿಗೆ ಎಳೆದಿದ್ದಾರೆ. ತಪ್ಪು ಯಾರದ್ದು. ಇದನ್ನು ಹೇಗೆ ನಿವಾರಿಸಬೇಕು. ಎಲ್ಲಿ ನಿವಾರಿಸಬೇಕು? ಎಂಬ ಪ್ರಶ್ನೆ ಉದ್ಭವಿಸುತ್ತದೆ.

ಹಾಗೆ ರೈತರನ್ನು ಜಮೀನಿನಿಂದ ಬಿಡಿಸುವ ಪ್ರಶ್ನೆಯೇ ಇಲ್ಲ. ರೈತರನ್ನು ಬಿಡಿಸುವ ಗೋಜಿಗೆ ಹೋಗುವ
ಪ್ರಯತ್ನ ನೂರಾರು ವರ್ಷಗಳಿಂದ ಯಾರು ಹೇಳಿಲ್ಲ. ಕೇಳಿಲ್ಲ. ರೈತರ ಅಬಾದು ಮಲೆನಾಡಿನಲ್ಲಿ ಕಡಿಮೆ
ಯಾದಾಗ ಬಿಡಿಸುವ ಪ್ರಶ್ನೆಯೇ ಏಳುವುದಿಲ್ಲ. 'ನಾವು ಕೊಟ್ಟಷ್ಟು ತೆಗೆದುಕೊಳ್ಳಬೇಕು, ಕೊಡುವ ಪ್ರಮಾಣ
ದಲ್ಲಿ ತೆಗೆದುಕೊಳ್ಳಬೇಕು, ನಾವು ಕೊಡುವುದು ಧರ್ಮದ ಹಾಗೆ, ಸಾಗುವಳಿದಾರನು ಜಮೀನಿನ ಯಜಮಾನ,
ನಾವು ಜಮೀನು ಬಿಡುವುದಿಲ್ಲ, ಸತ್ಯಾಗ್ರಹ ಮಾಡುತ್ತೇವೆ. ಸಾಮೂಹಿಕ ಸತ್ಯಾಗ್ರಹ ಮಾಡುವೆವು ಎಂದು
ಮುಂತಾಗಿ ಕಾನೂನಿಗೆ ವಿರುದ್ಧವಾಗಿ ಚಳುವಳಿ ಹೂಡಿ ಉದ್ರೇಕ ಪೂರಿತವಾದ ಭಾಷಣಗಳನ್ನು ಮಾಡಿ
ಭಯೋತ್ಪಾದನೆ ಉಂಟು ಮಾಡುತ್ತಾ, ಈ ಎರಡು ವರ್ಷದ ಗೇಣಿಯನ್ನೂ, ಸಾಲವನ್ನೂ ಕೊಡದೆ ಮನಸ್ಸಿ
ಯಾಗಿ ನಡೆಯುತ್ತಿದ್ದಾರೆ. ಸರ್ಕಾರದ ದಿಪ್ರೋವಿಗೂ ಅಲ್ಪಸ್ವಲ್ಪ ಕೊಡುತ್ತಾ ಜಮೀನನ್ನು ಅರೂಪಸ್ಥಿತಿಗೆ
ತರುತ್ತಾ ಹಿಡುವಳಿದಾರರ ಮೇಲೆ ಬಲಪ್ರಯೋಗ ಮಾಡುತ್ತಿರುವುದು ಧರ್ಮವೇ?

ಯಾವೊಂದು ವರ್ಗವನ್ನು ಬಡಿಯುವುದರಿಂದ ಮತ್ತೊಂದು ವರ್ಗದ ಹಿತವಾಗದು. ಉಭಯತ್ರ ಹಿತ ಒಮ್ಮತ ಸಮ್ಮತದಲ್ಲಿದೆ.

### ರೈತ ಸಂಘದ ಅಧ್ಯಕ್ಷ ಡಿ.ಮೂಕಪ್ಪನವರ ಹೇಳಿಕೆ

(ಸಾಗರ ತಾಲ್ಲೂಕು ರೈತಸಂಘದ ಅಧ್ಯಕ್ಷರು. ಜಿಲ್ಲಾ ಬೋರ್ಡ್‌ಸದಸ್ಯರು ಆದ ಡಿ. ಮೂಕಪ್ಪನವರು ಜಮೀನ್ದಾರರ ವಿವರಣೆಗೆ ಈ ರೀತಿ ಉತ್ತರವಿತ್ತಿದ್ದಾರೆ)

'ರೈತರಿಗೂ ಜಮೀನುದಾರರಿಗೂ ಮಧುರ ಬಾಂಧವ್ಯ ಇದೆಯೆಂದೂ, ಪರಿಸ್ಥಿತಿ ಕೆಟ್ಟಿಲ್ಲವೆಂದೂ ಹೇಳುತ್ತಾ ಶ್ರೀ ಒಡೆಯರ್‌ರವರು ಅನೇಕ ವರ್ಷಗಳಿಂದ ನಡೆಯಿಸಿಕೊಂಡು ಬಂದ ರೈತರನ್ನು ಈಗ ಹೋಗಿ ಎಂದರೆ, ಎಲ್ಲಿಗೆ ಹೋಗಬೇಕು? ಎಂಬುದಾಗಿ ಪ್ರಶ್ನಿಸಿದ್ದಾರೆ. ಅಕ್ರಮವಾಗಿ ಕಾನೂನಿಗೆ ವಿರುದ್ಧವಾಗಿ ಬಲಾತ್ಕಾರದಿಂದ ಈಗ ರೈತರನ್ನು ಬಿಡಿಸುತ್ತಿರುವವರೇ ಈ ಪ್ರಶ್ನೆಗೆ ಉತ್ತರ ಹೇಳಬೇಕು, ಎಲ್ಲಿ ಹೋಗಬೇಕು? ಈಗ ಏಕೆ ರೈತರನ್ನು ಬಿಡಿಸಬೇಕು? ಎಂಬ ಪ್ರಶ್ನೆಯನ್ನು ರೈತರು ಕೇಳುತ್ತಿದ್ದಾರೆ. ಈವರೆಗೆ ಈ ಪ್ರಶ್ನೆಗೆ ಯಾರು ಉತ್ತರ ಕೊಟ್ಟಿಲ್ಲ. ಇದು ತುಂಬಾ ವಿಸ್ಮಯಕರವಾಗಿದೆ.

ದೊಡ್ಡ ತತ್ವಗಳನ್ನು ಧಾರಾಳವಾಗಿ ಇತರರಿಗೆ ಉಪದೇಶ ಮಾಡಬಹುದು ತಾವು ಆಚರಿಸುವುದು ಮಾತ್ರ ಕಷ್ಟ. ಕೊಟ್ಟಿದ್ದನ್ನು ತೆಗೆದುಕೊಳ್ಳಿ ಎಂದು ಗೇಣಿದಾರರು ಹೇಳಿದರೆ ತಪ್ಪು, ಆದರೆ ಕೇಳಿದಷ್ಟು ಕೊಡಬೇಕೆಂದು ಹಿಡುವಳಿದಾರರು ಬಲಾತ್ಕರಿಸಿದರೆ ತಪ್ಪಿಲ್ಲ.

ಕೆಲವು ಕಡೆ ಜಮೀನುದಾರರು ಕಡ್ಡಾಯವಾಗಿ ಮಾಡಿಸುತ್ತಿದ್ದ, ಮನುಷ್ಯತ್ವಕ್ಕೆ ಹೀನವಾದ ಬಿಟ್ಟಿ ಕೆಲಸದ ಪದ್ಧತಿಯನ್ನು, ಜೀತದ ಪದ್ಧತಿಯನ್ನು ಅನೇಕ ಮಾಮೂಲಿಗಳ ಹೆಸರಿನ ಸುಲಿಗೆಯನ್ನು ಅಕ್ರಮವಾದ ಅಳತೆ ತೂಕದ ಬಹಿರಂಗ ಮೋಸದ ಪದ್ಧತಿಯನ್ನು ರೈತರು ಸಂಘಟಿತರಾಗಿ ಇನ್ನು ಸಹಿಸಬಾರದೆಂದು ನಿರ್ಧರಿಸಿರುವುದರಿಂದ, ಕೆಲವು ಜಮೀನುದಾರರು ರೈತರ ಮೇಲೆ ಅಪಪ್ರಚಾರಕ್ಕೆ ತೊಡಗಿರುವುದು ತೀರಾ ಖಂಡನೀಯ.

ರೈತ ಸಂಘದ ನ್ಯಾಯವಾದ ಬೇಡಿಕೆಗಳಿಗೆ ಸಮ್ಮತಿಸಿದ ಎಷ್ಟೋ ಮಂದಿ ಜಮೀನುದಾರರು ಅದರಂತೆ ನಡೆದುಕೊಂಡಿದ್ದಾರೆ. ಕಾಗೋಡಿನ ಸುತ್ತಮುತ್ತಲ ಕೆಲ ಗ್ರಾಮಗಳಲ್ಲಿ ಮಾತ್ರ ಈ ಗೊಂದಲವಾಗಿದೆ.

ಅನೇಕ ವರ್ಷಗಳಿಂದ ಕೆಲವು ಜಮೀನುದಾರರ ಶೋಷಣೆಗೆ ಒಳಗಾಗಿದ್ದ ರೈತರು ತಮಗೆ ನ್ಯಾಯ ದೊರಕಬೇಕೆಂದೂ, ಕಾನೂನಿನ ರಕ್ಷಣೆ ಬೇಕೆಂದೂ, ಕೇಳುತ್ತಿರುವುದನ್ನು 'ಚಳುವಳಿ' ಎಂದು ಹೇಳಿ ಉತ್ಪ್ರೇಕ್ಷೆ ಮಾಡುವುದು ನಾಡ್ನ ಮಿತ್ರರೂ, ಹಿರಿಯರೂ, ಮೇಲಾಗಿ ಮುಖಂಡರೂ ಆದ ಶ್ರೀ ಒಡೆಯರಂತವರಿಗೆ ಭೂಷಣವಲ್ಲ. ನ್ಯಾಯಬದ್ಧವಲ್ಲ.

ನ್ಯಾಯವಾಗಿ ಧರ್ಮಕ್ಕೆ ಅನುಸಾರವಾಗಿ ಹಾಗೂ ಕಾನೂನಿಗೆ ಅನುಗುಣವಾಗಿ ಬೇಸಾಯ ಮಾಡುವ ರೈತರನ್ನು, ಈ ಬಿತ್ತನೆ ಕಾಲದಲ್ಲಿ ಬೇಸಾಯ ಮಾಡದಂತೆ ಜಮೀನುದಾರರುಗಳು ಅನ್ಯಥಾ ತೊಂದರೆಗೊಳಪಡಿಸಿ ತಡೆಯುತ್ತಿದ್ದಾರೆಯೇ ವಿನಃ ರೈತರ ಗೊಂದಲವೇನೂ ಇಲ್ಲಾ. ಜಮೀನುದಾರರುಗಳು ತಡೆಯುತ್ತಿರುವುದು ಮಾತ್ರ ಭಯಂಕರ ಅನ್ಯಾಯವಾಗಿದೆ. ಇದು ಕೇವಲ ತಾಲ್ಲೂಕಿನ ಪರಿಸ್ಥಿತಿಯಲ್ಲ. ಒಡೆಯರ ಊರಾದ

ಕೇವಲ ಕಾಗೋಡು ಗ್ರಾಮವಾದ ಒಂದು ಊರಿನ ಒಬ್ಬ ಜಮೀನುದಾರರಿಗೂ ನೂರಾರು ಬಡ ಮತ್ತು ಕಷ್ಟ ಸಹಿಷ್ಣುಗಳಾದ ರೈತರಿಗೂ ಸಂಬಂಧಪಟ್ಟ ಏಕಮಾತ್ರ ವಿಚಾರ ಅಷ್ಟೇ!

ರೈತರು ಇಂದಿನವರೆಗಿನ ಗೇಣಿಯನ್ನು ಪೂರ್ತಿ ಪಾವತಿ ಮಾಡಿರುತ್ತಾರೆ. ರೈತರು ಎಂದೂ ಸಾಗುವಳಿ ಮಾಡುವವರು ಭೂಮಿಯ ಒಡೆಯರೆಂದು ಹೇಳಿಲ್ಲ. ರೈತರು ಕೊಟ್ಟಷ್ಟನ್ನು ಕೊಟ್ಟ ಪ್ರಮಾಣದಲ್ಲಿ ತೆಗೆದು ಕೊಳ್ಳಬೇಕೆಂದು ಕೇಳಿದ್ದಾರೆ. ತಮ್ಮ ಸಾಗುವಳಿ ಹಕ್ಕಿಗೆ ರಕ್ಷಣೆ ಕೊಡಬೇಕೆಂದೂ ಪ್ರಾರ್ಥಿಸಿದ್ದಾರೆ. ಸತ್ಯಾಂಶ ಹೀಗಿದ್ದರೂ ಕೆಲವರು ಜಮೀನುದಾರರು, ರೈತರು ಎಂದೂ ಎಷ್ಟು ಮಾತ್ರಕ್ಕೂ ಹೇಳದ, ಮನಸ್ಸಿನಲ್ಲಿಯೂ ಸಹ ಯೋಚಿಸದ ಮಾತನ್ನು ರೈತರುಗಳ ಅಭಿಪ್ರಾಯವೆಂದೂ ಹೇಳಿ ಅಪಪ್ರಚಾರ ಮಾಡುತ್ತಿರುವುದು ಜನರಿಗೂ, ಸರ್ಕಾರಕ್ಕೂ ಮಂಕುಬೂದಿ ಎರಚಲು ಯತ್ನಿಸುತ್ತಿರುವುದು ತೀರ ಖಂಡನೀಯವಾಗಿದೆ.

ಕಾಗೋಡು ಗ್ರಾಮದ ಜಮೀನುದಾರರು ತಮಗೆ ಸರ್ಕಾರದ ಬೆಂಬಲವಿರುವುದರಿಂದಲೂ, ತಾವು ಪ್ರಭಾವ ಶಾಲಿಯಾದ ಕಾಂಗ್ರೆಸ್ ಮುಖಂಡರೆನಿಸಿಕೊಂಡಿರುವುದರಿಂದಲೂ, ಸರ್ಕಾರಕ್ಕೆ ಉತ್ಪ್ರೇಕ್ಷೆಯಿಂದ ಕೂಡಿದ, ಸತ್ಯದೂರವಾದ ಸಂಗತಿಗಳನ್ನು ವರದಿ ಮಾಡಿ, ಅಕ್ರಮವಾಗಿ ಬಡ ಜೋರೆಗೌಡನ ಹಣದಿಂದ ತಮ್ಮ ಮನೆಗೆ ಸುಮಾರು ಮೂರು ತಿಂಗಳಿಂದ, ಹದಿನೈದು-ಇಪ್ಪತ್ತು ಜನ ಪೋಲೀಸರನ್ನೂ, ಸರ್ಕಾರದ ವೆಚ್ಚದಲ್ಲಿ ಪಡೆದುಕೊಂಡು ತಾವು ಬಡರೈತರ ಮೇಲೆ ಭಯಂಕರವಾಗಿ ಲಾಠಿ ಚಾರ್ಜ್ ನಡೆಸಿದ್ದಾರೆ. ಕರುಣೆಗೆ ಪಾತ್ರರಾದ ರೈತರಿಗೆ ಬುಟ್ಟ ಮತ್ತು ಪಾದರಕ್ಷೆಗಳ ಪ್ರಯೋಗಗಳನ್ನು ಕೊಟ್ಟು, ಆ ರುಚಿಗಳನ್ನು ರೈತ ವರ್ಗವಾದ ಸ್ತ್ರೀ, ಪುರುಷ, ಅಬಾಲ ವೃದ್ಧರಾದ ರೈತಬಾಂಧವರು ಎಂದೆಂದಿಗೂ ಮರೆಯದ ಮಾತಾಗಿ ಉಳಿದಿರುವುದು ಸ್ಪಷ್ಟವಾದ ಸಂಗತಿಯಾಗಿದೆ. ಅಕ್ರಮವಾಗಿ ಸುಮಾರು ಇನ್ನೂರು ಬಡ ರೈತರನ್ನು ಹಿಂಸಿಸಿ ದಸ್ತಗಿರಿ ವಗೈರೆ ಅಕ್ರಮ ಕಾನೂನು ಜಾರಿ ಮಾಡಿಸಿರುತ್ತಾರೆ. ಹಾಗು ಇದಕ್ಕೆಲ್ಲಾ ಮೂಲ ಕಾರಣರೂ, ಜಮೀನುದಾರರೂ ಆದ ನಿಮ್ಮಿಂದ ಮಾತ್ರವೇ ಹಲವು ಸುಳ್ಳು ಕೇಸುಗಳಿಂದ ನೂರಾರು ಜನ ರೈತರ ಮೇಲೆ ದಸ್ತಗಿರಿ ಮಾಡಿಸಿದ್ದಾರೆ. ಎಲ್ಲಕ್ಕಿಂತ ಹೆಚ್ಚಾಗಿ ನೂರಾರು ವರುಷಗಳಿಂದ ವಂಶ ಪಾರಂಪರ್ಯವಾಗಿ ಒಂದೇ ಸಮನೆ ಸಾಗುವಳಿ ಮಾಡುತ್ತಿರುವ ರೈತರ ನೂರಾರು ಬಡಕುಟುಂಬಗಳನ್ನು ಮಳೆಗಾಲ ಪ್ರಾರಂಭವಾಗಿರುವ ಈ ಬಿತ್ತನೆ ಕಾಲದಲ್ಲಿ ನಿರಾಶ್ರಿತರ ನ್ನಾಗಿಯೂ, ನಿರ್ಗತಿಕರನ್ನಾಗಿಯೂ ಮಾಡಿ, ದೇಶಾಂತರ ಓಡಿಸಲು ಯತ್ನಿಸುತ್ತಿದ್ದಾರೆ. ರೈತರ ಮೇಲೆ ಇಷ್ಟೆಲ್ಲಾ ಅತ್ಯಾಚಾರಗಳನ್ನು ನಡೆಸುತ್ತಲೇ ರೈತರಿಗೆ ವಿವೇಕ ಹೇಳ ಹೊರಟಿರುವುದು ಎಲ್ಲರಿಗೂ ತಿಳಿದಿದೆ. ಈ ಕಾಲದಲ್ಲಿ ಯಾರು ಯಾರನ್ನು ವಂಚಿಸಲು ಸಾಧ್ಯವಿಲ್ಲ.

ಕಾಂಗ್ರೆಸ್ಸಿನ ಮುಖಂಡರೆನಿಸಿಕೊಂಡು ರೈತರ ಮೇಲೆ ನಿಷ್ಕರುಣೆಯಿಂದ ಲಾಠಿ ಪ್ರಹಾರ ಮಾಡಿಸುವುದಕ್ಕಿಂತ, ನೀವು ಗೌರವದಿಂದ ಕಾಂಗ್ರೆಸ್ಸಿಗೆ ರಾಜೀನಾಮೆ ಇತ್ತು, ನಿಜವಾದ ಜಮೀನುದಾರರಾಗಿಯೇ, ನಿಜವೇಷದಿಂದಲೇ ಹೊರಬಂದರೆ ದೇಶಕ್ಕೂ, ರೈತರಿಗೂ ತುಂಬಾ ಉಪಕಾರವಾದೀತು, ಇಷ್ಟೆ ನನ್ನ ಸವಿನಯ ಪ್ರಾರ್ಥನೆ. (ಮೇ ೧೫, ಮಂಗಳವಾರ ೧೯೫೧ರಂದು ಪ್ರಜಾವಾಣಿ ಪತ್ರಿಕೆಯಲ್ಲಿ ಪ್ರಕಟವಾದ ಭೂಮಾಲಿಕ ಮತ್ತು ರೈತ ಸಂಘದ ಅಧ್ಯಕ್ಷರ ಹೇಳಿಕೆ - ಪ್ರತಿ ಹೇಳಿಕೆ. (ಡಾ.ಕಾಳೇಗೌಡ ನಾಗವಾರ, ಜಿ.ವಿ.ಆನಂದಮೂರ್ತಿ, ೧೯೯೭, ಪುಟ ೧೬೩.)

## ೮.೩. ಪ್ರಜಾವಾಣಿ ಪತ್ರಿಕೆಯ ಧೋರಣೆಗಳು

ನಮ್ಮ ದೇಶ ಜನರ ಭದ್ರತೆ, ಬೆಳವಣಿಗೆಗಾಗಿ ಪ್ರಜೆಗಳೇ ಸೃಷ್ಟಿಸಿದ ಶಾಸಕಾಂಗ, ಕಾರ್ಯಾಂಗ ಮತ್ತು ನ್ಯಾಯಾಂಗ ವ್ಯವಸ್ಥೆಯು ಪ್ರಜಾಪ್ರಭುತ್ವದ ಮೂರು ಪ್ರಮುಖ ಅಂಗಗಳೆಂದು ಗುರುತಿಸಿದೆ. ಹಾಗೂ ನಾಲ್ಕನೆಯ ಅಂಗವೆಂದು ಪತ್ರಿಕಾರಂಗವನ್ನು ಕರೆಯುತ್ತೇವೆ. ಯಾವುದೇ ಪತ್ರಿಕೆ ನ್ಯಾಯಕ್ಕೆ, ಸತ್ಯಕ್ಕೆ, ವಿಚಾರಕ್ಕೆ ಜನಹಿತಕ್ಕೆ ಬದ್ಧವಾಗಿರಬೇಕು. ಶಾಸಕಾಂಗ, ಕಾರ್ಯಾಂಗದ ತಪ್ಪು ಹೆಜ್ಜೆಗಳನ್ನು ಪ್ರತಿಭಟಿಸಿ ಬರೆಯುವ ಸಾಹಸ ಪತ್ರಿಕೆಯದ್ದಾಗಿದೆ. ಕರ್ನಾಟಕದ ಪ್ರಮುಖ ಪತ್ರಿಕೆಯಾದ ಪ್ರಜಾವಾಣಿ ಮೊದಮೊದಲು ರೈತರ ಪರವಾಗಿ ವರದಿಗಳನ್ನು (ನಿಜ ಸ್ಥಿತಿಯನ್ನು) ಸಂಪಾದಕೀಯವನ್ನು ಪ್ರಕಟಿಸಿತು. ತದನಂತರ ಸರಕಾರದ ಪರವಾಗಿ ತನ್ನ ಧೋರಣೆಯನ್ನು ಇದ್ದಕ್ಕಿದ್ದಂತೆ ಸಂಪೂರ್ಣ ಬದಲಾಯಿಸಿಕೊಂಡಿತು. ಸಮಾಜವಾದಿ ಪಕ್ಷದ ಪ್ರವೇಶ ಮತ್ತು ಪತ್ರಿಕೆಯ ಬದಲಾದ ಧೋರಣೆ ಏಕಕಾಲದಲ್ಲಿ ನಡೆದದ್ದು ಆಕಸ್ಮಿಕವಲ್ಲ. ಸಂಪೂರ್ಣವಾಗಿ ಜಮೀನುದಾರರ ಮತ್ತು ಸರ್ಕಾರದ ಪರವಾಗಿ ಲೇಖನಗಳು, ಸಂಪಾದಕೀಯವನ್ನು ಪ್ರಕಟಿಸುತ್ತಾ ಬಂದಿತು. ವಿಚಾರಕ್ರಾಂತಿ ಬಿದ್ದವನ್ನು ಪತ್ರಿಕಾರಂಗ ಯಾವತ್ತೂ ಬಳಸುತ್ತಾ, ರಾಜಕಾರಣಿಗಳಿಗೆ, ಜನರಿಗೆ ಮಾರ್ಗ ದರ್ಶನ ಮಾಡುವಂತೆ ಇರಬೇಕು. 'ಸಿಡಿದೀತು' ಎಂಬ ತಲೆಬರಹದಡಿ ರೈತರ ಪರವಾಗಿ ಸಂಪಾದಕೀಯ ವನ್ನು ಪ್ರಕಟಿಸಿತು.

**ಸಿಡಿದೀತು** (ಡಾ.ಕಾಳೇಗೌಡ ನಾಗವಾರ, ಜಿ.ಪಿ.ಆನಂದಮೂರ್ತಿ, ೧೯೯೭, ಪುಟ ೧೬೭)

೧೬-೫-೧೯೫೧ ನೇ ಬುಧವಾರದಂದು ಪ್ರಜಾವಾಣಿ ಪ್ರಕಟಿಸಿದ ಸಂಪಾದಕೀಯ:

ರೈತ ನೇಗಿಲಯೋಗಿ. ತಾಳ್ಮೆಯ ಪ್ರತಿಮೂರ್ತಿ. ದಣಿ ಹೊರಿಸುವ ಶ್ರಮದ ನೊಗವನ್ನು ತನ್ನ ಎತ್ತುಗಳು ಹೊರುವಂತೆ ಹೊತ್ತು ಆತ ಹಾರಿಸುವ ಕಿರುಕುಳದ ಚಾಟಿ ಏಟುಗಳನ್ನು ಸಹಿಸಿ ದುಡಿದು ದಣಿದ ಜೀತಗಾರ, ಆತನಿಗೆ ಸಾಮಾನ್ಯಕ್ಕೆ ಕೋಪಬಾರದು. ಹೊರಗಿನ ಪ್ರಪಂಚದಲ್ಲಿ ಎಷ್ಟೇ ಅಲ್ಲೋಲ ಕಲ್ಲೋಲವಾಗಿದ್ದರೂ ಇನ್ನೂ 'ಮಾಲೀಕ ಹೆಚ್ಚು ಪುಣ್ಯ ಮಾಡಿದವನು. ಅದಕ್ಕೆ ಆತನಿಗೆ ಸಿರಿ ಒಲಿದಿದ್ದಾಳೆ. ಗುಲಾಮನಂತೆ ದುಡಿದು ತೀರಿಸಬೇಕಾದ ಋಣದ ಭಾರ ತನ್ನ ಮೇಲೆ ಬೇಕಾದಷ್ಟಿದೆ' ಎಂದು ನಂಬುವ ಸ್ಥಿತಿಯಲ್ಲೇ ಇದ್ದಾನೆ.

ಆಧುನಿಕ ಬಾಳ್ವೆಯ ಕೇಂದ್ರಗಳಾದ ನಗರಗಳಲ್ಲಿ ವಾಸಿಸುವ ಕಾರ್ಮಿಕನಿಗೆ ಬೀಳುವ ಹೊಸ ತತ್ವಗಳ ಬೆಳಕು ರೈತನ ಮೇಲೆ ಏನೂ ಪರಿಣಾಮವನ್ನು ಉಂಟುಮಾಡದು. ಅಕ್ಷರ ಜ್ಞಾನ, ಪತ್ರಿಕಾ ಪ್ರಚಾರ ವಿಶ್ವಾನುಭವ ಆತನಿಗಂತೂ ದೂರ. ಆದರೆ ಈ ಜಡಭರತನಂತಹ ರೈತ ವಿಶ್ವಾಮಿತ್ರನ ಕೋಪ ತಾಳಿದರೆ, ಅದರಿಂದ ಕ್ರಾಂತಿಯ ಸಿಡಿಮದ್ದುಗಳು ಹಾರುವವು ಎಂಬುದರಲ್ಲಿ ಸಂಶಯವೇನು?

ಸಾಗರದ ಕಾಗೋಡಿನ ಸುತ್ತಮುತ್ತಲ ಗ್ರಾಮಗಳಿಂದ ಕಳೆದ ಎರಡು ತಿಂಗಳಿಂದ ಬರುತ್ತಿರುವ ರೈತರ ಸತ್ಯಾಗ್ರಹ ಬಂಧನಗಳ ಸುದ್ದಿ ಪರಂಪರೆಗಳನ್ನು ಈ ದೃಷ್ಟಿಯಿಂದ ವಿಶ್ಲೇಷಿಸಿದರೆ, ಮೇಲೆ ಕಾಣುವಷ್ಟು ಸಾಮಾನ್ಯದ ಪ್ರಕರಣವೆಂದು ಉಪೇಕ್ಷಿಸುವ ಸಂಗತಿಯದಲ್ಲವೆಂದು ಅರ್ಥವಾದೀತು. ಈ ಗ್ರಾಮಾಂತರಗಳ ರೈತರು ಕೇವಲ ರೈತರಲ್ಲ. ಮಲೆನಾಡ ರೈತರು ಹಚ್ಚಿದ ಮಲೆಗಳ ದಟ್ಟವಾದ ಕಾಡುಗಳ ಮಧ್ಯೆ ಬಾಹ್ಯ ಜಗತ್ತಿಗೆ ದೂರವಾಗಿದೆ ಎಂಬಂತೆ ಪ್ರತ್ಯೇಕವಾಗಿ ಬಾಳುತ್ತಿರುವವರು. ಈ ಜನ ಪೋಲಿಸರ ಲಾರೀ ಪ್ರಹಾರಗಳನ್ನು, ಬಂಧನಗಳನ್ನು ಸಹಿಸಿಕೊಂಡು ಸತ್ಯಾಗ್ರಹ ನಡೆಸುತ್ತಿರಬೇಕಾದರೆ ಬಹಳ ಬಲವತ್ತರವಾದ ಕಾರಣಗಳಿರಬೇಕೆಂಬುದರಲ್ಲಿ ಸಂಶಯವಿಲ್ಲ.

ಈ ಸಂಬಂಧವಾಗಿ ನಿನ್ನೆಯ ಪತ್ರಿಕೆಯಲ್ಲಿ ಜಮೀನುದಾರರ ಪರವಾದ ಕೆ.ಜಿ.ಒಡೆಯರರ ಮತ್ತು ರೈತರ ಪರವಾದ ಮೂಕಪ್ಪನವರ ಹೇಳಿಕೆಗಳನ್ನು ಪ್ರಕಟಿಸಿದ್ದೇವೆ. ಕೃಷಿ ಕಲಹದ ಮೂಲ ಬೆಳವಣಿಗೆ ಮತ್ತು ಪ್ರಕೃತಿ ಪರಿಸ್ಥಿತಿಯನ್ನು ಉಭಯರೂ ತಮ್ಮ ತಮ್ಮ ದೃಷ್ಟಿ ಕೋನಗಳಿಂದ ವಿವರಿಸಿದ್ದಾರೆ. ಬಹುಮಟ್ಟಿಗೆ ಇಬ್ಬರ ವಾದಗಳೂ ಭಿನ್ನವಾಗಿದ್ದರೂ ಒಂದು ವಿಷಯ ಮಾತ್ರ ಎರಡರಲ್ಲೂ ಎದ್ದು ಕಾಣುತ್ತದೆ.

ತಲತಲಾಂತರಗಳಿಂದ ರೂಢಿಸಿಕೊಂಡು ಬಂದಿದ್ದ ರೈತರನ್ನು ತಮ್ಮ ಜಮೀನುಗಳಿಂದ ಉಚ್ಚಾಟನೆ ಮಾಡಲು ಹಿಡುವಳಿದಾರರು ಹೂಡಿರುವ ಸಂಚೇ ಇಂದಿನ ಪ್ರಕ್ಷುಬ್ಧ ವಾತಾವರಣಕ್ಕೆ ಕಾರಣವೆಂಬುದು ನಿಸ್ಸಂಶಯ. ಕಾರಣವೇನೆ ಇರಲಿ ಈ ಕ್ರಮ ತೀವ್ರ ಖಂಡನೀಯ. ಅದರಲ್ಲೂ ವಿರಾಮಜೀವಿ ಜಮೀನುದಾರರನ್ನು ಪೋಷಣೆ ಮಾಡಿಕೊಂಡು ಬಂದ ಹಸುಮಕ್ಕಳಂತಹ ರೈತರನ್ನು ಪೋಲಿಸರು ಲಾಠಿ ಪ್ರಹಾರ, ಬಂಧನ, ಹಿಂಸೆಗಳಿಗೆ ಗುರಿ ಮಾಡಿರುವುದನ್ನಂತೂ ಕ್ರೌರ್ಯ ಎಂದೇ ಕರೆಯಲಾಗಿದೆ.

ಉಳುಮೆಗಾರ ಭೂಮಿಯೊಡೆಯನೋ ಅಲ್ಲವೋ ಎಂಬ ತತ್ವಗಳ ಚರ್ಚೆ ಅತ್ತ ಇರಲಿ, ಆದರೆ ಹಿಡುವಳಿದಾರನ ಗುಲಾಮನಾಗಿ, ಜೀತದ ಆಳಾಗಿ, ನೇಗಿಲ ಎತ್ತಾಗಿ ದುಡಿದ ರೈತನಿಗೆ ಉಚ್ಚಾಟನೆಯ ಕೊಡುಗೆ ದ್ರೋಹವಲ್ಲವೇ? ಇಲ್ಲಿ ಒಂದು ಮಾತಿದೆ. ಸಣ್ಣ ಹಿಡುವಳಿದಾರನ ಪ್ರಶ್ನೆ ಇಂದಿನ ಸಂದರ್ಭದಲ್ಲಿ ವಿರಳ. ಆತ ಕೂಡ ರೈತನೆಂದೇ ಹೇಳಬೇಕು. ರೈತನಿಗೆ ಕಷ್ಟಕೊಡುವಷ್ಟು ಚೈತನ್ಯ ಆತನಲ್ಲಿಲ್ಲ. ಇಂದಿನಂತಹ ಪ್ರಕ್ಷುಬ್ಧ ವಾತಾವರಣದಲ್ಲಿ ಆತನಿಗೆ ದೊರಕುವುದು ಕಷ್ಟವೇ. ಕಾಡಬಲ್ಲವ ಭಾರೀ ಜಮೀನುದಾರ ಮಾತ್ರ. ಗ್ರಾಮಾಭಿವೃದ್ಧಿಗೆ ಬದ್ಧವಾದ ಕಾಂಗ್ರೆಸ್ ಸರ್ಕಾರ ಇಷ್ಟು ದಿನದ ಮೌನದ ಜೊತೆಗೆ ಇನ್ನೂ ಮೌನವಾಗಿ ಕೂಡದೆ ಪೋಲಿಸರನ್ನು ವಾಪಾಸ್ ಕರೆಸಲಿ. ರೈತರ ಯೋಗಕ್ಷೇಮದ ರಕ್ಷಣೆಯ ಭರವಸೆ ನೀಡಲಿ. ಅಲ್ಲದೆ ಉದ್ವಿಗ್ನ ವಾತಾವರಣವನ್ನು ಹಾಗೇ ಉಳಿಯಲು ಬಿಟ್ಟಲ್ಲಿ ಭಯಂಕರ ಅಸ್ಫೋಟನ ಸಂಭವಿಸುವುದರಲ್ಲಿ ಸಂಶಯವಿಲ್ಲ. ಪರಿಣಾಮವೇನಾದೀತು? ಎಂಬುದನ್ನರಿಯಲು ಸರ್ಕಾರದ ಉನ್ನತ ವಲಯಗಳಲ್ಲಿ ಕಾತುರವೇ ಕಾಣುತ್ತಿಲ್ಲದಿರುವುದು ವಿಷಾದಕರ. ಈವರೆಗೂ ಪರಿಸ್ಥಿತಿಯ ಪರಿಶೀಲನೆಗಾಗಿ ಭೇಟಿಕೊಟ್ಟು ಸ್ಥಿತಿಗತಿ ಅರಿಯ ಲೆತ್ನಿಸುವುದು ಅಗತ್ಯ(ಪ್ರಾ.ಓ.ಟಿ.ಬೋರಲಿಂಗಯ್ಯ, ಹೆಚ್.ಹುಚ್ಚಪ್ಪ ಮಾಸ್ತರ್, ೨೦೦೨, ಪುಟ ೧೬೩).

ಪ್ರಜಾವಾಣಿ ಕಾಗೋಡು ರೈತಕ್ರಾಂತಿಯನ್ನು ಸಿಡಿಮದ್ದಿಗೆ, ವಿಶ್ವಾಮಿತ್ರನ ಕೋಪಕ್ಕೆ ಹೋಲಿಸಿತು. ಬದಲಾವಣೆಯ ಗಾಳಿ ಬೀಸಲಿದೆ ಎಂದು ರೈತರ ಪರವಾಗಿ ಬರೆದ ಸಂಪಾದಕೀಯದ ನಂತರ ತನ್ನ ಧೋರಣೆಯನ್ನು ಬದಲಾಯಿಸಿತು.

### ಜಮೀನುದಾರರ ಪರವಾದ ಪ್ರಜಾವಾಣಿ ಪತ್ರಿಕೆಯ ಧೋರಣೆ

'ಕಾಗೋಡಿನಲ್ಲಿ ಪರಿಸ್ಥಿತಿ ಉಗ್ರವಾಗುತ್ತಿರುವುದರ ಜೊತೆಗೆ ಸತ್ಯಾಗ್ರಹ ರೂಪವೂ ಬದಲಾಗುತ್ತಿದೆ. ಮಲೆನಾಡಿನಲ್ಲಿ ತಲತಲಾಂತರದಿಂದ ನಡೆದುಕೊಂಡು ಬರುತ್ತಿರುವ ಗೇಣಿದಾರ ಪದ್ಧತಿ ಇಷ್ಟು ದಿನವೂ ಒಡೆಯ ಒಕ್ಕಲುಗಳ ಮಧುರ ಸೌಹಾರ್ದದಿಂದ ನಡೆದುಕೊಂಡು ಬರುತ್ತಿದ್ದುದು ಈ ದ್ವೇಷಕ್ಕೆ ಸ್ವಾಗತವೀಯುವುದರಲ್ಲಿ ರೈತ-ಹಿಡುವಳಿದಾರ ಇವರಿಬ್ಬರಲ್ಲದೆ ಮೂರನೆಯವರ ಪ್ರೇರಣೆ ಅಗತ್ಯವಾಗಿ ಇದ್ದೇ ಇರಬೇಕು. ಕಾಗೋಡು ಚಳುವಳಿಯ ಮಟ್ಟಿಗೆ ಹೇಳುವುದಾದರೆ ಈ ತೃತೀಯ ಶಕ್ತಿಯಾದ ಸೋಷಲಿಸ್ಟ್ ಪಾರ್ಟಿಯ ಪ್ರವೇಶದಿಂದ

ಒಂದು ವಿಧದಲ್ಲಿ ರೈತರ ಹಿತ ಸಾಧನೆಯಾಗುವುದು ಹಾಗಿರಲಿ- ಇದೀ ಪರಿಸ್ಥಿತಿಯೇ ಗೊಂದಲಕ್ಕಿಟ್ಟುಕೊಂಡು ಯಾವ ಹಿತವೂ ಸಾಧಿತವಾಗಲೂ ಅವಕಾಶ ತಪ್ಪಿದಂತಾಗಿದೆ. ಉಳುವವನೇ ನೆಲದೊಡೆಯ ಮುಂತಾದ ಘೋಷಣೆಗಳು ಉಚ್ಚಾರಕ್ಕೆ ಚೆಂದ. ಪ್ರಸ್ತುತ ಪರಿಸ್ಥಿತಿಯಲ್ಲಿ ಅನ್ವಯಕ್ಕೆ ಕಠಿಣ ಎಂಬುದನ್ನು ಸೋಷಲಿಸ್ಟರೂ ಅವರನ್ನು ಅವಲಂಬಿಸಿರುವ ಚಳುವಳಿ ನಡೆಸುತ್ತಿರುವ ಶ್ರಮಜೀವಿ ನತದೃಷ್ಟ ರೈತಗಣವೂ ಅರಿಯುವುದು ಅಗತ್ಯ. ಈಚಿನ ವರದಿಗಳ ಮತ್ತು ರೈತ ಸಂಘದವರ ಹೇಳಿಕೆ ಪ್ರಕಾರ ಕಾಗೋಡಿನ ಹಿಡುವಳಿದಾರರು ಒಂದು ಮಧ್ಯಸ್ಥವಾದ ಧಾನ್ಯ ಅಳತೆ ಒಪ್ಪಂದಕ್ಕೆ ಬಂದು ಹಲವು ರಿಯಾಯಿತಿಗಳನ್ನು ತೋರಿಸಲು ಸಿದ್ಧವಾಗಿದ್ದರೂ ಸೋಷಲಿಸ್ಟ್ ಸತ್ಯಾಗ್ರಹದ ಚಾಲಕರು ತಮ್ಮ ಮೂಲ ಕೇಳಿಕೆಗಳನ್ನೇ ಪಟ್ಟು ಹಿಡಿದು ಸಂಧಾನ ಮುರಿಯಲು ಕಾರಣರಾದರೆಂಬುದು ವಿಷಾದನೀಯ'(ಪ್ರಜಾವಾಣಿ ೩೧-೫-೫೧)

ಜಮೀನುದಾರರು ಮತ್ತು ಸರ್ಕಾರದ ನಿಯೋಗ ಸಂಧಾನದಲ್ಲಿ ರೈತರಿಗೆ ಮಾರಕವಾದ ಅಂಶಗಳೇ ತುಂಬಿದ್ದವು. ಕಾಗೋಡು ಜಮೀನಿನ ಬದಲಿಗೆ ಕೆಂಜಿಗಾಪುರದಲ್ಲಿ ಜಮೀನು ಕೊಡುವುದು ಇದೊಂದು ಅಮಾನವೀಯ ಕೊಡುಗೆ ಎಂದು ಹೇಳಬಹುದು. ಕಾಗೋಡು ಗೌಡರು ಕೊಳಗದಲ್ಲಿ ಯಾವುದೇ ವ್ಯತ್ಯಾಸ ಆಗುವುದಕ್ಕೆ ಸುತಾರಾಂ ಒಪ್ಪಲಿಲ್ಲ. ಅವರು ತಮ್ಮ ಹಠಮಾರಿತನವನ್ನು ಬಿಡಲಿಲ್ಲ. ಸರ್ಕಾರದಿಂದ ಗೌಡರ ಮೇಲೆ ಯಾವ ಒತ್ತಾಯವನ್ನು ತರಲಿಲ್ಲ. ಅದೊಂದು ಏಕಪಕ್ಷೀಯ ಸಂಧಾನವಾಗಿತ್ತು. ಇದು ಎಲ್ಲಾ ತಿಳಿದ ಪತ್ರಿಕೆ ಹಸಿ ಸುಳ್ಳಿನ ಸಂಪಾದಕೀಯ ಪ್ರಕಟಿಸಿತು.

೧೯೫೧ ಜೂನ್ ೩ರ ಪ್ರಜಾವಾಣಿ ಸಂಚಿಕೆಯಲ್ಲಿ 'ಕಾಗೋಡು ಗೌಡರು ಸಣ್ಣ ಹಿಡುವಳಿದಾರರೇ ಹೊರತು ಭಾರೀ ಜಮೀನ್ದಾರರಲ್ಲ: ದಣಿ ಒಕ್ಕಲುಗಳ ಮಧ್ಯೆ ಅನಾದಿ ಕಾಲದಿಂದಲೂ ಮಧುರ ಸೌಹಾರ್ದವಿದೆ. ಕಾಗೋಡು ಚಳುವಳಿಯಲ್ಲಿ ೧೦-೧೫ ಮೈಲಿ ದೂರ ಬೇರೆ ಬೇರೆ ಊರಿನ ಜನರು ದೊಡ್ಡ ಸಂಖ್ಯೆಯಲ್ಲಿ ಸೇರಿ ಅವಾಚ್ಯ ಶಬ್ದಗಳಿಂದ ಕಾಗೋಡು ಗೌಡರನ್ನು ನಿಂದಿಸುತ್ತಾ ಅವರ ಮನೆಗೆ ಬೆಂಕಿ ಇಡಬೇಕೆಂದು ಕೂಗುತ್ತಾರೆ. ಈ ಎಲ್ಲಾ ದೃಶ್ಯವನ್ನು ನೋಡಿದರೆ ಯಾವ ನಿಮಿಷದಲ್ಲಿ ಏನು ಬೇಕಾದರೂ ಸಂಭವಿಸಬಹುದೆಂದು ತೋರುತ್ತದೆ. ಹಕ್ಕು ಬಾಧ್ಯತೆಗಳ ರಕ್ಷಣೆಗಾಗಿ ಪೋಲಿಸ್ ಸಹಾಯವನ್ನು ಕೋರಬಾರದೆ? ಅಥವಾ ಕೆಲವರ ಆಕ್ಷೇಪಣೆಯಂತೆ ಪೋಲಿಸರನ್ನು ವಾಪಾಸು ಕರೆದರೆ ಬಡ್ಡರೇ ಬಡ್ಡರಾದ ಹಿಡುವಳಿದಾರರು ಅಲ್ಲಿ ತಮ್ಮ ಹಕ್ಕು ಬಾಧ್ಯತೆಗಳನ್ನು ಇಟ್ಟುಕೊಂಡು ಹೋಗಲು ಸಾಧ್ಯವೇ!'(ಪ್ರಜಾವಾಣಿ ೩-೬-೫೧)

ಕಾಗೋಡು ಸತ್ಯಾಗ್ರಹದಲ್ಲಿ, ಸತ್ಯಾಗ್ರಹಿಗಳು ಯಾವುದೇ ಹಿಂಸೆ ಮಾಡಲಿಲ್ಲ. ಗಾಂಧೀವಾದ ಅಸಹಕಾರ ಚಳುವಳಿಯ ಸ್ವರೂಪದಂತೆ ಚಳುವಳಿ ಮಾಡಿದರು. ಮೆರವಣಿಗೆ ಮುಖಾಂತರ ಗದ್ದೆಗೆ ತೆರಳುವುದು ಬೇಲಿ ಕೀಳುವುದು, ಜಮೀನು ಉಳುಮೆ ಮಾಡುವುದು, ಜಯ ಘೋಷಗಳನ್ನು ಹಾಕುವುದು ಮುಂತಾದ ಅಹಿಂಸಾತ್ಮಕ ಮಾರ್ಗಗಳನ್ನು ಅವಲಂಬಿಸಿದ್ದರು. ಯಾವ ಸತ್ಯಾಗ್ರಹಿಯು ಭೂಮಾಲೀಕರ ಮೇಲೆ ದೈಹಿಕ ಹಲ್ಲೆ ಮಾಡಲಿಲ್ಲ. ಅದರಲ್ಲೂ ಸೋಷಲಿಸ್ಟ್ ಅನುಯಾಯಿಗಳು ಹಿಂಸೆಯನ್ನು ವಿರೋಧಿಸುತ್ತಿದ್ದರು. ಸೋಷಲಿಸ್ಟ್ ಮುಖಂಡರಾಗಿದ್ದ ಗೋಪಾಲಗೌಡರು 'ಯಾವ ರೈತ ಅಥವಾ ಸತ್ಯಾಗ್ರಹಿ ಹಿಂಸೆಗಿಳಿಯುವುದಾದರೆ ನಾನು ಚಳುವಳಿಯಲ್ಲಿ ಭಾಗವಹಿಸುವುದಿಲ್ಲ' ಎಂದು ಹೇಳುತ್ತಿದ್ದರು. ಪ್ರತಿಯೊಬ್ಬರು ಗಾಂಧೀಯುವರ ಆದರ್ಶಗಳನ್ನು ಪಾಲಿಸು

ತ್ತಿದ್ದರು. ಆದರೆ ಸತ್ಯಾಗ್ರಹಿಗಳ ಮೇಲೆ, ಮನೆಯಲ್ಲಿದ್ದ ಮಹಿಳೆಯರ, ಅಬಾಲ ವೃದ್ಧರ ಮೇಲೆ ಪೋಲಿಸರು ಧಾರಾಳ ಹಿಂಸೆ ನಡೆಸಿದರು. ಡಾ.ಲೋಹಿಯಾರವರ ಬಂಧನದ ರಾತ್ರಿ ಕಾಗೋಡಿನಲ್ಲಿ ಪೋಲಿಸರು ಹಿಂಸಾ ತಾಂಡವ ನೃತ್ಯ ನಡೆಸಿದರು. ಆದರೆ ಪತ್ರಿಕೆ ಇದಾವುದನ್ನು ವರದಿ ಮಾಡಲಿಲ್ಲ.

ಪ್ರಜಾವಾಣಿ ಪತ್ರಿಕೆ ಸತ್ಯಾಗ್ರಹದ ಉದ್ದಕ್ಕೂ ವಿರೋಧಿ ಧೋರಣೆ ಹೊಂದಿತು. ಈ ಪತ್ರಿಕೆಯಲ್ಲದೆ ಮತ್ತೆರಡು ಪ್ರಮುಖ ಪತ್ರಿಕೆಯಾದ 'ತಾಯಿನಾಡು' ಮತ್ತು 'ವಿಶ್ವ ಕರ್ನಾಟಕ' ಪ್ರಜಾವಾಣಿ ಧೋರಣೆಗಳನ್ನು ತಳೆದಿದ್ದವು. ಪ್ರಜಾವಾಣಿಯ ಮೊದಲ ಸಂಪಾದಕೀಯ ಮತ್ತು ನಂತರದ ಬದಲಾದ ಧೋರಣೆಗೆ ಸರ್ಕಾರ ಮತ್ತು ಭೂಮಾಲಿಕರು ಪತ್ರಿಕೆಯ ಮಾಲಿಕರ ಮೇಲೆ ಒತ್ತಡದಿಂದಿರುವುದು. ಈ ಬದಲಾದ ಧೋರಣೆ ಪತ್ರಿಕಾ ಸಂಪಾದಕರ ವೈಯಕ್ತಿಕ ನಿರ್ಧಾರವಲ್ಲ. ಇವರು ಪರಿಸ್ಥಿತಿಯ ಕೈಗೊಂಬೆಯಾಗಿದ್ದರು. ಪತ್ರಿಕಾ ಮಾಲೀಕರು ಮತ್ತು ಸರ್ಕಾರದ ನಡುವಿನ ಸಂಬಂಧ ಸೌಹಾರ್ದವಾಗಿತ್ತು.

ಪ್ರಜಾವಾಣಿ ಪತ್ರಿಕೆ ತನ್ನ ಧ್ಯೇಯ ಧೋರಣೆಗಳಿಗೆ ದ್ರೋಹ ಬಗೆದುಕೊಂಡಿತು. ಪ್ರಮುಖ ಅಂಗವೆಂದೂ ಗುರುತಿಸಲಾದ ಪತ್ರಿಕಾರಂಗಕ್ಕೆ ದ್ರೋಹ ಬಗೆಯಿತು. ಅನೇಕ ಕ್ಷುದ್ರ ಸುಳ್ಳುಗಳ ಸರಮಾಲೆಯನ್ನು ಸೃಷ್ಟಿಸಿತು. ರೈತರ ಧ್ವನಿಗೆ ಧ್ವನಿಯಾಗಿ ನಿಲ್ಲಲಿಲ್ಲ. ಒಂದು ನೂತನ ವಿಚಾರಧಾರೆಗೆ ಸ್ಪಂದಿಸಲಿಲ್ಲ. ಉಳ್ಳವರ ಪರ ವಕಾಲತ್ತು ವಹಿಸಿತು. ರೈತರ ಬಗ್ಗೆ ನಾಡಿನ ತುಂಬಾ ಅಪಪ್ರಚಾರದಲ್ಲಿ ತೊಡಗಿತು. ಇಂತಹ ಬೆಳವಣಿಗೆ ಪತ್ರಿಕಾ ವೃತ್ತಿಗೆ ಬಗೆದ ದ್ರೋಹ ಇದು ನಾಡಿನ ದೌರ್ಭಾಗ್ಯ. ಹೀಗೆ ಪ್ರಗತಿಪರ ಆಲೋಚನೆಗಳನ್ನು ಬೆಂಬಲಿಸುವ ಪ್ರಮುಖ ವಾಹಕವಾದ ಪತ್ರಿಕೆ ಭೂಮಾಲಿಕರ ಪರ ಧ್ವನಿಗೂಡಿಸಿರುವುದು ಒಂದು ದುರಂತವೇ ಸರಿ.

## ೮.೪.ದೀವರ ಜನಾಂಗದ ಸ್ಥಿತ್ಯಂತರಗಳು

### ಸತ್ಯಾಗ್ರಹದ ನಂತರ ದೀವರ ಸ್ಥಿತಿಗತಿಗಳು

ಸತ್ಯಾಗ್ರಹದ ನಂತರ ದೀವರ ಸ್ಥಿತಿ ಬಹಳ ಹದಗೆಟ್ಟಿತು. ದೀವರ ಜನಾಂಗ ಮತ್ತು ಸಮಾಜವಾದಿ ಪಕ್ಷದ ಬೇಡಿಕೆಗಳೇನಿದ್ದವು ಅದು ಈಡೇರಲಿಲ್ಲ. ಒಗ್ಗಟ್ಟಾಗಿ ಹೋರಾಟ ಮಾಡಿಯು ಸಂದರ್ಭದಲ್ಲಿ ಸೋಲನ್ನು ಅನುಭವಿಸಿತು. ಇದಕ್ಕೆ ಕಾರಣ ಮಲೆನಾಡಿನ ರೈತರ ಆರ್ಥಿಕ ಪರಿಸ್ಥಿತಿ. ಹೋರಾಟಗಳು ದೀರ್ಘ ಕಾಲ ನಡೆದಾಗ ಬದುಕಿನ ಪ್ರಶ್ನೆ ಹೋರಾಟ ನಿರತ ರೈತರನ್ನು ಕಾಡಿರಬಹುದು. ೧-೧೦-೧೯೫೧ರಂದು ಸತ್ಯಾಗ್ರಹ ಮುಕ್ತಾಯದ ಹಂತಕ್ಕೆ ಬಂದಿತು. 'ತಲತಲಾಂತರದಿಂದ ಭೂಮಿ ಸಾಗುವಳಿ ಮಾಡಿದ ರೈತನಿಗೆ ಭೂಮಿ ಸ್ವಾದೀನವಾಗಬೇಕು' ಎಂಬ ಸಿ.ಜಿ.ಕೆ.ರೆಡ್ಡಿಯವರ ಒಂದಂಶದ ಮಾರ್ಗದರ್ಶಿ ಸೂತ್ರದಿಂದ ಸತ್ಯಾಗ್ರಹ ಮುಕ್ತಾಯವಾಯಿತು. ೧೯೫೨ರಲ್ಲಿ ಪ್ರಥಮ ವಿಧಾನಸಭಾ ಚುನಾವಣೆ ನಡೆಯಲು ಪ್ರಾರಂಭವಾದವು. ಈ ಎಲ್ಲಾ ಕಾರಣಗಳು ರೈತರ ಹಿತಕ್ಕೆ ದಕ್ಕೆ ತಂದಿದ್ದವು. ಆಕ್ಟೋಬರ್ ಕಾಲಕ್ಕೆ ಮಲೆನಾಡಿನ ಜಮೀನು ಹಸಿರಿನಿಂದ ಕಂಗೊಳಿಸುತ್ತಾ ಫಲವಂತಿಕೆ (ಭೂಮಿಹುಣ್ಣಿಮೆ) ಹಬ್ಬಕ್ಕೆ ಸಜ್ಜಾಗುವ ಕಾಲ, ಆದರೆ ಹೋರಾಟದಿಂದಾಗಿ ಜಮೀನು ಪಾಳು ಬಿದ್ದವು. ರೈತರಿಗೆ ಉಪವಾಸವೇ ಎಂಬ ವಾತಾವರಣ ಸೃಷ್ಟಿಯಾಯಿತು. ಯಾವ ಸರ್ಕಾರವಾಗಲಿ ಸಂಘಟನೆಗಳಾಗಲಿ ಇಂತಹ ಜ್ವಲಂತ ಸಮಸ್ಯೆಯ ಬಗ್ಗೆ ಆಲೋಚನೆ ಮಾಡಲಿಲ್ಲ. ಗೋಪಾಲಗೌಡರಂತಹ

ಮತ್ತೆ ಗೇಣಿಗೆ ಪಡೆಯಲಿಲ್ಲ. ಇವರುಗಳು ಯಾವಾಗಲು ಪ್ರತಿಗಾಮಿ ಧೋರಣೆಯನ್ನು ಹೊಂದಿದ್ದರು. ಈಗ ಇವರೆಲ್ಲಾ ಕಾಗೋಡು ಗ್ರಾಮದವರ ಬಾಯಲ್ಲಿ ಕಥೆಯಾಗಿ ಈಗಲೂ ಉಳಿದಿದ್ದಾರೆ.

ಕಾಗೋಡು ಗೌಡರು ಒಕ್ಕಲುಗಳು ಮಾಡಿಕೊಂಡಿದ್ದ ಸುಮಾರು ೬೦ ಎಕರೆಯಷ್ಟು ಜಮೀನನ್ನು ಕಾಗೋಡಿನಲ್ಲಿ, ಶುಂಠಿಕೊಪ್ಪದಲ್ಲಿ ಸುಮಾರು ೪೦ ಎಕರೆಯಷ್ಟು ಒಳ್ಳೆಯ ಫಲವತ್ತಾದ ಭೂಮಿಯನ್ನು ಬೇಸಾಯಕ್ಕೆ ಇಟ್ಟುಕೊಂಡಿರುವುದು. ಭೂಸುಧಾರಣೆ ಕಾನೂನಿನ ನಂತರ ಉಳಿಯಲು ಕಾರಣವಾಯಿತು. ಅದರಲ್ಲಿ ಹೆಚ್ಚಿನ ಭಾಗದಲ್ಲಿ ತೋಟ ಹಾಕಿಸಿರುವುದರಿಂದ ಈಗ ಆರ್ಥಿಕವಾಗಿ ಸುಧಾರಿಸಿದ್ದಾರೆ. ಮೊದಲು ಗೌಡರ ಒಂದೇ ಮನೆಯಿತ್ತು. ಈಗ ಗೌಡರ ಉತ್ತರಾಧಿಕಾರಿಗಳು ಬಿಸ್ಸೆಯಾಗಿ ಐದಾರು ಮನೆಗಳಾಗಿ ಆರ್ಥಿಕವಾಗಿ ಏರುಪೇರುಗಳನ್ನು ಅನುಭವಿಸುತ್ತಿದ್ದಾರೆ.

### ಸತ್ಯಾಗ್ರಹದಿಂದಾದ ಪರಿಣಾಮಗಳು

ಸತ್ಯಾಗ್ರಹದ ತತ್‌ಕ್ಷಣದ ಪರಿಣಾಮವೇನು? ಎಂದು ಕೇಳಿದಾಗ ಉತ್ತರ ಮೇಲ್ನೋಟಕ್ಕೆ ಕಂಡು ಬರುವ ಅಂಶವೆಂದರೆ ಸಾಧನೆ ಶೂನ್ಯ ಎಂಬುದು. ಯಾವ ಬೇಡಿಕೆಗಳು ಈಡೇರಲಿಲ್ಲ. ಒಡೆಯ-ಒಕ್ಕಲು ಸಂಬಂಧಗಳು ಹಾಳಾದವು ಎಂಬಿತ್ಯಾದಿ ಉತ್ತರ ದೊರೆಯುತ್ತವೆ. ಸತ್ಯಾಗ್ರಹ ಸಂದರ್ಭದಲ್ಲಿ ಸೋಲು ಅನುಭವಿಸಿದರೆ ಇನ್ನೊಂದರ್ಥದಲ್ಲಿ ಜಯಗಳಿಸಿತು ಎಂದು ವಿಶ್ಲೇಷಿಸಬಹುದು. ತಲತಲಾಂತರದಿಂದ ಬಂದಿದ್ದ ಗುಲಾಮಿ ಸಂಸ್ಕೃತಿ ಕಳಚಿ ಕರಾರಿನ ಸಂಸ್ಕೃತಿ ಬೆಳೆಯಿತು. ಒಕ್ಕಲುಗಳು ಗೌಡರ ಆಶ್ರಿತರು, ಒಡೆಯರ ಮನೆಗೆ ಬಿಟ್ಟಿಯಾಗಿ ದುಡಿಯಬೇಕು ಎಂಬಿತ್ಯಾದಿ ಭಾವನೆಗಳು ಹೋಗಿ, ಜಮೀನು ಮಾಡುತ್ತೇವೆ ಅದಕ್ಕೆ ಗೇಣಿ ಕೊಡುತ್ತೇವೆ ಎಂಬ ಲೆಕ್ಕಾಚಾರದ ಭಾವನೆ ತಳೆಯಿತು. ಗೌಡರ ಜಮೀನನ್ನು ಅಳೆದು, ಗೇಣಿ ನಿಗದಿ ಮಾಡಿ ಕರಾರು ಮಾಡಿರುವ ದಾಖಲೆಯೇ ರೈತರಿಗೆ ಭೂಸುಧಾರಣಾ ಶಾಸನ ಬಂದ ಸಂದರ್ಭದಲ್ಲಿ ಯಾವ ತಕರಾರು ಇಲ್ಲದೆ ಜಮೀನು ಪಡೆಯಲು ಸಾಧ್ಯವಾಯಿತು. ಹೀಗೆ ದೀರ್ಘಾವಧಿಯ ಲಾಭವನ್ನು ಸತ್ಯಾಗ್ರಹ ತಂದು ಕೊಟ್ಟಿತು.

ಕಾಗೋಡು ಸತ್ಯಾಗ್ರಹದಿಂದಾಗಿ ಗೋಪಾಲಗೌಡರಂತಹ ನಾಯಕರ ರಾಜಕೀಯ ಸೃಷ್ಟಿಗೆ ಕಾರಣವಾಯಿತು. ಅವರು ವಿಧಾನಸಭೆಯಲ್ಲಿ ಸ್ಫೋಟಿಸಲು ಸರ್ಕಾರವನ್ನು ಪೇಚಿಗೆ ಸಿಕ್ಕಿಸಲು ಸಾಧ್ಯವಾಯಿತು. ಆದರೆ ಹೋರಾಟದಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡ ಗಣಪತಿಯಪ್ಪ, ಗರುಡಶರ್ಮ, ಹಾ. ಸ. ಕೃಷ್ಣಮೂರ್ತಿ ಮುಂತಾದವರು ರಾಜಕೀಯ ನಾಯಕರಾಗಿ ಬೆಳೆಯಲಿಲ್ಲ. ಇದಕ್ಕೆ ಅವರವರ ವೈಯಕ್ತಿಕ ನಿರ್ಧಾರ, ನಿಲುವು ಕಾರಣವಾಗಿರಬಹುದು. ಕಾಗೋಡು ಸತ್ಯಾಗ್ರಹದ ರುವಾರಿ, ಮೂಲ ಪುರುಷ ಹೆಚ್. ಗಣಪತಿಯಪ್ಪ ಬಿಟ್ಟು ತಾಲ್ಲೂಕು ಮಟ್ಟದ ರಾಜಕಾರಣಿಯಾಗುವ ಎಲ್ಲಾ ಸಾಧ್ಯತೆಗಳಿದ್ದರು ಆಗದೆ ಇರುವುದು ವಿಷಾದನೀಯ. ಅವರ ರಾಜಕೀಯ ಜೀವನವೇ ವಿಚಿತ್ರವಾಗಿತ್ತು. ಗಣಪತಿಯಪ್ಪ ಮೊದಲು ಕಡಿದಾಳ ಮಂಜಪ್ಪನವರ ಜೊತೆಯಿದ್ದು ನಂತರ ಸೋಷಲಿಸ್ಟ್‌ರ ಜೊತೆ ಸೇರಿದರು. ನಂತರ ಇಲ್ಲಿಯು ಬಿಟ್ಟು ಕಾಂಗ್ರೆಸ್ ಸೇರಿದರು.

ಒಂದು ವಿಚಿತ ನಿರ್ಧಾರವಿರಲಿಲ್ಲ. ಗಣಪತಿಯಪ್ಪನವರನ್ನು ಗೋಪಾಲಗೌಡರು ತಮ್ಮ ಪಕ್ಷ ಸೇರಲು ಒತ್ತಾಯಿಸಿದಾಗ ಗಣಪತಿಯಪ್ಪ ತಿರಸ್ಕರಿಸಿದರು. ಆಗ ಗೌಡರು 'ನಮ್ಮ ಪಕ್ಷ ಬೆಳೀಬೇಕಾದರೆ ನಿನ್ನಂತ

ರಾಜಕಾರಣಿ ಮಾತ್ರ ಈ ಸಮಸ್ಯೆಗೆ ಸ್ಪಂದಿಸಿ ಗಣಪತಿಯಪ್ಪನವರ ಜೊತೆಯಲ್ಲಿ ಮಾತನಾಡಿ ಒಂದು ಸಮಿತಿ ರಚಿಸಿ 'ಹೊರಗಡೆಯ ಊರುಗಳಿಂದ ಭತ್ತ ಸಂಗ್ರಹಿಸುವ' ಕಾರ್ಯವನ್ನು ವಹಿಸಿದರು. ಆದರೆ ಸಂಗ್ರಹವಾದ ಭತ್ತ ಬಹಳ ಕಡಿಮೆ. ಅಕ್ಕ ಪಕ್ಕ ಊರುಗಳಾದ ದೀವ ರೈತರೆಲ್ಲರು ಹೆಚ್ಚಾಗಿ ಗೇಣಿರೈತರಾಗಿದ್ದರು. ಈ ಗೇಣಿರೈತರ ಪರಿಸ್ಥಿತಿ ಆರ್ಥಿಕವಾಗಿ ಬಹಳ ಹೀನ ಸ್ಥಿತಿಯಲ್ಲಿತ್ತು. ಸಹಾಯ ಮಾಡಬೇಕೆಂಬ ಮನಸ್ಸಿದ್ದರು, ಕೊಡಲು ಅವರಲ್ಲಿ ಏನು ಇರಲಿಲ್ಲ. ಸ್ವಂತ ಜಮೀನು ಹೊಂದಿದ ಭೂಮಾಲಿಕ ದೀವರು ಈ ಹೋರಾಟದಿಂದ ಸ್ವಲ್ಪ ದೂರವೇ ಇದ್ದರು. ಕಾಗೋಡು ಸಮಾಜ ಬೀರನಾಯ್ಕರು ಹೋರಾಟದಲ್ಲಿ ಭಾಗಿಯಾಗಿ ಗೋಪಾಲಗೌಡರ ಜೊತೆಯಲ್ಲಿ ಭಾಗವಹಿಸಿದ್ದರು. ೭೦ ದೀವರ ಕುಟುಂಬಕ್ಕೆ ಯಾವ ರೀತಿಯಾಗಿ ಸಹಾಯ ಮಾಡಲು ಸಾಧ್ಯ. ಹೊರ ಊರುಗಳಿಂದ ಒಟ್ಟು ಸಂಗ್ರಹವಾದ ಭತ್ತ ಐವತ್ತು ಚೀಲ. ಇದು ೭೦ ಮನೆಗಳಿಗೆ ಎಷ್ಟು ದಿನಕ್ಕೆ ಸಾಕಾಗುತ್ತದೆ?

ಈ ಎಲ್ಲಾ ಅಂಶಗಳು ಹೋರಾಟದ ಕಾವಿನಲ್ಲಿ ಅಗೋಚರವಾಗಿದ್ದವು. ತದನಂತರ ಗೋಚರಿಸಲು ತೊಡಗಿದವು. ಹೆಚ್ಚಿನ ಸತ್ಯಾಗ್ರಹಿಗಳು (ಸಮಾಜವಾದಿ) ಹೊರ ಊರುಗಳಿಂದ ಬಂದವರು. ಅವರು ಬರುವಾಗ ಏನನ್ನು ತರಲು ಸಾಧ್ಯ. ಕಾಗೋಡು ಹೋರಾಟ ದೀರ್ಘಕಾಲದವರೆಗೆ ನಡೆದಿರುವುದರಿಂದ ಆರ್ಥಿಕ ಪ್ರಶ್ನೆ ಪ್ರಬಲವಾಗಿ ಕಾಡುತ್ತದೆ.

ಎಲ್ಲಾ ದೀವರು ಸತ್ಯಾಗ್ರಹದ ನಂತರ ಕಾಗೋಡು ಗೌಡರ ಒಕ್ಕಲುಗಳೇ ಆದರು. ಕಾಗೋಡು ಗುರುವಯ್ಯ ಗೌಡರು ಒಕ್ಕಲು ಮಾಡಿಕೊಂಡಿದ್ದ ಜಮೀನನ್ನು ಆದಲು ಬದಲಾಯಿಸಿದರು. ಇದಕ್ಕೆ ಕಾರಣ ಕೆಲ ರೈತರು ಹಿಂಬಾಗಿಲಿನ ಮುಂಖಾತರ ಗೌಡರ ಸ್ನೇಹ ಚೆನ್ನಾಗಿ ಇಟ್ಟುಕೊಂಡಿದ್ದರು. ಇಂತಹವರಿಗೆ ಒಳ್ಳೆಯ ಜಮೀನು ಲಭ್ಯವಾಯಿತು. ಜಮೀನನ್ನು ಅಳೆದು ಎಕರೆಯ ಲೆಕ್ಕ ಹಾಕಿ ಗೇಣಿ ನಿಗದಿ ಮಾಡಿದರು. ಹಳೆಯ ಗೇಣಿ ಪದ್ಧತಿಯನ್ನು ಮುಂದುವರಿಸಿಕೊಂಡು ಹೋದರು. ಗೇಣಿ ನಿಗದಿ ಮಾಡಿ ಕರಾರು ಬರೆಯಿಸಿಕೊಂಡರು. ಗೇಣಿ ಅಳೆಯಿಸಿಕೊಳ್ಳುವುದರಲ್ಲಿ ಕಟ್ಟುನಿಟ್ಟಿನ ಕ್ರಮ ಅನುಸರಿಸಿದರು. ಮೊದಲಿನ ಔದಾರ್ಯ ರಿಯಾಯಿತಿಗಳು ಕಾಣದಾದವು. ಇದಕ್ಕೆಲ್ಲಾ ಕಾರಣವು ಇದೆ. ಈ ಹೋರಾಟದಿಂದ ಕಾಗೋಡು ಗೌಡರಿಗೆ ಆರ್ಥಿಕ ಪೆಟ್ಟು ಬಿದ್ದಿತು. ಒಂದು ವರ್ಷದ ಗೇಣಿಯು ಬರಲಿಲ್ಲ (ಬಿತ್ತನೆಯಾಗಿರಲಿಲ್ಲ). ಸತ್ಯಾಗ್ರಹದ ವೇಳೆ ಕಾಗೋಡು ಗೌಡರ ಮನೆಯಲ್ಲಿ ದಿನನಿತ್ಯ ೨೦೦ ಜನರಿಗೆ ಊಟ ಉಪಚಾರ ಮಾಡಬೇಕಾಗಿತ್ತು. '೫೦,೦೦೦ ರೂಪಾಯಿ ಯಷ್ಟು ಖರ್ಚು ಸತ್ಯಾಗ್ರಹದಿಂದ ಆಯಿತು. ಸತ್ಯಾಗ್ರಹದ ನಂತರ ಆರ್ಥಿಕ ಪರಿಸ್ಥಿತಿ ತುಂಬಾ ಹದಗೆಟ್ಟಿತು. ರಿಯಾಯಿತಿ ತೋರಿಸುವ ಸ್ಥಿತಿಯಲ್ಲಿರಲಿಲ್ಲ ಎಂದು ಗೌಡರ ಮನೆಯವರು ಹೇಳುತ್ತಾರೆ. ಕೊಳಗದ ಪ್ರಮಾಣ ದಲ್ಲಿ ಬದಲಾವಣೆಯಾಯಿತು' ಎಂದು ಗಣಪತಿಯಪ್ಪ ಹೇಳುತ್ತಾರೆ. ಆದರೆ ರೈತರು ಕೊಳಗದ ಪ್ರಮಾಣ ಮೊದಲಿದ್ದಂತೆ ೩.೫ ಸೇರಿನಲ್ಲಿ ಭತ್ತ ಅಳೆಯಿಸಲಾಯಿತು ಎಂದು ಹೇಳುತ್ತಾರೆ. ಒಟ್ಟಾರೆ ಮೊದಲಿದ್ದ ಔದಾರ್ಯದ, ವಿಶ್ವಾಸದ, ಒಡೆಯ-ಒಕ್ಕಲು ಸಂಬಂಧ ಲೆಕ್ಕಾಚಾರದ ಅಳತೆಯ ಸಂಬಂಧವಾಗಿ ಬದಲಾಯಿತು.

ಕಾಗೋಡು ದೀವರಲ್ಲಿ ಎಲ್ಲರಿಗಿಂತಲೂ ಕ್ರಾಂತಿಕಾರಿಯಾಗಿ ಭಾಗವಹಿಸಿದ, ಜೈಲುವಾಸ ಅನುಭವಿಸಿದ್ದ, ಎಲೆಕನ್ನ, ಕಣಸೆ ಚೆಟ್ಟಿ, ಮುಟಗುಪ್ಪೆ ಕೆರಿಯಪ್ಪ, ಚೌಡಪ್ಪ, ಕೆಂಚಪ್ಪ ಇವರುಗಳು ಗೌಡರ ಜಮೀನನ್ನು

ಹವರನ್ನು ಗುಂಡು ಹಾಕಬೇಕು' ಎಂದು ಹೇಳಿದ್ದರಂತೆ. ಒಂದು ವಿಚಿತ್ರ ನಿರ್ಧಾರವನ್ನು ತಳೆದಿದ್ದರೆ ಈ ಭಾಗದ ಬಡವರ ನೈಜ ಪ್ರತಿನಿಧಿಯಾಗಬಹುದಿತ್ತು. ಗಣಪತಿಯಪ್ಪನವರ ಗೊಂದಲದ ನಿಲುವುಗಳಿಂದಾಗಿ ಸಾಧ್ಯವಾಗಲಿಲ್ಲ. ಸಮಾಜವಾದಿಗಳು ಒಂದು ಎಡಪಂಥೀಯ ರೈತ ಸಂಘಟನೆಯನ್ನು ಮಲೆನಾಡಿನಲ್ಲಿ ಬೆಳೆಸಲಾಗಲಿಲ್ಲ. ಸಮಾಜವಾದಿ ಪಕ್ಷ ಬೆಳೆಯಲು ಕಾಗೋಡು ಸತ್ಯಾಗ್ರಹ ಒಂದು ವೇದಿಕೆಯನ್ನು ಒದಗಿಸಿತ್ತು. ಇಂತಹದೆ ಅನೇಕ ಸಮಸ್ಯೆಗಳ ವಿರುದ್ಧ ಮಲೆನಾಡಿನ ಭಾಗದಲ್ಲಿ ಕಾರ್ಯಕ್ರಮ ಹಮ್ಮಿಕೊಂಡು ಚಟುವಟಿಕೆಯಿಂದ ಕೆಲಸ ಮಾಡಿದ್ದರೆ, ಕರ್ನಾಟಕದಲ್ಲಿ ಸಮಾಜವಾದಿ ಪಕ್ಷವನ್ನು ಪ್ರಬಲಗೊಳಿಸಬಹುದಿತ್ತು. ಜನರಲ್ಲಿ ರಾಜಕೀಯ ಪ್ರಜ್ಞೆ ಬೆಳೆಸಬಹುದಿತ್ತು. ಇದಾವುದು ಸಾಧ್ಯವಾಗಲಿಲ್ಲ. ಸಾಗರ ತಾಲ್ಲೂಕಿನಲ್ಲಿ ಸೋಷಲಿಸ್ಟ್ ಪಕ್ಷ ಎರಡು ಬಾರಿ ಮಾತ್ರ ಚುನಾವಣೆಯಲ್ಲಿ ಗೆದ್ದಿತು. ೧೯೫೨ರ ಪ್ರಥಮ ಚುನಾವಣೆಯಲ್ಲಿ ಗೋಪಾಲಗೌಡರು, ೧೯೭೨ರ ಚುನಾವಣೆಯಲ್ಲಿ ಕಾಗೋಡು ತಿಮ್ಮಪ್ಪನವರು, ಸೋಷಲಿಸ್ಟ್ ಪಕ್ಷದಿಂದ ಗೆದ್ದ ಅಭ್ಯರ್ಥಿಗಳು. ಇದಕ್ಕೆ ಕಾರಣ ಸೋಷಲಿಸ್ಟ್ ಚಳುವಳಿ ಕಾಗೋಡು ಗ್ರಾಮದಿಂದ ದಾಟಿ ಜಿಲ್ಲೆ ರಾಜ್ಯಾದ್ಯಂತ ವ್ಯಾಪಿಸಲಿಲ್ಲ. ಹೊರಗಿನ ತಾಲ್ಲೂಕಿನ ಗೇಣಿದಾರ ರೈತರನ್ನು ಕಾಂಗ್ರೆಸ್ ಪಕ್ಷದ ಪ್ರಭಾವದಿಂದ ಈಚೆಗೆ ತರುವ ಪ್ರಯತ್ನದಲ್ಲಿ ಸಮಾಜವಾದಿ ಪಕ್ಷ ಯಶಕಾಣಲಿಲ್ಲ. ಸಾಗರ ತಾಲ್ಲೂಕಿನಲ್ಲಿ ಸಮಾಜವಾದಿ ಪಕ್ಷದ ಕಾಗೋಡು ತಿಮ್ಮಪ್ಪನವರು ಚುನಾವಣೆಯಲ್ಲಿ ಗೆದ್ದರೆ, ಪಕ್ಕದ ಸೊರಬ ತಾಲ್ಲೂಕಿನಲ್ಲಿ ಬಂಗಾರಪ್ಪನವರು ಕಾಂಗ್ರೆಸ್ ಪಕ್ಷದ ಅಭ್ಯರ್ಥಿಯಾಗಿ ಗೆದ್ದಿರುವುದನ್ನು ಗಮನಿಸಿದರೆ ಸಮಾಜವಾದಿ ಪಕ್ಷದ ವ್ಯಾಪ್ತಿ ಗೋಚರಿಸುತ್ತದೆ. ದೇವರಾಜ ಅರಸುರವರ 'ಭೂ ಸುದಾರಣಾ ತಿದ್ದುಪಡಿ'ಯಿಂದಾಗಿ ಸಮಾಜವಾದಿ ಪಕ್ಷಕ್ಕಿದ್ದ ಚೂರುಪಾರು ಬೆಂಬಲವು ಇಲ್ಲದಾಯಿತು.

ಕಾಗೋಡು ಸತ್ಯಾಗ್ರಹದಿಂದಾದ ಒಳ್ಳೆಯ ಪರಿಣಾಮವೆಂದರೆ ದೀವರು ಒಗ್ಗಟ್ಟಾದರೆ ಒಂದು ಶಕ್ತಿಯಾಗಿ ತಾವೂ ಕಾಣಬಹುದು ಎಂಬ ಆತ್ಮಸ್ಥೈರ್ಯವನ್ನು ಬೆಳೆಸಿತು. ಈ ಒಗ್ಗಟ್ಟು ದೀವರ ಆರ್ಥಿಕ ಸ್ಥಿತ್ಯಂತರಕ್ಕೆ ಮೂಲಕಾರಣವಾಯಿತು. ಸಾಗರ, ಸೊರಬ, ಹೊಸನಗರ ತಾಲ್ಲೂಕಿನಲ್ಲಿ ಈಗಲೂ ದೀವ ಮುಖಂಡರು ಚುನಾವಣೆಯಲ್ಲಿ ಜಯಭೇರಿ ಬಾರಿಸುವುದು ಆಯಾ ತಾಲ್ಲೂಕಿನ ಬಹುಸಂಖ್ಯಾ ದೀವರಿಂದಲೆ ಎಂದರೆ ತಪ್ಪಾಗಲಾರದು. ಈ ತರಹದ ಜಾಗೃತಿಯನ್ನು ಒಂದು ಆರ್ಥಿಕ ಹೋರಾಟ ಸಾಧಿಸಿತು ಎಂದರೆ ತಪ್ಪಾಗಲಾರದು. ಇದನ್ನು 'ಜಾತೀಯತೆ' ಎಂದು ಕರೆಯುವುದು ಸರಿಯಲ್ಲ. ದೀವರ ಒಗ್ಗಟ್ಟು ಪ್ರಜಾಸತ್ತೆಯ ಆದರ್ಶಗಳಿಗೆ ಅನುಗುಣವಾಗಿದೆ. ಅವರ ಒಗ್ಗಟ್ಟು ನ್ಯಾಯವಾಗಿ ಸಿಗಬೇಕಾದ್ದನ್ನು ಪಡೆಯುವುದಕ್ಕೆ. ಹೀಗೆ ದೀವರು ತಮ್ಮನ್ನು ತಾವು ಈ ಕಾಗೋಡು ಸತ್ಯಾಗ್ರಹದಿಂದ ಗುರುತಿಸಿಕೊಂಡರು.

ಡಾ.ಯು.ಆರ್.ಅನಂತಮೂರ್ತಿಯವರು ಹೇಳುವಂತೆ 'ಕಾಗೋಡು ರೈತಸತ್ಯಾಗ್ರಹ ಯಶಸ್ವಿಯಾಯಿತೋ ಇಲ್ಲವೋ, ಅವರ ಬೇಡಿಕೆಗಳೆಲ್ಲ ಈಡೇರಿದವೋ ಇಲ್ಲವೋ ಅನ್ನುವುದು ಅಷ್ಟು ಮುಖ್ಯ ಪ್ರಶ್ನೆಯಾಗಿರಲಿಲ್ಲ. ರೈತರು ಆತ್ಮಾಭಿಮಾನ ಬೆಳೆಸಿಕೊಳ್ಳಬೇಕು. ಭೂಮಿಯ ಮೇಲೆ ನಮಗೂ ಹಕ್ಕಿದೆಯೆಂಬ ಜ್ಞಾನ ಬೆಳೆಸಿಕೊಳ್ಳಬೇಕು ಎಂಬ ಆಶಯ ಬೆಳೆಯಿತು. ಅದು ಒಂದು ರೀತಿಯಲ್ಲಿ ಪ್ರಜ್ಞಾ ಸ್ಫೋಟ' ರೈತರು ಸ್ವಾಭಿಮಾನವನ್ನು ಉಳಿಸಿ ಬೆಳೆಸಿಕೊಂಡು ಹೋಗಲು ಹೋರಾಟದಿಂದ ಸಾಧ್ಯ ಎಂದು ಹೇಳಿದರು.

'ಗೇಣಿ ರೈತರಲ್ಲಿ ಒಂದು ತಿಳುವಳಿಕೆ ಮೂಡಿತ್ತು. ಭೂಮಾಲಿಕರ ದಬ್ಬಾಳಿಕೆ ಕಡಿಮೆಯಾಗಿತ್ತು. ಆದರೆ ಕ್ರಾಂತಿ ಸಂಪೂರ್ಣವಾಗಿರಲಿಲ್ಲ. ಆದರೆ ಉಳುವವನಿಗೇ ಭೂಮಿ ಸಿಗಬೇಕೆಂಬ ಅಂತರ್ಯದ ಆಸೆ ಗಟ್ಟಿಗೊಳ್ಳ ತೊಡಗಿತ್ತು. ನಮ್ಮ ಪಕ್ಕದ ಮನೆಯಲ್ಲಿ ವಾಸವಾಗಿದ್ದ ತಿಮ್ಮಪ್ಪನವರ ಚಟುವಟಿಕೆಗಳನ್ನು ನಾನು ಹತ್ತಿರದಿಂದ ಗಮನಿಸಲು ಸಾಧ್ಯವಾಯಿತು. ಗೋಪಾಲಗೌಡರು ಮತ್ತು ತಿಮ್ಮಪ್ಪನವರ ಇಂಥ ಚಟುವಟಿಕೆಗಳು ನನ್ನಲ್ಲಿ ಆಶಾಭಾವನೆ ಮೂಡಿಸುತ್ತಿದ್ದವು. ಕಾಗೋಡು ಚಳುವಳಿ ಯಾವಾಗ ಸಂಪೂರ್ಣವಾಯಿತೆಂದರೆ ೧೯೭೪ರಲ್ಲಿ ದೇವರಾಜ ಅರಸು ಭೂಸುಧಾರಣೆ ಕಾನೂನು ಜಾರಿಗೆ ತಂದಾಗ' ಡಾ.ಚಂದ್ರಶೇಖರ ಕಂಬಾರ (ಉದ್ಧೃತ) ಕಂಬಾರರು ಕ್ರಾಂತಿ ಅಪೂರ್ಣವಾಗಿತ್ತು, ಭೂಸುಧಾರಣೆಯಿಂದ ಸಂಪೂರ್ಣ ಕ್ರಾಂತಿಯಾಯಿತು, ಭೂಸುಧಾರಣ ಕಾನೂನಿಗೆ ಕಾಗೋಡು ಚಳುವಳಿಯೇ ಕಾರಣ. ಹಂತಹಂತವಾಗಿ ನಿಧಾನಗತಿಯಲ್ಲಿ ಪಕ್ವವಾಗುತ್ತಾ ಸಾಗಿತು. ಇದೊಂದು ಅರ್ಥಪೂರ್ಣ ಚಳುವಳಿ. ಕಾಗೋಡು ಚಳುವಳಿ ಆರಂಭವಾಗಿ ಐವತ್ತು ವರ್ಷಗಳಾದರೆ ಅದು ಪೂರ್ಣಗೊಂಡು ಇಪ್ಪತ್ತೈದು ವರ್ಷಗಳಾಗಿವೆ ಎಂದು ವಿಶ್ಲೇಷಿಸಿದ್ದಾರೆ.

'ಕಾಗೊಡು ಸತ್ಯಾಗ್ರಹದ ಹೋರಾಟದ ಮೂಲಕ ಬೆಳಕಿಗೆ ಬಂದ ದೀವರ ಜನಾಂಗದಲ್ಲಿ ರಾಜ್ಯದ ಮುಖ್ಯಮಂತ್ರಿಗಳಾಗಿದ್ದ ಎಸ್.ಬಂಗಾರಪ್ಪನವರು, ಮಂತ್ರಿಗಳಾಗಿರುವ ಕಾಗೋಡು ತಿಮ್ಮಪ್ಪನವರು, ಕುಮಾರ ಬಂಗಾರಪ್ಪ, ಶಾಸಕರಾಗಿದ್ದ ಸ್ವಾಮಿರಾವ್, ಜಿ.ಧರ್ಮಪ್ಪ, ಡಿ.ಮೂಕಪ್ಪ, ಅಲ್ಲದೇ ಲೋಕಸಭಾ ಸದಸ್ಯರಾಗಿದ್ದ ಕೆ.ಜಿ.ಶಿವಪ್ಪನವರು, ಇನ್ನೂ ಹಲವಾರು ಜಿಲ್ಲಾ ಮತ್ತು ತಾಲ್ಲೂಕು, ಗ್ರಾಮಮಟ್ಟದ ರಾಜಕೀಯ ಕ್ಷೇತ್ರದಲ್ಲಿ ಈ ಜನಾಂಗ ಗುರುತಿಸಿಕೊಂಡಿದೆ. ದೀವರ ಜನಾಂಗದ ಚರಿತ್ರಾರ್ಹ ಹೋರಾಟವಾಗಿದೆ.' ಎಚ್.ಗಣಪತಿಯಪ್ಪ ಇವರು ದೀವರು ರಾಜಕೀಯ ಶಕ್ತಿಯಾಗಿ ಬೆಳೆಯುವಲ್ಲಿ ಹೋರಾಟದ ಸಫಲತೆಯನ್ನು ಗುರುತಿಸಿದ್ದಾರೆ. ರಾಜಕೀಯವಾಗಿ ದೀವರು ಶಿವಮೊಗ್ಗ ಜಿಲ್ಲೆಯಲ್ಲಿ ಮಂಚೂಣಿಯಲ್ಲಿದ್ದಾರೆ ಎಂದರೆ ತಪ್ಪಾಗಲಾರದು.

ಕಾಗೋಡು ನೆನೆದೊಡನೆ ನಾನು ಅಲ್ಲಿ; ಆ ಪರಿಸರದಲ್ಲಿ, ಆ ಕಾಲದಲ್ಲಿ, ಹಿಂದಕ್ಕೆ ಮತ್ತೆ ಹೋಗಿ ಬದುಕುವುದು ಅಸಾಧ್ಯ. ನನ್ನ ಪ್ರಜ್ಞೆಯಲ್ಲಿ ಜಾಗೃತವಾಗಿರುವ ಒಂದು ಮಹಾಘಟನೆ ಕಾಗೋಡು ಹೋರಾಟ. 'ಕಾಗೋಡು ಹೋರಾಟ, ನಾನು ಈಗ ಹೀಗೆ ಆಗಿದ್ದರೆ, ಹಾಗೆ ಆಗುವಲ್ಲಿ ಕಾಗೋಡಿನ ಕೈವಾಡ ಬಹಳವಿದೆ. ನನ್ನ ಪ್ರಜ್ಞೆಯಲ್ಲಿ ಸದಾ ಹಸಿರಾಗಿರುವ ಒಂದು ಮಹಾ ಘಟನೆ'- ಶಾಂತವೇರಿ ಗೋಪಾಲಗೌಡ, ಕಾಗೋಡು ಚಲೋ ಲೇಖನದಲ್ಲಿ ಹೇಳಿದ್ದಾರೆ. (ಡಾ.ಕಾಳೇಗೌಡ ನಾಗವಾರ, ಜಿ.ವಿ.ಆನಂದಮೂರ್ತಿ, ೧೯೯೭, ಪುಟ ೧೬೭) ಕಾಗೋಡು ಹೋರಾಟದಿಂದ ತಮ್ಮ ವ್ಯಕ್ತಿತ್ವದ ಮೆರಗು ಉಳಿದಿದೆ. ನನಗೆ ರಾಜಕೀಯ ಬದುಕು ಕೊಟ್ಟಿರುವುದೇ ಈ ಹೋರಾಟದಿಂದ ನಾನು ಇವತ್ತು ಏನಾಗಿದ್ದೇನೆ ಎಂಬುದೆ ಕಾಗೋಡು ಹೋರಾಟದಿಂದ ಎಂದು ಚಳುವಳಿ ಯನ್ನು ಸ್ಮರಿಸಿಕೊಂಡಿದ್ದಾರೆ.

'ಉಳುವವನೆ ಹೊಲದೊಡೆಯ ಅನ್ನುವಂತಹ ಮೊದಲನೆಯ ಮಾತು ಕಾಗೋಡಿನಿಂದ ಪ್ರಾರಂಭವಾದದ್ದು. ಆ ಹೋರಾಟದ ಹಿನ್ನೆಲೆಗೆ ಇದ್ದಂತಹ ಒಂದು ಬದ್ಧತೆ ಇವು ಪ್ರಾಯಶಃ ಕರ್ನಾಟಕದ ಉದ್ದಗಲದಲ್ಲಿರತಕ್ಕಂತಹ ಜನಗಳ ಮೇಲೆ ಒಂದು ದೊಡ್ಡ ಪ್ರಭಾವವನ್ನು ಬೀರಿತು... ಭೂಸುಧಾರಣಾ ಕಾಯ್ದೆಗೆ ಸಂಬಂಧಪಟ್ಟಂತೆ, ಬಹಳ ಮಟ್ಟಿನ ಕ್ರಾಂತಿಕಾರಕವಾದಂತಹ ಮತ್ತು ಪ್ರಾಮಾಣಿಕವಾಗಿ ಅನುಷ್ಠಾನ ಗೊಳಿಸಬೇಕು ಅನ್ನುವಂತಹ ನಿಲುವು ಕಾಗೋಡು ಸತ್ಯಾಗ್ರಹದ ಮೂಲಕ ಬಂದಿತು. 'The leaders are the children of revolu-

tion' ಅಂತ ಕೂಡ ಕರಿತಾರೆ..ಸೊಂಡೂರು ಹೋರಾಟ ಕೂಡ ಕಾಗೋಡು ಹೋರಾಟದಿಂದ ಪ್ರಭಾವಿತವಾಯಿತು' ಎಂ.ಪಿ.ಪ್ರಕಾಶ (ಡಾ.ಹಿ.ಚಿ.ಬೋರಲಿಂಗಯ್ಯ,ಹುಚ್ಚಪ್ಪ ಮಾಸ್ತರ್ ೨೦೦೨, ಸಂದರ್ಶನ)

'ಹಳೇ ಮೈಸೂರಿನಲ್ಲಿ ಆಗ ಮುಂದುವರಿದವರೆಂದರೆ ಲಿಂಗಾಯಿತರು ಮತ್ತು ಒಕ್ಕಲಿಗರು. ಅವರಲ್ಲಿ ದೊಡ್ಡ ದೊಡ್ಡ ಆಸ್ತಿವಂತರೂ ಇದ್ದರು. ತಕ್ಕಮಟ್ಟಿಗೆ ಇಂಗ್ಲಿಷ್ ವಿದ್ಯಾಭ್ಯಾಸವೂ ಅವರಲ್ಲಿದ್ದಿತ್ತು. ಸಾಮಾಜಿಕವಾಗಿ ಅವರು ಮೇಲಿನವರು, ನಮ್ಮ ರಾಜ್ಯದ ಸ್ವಾತಂತ್ರ್ಯ ಚಳುವಳಿಯ ನಾಯಕತ್ವ ವಹಿಸಿದ್ದವರೂ ಆ ಜಾತಿಯ ಜನಗಳೇ. ಆಸ್ತಿ, ವಿದ್ಯೆ, ಸಾಮಾಜಿಕ ಪ್ರತಿಷ್ಠೆ ಸ್ವಾತಂತ್ರ್ಯ ಬಂದು ಹೊಸದಾಗಿ ಸಿಕ್ಕ ರಾಜಕೀಯ ಅಧಿಕಾರ-ಶೂದ್ರರಕ್ತ ಬೇರೆ-ಇವೆಲ್ಲಾ ಒಟ್ಟಾಗಿ ಇವರು ಸಿಕ್ಕ ಸಿಕ್ಕವರನ್ನೆಲ್ಲಾ ತುಳಿದುಹಾಕಿ ಬಿಡುತ್ತಿದ್ದರು. ಕಾಗೋಡು ಚಳುವಳಿಯಿಂದ ಕಡೆಯ ಪಕ್ಷ ಈ ತಾಲ್ಲೂಕಿನ ಮಟ್ಟಿಗಾದರೂ ಒಂದು alternative leadership ಮತ್ತು alternative Organisation ಬಂತು' ಕಾಗೋಡು ತಿಮ್ಮಪ್ಪನವರು (ರಾಜಶೇಖರ ಜಿ. ೧೯೬೦, ಪುಟ ೧೪೨)

ಕಾಗೋಡು ಸತ್ಯಾಗ್ರಹದ ಕುರಿತು ಅನೇಕರ ದೃಷ್ಟಿಕೋನಗಳು ಮೇಲೆ ತಿಳಿಸಿದಂತಿವೆ. ದೀವರಿಗೆ ಭೂಮಿ ಎಂಬುದು ಆತ್ಮವಿಶ್ವಾಸದ ಸಂಕೇತವಾಗಿತ್ತು. ಆರ್ಥಿಕ ಬೇಡಿಕೆಯ ಹೋರಾಟಕ್ಕೆ ಒಂದು ಸಾಮಾಜಿಕ ಆಯಾಮವನ್ನು ತಂದುಕೊಟ್ಟಿತು. ಒಟ್ಟಾರೆ ಈ ಹೋರಾಟದಿಂದ ದೀವರಲ್ಲಿ ಸಾಮಾಜಿಕ ಪ್ರಜ್ಞೆ, ವೈಚಾರಿಕ ನಿಲುವು, ಸಾಂಸ್ಕೃತಿಕ ಸಂಪನ್ನತೆ ಬೆಳೆಯಿತು. ದೀವರು ಒಗ್ಗಟ್ಟಿನಲ್ಲಿ ಬಲವಿದೆ ಎಂಬ ತತ್ವವನ್ನು ಅರಿತರು. ಕಾಗೋಡು ಘಟನೆಯನ್ನು ಖ್ಯಾತ ಕಾದಂಬರಿಕಾರರಾದ ಶ್ರೀ ಅ.ನ.ಕೃ ಮೈಸೂರಿನ ಬಹಿರಂಗ ಸಭೆಯಲ್ಲಿ ಮಾತನಾಡುತ್ತಾ 'ಕರ್ನಾಟಕದ ಏಕೀಕರಣ ಈಗ ಆಗದಿದ್ದರೂ ಕೂಡ ಕಾಗೋಡಿನಲ್ಲಿ ಅದು ಆಗಿದೆ' ಎಂಬ ಮಾರ್ಮಿಕವಾದ ಮಾತುಗಳಿಂದ, ಆ ಸಭೆಯಲ್ಲಿ ಕಾಗೋಡಿನ ಪ್ರಾಮುಖ್ಯತೆಯನ್ನು ತಿಳಿಸಿದರು.(೧೯೫೪ರಲ್ಲಿ) ಒಟ್ಟಾರೆ ಕಾಗೋಡು ಸತ್ಯಾಗ್ರಹ ಫಲಿತಾಂಶರಹಿತವಾಗಿ ಕಂಡು ಬಂದರೂ ಯಾವುದೋ ಒಂದು ಮೂಲೆ ಆಶಾಕಿರಣ ಬೆಳೆಯುತ್ತಲೆ ಇತ್ತು.

## ಭೂಸುಧಾರಣೆ

ಭೂಸುಧಾರಣೆ ಎಂಬುದು ಬಹುಮುಖ್ಯವು ಹೌದು. ಹಾಗೇನೆ ವಿವಾದಾಸ್ಪದವಾದ ಸಮಸ್ಯೆಯು ಆಗಿತ್ತು. ಹಲವು ಲಕ್ಷ ಜನರ ದೀಪವನ್ನು ಬೆಳಗಿಸಿದ ಕೀರ್ತಿ ಭೂಸುಧಾರಣಾ ಕಾನೂನಿಗಿದೆ. ಕೃಷಿ ಎಂಬುದು ದೇಶದ ಸಮಗ್ರ ಆರ್ಥಿಕ ವ್ಯವಸ್ಥೆ, ದೇಶದ ಅಭಿವೃದ್ಧಿಯನ್ನು ಅವಲಂಬಿಸಿದೆ. ದೇಶದ ಒಟ್ಟು ಜನಸಂಖ್ಯೆಯಲ್ಲಿ ಶೇಕಡಾ ೭೦ ಕ್ಕಿಂತಲೂ ಜಾಸ್ತಿ ಜನರು ಭೂಮಿಯನ್ನು ಅವಲಂಬಿಸಿ ಬದುಕುತ್ತಿದ್ದಾರೆ. ಭೂಮಿ ಎಂಬುದು ಜನ ಜೀವನದ ಸುರಕ್ಷತೆಯನ್ನು ಹೊಂದಿದೆ. ಭೂಮಿ ಇಲ್ಲದಿದ್ದರೆ ಬದುಕಿನ ಸಂಪರ್ಕವೇ ಕಡಿದು ಹೋಯಿತೆನೋ ಎಂದು ಜನ ಭಾವಿಸುತ್ತಾರೆ. ನಮ್ಮಲ್ಲಿ ಎರಡು ವರ್ಗಗಳು (ಭೂಮಿಗೆ ಸಂಬಂಧಪಟ್ಟ) ಈ ಸುಧಾರಣೆಯ ಬಗ್ಗೆ ಅವಶ್ಯಕತೆಯೇ ಇಲ್ಲವೆಂದು ಹೇಳುತ್ತಾರೆ. ಈ ವರ್ಗಗಳು ಜಮೀನುದಾರರು ಮತ್ತು ಜಮೀನು ರಹಿತರು. ಆದರೆ ಮೂರನೆ ವರ್ಗವಾದ ಗೇಣಿರೈತರು ಜಮೀನ ಕೃಷಿಯಲ್ಲಿ ತೊಡಗಿದ್ದರು. ಆದಾಯವೆಲ್ಲಾ ಯಾರ ಪಾಲು ಆಗುತ್ತಿರುವುದು ವಿಷಾದನೀಯ ಸಂಗತಿಯಾಗಿದೆ. ದೇಶದ ಒಟ್ಟು ರಾಷ್ಟ್ರೀಯ ಸಂಪತ್ತಿನ

ಶೇಕಡಾ ೬೦ರಷ್ಟು ಭಾಗವು ಕೃಷಿ ವಿಭಾಗದಿಂದಲೇ ದೊರೆಯುತ್ತದೆ. ವಿಶ್ವಾ ಬಿಂಪದ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಭಾರತವು ಒಂದು. ಅಮೇರಿಕ ಮುಂತಾದ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಕೃಷಿಯನ್ನು ಶೇಕಡ ೭ರಷ್ಟು ಜನ ಅವಲಂಬಿಸಿದರೆ, ಉಳಿದಂತೆ ವಿಭಿನ್ನ ಕೆಲಸಗಳಲ್ಲಿ ಕಾರ್ಖಾನೆಯಲ್ಲಿ ಕಾರ್ಯನಿರತ ಜನರು ಜಾಸ್ತಿ. ಇಂತಹ ಬಹುಮುಖ್ಯವಾದ ವ್ಯತ್ಯಾಸವನ್ನು ಗಮನದಲ್ಲಿಟ್ಟುಕೊಂಡು ನಮ್ಮ ಕೃಷಿ ವ್ಯವಸ್ಥೆಯನ್ನು ಗಮನಿಸಬೇಕು. ಆಯಾ ದೇಶಗಳ ಸುಧಾರಣೆಗಳನ್ನು ನಮ್ಮ ದೇಶದ ಮೇಲೆ ಹೇರುವಂತಿಲ್ಲ. ಪಾಶ್ಚಿಮಾತ್ಯ ರಾಷ್ಟ್ರಗಳು ಜಮೀನನ್ನು ತೆಗೆದುಕೊಂಡು ಕೃಷಿನಿರತ ಜನರಿಗೆ ಕಾರ್ಖಾನೆಗಳಲ್ಲಿ ಉದ್ಯೋಗಾವಕಾಶವನ್ನು ಕೊಟ್ಟವು. ಈ ಪ್ರಕ್ರಿಯೆ ಸುಮಾರು ವರ್ಷಗಳವರೆಗೆ ನಿರಂತರವಾಗಿ ನಡೆದು ಯಶಸ್ವಿ ಯಾಯಿತು. ಅಮೆರಿಕ, ಇಂಗ್ಲೆಂಡ್, ಯುರೋಪಿನ ಹಲವು ರಾಷ್ಟ್ರಗಳಲ್ಲಿ ಇಂತಹ ಬೆಳವಣಿಗೆ ಹೊಸ ಆವಿಷ್ಕಾರವಾಯಿತು. ನಮ್ಮಲ್ಲಿ ಇದು ಸಾಧ್ಯವಿಲ್ಲ.

ಭಾರತದಲ್ಲಿ ಕೇವಲ ಕೃಷಿ ವಿಭಾಗವೊಂದೇ ಸಹಸ್ರಾರು ಸಂಖ್ಯೆಯ ನಿರುದ್ಯೋಗಿಗಳಿಗೆ ಅಥವಾ ಅಪೂರ್ಣ ಉದ್ಯೋಗಿಗಳಿಗೆ ಉದ್ಯೋಗ ಅವಕಾಶವನ್ನು ಕಲ್ಪಿಸಿಕೊಡುವ ಏಕೈಕ ವಿಭಾಗವಾಗಿದೆ. ಇಂತಹ ವಿಪುಲ ಅವಕಾಶವನ್ನು ಬೇರೆ ಯಾವ ವಿಭಾಗವು ಒದಗಿಸಿಕೊಡಲು ಸಾಧ್ಯವಿಲ್ಲ. ಫಿಲಿಪೈನ್ಸ್ ಮತ್ತು ಜಪಾನ್ ದೇಶವನ್ನು ಭಾರತಕ್ಕೆ ಹೋಲಿಸಿ ನೋಡಿದಾಗ ಕೃಷಿ ವಿಷಯದಲ್ಲಿ ಅನೇಕ ಅಗಾಧ ವ್ಯತ್ಯಾಸಗಳನ್ನು ಗುರುತಿಸಬಹುದು. ಭಾರತದಲ್ಲಿ ಪ್ರತಿಯೊಂದು ಎಕರೆಗೆ ೬.೬ ಮಂದಿ ಕೆಲಸಗಾರರಿಗೆ ಉದ್ಯೋಗಾವಕಾಶವನ್ನು ಒದಗಿಸುವ ಸಾಮರ್ಥ್ಯವಿದ್ದರೆ, ಜಪಾನಿನಲ್ಲಿ ಎಕರೆಗೆ ೮೬ ಮಂದಿಗೂ, ಫಿಲಿಪೈನ್ಸ್‌ನಲ್ಲಿ ೭೮ ಕೆಲಸಗಾರರಿಗೆ ಉದ್ಯೋಗಾವಕಾಶವನ್ನು ಒದಗಿಸುವ ಸಾಮರ್ಥ್ಯವಿದೆ. ಶೇ ೧೦ಕ್ಕಿಂತ ಹೆಚ್ಚು ಕೃಷಿಕಾರ್ಯದಲ್ಲಿ ನಿರತರಾಗಿರುವ ಜನರನ್ನುಳ್ಳ ಜಪಾನ್ ಮತ್ತು ಫಿಲಿಪೈನ್ಸ್ ನಂತಹ ಸಣ್ಣ ರಾಷ್ಟ್ರಗಳು ಎಕರೆಯೊಂದಕ್ಕೆ ಶೇ.೮೬ ಜನರಿಗೆ ಉದ್ಯೋಗವಕಾಶವನ್ನು ಒದಗಿಸಬಹುದಾದ ಸಾಮರ್ಥ್ಯ ಹೊಂದಿದೆ. ನಮ್ಮ ಮತ್ತು ಅವರ ಸಾಮರ್ಥ್ಯದಲ್ಲಿ ಅಗಾಧ ವ್ಯತ್ಯಾಸವಿದೆ. ಇದು ಉತ್ಪಾದನೆಯಲ್ಲಾಗುವ ವ್ಯತ್ಯಾಸದಿಂದಾಗಿ ಇಂತಹ ಸಾಮರ್ಥ್ಯ ಸಂಭವಿಸುತ್ತದೆ. ಜಪಾನ್ ಮತ್ತು ಫಿಲಿಪೈನ್ಸ್ ರಾಷ್ಟ್ರಗಳಲ್ಲಿ ೧೦ ಎಕರೆ ಭೂಮಿಯ ಉತ್ಪಾದನಾ ಸಾಮರ್ಥ್ಯ ೩೦೦ ಕ್ವಿಂಟಾಲ್ ಇದ್ದರೆ, ನಮ್ಮಲ್ಲಿಯ ಉತ್ಪಾದನಾ ಸಾಮರ್ಥ್ಯ ೧೦೦ ಕ್ವಿಂಟಾಲ್ ಭತ್ತ ಬೆಳೆಯುತ್ತಾರೆ. ಎಕರೆಗೆ ೩೦ ಕ್ವಿಂಟಾಲ್ ಭತ್ತ ಅವರು ಬೆಳೆದರೆ ನಾವು ಎಕರೆಗೆ ೧೦ ಕ್ವಿಂಟಾಲ್ ಭತ್ತ ಬೆಳೆಯುತ್ತೇವೆ. ಇದಕ್ಕೆ ಕಾರಣವೇನು, ಫಲವತ್ತತೆಯ ಕೊರತೆಯೇ, ಆಧುನಿಕ ಬೇಸಾಯ ಪದ್ಧತಿಯ ಕೊರತೆಯೇ ಎಂಬುದನ್ನು ಮನಗಾಣಬೇಕು. ಯಾವುದೇ ದೇಶವಾಗಿರಲಿ ಘಟಕವು ಚಿಕ್ಕದಿದ್ದಂತೆ ಉತ್ಪಾದನೆಯು ಹೆಚ್ಚಾಗಿರುತ್ತದೆ. ಇಂತಹ ಅನೇಕ ಅಂಶಗಳನ್ನು ಗಮನದಲ್ಲಿರಿಸಿಕೊಂಡು ಭೂಸುಧಾರಣಾ ಕಾನೂನು ಜಾರಿಗೆ ಬಂದಿತು.

೧೯೭೪ರ ರಲ್ಲಿ ಕರ್ನಾಟಕದ ಗೇಣಿರೈತರ ಬದುಕಿನ ಚಿತ್ರಣವನ್ನು ಬದಲಾಯಿಸಿದ, ರೈತರ ಬದುಕಿನಲ್ಲಿ ನವ ಚೈತನ್ಯವನ್ನು ತಂದ ಸುಧಾರಣೆಯೇ ಭೂಸುಧಾರಣೆ. ಗ್ರಾಮೀಣ ಸಾಮಾಜಿಕ ಬದುಕನ್ನು, ವ್ಯವಸ್ಥೆಯನ್ನು ಬದಲಾಯಿಸಿದಂತ ಮಹಾ ಪವಾಡ ಕರ್ನಾಟಕದಲ್ಲಿ ಜರುಗಿತು. ದುಡಿಯದೆ, ದುಡಿಮೆಯ ಫಲವನ್ನು ಉಣ್ಣುತ್ತಿದ್ದ ಜಮೀನುದಾರರ ಕೋಟೆಯನ್ನು ನುಚ್ಚುನೂರು ಮಾಡಿದ ಸುಧಾರಣೆಯ ಕಾನೂನಿನ ಸ್ವರೂಪವೇ ಆ ರೀತಿ ಇತ್ತು.

ಕರ್ನಾಟಕ ಏಕೀಕರಣಕ್ಕೆ ಮೊದಲು ಕರ್ನಾಟಕದ ವಿವಿಧ ಭಾಗದಲ್ಲಿ ಬೇರೆ ಬೇರೆ ರೀತಿಯ ಟೆನೆನ್ಸಿ ಕಾಯಿದೆಗಳಿದ್ದವು. ೧೯೩೯ರಲ್ಲಿ 'ಮುಂಬೈ ಟೆನೆನ್ಸಿ ಕಾಯಿದೆಯನ್ನು' ಮುಂಬೈ ರಾಜ್ಯದ ಕಾಂಗ್ರೆಸ್ ಸರ್ಕಾರ ಪಾಸು ಮಾಡಿಕೊಂಡಿತು. ೧೯೪೧ರಲ್ಲಿ ಧಾರವಾಡ ಜಿಲ್ಲೆಯಲ್ಲಿ ಕಾಂಗ್ರೆಸ್ ಸರ್ಕಾರ ಬಿದ್ದು ಹೋದ ಪ್ರಯುಕ್ತ ಟೆನೆನ್ಸಿ ಆ್ಯಕ್ಟ ಬರಲಿಲ್ಲ. ೧೯೪೬ರಲ್ಲಿ ಪುನಃ ಕಾಂಗ್ರೆಸ್ ಸರ್ಕಾರ ಅಧಿಕಾರಕ್ಕೆ ಬಂದ ಬಳಿಕ ಟೆನೆನ್ಸಿ ಆ್ಯಕ್ಟಿಗೆ ಕೆಲ ತಿದ್ದುಪಡಿಯನ್ನು ತಂದು ಇಡೀ ಮುಂಬಯಿ ರಾಜ್ಯಕ್ಕೆ ಅನ್ವಯಿಸುವಂತೆ ಜಾರಿಗೆ ತಂದಿತು. ಒಟ್ಟು ಕೃಷಿಯ ಉತ್ಪಾದನೆಯಲ್ಲಿ ೧/೩ ಭಾಗ ಗೇಣಿಯನ್ನು ಬಾಗಾಯ್ತಿಗೆ ೧/೪ ಭಾಗ ಗೇಣಿಯನ್ನು ನಿಗದಿಪಡಿಸ ಲಾಯಿತು. ಬೇಕಾಬಿಟ್ಟಿ ಗೇಣಿ ವಸೂಲಿಗೆ ಕಡಿವಾಣ ಹಾಕಿತು. ಮನಸ್ಸಿಗೆ ಜಮೀನು ಬಿಡಿಸುವ ಜಮೀನುದಾರರ ಧೋರಣೆಯನ್ನು ನಿರ್ಬಂಧಿಸಿತು. ಎರಡು ವರ್ಷಗಳ ನಂತರ ಈ ಕಾನೂನಿನಲ್ಲಿ ಕೆಲ ಸುಧಾರಣೆಗಳನ್ನು ತಂದಿತು. 'ಮುಂಬೈ ಗೇಣಿ ಮತ್ತು ಕೃಷಿ ಭೂಮಿ' ಕಾಯ್ದೆಯನ್ನು ಮಾಡಿ, ೨೮-೧೨-೧೯೪೮ರಂದು ಜಾರಿಗೆ ತಂದಿತು. ಈ ಕಾಯಿದೆಯ ಪ್ರಕಾರ ಜಮೀನುದಾರರು ೪೮ ಎಕರೆಗಿಂತ ಜಾಸ್ತಿ ಜಮೀನನ್ನು ಬಿಡಿಸಿಕೊಳ್ಳ ಲಾಗದಂತಾಯಿತು. ಸಾಗುವಳಿ ಮಾಡದ ಜಮೀನನ್ನು ಬಿಡಿಸಿಕೊಂಡು ಸಾಗುಮಾಡಿಸುವ ಏರ್ಪಾಡು ಸರ್ಕಾರ ಕೈಗೊಂಡಿತು. ಸಾದಾಕುಳ, ಕಾಯಂಕುಳ ಸಂರಕ್ಷಿತಕುಳ, ಹೀಗೆ ವರ್ಗೀಕರಣ ಮಾಡಿ ಅವರಿಗೆ ಬೇರೆ ಬೇರೆ ಹಕ್ಕು ನೀಡಿತು. ಕೃಷಿಯೇತರ ಜನರಿಗೆ ಭೂಮಿಯನ್ನು ಮಾರದಂತೆ ಮಾಡಿತು. ಹಕ್ಕು, ಬಾಬು ಚಾಕರಿಯನ್ನು ಪ್ರತಿಬಂಧಿಸಿತು. ೧೯೫೨ರಲ್ಲಿ ತಿದ್ದುಪಡಿಯನ್ನು ಕಾಯ್ದೆಯಲ್ಲಿ ಮಾಡಲಾಯಿತು. ಗೇಣಿ ಹಣವನ್ನು ೧/೬ ಕ್ಕೆ ಇಳಿಸಿತು. ಕಂತಿನ ಮೇಲೆ ಗೇಣಿದಾರನು ಜಮೀನಿನ ಬೆಲೆಯನ್ನು ಕೊಟ್ಟು ಕೊಂಡುಕೊಳ್ಳಲು ಹೆಚ್ಚಿನ ನಿರ್ಬಂಧ ಹೇರಿತು. ಮತ್ತೆ ಇದನ್ನು ೧೯೫೫ರಲ್ಲಿ ತಿದ್ದುಪಡಿಮಾಡಿತು. ಕೊನೆಯಲ್ಲಿ ದಿನಾಂಕ ೧-೪-೧೯೫೭ರಲ್ಲಿ 'ಉಳುವವನೇ ಭೂಮಿ ಒಡೆಯ' ಎಂದು ಘೋಷಿಸಲಾಯಿತು. ಆದರೆ ೧-೧೧-೧೯೫೬ರಲ್ಲಿ ರಾಜ್ಯಗಳ ಪುನರ್ವಿಂಗಡಣೆ ಆಗಿದ್ದರಿಂದ ಕಾನೂನುಗಳು ಬದಲಾವಣೆ ಆಗುತ್ತದೆಂದು ಆ ಭಾಗದ ಜನರು ಕೂಗೆಬ್ಬಿಸಿ ದ್ದರಿಂದ ಕಾನೂನು ತಡೆಹಿಡಿಯಲಾಯಿತು.

ಹೈದರಾಬಾದ್ ಸರ್ಕಾರ ಹೈದರಾಬಾದ್ ಆ್ಯಕ್ಟ್ ೧೯೪೫ರಲ್ಲಿ ಹೆಚ್ಚುಕಡಿಮೆ ೧೯೩೯ರ ಮುಂಬೈ ಟೆನೆನ್ಸಿ ಕಾಯಿದೆಯ ಅವಕಾಶಗಳನ್ನೆ ಕಲ್ಪಿಸಿತು. ೧೯೫೦ರಲ್ಲಿ ಹೈದರಾಬಾದ್ ಗೇಣಿ ಮತ್ತು ಕೃಷಿಭೂಮಿ ಕಾಯ್ದೆ ೧೯೫೧ರಲ್ಲಿ ತಿದ್ದುಪಡಿ ಕಾಯ್ದೆ, ೧೯೫೨ರಲ್ಲಿ ಕಾಯ್ದೆಯ ಆದೇಶದಂತೆ ಗೇಣಿದಾರರನ್ನು ಹೊರಹಾಕುವುದನ್ನು ನಿರ್ಬಂಧಿಸಿತು. ೨೦-೩-೧೯೫೨ರ ನಂತರ ಹೊರಹಾಕಲ್ಪಟ್ಟ ಗೇಣಿದಾರರಿಗೆ ಒಟ್ಟು ಹುಟ್ಟುವಳಿಯ ನಾಲ್ಕನೇ ಒಂದು ಭಾಗ ಅಥವಾ ೧/೫ ಭಾಗ ಎಂದು ನಿಗಧಿಪಡಿಸಿತು. ಭೂಮಾಲಿಕನು ಗೇಣಿದಾರರಿಂದ ಭೂಮಿ ಬಿಡಿಸಿಕೊಳ್ಳುವುದನ್ನು ನಿರ್ಬಂಧಿಸಿ ಗೇಣಿದಾರನಿಗೆ ಭೂಮಿಯನ್ನು ಸಾಗುವಳಿಗೆ ವರ್ಗಾಯಿಸಬೇಕು ಎಂದು ಕಾಯ್ದೆಯಲ್ಲಿ ತರಲಾಯಿತು.

ಮೈಸೂರು ಸಂಸ್ಥಾನದಲ್ಲಿ "ಮೈಸೂರು ಭೂ ಕಂದಾಯ ಕೋಡ್ ನಂ. ೧೮೮೮ ಅನ್ವಯ ಭೂದಣಿ ಮತ್ತು ಗೇಣಿದಾರರ ಸಂಬಂಧ ವಿವರಿಸಲಾಗಿತ್ತು. ಇದು ಭೂಮಾಲಿಕರ ಪರವಾಗಿತ್ತು. ಕೋಡ್ ೧೮೮೮ ರಲ್ಲಿ ಎರಡು ರೀತಿಯ ಗೇಣಿದಾರರನ್ನು ಗುರುತಿಸಿತ್ತು. ೧. ಇನಾಂ ಗ್ರಾಮದಲ್ಲಿ ಕಡಿಮೆ ಗೇಣಿದಾರರು,

ಕೇವಲ ಭೂಕಂದಾಯವನ್ನು ಕೊಡುವವರು. ೨. ಇನಾಂ ಮತ್ತು ಸರ್ಕಾರ ಎರಡು ಹಳ್ಳಿಗಳಲ್ಲಿರುವ ಕಾಯಂ ಕುಳಗಳು. ಇವರು ಬಹುಕಾಲದಿಂದ ಇದ್ದವರು. ಮಾರುವ ಹಕ್ಕುಳ್ಳವರು. ೧೨ ವರ್ಷ ಅವಧಿಗೆ ಒಂದೇ ಗೇಣಿ ಕೊಡುವ ಸ್ಥಿರ ಸ್ವರೂಪ ಸುಧಾರಣೆ ಮಾಡಿದವರು ಎಂದು ಗುರುತಿಸಿತು. ೩. ಮಿಕ್ಕವರೆಲ್ಲಾ ಭೂಮಾಲಿಕನ ಮನದಿಚ್ಛೆಯ ಗೇಣಿದಾರರು. ಇವರ ಕಡೆಯಿಂದ ಬೇಕಾದಷ್ಟು ಗೇಣಿ ಪಡೆಯಬಹುದು ಮತ್ತು ಯಾವಾಗ ಬೇಕಾದರು ಇವರನ್ನು ಭೂಮಿಯಿಂದ ಹೊರಕ್ಕೆ ಹಾಕಬಹುದು.

ಸಂಸ್ಥಾನಗಳ ವಿಲೀನದ ನಂತರ ಮೈಸೂರು ಟೆನೆನ್ಸಿ ಕಾಯಿದೆ ೧೯೫೨ರಲ್ಲಿ ಪಾಸು ಮಾಡಲಾಯಿತು. ಕರ್ನಾಟಕದ ಭೂಸುಧಾರಣಾ ಶಾಸನಗಳಲ್ಲಿ ಮೊದಲ ಶಾಸನ ೧೯೫೨ರಲ್ಲಿ ವಿಧಾನಸಭೆಯಲ್ಲಿ ಮಂಡಿತವಾಗಿ ೧೯೫೪ರಲ್ಲಿ ಪ್ರಾಂತ್ಯದ ಕೆಲವು ಭಾಗಗಳಲ್ಲಿ ಮಾತ್ರ ಜಾರಿಗೆ ಬಂದಿತು. ಈ ಶಾಸನದ ಸೆಲೆಕ್ಟ್ ಸಮಿತಿಯಲ್ಲಿ ಕಡಿದಾಳ್ ಮಂಜಪ್ಪ ಮತ್ತು ಕೆ.ಜಿ.ಒಡೆಯರ್ ಸದಸ್ಯರಾಗಿದ್ದರು. ಈ ಕಾನೂನು ಬರುವಾಗ ಕಬ್ಜಾದಲ್ಲಿದ್ದ ರೈತರಿಗೆ ೫ ವರ್ಷ ಗೇಣಿ ಅವಧಿ ಹೆಚ್ಚಿಸಿತು. ೧೨ ವರ್ಷಕ್ಕಿಂತ ಜಾಸ್ತಿ ಅವಧಿಯಲ್ಲಿ ಗೇಣಿ ಮಾಡಿಕೊಂಡಿದ್ದ ಒಕ್ಕಲುಗಳಿಗೆ ಖಾಯಂ ಹಕ್ಕುಗಳನ್ನು ಕೊಟ್ಟಿತು. ಗೇಣಿಯನ್ನು ಫಸಲಿನ ೧/೩ಕ್ಕಿಂತ ಜಾಸ್ತಿ ಇರಕೂಡದು, (ಉತ್ಪನ್ನದ ಅರ್ಧಭಾಗಕ್ಕಿಂತಲೂ ಕಡಿಮೆ) ಇಷ್ಟೆಲ್ಲಾ ಅಂಶಗಳಿದ್ದರು, ಅನೇಕ ನ್ಯೂನತೆಗಳನ್ನು ಹೊಂದಿತ್ತು. ಈ ಕಾಯಿದೆ ಪ್ರಕಾರ ಭೂಮಾಲಿಕ ತನ್ನ ಸ್ವಂತ ಸಾಗುವಳಿಗೆಂದು ಒಕ್ಕಲುಗಳಿಂದ ಭೂಮಿ ಬಿಡಿಸಿಕೊಳ್ಳ ಬಹುದಾಗಿತ್ತು. ಜೊತೆಗೆ ಗೇಣಿ ಬಾಕಿ ಇದ್ದರೆ, ಗೇಣಿಜಮೀನಲ್ಲಿ ಒಕ್ಕಲು ಕೃಷಿ ಮಾಡದೆ ಇದ್ದರೆ, ಜಮೀನು ಹಾಳುಗೆಡವಿದ್ದರೆ, ಭೂಮಾಲಿಕ ಒಕ್ಕಲೆಬ್ಬಿಸಬಹುದಾಗಿತ್ತು. ಇವು ವಾಸ್ತವದಲ್ಲಿ ಭೂಮಾಲಿಕರಿಗೆ ಸರ್ಕಾರವೇ ಒಕ್ಕಲೆಬ್ಬಿಸಲು ತೋರಿಸಿಕೊಟ್ಟ ಉಪಾಯಗಳಂತಿತ್ತು. ಅದುವರೆಗೆ ಕಾನೂನಿನ ಚೌಕಟ್ಟಿನ ಹೊರಗೆ ನಡೆಯುತ್ತಿದ್ದ ಒಕ್ಕಲೆಬ್ಬಿಸುವಿಕೆಗೆ ಈಗ ಕಾಯಿದೆಯ ಅಧಿಕೃತ ಮುದ್ರೆಯೂ ಬಿದ್ದಿತು. ಭೂಮಾಲಿಕರನ್ನು ಬಿಟ್ಟರೆ ಈ ಕಾಯಿದೆಯಿಂದ ಲಾಭವಾದದ್ದು ಪ್ರಾಂತ್ಯದ ವಕೀಲರುಗಳಿಗೆ. ಈ ಕಾಯಿದೆಯ ಅನ್ವಯವೇ ರಾಜ್ಯಾದ್ಯಂತ ದಣಿಗಳು ಒಕ್ಕಲುಗಳ ಮೇಲೆ ಸಿವಿಲ್ ದಾವೆಗಳನ್ನು ಹಾಕಿ ವಕೀಲರಿಗೆ ಕೈತುಂಬ ಕೆಲಸ ದೊರೆಯಿತು. ಈ ಶಾಸನದ ಕಾನೂನುಗಳ ಲೋಪವನ್ನು ಜಮೀನುದಾರರು ಸದುಪಯೋಗಪಡಿಸಿಕೊಂಡರು.

೧೯೫೪ರಲ್ಲಿ ಕಡಿದಾಳ್ ಮಂಜಪ್ಪನವರು ರೆವಿನ್ಯೂ ಮಂತ್ರಿಗಳಾಗಿದ್ದಾಗ 'ಧಾರ್ಮಿಕ ಜಹಗೀರಿ ಮತ್ತು ಇನಾಂ ರದ್ದಿಯಾತಿ ಶಾಸನವನ್ನು ತಂದರು. ಪ್ರಾಂತ್ಯದ ಹೆಚ್ಚಿನ ಧಾರ್ಮಿಕ ಸಂಸ್ಥೆಗಳ ಆಸ್ತಿಪಾಸ್ತಿ ಈ ಶಾಸನದ ವ್ಯಾಪ್ತಿಯ ಹೊರಗೇ ಉಳಿದಿದ್ದವು. ಶೃಂಗೇರಿಯಂತಹ ಕೆಲವು ಕಡೆಗಳಿಗಾದರೂ ಈ ಶಾಸನ ಅನ್ವಯ ವಾಯಿತು.

ಹೀಗೆ ಕರ್ನಾಟಕದ ಒಂದೊಂದು ಭಾಗಕ್ಕೆ ಅನ್ವಯವಾಗುವಂತೆ ಒಂದೊಂದು ರೀತಿಯ ಗೇಣಿ ಕಾಯ್ದೆಗಳಿದ್ದು, ಯಾವುವು ಪರಿಣಾಮಕಾರಿಯಾಗಿರಲಿಲ್ಲ.

ಕರ್ನಾಟಕ ಏಕೀಕರಣವಾದ ನಂತರ ರಾಜ್ಯ ಸರಕಾರ ೧೯೫೭ರಲ್ಲಿ ಶ್ರೀ ಜತ್ತಿಯವರ ನೇತೃತ್ವದಲ್ಲಿ ಭೂಸುಧಾರಣಾ ಶಾಸನ ಸಮಿತಿಯೊಂದನ್ನು ರಚಿಸಿತು (೧೦-೫-೧೯೫೭ರಲ್ಲಿ) 'ಜತ್ತಿ ಸಮಿತಿ' ದಿನಾಂಕ ೧೦-೯-೫೭ರಂದು ತನ್ನ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿತು. ಹಾಗೆ ಸಲ್ಲಿಸಿದ ವರದಿಯನ್ನು ದಿನಾಂಕ ೧೮-೧೧-

೧೯೬೧ಕ್ಕೆ ವಿಧಾನಮಂಡಲದಲ್ಲಿ ಮಂಡಿಸಿ ೧೯೬೨ರಲ್ಲಿ ಕಾಯ್ದೆ ೧೦ ಎಂದು ಪಾಸು ಮಾಡಲಾಯಿತು. ಇದಕ್ಕೆ ರಾಷ್ಟ್ರಪತಿಗಳ ಅಂಗೀಕಾರ ೫-೩-೧೯೬೨ರಲ್ಲಿ ದೊರೆತು, ನಂತರ ೨-೧೦-೧೯೬೫ರಲ್ಲಿ ರಾಜ್ಯಾದ್ಯಂತ ಜಾರಿಗೆ ತರಲಾಯಿತು.

ಈ ನಡುವೆ ಕರ್ನಾಟಕದಲ್ಲಿ ಲಕ್ಷಾಂತರ ಒಕ್ಕಲುಗಳು ತಮ್ಮ ಭೂಮಿ ಕಳೆದುಕೊಂಡರು. ಈ ಶಾಸನದಲ್ಲಿಯೂ ಒಕ್ಕಲುಗಳಿಂದ ಭೂಮಿ ಕಸಿಯುವುದಕ್ಕೆ ಭೂಮಾಲಿಕರಿಗೆ ಕಳ್ಳದಾರಿಗಳನ್ನು ಕಲ್ಪಿಸಿಕೊಡುವ ಅಂಶಗಳು ೧೯೫೨ರ ಶಾಸನದಂತೆ ಇದ್ದವು. ಈ ಎರಡು ಶಾಸನವೂ ರಾಜ್ಯದಲ್ಲಿ ಕೃಷಿಕೂಲಿಗಳೂ ಗಣನೀಯ ಸಂಖ್ಯೆಯಲ್ಲಿದ್ದಾರೆ. ಕೃಷಿಭೂಮಿಯ ಒಡೆತನದ ಪ್ರಶ್ನೆ ಅವರಿಗೂ ಸಂಬಂಧಿಸಿದೆ ಎಂಬುದನ್ನು ಗಮನಿಸಲೇ ಇಲ್ಲ. ಈ ಶಾಸನದ ಅತ್ಯಂತ ಹಾಸ್ಯಸ್ಪದ ಅಂಶವೆಂದರೆ ಒಬ್ಬ ಹಿಡುವಳಿದಾರ ಇಟ್ಟುಕೊಳ್ಳಬಹುದಾದ ತರಿ ಕೃಷಿಭೂಮಿಯ ಗರಿಷ್ಠ ಮಿತಿಯನ್ನು ಇಪ್ಪತ್ತೇಳು ಸ್ಟ್ಯಾಂಡರ್ಡ್ ಎಕರೆಗಳೆಂದು ನಿಗದಿಗೊಳಿಸಿದ್ದು. (ಹಣ ಕಾಸಿನ ಬೆಳೆಯ ಪ್ಲಾಂಟೇಷನ್‌ಗಳಿಗೆ ಇದು ಅನ್ವಯವಾಗುತ್ತಿರಲಿಲ್ಲ) ಸ್ಟ್ಯಾಂಡರ್ಡ್ ಎಕರೆಯೆಂದರೆ ಅತ್ಯುತ್ಕೃಷ್ಟ ಜಮೀನಿನ ಒಂದು ಎಕರೆ! ಈ ಮಿತಿಗೂ ಮಿಕ್ಕಿ ಯಾರಿಗಾದರೂ ಜಮೀನಿದ್ದು ಅವರು ಬೇನಾಮೀ ವಿಭಜನೆಯಿಂದ ಅದನ್ನು ಪಾಲುಮಾಡಿಕೊಳ್ಳದೆ ಇದ್ದರೆ ಮತ್ತು ಅವರೇ ಅದನ್ನು ಸರಕಾರಕ್ಕೆ ತಿಳಿಸುವಷ್ಟು ಧರ್ಮಾತ್ಮರಾಗಿದ್ದಾರೆ. ಸರಕಾರ ಅದನ್ನು ಭೂಹೀನರಿಗೆ ಕೊಡುವುದು ಎಂಬಿತ್ಯಾದಿ ಅಂಶಗಳು ಒಳಗೊಂಡಿತ್ತು.

೧೯೬೫ರಲ್ಲಿ ರಾಜ್ಯಾದ್ಯಂತ ಜಾರಿಗೆ ತರಲಾದ ಶಾಸನಕ್ಕೆ ದೇವರಾಜ ಅರಸು ಸರಕಾರ ೧೯೭೩ರಲ್ಲಿ ತಂದ ತಿದ್ದುಪಡಿಗಳೇ ಈವರೆಗಿನ ಭೂಸುಧಾರಣಾ ಶಾಸನಗಳಲ್ಲಿ ಅತ್ಯಂತ ಪರಿಣಾಮಕಾರಿಯಾದ ಶಾಸನವಾಗಿದೆ. ದೇವರಾಜ ಅರಸು ಸರಕಾರ ಕ್ರಾಂತಿಕಾರಿ ನಿಲುವಿನಿಂದಾಗಿ ಪಾಳೆಯಗಾರೀ ಭೂಮಾಲಿಕತ್ವವನ್ನು ತೊಡೆದು ಹಾಕುವುದರಲ್ಲಿ ಅತ್ಯಂತ ಪ್ರಾಮಾಣಿಕವಾದ ಪ್ರಯತ್ನವನ್ನು ಮಾಡಿ ಯಶಸ್ವಿಯಾಗಿದೆ. ಮೇಲಿನ ಎಲ್ಲಾ ಶಾಸನಗಳಲ್ಲಿ ಭೂಮಾಲಿಕರಿಗೆ ಗೇಣಿದಾರರನ್ನು ಒಕ್ಕಲೆಬ್ಬಿಸುವುದಕ್ಕೆ ಅನೇಕ ಅವಕಾಶಗಳಿದ್ದವು. ಇಲ್ಲಿ ಅಂತಹ ಅವಕಾಶಗಳೆಲ್ಲಾ ಇರಲಿಲ್ಲ. ಗೇಣಿ ಕೊಡುವ ಪದ್ಧತಿಯನ್ನೇ ನಾಶಮಾಡಿ ದಣಿ-ಒಕ್ಕಲು ಎಂಬ ವರ್ಗಗಳನ್ನೆ ನಿರ್ಮೂಲ ಮಾಡಿದೆ. ಇಂತಹ ಒಂದು ಪ್ರಗತಿಪರವಾದ ಸಾಮಾಜಿಕ ಕೆಳಸ್ತರದ ಜನರ ಬಾಳಿಕೆ ಅಮೃತ ಚೇತನವನ್ನೊದಗಿಸಿತ್ತು.

ದಿನಾಂಕ ೮-೩-೧೯೫೧ರಲ್ಲಿ ಸಾಗರದ ಜಮೀನು ಹಿಡುವಳಿದಾರರ ಸಭೆಯಲ್ಲಿ ಶ್ರೀ ಹೆಚ್.ಎಂ. ಚೆನ್ನಬಸಪ್ಪನವರು ಮಾತನಾಡುತ್ತಾ ಮೈಸೂರು ಸಂಸ್ಥಾನದಲ್ಲಿ ಆ ಕಾಲದಲ್ಲಿ ಇದ್ದ ಭೂಮಾಲಿಕರ ವಿವರವನ್ನು ಈ ಕೆಳಕಂಡಂತೆ ನೀಡಿದ್ದಾರೆ.

| | |
|---|---|
| ೫೦ ಎಕರೆಗಿಂತ ಮೇಲ್ಪಟ್ಟ ಹಿಡುವಳಿದಾರರು | ೧೬,೧೦೪ ಜನ |
| ೫೦ ಎಕರೆಗಿಂತ ಕಡಿಮೆ ಹಿಡುವಳಿದಾರರು | ೧೨,೯೯,೧೦೧ ಜನ |
| | ೧೩,೧೫,೨೦೫ ಜನ |

ಮೈಸೂರು ಸಂಸ್ಥಾನದ ಜನಸಂಖ್ಯೆ ಅಂದಾಜು ಒಂದು ಕೋಟಿ ಎಂದು ತೆಗೆದುಕೊಂಡರೆ, ಭೂಹೀನರ ಸಂಖ್ಯೆಯ ವ್ಯತ್ಯಾಸ ಕಂಡುಬರುತ್ತದೆ. ೧ ಕೋಟಿಯಲ್ಲಿ ೧೩ ಲಕ್ಷಜನ ಹಿಡುವಳಿದಾರರಿದ್ದಾರೆ ಎಂದುಕೊಂಡರೆ ೮೭ ಲಕ್ಷ ಜನಸಂಖ್ಯೆಯಲ್ಲಿ ೧೨ ಲಕ್ಷ ಜನ ಬೇರೆ ಉದ್ಯೋಗ ಅವಲಂಬಿಸಿದ್ದರೆ, ಉಳಿದ ೭೫ ಲಕ್ಷ ಮಂದಿಯಲ್ಲಿ ೧೩ ಲಕ್ಷ ಮಂದಿ ಕೂಲಿಯನ್ನು ಮಾಡುತ್ತಿದ್ದಾರೆ. ೬೨ ಲಕ್ಷ ಮಂದಿ ಗೇಣಿರೈತರಾಗಿ ಜೀವನ ಸಾಗಿಸುತ್ತಿದ್ದರು. ಮನುಷ್ಯ ಮನುಷ್ಯರ ಮಧ್ಯೆ ಈ ತರಹದ ಅಮಾನವೀಯ ಅಸಮತೋಲನ ಇದ್ದಿದ್ದು ಶ್ರೀ ದೇವರಾಜು ಅರಸುರವರ ಭೂಸುಧಾರಣಾ ತಿದ್ದುಪಡಿಯಿಂದಾಗಿ ಬಹಳಮಟ್ಟಿನ ಸುಧಾರಣೆಯಾಯಿತು.

ಈ ಕಾಯ್ದೆ ಸಮಗ್ರವಾಗಿ ಜಾರಿಗೆ ಬರಲು ಸಹಕರಿಸಿದ ಕೆಲವೇ ಕೈಗಳಲ್ಲಿ ಕಾಗೋಡು ತಿಮ್ಮಪ್ಪನವರ ಪಾತ್ರ ಗಮನಾರ್ಹವಾಗಿದ್ದಿತು. ಕಾಗೋಡು ಸತ್ಯಾಗ್ರಹದ ಎಲ್ಲಾ ಬೆಳವಣಿಗೆಯನ್ನು ಹತ್ತಿರದಿಂದ ಕಂಡು, ನೋಡಿ ಬೆಳೆದಂತಹ ಇವರಲ್ಲಿ ಪ್ರಗತಿಪರ ಆಲೋಚನೆಗಳು ಮೇಳೈಯಿಸಿದರಲ್ಲಿ ಆಶ್ಚರ್ಯವೇನು ಇಲ್ಲ. 'ಜಂಟಿ ಆಯ್ಕೆ ಸಮಿತಿ'ಯಲ್ಲಿ ಸದಸ್ಯರಾಗಿದ್ದಾಗ ತಮ್ಮ ಸಂಪೂರ್ಣ ಗಮನವನ್ನು ಅಲ್ಲಿ ಕೇಂದ್ರಿಕರಿಸಿ ಕಾಯ್ದೆ ಸಮಗ್ರ ರೂಪದಲ್ಲಿ ಹೊರಬರುವಂತೆ ನೋಡಿಕೊಂಡರು.

'ಕಾಗೋಡು ತಿಮ್ಮಪ್ಪನವರು ಭೂಸುಧಾರಣೆಗೆ ಕಾಗೋಡು ಕಾರಣವಾದ ಮಾತು ಹೇಳಿದರು. ಅರಸು ಸರಕಾರದ ಭೂಸುಧಾರಣೆಯ ಬಗ್ಗೆ ಮಾತನಾಡುತ್ತಾ ಸೆಲೆಕ್ಟ ಕಮಿಟಿಯಲ್ಲಿ ಕೆಲವರು ಈ ತಿದ್ದುಪಡಿಗಳ ಒಳ್ಳೆಯ ಅಂಶವನ್ನು ಸೆಬೋಟೇಜ್ ಮಾಡೋದಕ್ಕೆ ನೋಡಿದರು. ನಾವು ಸೋಷಲಿಸ್ಟರು ವಿರೋಧ ಪಕ್ಷದಲ್ಲಿದ್ದು ನಮ್ಮಲ್ಲಿಯ ಕೆಲವರ ವಿರುದ್ಧ ಅರಸು ಜೊತೆ ನಿಲ್ಲಬೇಕಾಯಿತು. It was Very Embarrassing' (ರಾಜಶೇಖರ ಜಿ., ೧೯೮೦, ಪುಟ ೧೮೨).

ದೇವರಾಜ ಅರಸುರವರ ಭೂಸುಧಾರಣಾ ಕಾನೂನಿನ ತಿದ್ದುಪಡಿಗಳು ಕೃಷಿ ಕಾರ್ಮಿಕರನ್ನು ಗಣನೆಗೆ ತೆಗೆದುಕೊಳ್ಳಲಿಲ್ಲ. ಸ್ವಂತ ಸಾಗುವಳಿ ಎಂದರೆ ಕೃಷಿ ಕೂಲಿಗಳಿಂದ ಮಾಡಿಸುವ ಸಾಗುವಳಿ ಕೂಡ ಎಂಬ ಅಂಶವನ್ನು ಈ ತಿದ್ದುಪಡಿ ಎತ್ತಿ ಹಿಡಿದಿದ್ದವು. ಕೃಷಿ ಕೂಲಿಯವರೆಗೆ ಕನಿಷ್ಠ ವೇತನವನ್ನು ನಿಗದಿಗೊಳಿಸಿತು. ಕೃಷಿ ಕೂಲಿಯವರಿಗೆ ಭೂಮಿ ಕೊಡುವ ಅನುಷ್ಠಾನ ಜಾರಿಗೊಂಡಿದ್ದರೆ ಈ ಸುಧಾರಣಾ ಕಾನೂನು ಸಂಪೂರ್ಣವಾಗುತ್ತಿತ್ತು. ಅರಸು ತಂದ ಶಾಸನ ಹಿಂದಿನ ಎಲ್ಲಾ ಶಾಸನಗಳಿಗಿಂತ ಪ್ರಾಮಾಣಿಕವಾಗಿತ್ತು. ಈ ಅನುಷ್ಠಾನ ೫೦ರ ದಶಕದಲ್ಲಿ ಜಾರಿಗೆ ಬಂದಿದ್ದರೆ, ಸಮಗ್ರ ಗೇಣಿದಾರರು ನೆಮ್ಮದಿಯ ನಿಟ್ಟುಸಿರು ಬಿಡುತ್ತಿದ್ದರು. ೧೯೫೦ರಲ್ಲಿ ಕರ್ನಾಟಕದಲ್ಲಿ ಗೇಣಿ ಸಮಸ್ಯೆ ಬಹಳ ತೀವ್ರವಾಗಿತ್ತು. ೧೯೫೪ರಲ್ಲಿ ರಾಜ್ಯದಲ್ಲಿದ್ದ ಒಟ್ಟು ಗೇಣಿ ಭೂಮಿಯ ವಿಸ್ತೀರ್ಣ ೬೧.೩೭ ಲಕ್ಷ ಎಕ್ರೆಗಳಾಗಿದ್ದರೆ ೧೯೭೧ರಲ್ಲಿ ಅದು ೨೧.೧೯ ಲಕ್ಷ ಎಕರೆಗೆ ಇಳಿದಿದ್ದವು. ಹೀಗೆ ಇಳಿಕೆ ಸರಕಾರದ ಹೇಳಿಕೆ ಪ್ರಕಾರ ೨೨ ಲಕ್ಷ ಎಕರೆ ಗೇಣಿಭೂಮಿ ಜೋಡಿಗಳು ರದ್ದು ಆದುದರಿಂದ ಗೇಣಿದಾರರ ಸ್ವಾಧೀನವಾದವು. ಇನ್ನುಳಿದ ೨೦ ಲಕ್ಷ ಗೇಣಿಭೂಮಿ ಭೂಮಾಲಿಕರ ವಶವಾಯಿತು. ೧೯೫೪ರಲ್ಲಿದ್ದ ಗೇಣಿಭೂಮಿ ೧/೩ ಭಾಗದಷ್ಟು ಭೂಮಿ ೧೯೭೧ರ ವೇಳೆಗೆ ಒಕ್ಕಲುಗಳ ಕೈ ಬಿಟ್ಟಿತು (ಪ್ರಜಾವಾಣಿ, ೧೨-೩-೭೬).

ಶ್ರೀ ದೇವರಾಜ ಅರಸುರವರ ಭೂಸುಧಾರಣಾ ತಿದ್ದುಪಡಿಯಿಂದಾಗಿ ರಾಜ್ಯದ ಎಲ್ಲಾ ವರ್ಗದ ಗೇಣಿದಾರರ ಮನೆಯ ಹಣತೆಗಳು ಬೆಳಗಿದವು. ಅದರಲ್ಲೂ ಶಿವಮೊಗ್ಗ ಜಿಲ್ಲೆಯ ಹೆಚ್ಚಿನ ಗೇಣಿರೈತರು ದೀವರು, ಕಾನೂನಿನ

ಮೂಲಕ ಉಳುಮೆಯ ಭೂಮಿ ಸ್ವಂತದ್ದಾಗುವುದರೊಂದಿಗೆ ಶತಮಾನಕ್ಕಿಂತಲೂ ಜಾಸ್ತಿ ಗುಲಾಮ ಗಿರಿ ಬದುಕಿಗೆ ಮಂಗಳ ಹಾಡಿತು. ದೀವರು ಆರ್ಥಿಕವಾಗಿ ಸದೃಢರಾಗಿ ಸಮಾಜದಲ್ಲಿ ತಲೆ ಎತ್ತಿ ನಿಲ್ಲಲು ಸಾಧ್ಯವಾಯಿತು.

## ಗೇಣಿರೈತರ ಆರ್ಥಿಕ ಸ್ಥಿತಿಗತಿ

ಉತ್ತರ ಭಾರತ ಮತ್ತು ಕರ್ನಾಟಕದ ಇತರೆ ಭಾಗಗಳಲ್ಲಿದ್ದಂತೆ ಭಾರೀ ಭೂಮಾಲಿಕರು ಮಲೆನಾಡು ಪ್ರಾಂತ್ಯದಲ್ಲಿ ಇರಲಿಲ್ಲ. ಇತರ ಭಾಗಗಳಲ್ಲಿ ಕಾಣಸಿಕೊಳ್ಳುವ ಜೋಡಿದಾರರು, ಇನಾಂದಾರರು, ಜಹಗೀರ್ ದಾರರು, ದೇಸಾಯಿಗಳು, ಪಾಳೆಗಾರರು ಮುಂತಾದವರು ಈ ಭಾಗದಲ್ಲಿ ಕಾಣಸಿಗುವುದಿಲ್ಲ. ಶಿವಮೊಗ್ಗ ಜಿಲ್ಲೆಯಲ್ಲಿ ನೂರಾರು ಎಕರೆಯ ಜಮೀನುದಾರರು ಮತ್ತು ಸಣ್ಣ ಹಿಡುವಳಿದಾರರು ಮುಂತಾದವರೇ ಹೆಚ್ಚಾಗಿದ್ದರು. ಕಾಗೋಡು ಗೌಡರು ೧೧೫೦ ಎಕರೆ ತರಿ ಜಮೀನು, ೬೭೨ ಎಕರೆ ಖುಷ್ಕಿ, ೩ ಎಕರೆ ಬಾಗಾಯ್ತು, ४೨೦ ಎಕರೆ ಕಾನು ಈ ತೆರನಾದ ಜಮೀನು ಹೊಂದಿದ್ದರು. ಇವರನ್ನು ಬಿಟ್ಟರೆ ಆನಂದಪುರದ (ಸಾಗರ ತಾಲ್ಲೂಕು) ಅಯ್ಯಂಗಾರ ಮನೆತನದವರು ४೦೦೦ ಎಕರೆಗೂ ಜಾಸ್ತಿ ಜಮೀನು ಹೊಂದಿದ್ದರು. ಇನ್ನುಳಿದ ಹೆಚ್ಚಿನ ಭೂಮಾಲಿಕರು ಸಣ್ಣ ಹಿಡುವಳಿದಾರರಾಗಿದ್ದರು.

ಭೂಮಿ ಹೊಂದಿದವರಲ್ಲಿ ಹೆಚ್ಚಿನವರು ಬ್ರಾಹ್ಮಣ ಮತ್ತು ಲಿಂಗಾಯಿತರು. ಇವರೆಲ್ಲರು ಭಾರೀ ಶ್ರೀಮಂತ ರಾಗಿದ್ದರು ಎಂದರೆ ತಪ್ಪಾಗುತ್ತದೆ. ಇವರಲ್ಲಿಯು ಅನೇಕ ಜನ ಬಡವರಿದ್ದರು. ಆದಾಯ ಮೂಲವಿಲ್ಲದ ದೇವಸ್ಥಾನ ಪೂಜೆ ಮಾಡುವ, ಗೂಡಂಗಡಿ, ಹೊಟೇಲ್ ಇಟ್ಟುಕೊಂಡ ಬ್ರಾಹ್ಮಣ, ಲಿಂಗಾಯಿತರು ಇದ್ದರು. ಬಹುಸಂಖ್ಯಾ ಗೇಣಿದಾರರು ಹೆಚ್ಚಿನವರು ದೀವರಾಗಿದ್ದರು. ದೀವರಲ್ಲಿ ಸ್ವಂತ ಸಾಗುವಳಿ ಮಾಡುತ್ತಿದ್ದ ಖಾತೆದಾರರಾಗಿದ್ದವರು ಇದ್ದರು. ಕಾಗೋಡಿನಲ್ಲಿ ಸವಾಜಿ ಬೀರನಾಯಕರ ಮನೆಯವರು ನೆಲ್ಲೂರಿನ ಬರಸಿನ ಮನೆತನ, ನೀರ್‌ಗುಡಿ ಮನೆತನ, ಮನೆಘಟ್ಟದ ಗುಡ್ಡೆಕೇರಿ ಮನೆತನ ಹೀಗೆ ಊರಿಗೆ ಒಂದಿಬ್ಬರು ದೀವರು ಆರ್ಥಿಕವಾಗಿ ಸ್ಥಿತಿವಂತರಾಗಿರುವವರನ್ನು ಕಾಣಬಹುದು. ಈ ಎಲ್ಲಾ ಜನರ ಆದಾಯದ ಮೂಲ ಬೇಸಾಯ ವಾಗಿತ್ತು. ಮುಖ್ಯ ಬೆಳೆಗಳು ಅಡಿಕೆ, ಭತ್ತ, ಕಬ್ಬು ಮುಂತಾದವುಗಳಾಗಿದ್ದವು.

ಮಲೆನಾಡಿನ ಭಾಗದಲ್ಲಿ ಇವರುಗಳಲ್ಲದೆ ಜಮೀನು ರಹಿತ ಅಥವಾ ಜಮೀನಿದ್ದ ಕಸುಬುದಾರರು ಇದ್ದರು. ಕುಂಬಾರರು, ಚಮ್ಮಾರರು, ಬೋವಿ, ಬಡಗಿ, ಕ್ಷೌರಿಕ, ಅಂಬಿಗ, ಮಡಿವಾಳ, ಮುಂತಾದವರಿದ್ದರು. ಇವರು ಗಳೆಲ್ಲಾ ಹೆಚ್ಚಾಗಿ ಗೇಣಿಭೂಮಿ ಹೊಂದಿದ್ದರು. ಆದರೆ ಜಾತಿ ವ್ಯವಸ್ಥೆಯಲ್ಲಿ ಅತ್ಯಂತ ಕೆಳಸ್ತರದಲ್ಲಿ ಗುರುತಿ ಸುವ ಹರಿಜನರು ಆರ್ಥಿಕವಾಗಿ ಬಹಳ ಹಿಂದುಳಿದಿದ್ದರು. ಇವರಿಗೆ ಯಾವುದೇ ಗೇಣಿಭೂಮಿ ಇರಲಿಲ್ಲ. ಕೃಷಿ ಕೂಲಿಯೇ ಇವರ ಜೀವನಾಧಾರವಾಗಿತ್ತು. ಇವರಲ್ಲದೆ ಘಟ್ಟದ ಕೆಳಗಿನಿಂದ ಶೇರೆಗಾರರ ಜೊತೆಯಲ್ಲಿ ಬಂದ ವಲಸೆ ಕೂಲಿಯವರು ಅಡಿಕೆ ತೋಟದ ಕೆಲಸಕ್ಕಾಗಿ ಬರುತ್ತಿದ್ದರು. ಹೆಚ್ಚಿನ ಕೃಷಿ ಕೂಲಿಯವರು ಜೀತದಾಳುಗಳೇ ಆಗಿದ್ದರು. ಹೆಚ್ಚಿನ ಕೃಷಿ ಕೂಲಿಯವರು ಜಮೀನುದಾರರ ಮನೆಯ ಖಾಯಂ ಕೂಲಿಯವ ರಾಗಿದ್ದರು.

೧೯೭೫, ಶಿವಮೊಗ್ಗ ಜಿಲ್ಲಾ ಗೆಜೆಟಿಯರ್‌ನಲ್ಲಿ (ಪುಟ ೩೧೮) ಮಲೆನಾಡಿನ ಭಾಗದಲ್ಲಿ ೧೯೩೦ ರಿಂದ ೧೯೬೦ ರವರೆಗೆ ಪ್ರಚಲಿತವಿದ್ದ ಕೃಷಿಕೂಲಿಯ ಪಟ್ಟಿ ಹೀಗಿದೆ (ಅಕ್ಕಿ, ಹಣ ಎಲ್ಲಾ ಸೇರಿ)

೧೯೩೦-೩೧ - ೦.೨೫ ಪೈಸೆ

೧೯೩೫-೩೬ - ೦.೨೬ ಪೈಸೆ

೧೯೪೧ - ೪೨ - ೦.೫೦ ಪೈಸೆ

೧೯೪೭-೪೮ - ೧.೦೦ ಪೈಸೆ

೧೯೫೩-೫೪ - ೧.೨೫ ಪೈಸೆ

೧೯೫೯-೬೦ - ೨.೫೦ ಪೈಸೆ

(ಈಗ ೨೦೦೦-೦೪ರಲ್ಲಿ ೬೦ ರೂ. ಗಂಡಾಳಿಗೆ, ೩೦ ರೂ. ಹೆಣ್ಣಾಳಿಗೆ ಕೂಲಿ ಇದೆ)

ಇಲ್ಲಿ ಕಾಣಿಸುವ ಕೂಲಿದರ ಹೆಚ್ಚಳವನ್ನು ತೋರಿಸುವುದಿಲ್ಲ. ಆಯಾ ಅವಧಿಯಲ್ಲಿ ಅಗತ್ಯವಸ್ತುಗಳ ಬೆಲೆಗಳು ಜಾಸ್ತಿಯಾಗುತ್ತ ಹೋಯಿತು. ಕೃಷಿಕೂಲಿಯಲ್ಲಿ ಯಾವ ಹೆಚ್ಚಳವೂ ಆಗಿಲ್ಲ.

೧೯೨೯ರಲ್ಲಿ ಪ್ರಕಟವಾದ ಶ್ರೀ ಹಯವದನ ರಾವ್ ಎಂಬುವವರು ಸಂಪಾದಿಸಿರುವ ಮೈಸೂರು ಗೆಜೆಟಿಯರ್ ನಲ್ಲಿ, ಮೈಸೂರು ಸಂಸ್ಥಾನದಲ್ಲಿ ಒಂದು ರೂಪಾಯಿಗೆ ೪.೬೦ ಸೇರು ಅಕ್ಕಿ ಅಥವಾ ೬.೫೧ ಸೇರು ರಾಗಿ ಅಥವಾ ೮.೩೩ ಸೇರು ಜೋಳ ಸಿಗುತ್ತಿತ್ತು. ದಿನಗೂಲಿಯ ಸಂಬಳ ೪ ಆಣೆಯಿಂದ ೧೨ ಆಣೆವರೆಗೆ ಶಿವಮೊಗ್ಗ ಜಿಲ್ಲೆಯಲ್ಲಿತ್ತು. (ಪುಟ ೩೮೭) ೧೯೭೬ರಲ್ಲಿ ಮಲೆನಾಡಿನ ಭಾಗದಲ್ಲಿ ಇರುವ ದಿನಗೂಲಿಯ ದರ ಒಂದು ಸೇರು ಅಕ್ಕಿ ಮತ್ತು ಒಂದು ರೂಪಾಯಿ ನಗದು ಆಗಿತ್ತು. ಜೀತ ನಿರ್ಮೂಲನ ಶಾಸನ ಮತ್ತು ಕನಿಷ್ಠ ಕೂಲಿದರದ ಶಾಸನ (ಇಂದಿರಾ ಗಾಂಧಿಯವರ ೨೦ ಅಂಶ ಕಾರ್ಯಕ್ರಮಗಳಲ್ಲಿ ಒಂದಾದ) ಜಾರಿಗೆ ಬಂದಿರುವುದರಿಂದ ದಿನಗೂಲಿ ಜಾಸ್ತಿಯಾಗಿದೆ ಎಂಬ ಅಂಶ ಸರ್ಕಾರಿ ದಾಖಲೆಯಲ್ಲಿದ್ದರೂ ವಾಸ್ತವಾಂಶ ಬೇರೆಯಾಗಿತ್ತು.

ದಿನಗೂಲಿಯಾಗಿ ಹರಿಜನರಲ್ಲದೆ ದೀವರ ಜನಾಂಗದವರು ಇದ್ದರು. ಈ ಬಗ್ಗೆ ಮೈಸೂರು ವಿಧಾನ ಸಭೆಯಲ್ಲಿ ಕೂಲಿಯವರ ಸ್ಥಿತಿಗತಿಯ ಬಗ್ಗೆ ಶಾಂತವೇರಿ ಗೋಪಾಲಗೌಡರು ಹೇಳಿದರು. 'ನಮ್ಮ ಸಮಾಜ ದಲ್ಲಿ ಹರಿಜನರಲ್ಲದೆ ದೀವರ ಪಂಗಡದವರೂ ಕೂಲಿಯವರಾಗಿದ್ದಾರೆ. ಇವನ್ನು ಮನಗಂಡು ಭಾರತ ರಾಜ್ಯಾಂಗದಲ್ಲಿ ಇನ್ನೂ ಹತ್ತು ವರ್ಷಗಳ ತನಕ ಅವರಿಗೆ ವಿಶೇಷ ಸೌಲಭ್ಯಗಳನ್ನು ಮತ್ತು ಅವಕಾಶವನ್ನು ಕಲ್ಪಿಸಿಕೊಟ್ಟು ಅವರ ಅಭಿವೃದ್ಧಿಯನ್ನು ಇತರ ಜನಾಂಗಗಳ ಮಟ್ಟಕ್ಕೆ ತರಬೇಕೆಂದು ಉದ್ದೇಶಿಸಲಾಗಿದೆ. ಈ ನಿಮ್ಮ ಪಂಗಡದವರಲ್ಲಿ ಇಲ್ಲಿಯ ತನಕ ಬಹುಮಂದಿ ಕೃಷಿಯಿಂದ ಜೀವನ ಮಾಡುತ್ತಿದ್ದರೂ ಅವರಿಗೆ ಸ್ವಂತ ವ್ಯವಸಾಯಕ್ಕೆ ಭೂಮಿ ಇಲ್ಲ. ಆದ್ದರಿಂದ ಇವರೆಲ್ಲಾ Landless agricultural labourrers ಆಗಿದ್ದಾರೆ. ಹಿಂದೂ ಸಮಾಜವನ್ನು ನೋಡಿದರೆ ಕುಷ್ಠರೋಗದಿಂದ ಕೈಕಾಲುಗಳು ಕೊಳೆತು ಹೋದ ಒಬ್ಬ ಮನುಷ್ಯ ನಿದ್ದಂತೆ ಕಾಣುತ್ತದೆ... ಇದು ನಿಮ್ಮ ಹಿಂದೂ ಸಂಸ್ಕೃತಿಗೆ ಕಳಂಕಪ್ರಾಯವಾಗಿದೆ. ನಾನು ಹಾಗೆ ಹೇಳಿದ್ದು

ತಪ್ಪಿರಬಹುದು. ನಾನು ನಮ್ಮ ಹಿಂದೂ ಸಂಸ್ಕೃತಿಗೆ ಎಂದೇ ಹೇಳಬೇಕಾಗಿತ್ತು... ಇತರ ಎಲ್ಲಾ ಸಮಸ್ಯೆಗಳಿಗೂ ಈ ಆರ್ಥಿಕ ಸಮಸ್ಯೆಯೇ ಮೂಲಾಧಾರವೆಂದು ನನಗೆ ಹೊಳೆಯುತ್ತದೆ. ಆದರೆ ಈ ಸಾಮಾಜಿಕ ಸಮಸ್ಯೆಯೂ ಅಷ್ಟೇ ಮೂಲಭೂತವಾಗಿದೆ (೧೯೫೩ ಏಪ್ರಿಲ್ ೭ರ ಶಾಸನಸಭಾ ಅಧಿವೇಶನದಲ್ಲಿ ಗೌಡರ ಭಾಷಣ).

೧೯೭೪ರ ಮಾರ್ಚ್ ತಿಂಗಳ ವಿಧಾನಸಭಾ ಅಧಿವೇಶನದಲ್ಲಿ ಸೋಷಲಿಸ್ಟ್ ಜೆ.ಹೆಚ್.ಪಟೇಲ್‌ರವರು ಅರಸು ಭೂಸುಧಾರಣೆಯ ಬಗ್ಗೆ ಮಾತನಾಡುತ್ತಾ 'ವರ್ಗ ಸಂಘರ್ಷದ ಮಾತು ಆಡುವ ನೀವು ಗೇಣಿದಾರನಿಗೆ ಜಮೀನು ನೀಡುತ್ತಿರೇ ಹೊರತು ಉಳುವವನಿಗೆ ನೀಡುತ್ತೀರಾ? ಗೇಣಿದಾರರೆಲ್ಲರೂ ಹೊಲ ಉಳುತ್ತಾರೆಯೇ ಭೂಸುಧಾರಣಾ ಶಾಸನ ಸ್ವಾಗತಾರ್ಹವಿದ್ದರೂ ಗೇಣಿದಾರನಿಗೆ ಜಮೀನು ಎಂಬ ತತ್ವದಲ್ಲಿದ್ದಾರೆಯೇ ಹೊರತು ಉಳುವವನಿಗೆ ಜಮೀನು ಎಂದು ಹೇಳುತ್ತಿಲ್ಲ' ಎಂದು ಹೇಳಿದರು. (ಪ್ರಜಾವಾಣಿ ೩೧-೩-೭೪) ಕೂಲಿವರ್ಗ ಹೀನಾಯ ಸ್ಥಿತಿಯಲ್ಲಿದ್ದು ಯಾವ ಮಾರ್ಪಾಟು ಪಡೆಯಲಿಲ್ಲ. ಇಂದಿಗೂ ಈ ವರ್ಗ ಆರ್ಥಿಕ ಚಕ್ರದಲ್ಲಿ ಪ್ರಗತಿ ಕಾಣಲಿಲ್ಲ. ಸರಕಾರ ಕೃಷಿ ಕೂಲಿಯವರಿಗೆ ಭೂಮಿ ಕೊಡುವ, ಕನಿಷ್ಠ ವೇತನ ನಿಗದಿ ಮಾಡುವ ಮಾತನಾಡುತ್ತ ಈ ವರ್ಗದ ಅಭಿವೃದ್ಧಿ ಸಾಧ್ಯವೇ ಎಂಬ ಪ್ರಶ್ನೆಗೆ ಸ್ಪಷ್ಟ ಉತ್ತರ ಕೊಡುವಲ್ಲಿ ವಿಫಲವಾಗಿದೆ ಎಂದು ಹೇಳಬಹುದು.

ಕೂಲಿವರ್ಗದ ಸ್ಥಿತಿ ಈ ರೀತಿ ಇದ್ದರೆ ಗೇಣಿವರ್ಗದವರ ಸ್ಥಿತಿ ಇನ್ನೊಂದು ರೀತಿ ಇತ್ತು. ಒಬ್ಬ ಜಮೀನು ದಾರರ ಅಡಿಯಲ್ಲಿ ತಲತಲಾಂತರದಿಂದ ಗೇಣಿಭೂಮಿ ಮಾಡುತ್ತಿದ್ದರು. ಕ್ಷುಲಕ ಕಾರಣಗಳಿಗಾಗಿ ಬೇರೆ ಜಮೀನುದಾರರ ಒಕ್ಕಲಾಗಿ ಹೋಗಬೇಕಾಗಿತ್ತು. ಅಲ್ಲದೆ ಫಲವತ್ತಾದ ಭೂಮಿ ಕಳೆದುಕೊಂಡು, ಬಂಜರು ಭೂಮಿ ಪಡೆಯಬೇಕಾಗುತ್ತಿತ್ತು. ಗೇಣಿರೈತನಿಗೆ ಗೇಣಿಭೂಮಿಯು ಸರಿಯಾಗಿ ಬೇಸಾಯ ಮಾಡಲು ಸಿಗುತ್ತಿರಲಿಲ್ಲ. ಸರ್ಕಾರಿ ನೌಕರಿ, ವಿದ್ಯಾಭ್ಯಾಸ ಮುಂತಾದವು ಕನಸಿನ ಮಾತಾಗಿದ್ದವು. 'ಹೊಟ್ಟೆಗೆ ಹಿಟ್ಟಿಲ್ಲ ಜುಟ್ಟಿಗೆ ಮಲ್ಲಿಗೆ ಹೂ' ಎಂಬ ಸ್ಥಿತಿ ನಿರ್ಮಾಣವಾಗಿತ್ತು. ಸ್ವಂತ ಭೂಮಿ ಹೊಂದಿದ ದೀವರು ಆರ್ಥಿಕವಾಗಿ ಸ್ಥಿತಿವಂತರಾಗಿದ್ದರು. ದೊಡ್ಡದಾದ ಹೆಂಚಿನ ಮನೆಯನ್ನು ಹೊಂದಿರುತ್ತಿದ್ದರು. ಗೇಣಿರೈತರ ಮನೆಗಳು ಹೆಚ್ಚಾಗಿ ಹುಲ್ಲಿನ ಮಾಡಿನ ಮನೆಗಳು ಸರ್ವೇಸಾಮಾನ್ಯವಾಗಿದ್ದವು.

೧೯೫೦ರ ಕಾಲದಲ್ಲಿ ಹೆಚ್ಚಿನ ಮಲೆನಾಡಿನ ಹಳ್ಳಿಗಳಿಗೆ ಬಸ್ಸಿನ ಸೌಕರ್ಯವಿರಲಿಲ್ಲ. ಪಟ್ಟಣಗಳಿಗೆ ನಡೆದುಕೊಂಡೆ ಹೋಗಿ ತಮ್ಮ ಸಂತೆಪೇಟೆಗಳನ್ನು ಮಾಡಬೇಕಾಗಿತ್ತು. ಕೆಲವರಿಗೆ ಪಟ್ಟಣ ಬಹಳ ದೂರವೇ ಆಗಿತ್ತು. ಸ್ಥಿತಿವಂತ ಮೇಲ್ಜಾತಿಯವರು, ದೀವರ ಜನಾಂಗದ ಸ್ವಂತ ಸಾಗುವಳಿದಾರರು ಎತ್ತಿನ ಗಾಡಿಯನ್ನು ಪೇಟೆಗೆ ತೆಗೆದುಕೊಂಡು ಸಂತೆಪೇಟೆ ಮಾಡುತ್ತಿದ್ದರು. ಬಸ್ಸಿನಲ್ಲಿಯು ಓಡಾಡುತ್ತಿದ್ದರು ಉಳಿದವರು ಬಹಳ ಕಡಿಮೆ. ಆರ್ಥಿಕವಾಗಿ ಹೀನಾಯ ಸ್ಥಿತಿಯಲ್ಲಿದ್ದ ಕೂಲಿವರ್ಗ ಮತ್ತು ಗೇಣಿರೈತ ವರ್ಗಕ್ಕೆ ಶಿಕ್ಷಣ, ವ್ಯಾಪಾರ, ಮುಂತಾದವು ದುಸ್ತರವಾಗಿದ್ದವು. ಎಷ್ಟು ದುಡಿಮೆ ಮಾಡಿದರೂ ಆದಾಯ ಕಡಿಮೆ ವೆಚ್ಚ ಜಾಸ್ತಿ. ಸರಳ ಜೀವನ ಅವರದಾಗಿತ್ತು. 'ಹುಟ್ಟಿಸಿದ ದೇವರು ಹುಲ್ಲು ಮೇಯಿಸುವುದಿಲ್ಲ' ಎಂಬ ಭಾವನೆ ಈ ವರ್ಗದವರಲ್ಲಿ ಮನೆ ಮಾಡಿತ್ತು. ಮಲೆನಾಡಿನ ಭಾಗದಲ್ಲಿ 'ದುಡ್ಡಿದ್ದವನೆ ದೊಡ್ಡಪ್ಪ' ಎಂಬ ಮನಸ್ಥಿತಿ ಮನೆ ಮಾಡಿತ್ತು. ಆಸ್ತಿ-ಬಂಗಾರವೇ ಪ್ರಧಾನವಾಗಿತ್ತು. ಇದು ಎಷ್ಟಿದೆಯೋ ಅಷ್ಟಷ್ಟು ಗೌರವ ಸಲ್ಲುತ್ತಿತ್ತು. ದೊಡ್ಡ

ಗೌಡರು, ಗೌಡರು, ಹೆಗಡೇರು ಮುಂತಾದ ಗೌರವದ ಮಾತುಗಳಿಂದ ಮೇಲ್ವರ್ಗದವರನ್ನು ಸಂಬೋಧಿಸಿದರೆ, ದೀವರಲ್ಲಿ ನಾಯ್ಕ-ನಾಯ್ಕರು ಎಂದು ಕರೆಯಲಾಗುತ್ತಿತ್ತು. ಕರೆಯುವ ದಾಟಿಯಲ್ಲಿಯೇ ಬಡವ-ಶ್ರೀಮಂತ ಎಂದು ಜನರ ಮನದಲ್ಲಿ ವಿಂಗಡಣೆ ಮಾಡಲಾಗುತ್ತಿತ್ತು. ನೀತಿ ಧರ್ಮಗಳ ನೆಲೆಗಟ್ಟಿನಲ್ಲಿ ಎಲ್ಲ ಜಾತಿಯವರ ಬದುಕು ನಡೆಯುತ್ತಿತ್ತು. ಕೆಳಜಾತಿ, ಮೇಲ್‌ಜಾತಿ ಎಂಬ ಭಾವನೆಗೆ ಸಮಾಜದಲ್ಲಿ ಮಹತ್ವವಿತ್ತು. ಆ ಕಾಲದ ವ್ಯವಹಾರಿಕ ಭಾಷೆ ಈ ರೀತಿಯಾಗಿತ್ತು. ಹಣವೆಂದರೆ ಬಿಲ್ಲೆ, ಆಣೆ, ರೂಪಾಯಿ. ತೂಕವೆಂದರೆ ಮಣ, ಪೌಂಡು. ಅಳತೆಯಾದರೆ ಪಾವು, ಸೇರು, ಗಿದ್ನ ಖಂಡುಗ, ಪಲ್ಲ ಈಗ ಇವು ಮಾಯವಾಗಿವೆ.

ಬೇಸಾಯದಲ್ಲಿ ಆಧುನಿಕ ಪದ್ಧತಿಯನ್ನು ಯಾರು ಅಳವಡಿಸುತ್ತಿರಲಿಲ್ಲ. ರಾಸಾಯನಿಕಗಳ ಬಳಕೆ ಇರಲಿಲ್ಲ. ಸಾಂಪ್ರದಾಯಿಕ, ಕಡಿಮೆ ಇಳುವರಿಯ ಭತ್ತಗಳನ್ನು ಬಿತ್ತನೆ ಮಾಡುತ್ತಿದ್ದರು. ಹೀಗಾಗಿ ಶ್ರಮಕ್ಕೆ ತಕ್ಕ ಪ್ರತಿಫಲ ಸಿಗುತ್ತಿರಲಿಲ್ಲ. ಕೃಷಿಕ್ಷೇತ್ರದಲ್ಲಿ ಲಾಭದ ನಿರೀಕ್ಷೆ ಇರಲಿಲ್ಲ. ಹೆಚ್ಚಿನ ಮಳೆ ಬೀಳುವುದರಿಂದ ಮಣ್ಣಿನ ಫಲವತ್ತತೆ ನೀರಿನಲ್ಲಿ ಕೊಚ್ಚಿಕೊಂಡು ಹೋಗಿ ಇಳುವರಿಯಲ್ಲಿ ವ್ಯತ್ಯಾಸವಾಗುತ್ತಿತ್ತು. ಮಲೆನಾಡು ಭಾಗದಲ್ಲಿ ಅಡಿಕೆಯನ್ನು ಹೊರತುಪಡಿಸಿ ಯಾವುದೇ ವಾಣಿಜ್ಯ ಬೆಳೆ ಬೆಳೆಯಲು ಸಾಧ್ಯವಿಲ್ಲ. ಯಾವ ವರ್ಗದವರ ಮನೆಯಲ್ಲೂ ನಾಗರೀಕ ಜಗತ್ತಿನ ಯಾವುದೇ ವಸ್ತು ಬಹಳ ಅಪರೂಪವಾಗಿತ್ತು. ಉದಾ: ಮೋಟಾರು, ವಾಹನಗಳು ಇರಲಿಲ್ಲ. 'ಗಂಜಿ ಕುಡಿಯುವವನಿಗಿಂತ ಅನ್ನ ಉಣ್ಣೋನು ಸಾಹುಕಾರ' ಎಂಬ ಸ್ಥಿತಿ ಮಲೆನಾಡಿನ ಕೃಷಿಕರದ್ದಾಗಿತ್ತು.

ಕೃಷಿ ವ್ಯವಸ್ಥೆಯಲ್ಲಿ ಒಬ್ಬ ವ್ಯಕ್ತಿಯಿಂದ ಉತ್ಪಾದನೆ ಸಾಧ್ಯವಿಲ್ಲ ಇದಕ್ಕೆ ಸಾಂಘಿಕ ಪ್ರಯತ್ನಬೇಕು. ಇಲ್ಲಿ ಭೂಮಿಯ ನಂತರ ಶ್ರಮ ಪ್ರಮುಖ ಪಾತ್ರ ವಹಿಸುತ್ತದೆ. ಶ್ರಮದ ವಿನಿಮಯ ಈ ಕ್ಷೇತ್ರದಲ್ಲಿ ಆಗುತ್ತದೆ. ಮಲೆನಾಡಿನ ಭಾಗದಲ್ಲಿ ಶ್ರಮದ ವಿನಿಮಯಕ್ಕೆ ಮೈಯಾಳು ಎಂದು ಕರೆಯುತ್ತಾರೆ. ಕೃಷಿ ಕೆಲಸದಲ್ಲಿ ಒಂದು ಕುಟುಂಬದವರು ಇನ್ನೊಂದು ಕುಟುಂಬದವರ ಕೆಲಸಕ್ಕೆ ಹೋದಾಗ ಇವರು ಅಷ್ಟೇ ಆಳುಗಳೊಂದಿಗೆ ಆ ಕುಟುಂಬದವರ ಕೆಲಸಕ್ಕೆ ಹೋಗಿ ತೀರಿಸುವುದು. ಇದು ಆಳಾಗಿರಬಹುದು, ಎತ್ತಿನ ಗಳೇವು ಆಗಿರಬಹುದು, ಭತ್ತ ಹೊಡೆಯಲು ಗಾಡಿ ತೆಗೆದುಕೊಂಡಿರಬಹುದು, ಇವುಗಳೆಲ್ಲಾ ಶ್ರಮದ ವಿನಿಮಯದ ಮುಖಾಂತರ ಮಾಡಲಾಗುತ್ತಿತ್ತು. ಇಲ್ಲಿ ಹಣದ ಪ್ರಾಮುಖ್ಯತೆ ಇಲ್ಲ.

'ಬಂಡವಾಳ' ಹೂಡಿ ಆರ್ಥಿಕ ಅಭಿವೃದ್ಧಿಯನ್ನು ಸಾಧಿಸುವ ಜನರ ಸಂಖ್ಯೆ ಬಹಳ ಕಡಿಮೆ. ಕಾಗೋಡಿನ ಗೌಡರು ಬಸ್ಸು ಮಾಡಿ ಸಾಲ ಮಾಡಿಕೊಂಡಿದ್ದರು. ಕೆಲ ಜಮೀನನ್ನು ಮಾರಿದ್ದರು. ಇವರ ಸ್ಥಿತಿಯೇ ಈ ರೀತಿಯಾದ್ದರಿಂದ ಇನ್ನು ಗೇಣಿದಾರರಂತೂ ಇಂಥ ಕೆಲಸಕ್ಕೆ ಕೈ ಹಾಕುವುದು ಕನಸಿನ ಮಾತಾಗಿತ್ತು. ಮುಂಬಯಿ ಪ್ರಾಂತ್ಯದಲ್ಲಿ ಭತ್ತದ ರೇಟು ಜಾಸ್ತಿ ಎಂದು ಕೆಲವರು ಹತ್ತಿರದಲ್ಲಿಯೇ ಇರುವ ಮುಂಬಯಿ ಪ್ರಾಂತ್ಯದ ತಾಲ್ಲೂಕುಗಳಿಗೆ ಭತ್ತವನ್ನು ಸಾಗಾಟ ಮಾಡುತ್ತಿದ್ದರು. ಉದಾ: ಸಾಗರ, ಸೊರಬ ತಾಲ್ಲೂಕಿನ ಜನರು ಸಿದ್ದಾಪುರ ತಾಲ್ಲೂಕಿಗೆ ಭತ್ತ ಸಾಗಾಣಿಕೆ ಮಾಡುತ್ತಿದ್ದದ್ದು ಕಂಡು ಬರುತ್ತದೆ. ಈ ಕೆಲಸವನ್ನು ಭೂಮಾಲಿಕರು, ಗೇಣಿರೈತರು ಎಲ್ಲರೂ ಮಾಡುತ್ತಿದ್ದರು.

ಗಂಡಸರು ಗೇಣಿಭೂಮಿಯನ್ನು ಮಾಡುವುದಲ್ಲದೆ ಕೂಲಿನಾಲಿ ಮಾಡಿ ಜೀವನ ಸಾಗಿಸುತ್ತಿದ್ದರು. ಹೆಂಗಸರು ಭೂಮಾಲಿಕರ ಮನೆಯ ಅಡಿಕೆ ಸುಲಿಯಲಿಕ್ಕೆ ಮತ್ತಿತರ ಕೆಲಸಗಳನ್ನು ಮಾಡುತ್ತಿದ್ದರು. ಇವರ ಸಂಬಳ

ಗೇಣಿ ೫ ಅಥವಾ ೬ ಚೀಲ. ೬೦ ಸೇರು ಭತ್ತ ವ್ಯತ್ಯಾಸವಾಗುತ್ತಿತ್ತು. ಅಂದರೆ ಎಕರೆಗೆ ೧ ಚೀಲ ಭತ್ತ ಗೇಣಿ ಕಡಿಮೆಯಾಗುತ್ತಿತ್ತು. ಕಾಗೋಡು ಗೌಡರ ಜಮೀನು ೧೦೦೦ ಎಕರೆಗೂ ಮೇಲ್ಪಟ್ಟು ಭತ್ತ ಬೆಳೆಯುವ ಜಮೀನು ಹೊಂದಿದ್ದರು. ಅಂದರೆ ೧೦೦೦ ಚೀಲಕ್ಕೂ ಅಧಿಕ ಭತ್ತ ಕಡಿಮೆಯಾಗುತ್ತಿತ್ತು. ಇವರಿಗೆ ದೊಡ್ಡ ಆರ್ಥಿಕ ಬೇಡಿಕೆಯಾಗಿತ್ತು. ಇಲ್ಲಿಯ ಆರ್ಥಿಕ ಶೋಷಣೆಗೆ ಕಾರಣ ಅಜ್ಞಾನ, ಮೂಢನಂಬಿಕೆ, ವೈಜ್ಞಾನಿಕ ದೃಷ್ಟಿಯ ಕೊರತೆ, ಅಸ್ಪೃಶ್ಯತೆ, ಜಾತಿ ಪ್ರಭಾವ ಮುಂತಾದವು ದೀವರ, ಮಲೆನಾಡಿನ ಭಾಗದ ಜನರ ಆರ್ಥಿಕ ದುಸ್ಥಿತಿಗೆ ಕಾರಣಗಳಾಗಿದ್ದವು. ಕಾಗೋಡು ಹೋರಾಟದಿಂದ ಸ್ವಲ್ಪ ಮಟ್ಟಿನ ವಿಚಾರಕ್ರಾಂತಿ ಗೇಣಿರೈತರಲ್ಲಿ ಮೂಡಿ, ದೀವರು ಒಗ್ಗೂಡಲು ಕಾರಣವಾಯಿತು. ಈ ಚಳುವಳಿಯಿಂದ ನೇರ ಪರಿಣಾಮಗಳು ಆಗದಿದ್ದರು ಅಪ್ರತ್ಯಕ್ಷ ಪರಿಣಾಮಗಳು ಚಳುವಳಿಯಿಂದ ಆಗುತ್ತಲೇ ಇದ್ದಿತು. ೧೯೭೪ರ ಭೂಶಾಸನದ ಹಿಂದೆ ಈ ಚಳುವಳಿಯ ಛಾಯೆ ಗೋಚರಿಸುತ್ತದೆ. ಈ ಶಾಸನ ಬರುವ ಪೂರ್ವದಲ್ಲಿ ಗೇಣಿ ಕೊಡದಿರುವ ಚಳುವಳಿ ಅಲ್ಲಲ್ಲಿ ನಡೆಯಿತು. ಭೂಶಾಸನದ ನಂತರ ಗೇಣಿರೈತರು ಭೂಮಿಯ ಒಡೆಯರಾಗಿ ಆರ್ಥಿಕವಾಗಿ ಅಭಿವೃದ್ಧಿ ಸಾಧಿಸಲು ಸಾಧ್ಯವಾಯಿತು.

ಕಾಗೋಡು ಒಡೆಯರ ಧರ್ಮಪತ್ನಿ ಕಮಲಮ್ಮ ಒಡೆಯರ್ ಹೇಳುವಂತೆ 'ಕಾಗೋಡು ಹೋರಾಟಕ್ಕೆ ಕಾರಣರಾದ ಗೇಣಿದಾರ ರೈತ ಸಂಘಕ್ಕೆ ಎದುರಾಗಿ ಕಾಗೋಡು ಗುರುವಯ್ಯ ಗೌಡರು ಭೂಮಾಲೀಕರ ಸಂಘದ ಅಧ್ಯಕ್ಷರಾದ್ದರಿಂದ 'ರೈತ ಚಳುವಳಿ' ಕಾಗೋಡಿನಲ್ಲಿ ನಡೆಯಿತು... ಈ ಹೋರಾಟದಿಂದ ನಮ್ಮ ಕುಟುಂಬಕ್ಕೆ ನಷ್ಟದ ಕತ್ತಲು ತುಂಬಿದರೂ, ಅದರ ಫಲವಾಗಿ ಲಕ್ಷಾಂತರ ರೈತ ಕುಟುಂಬಗಳಲ್ಲಿ ಉದ್ಧಾರದ ಹಣತೆ ಬೆಳಗುತ್ತಿದೆ. ಇದು ನನಗೆ ಆನಂದ ತಂದಿದೆ' ಎಂದು ವಿಶ್ಲೇಷಿಸಿದ್ದಾರೆ.

### ಸ್ಥಿತ್ಯಂತರದ ಹಾದಿಯಲ್ಲಿ ಮಲೆನಾಡಿನ ದೀವರು

ಭಾರತದ ಒಟ್ಟು ರಾಜಕೀಯ ವಿದ್ಯಮಾನಗಳನ್ನು ನೋಡಿದರೆ ಹಿಂದುಳಿದ ವರ್ಗಗಳ ಸ್ಥಾನಮಾನ ಹೀನಾಗಿತ್ತು ಎಂಬುದು ನಿಚ್ಚಳವಾಗಿ ಕಂಡು ಬರುತ್ತದೆ. ಬ್ರಿಟಿಷರಿಂದ ಅಧಿಕಾರ ಹಸ್ತಾಂತರವಾದದ್ದು ಶ್ರೀಮಂತರ ಕೈಗೆ, ಬಲಿಷ್ಠ ಜಾತಿಗಳಿಗೆ. ಚುನಾವಣೆಯಲ್ಲಿ ಭಾಗವಹಿಸುತ್ತಿದ್ದವರು ಇವರೆ ಆಗಿದ್ದರಿಂದ ಹಿಂದುಳಿದ ವರ್ಗಗಳಿಗೆ ಇದರ ಮಹತ್ವ ಅರಿವಾಗಿರಲಿಲ್ಲ. ಕೆಲವೆ ಕೆಲವು ಜನರಿಗೆ ತಿಳಿದಿದ್ದರು ಇಂತಹವರ ಸಂಖ್ಯೆ ಕಡಿಮೆ ಇತ್ತು. ಈ ಸ್ಥಿತಿ ಎಲ್ಲಾ ಕಡೆ ಸರ್ವೇಸಾಮಾನ್ಯವಾಗಿತ್ತು. ಭೂಸುಧಾರಣಾ ಕಾನೂನು ಅನೇಕ ತಿದ್ದುಪಡಿಗಳಿಗೆ ಒಳಗಾಗಿದ್ದರ ಕಾರಣ ಇದೆ ಆಗಿತ್ತು. ಕಳೆದ ಮೂರು ದಶಕಗಳಿಂದೀಚೆಗೆ ಭಾರತದ ರಾಜಕೀಯ ಸ್ವರೂಪ ಬೇರೆಯಾಯಿತು. 'ಹಿಂದುಳಿದ ಜಾತಿಗಳು ಒಗ್ಗೂಡುವುದು ಮತ್ತು ಒಂದು ಶಕ್ತಿಯಾಗಿ ಹೊರ ಹೊಮ್ಮಿದ್ದರಿಂದ ರಾಜಕೀಯ ಪರಿವರ್ತನೆ, ಇದರಿಂದ ಸಮಾಜದ ಪರಿವರ್ತನೆಗೆ ಸಾಧ್ಯವಾಯಿತು. ಬಿಹಾರದ ಲಾಲುಪ್ರಸಾದ್ ಯಾದವ್, ಉತ್ತರ ಪ್ರದೇಶದ ಮುಲಾಯಮ್‌ಸಿಂಗ್ ಯಾದವ್, ಮಾಯಾವತಿ, ಮುಂತಾದವರು ಉತ್ತರ ಭಾರತದಲ್ಲಿಯ ಹಿಂದುಳಿದ ಜಾತಿಗಳ ರಾಜಕೀಯ, ಸಾಮಾಜಿಕ ಸ್ಥಿತ್ಯಂತರಕ್ಕೆ ಪ್ರಮುಖ ಮೈಲಿಗಲ್ಲುಗಳು.

ದಕ್ಷಿಣ ಭಾರತದಲ್ಲಿ ಈ ಸ್ಥಿತ್ಯಂತರ ಉತ್ತರ ಭಾರತಕ್ಕಿಂತ ಮೊದಲೆ ಘಟಿಸಿತ್ತು. ಇದರ ಕೀರ್ತಿ ತಮಿಳು ನಾಡಿಗೆ ಸಲ್ಲುತ್ತದೆ. ತಮಿಳುನಾಡಿನಲ್ಲಿ ಪೆರಿಯಾರ್ ನೇತೃತ್ವದಲ್ಲಿ ಸಂಘಟಿತ ಹೋರಾಟ ಡಿ.ಎಂ.ಕೆ.ಯ ರಾಜಕೀಯ ಯೋಜನೆಯಲ್ಲಿ ಸ್ಪಷ್ಟರೂಪ ಪಡೆಯಿತು. ಕರ್ನಾಟಕದಲ್ಲಿ ಸ್ವಾತಂತ್ರ್ಯ ಪೂರ್ವದಲ್ಲಿ ರಾಜಕೀಯ ಹಸ್ತಾಂತರಗೊಂಡಿದ್ದು, ಬ್ರಾಹ್ಮಣರು, ಲಿಂಗಾಯಿತರು, ಮತ್ತು ಒಕ್ಕಲಿಗರ ವರ್ಗಕ್ಕೆ, ಹಿಂದುಳಿದ ವರ್ಗಗಳು ಒಂದುಗೂಡಿ, ಪ್ರಬಲ ರಾಜಕೀಯ ಶಕ್ತಿಯಾಗಿ ರೂಪುಗೊಂಡಿದ್ದು 'ದೇವರಾಜ ಅರಸು' ನಾಯಕತ್ವದಲ್ಲಿ ಹಿಂದುಳಿದ ವರ್ಗಗಳ ಪರಿವರ್ತನೆಯ ಹರಿಕಾರರಾದರು. ಇದಕ್ಕಿಂತಲೂ ಸ್ವಾತಂತ್ರ್ಯ ಪೂರ್ವದಲ್ಲಿಯೇ ಒಂದು ಸಂಘಟನಾ ಶಕ್ತಿಯಾಗಿ ರಾಜಕೀಯ ಸ್ಥಾನಮಾನ ನಿರ್ಧರಿಸುವ ಶ್ರೇಯಸ್ಸು ಮಲೆನಾಡಿನ ದೀವರಿಗೆ ಸಲ್ಲುತ್ತದೆ. ಕಾಗೋಡು ಸತ್ಯಾಗ್ರಹದ ವೇಳೆ ದೀವರು ತೋರಿದ ಒಗ್ಗಟ್ಟು, ಸಾಮಾಜಿಕ ಕಳಕಳಿ, ವಿಚಾರಪ್ರಜ್ಞೆ ಇವುಗಳೆಲ್ಲ ಬೆಳೆಯುವಲ್ಲಿ ಮಹತ್ತರ ಪಾತ್ರವಹಿಸಿದ. ತಾಲ್ಲೂಕು ರೈತ ಸಂಘ (ದೀವರು ಜಾಸ್ತಿ ಸಂಖ್ಯೆಯಲ್ಲಿದ್ದರು) ಮತ್ತು ಸಮಾಜವಾದಿ ಪಕ್ಷ ಸ್ಥಾಪನೆಯ ಕಾರ್ಯ ಮಾಡಿದವು.

ಕಾಗೋಡು ಸತ್ಯಾಗ್ರಹದಿಂದ ಅನೇಕ ಪಲ್ಲಟಗಳು ಘಟಿಸಿದವು. ಜಾತೀಯ ನೆಲೆಗಟ್ಟಿನಲ್ಲಿ ದೀವರು ಒಗ್ಗೂಡಿದರು. ಬರಿ ಸುತ್ತಮುತ್ತಲಿನ ಗೇಣಿರೈತ ದೀವರಲ್ಲದೆ, ಸೊರಬ, ಸಾಗರ, ಹೊಸನಗರ, ಸಿದ್ದಾಪುರದ ದೀವರು ಸಕ್ರೀಯವಾಗಿ ಹೋರಾಟದಲ್ಲಿ ಪಾಲ್ಗೊಂಡರು. ವರ್ಗೀಕೃತ ಜಾತಿಪದ್ಧತಿ ಎಂಬುದು ಸಮಾಜಕ್ಕೆ ಅಂಟಿದ ಶಾಪ ಎಂದು ಪರಿಗಣಿಸಿದ ನಾಯಕರಲ್ಲಿ ಜಾತಿಪದ್ಧತಿ ವಿಚಾರಕ್ರಾಂತಿಯಿಂದ ಕ್ರಮೇಣ ಮಾಯವಾಗುತ್ತದೆ ಎಂದು ತಿಳಿದಿದ್ದರು. ಆದರೆ ಈ ರೀತಿ ಘಟಿಸದೆ 'ಜಾತಿಯ ಸಂಘಟನೆ' ಪ್ರಬಲವಾಗುತ್ತಾ ತಮ್ಮ ಹಕ್ಕಿಗಾಗಿ ಈ ಸಂಘಟನೆಯ ಅಡಿಯಲ್ಲಿ ಹೋರಾಟ ಮಾಡುವುದರ ಮೂಲಕ ಸಾಮಾಜಿಕ ಪ್ರಜ್ಞೆ ಬೆಳೆಯಿಸಿಕೊಂಡರು. ದೇಶದಲ್ಲಿ 'ಜಾತಿ' ಎಂಬುದು ಎಲ್ಲ ಕ್ಷೇತ್ರದಲ್ಲಿಯು ಜಾಗೃತಿ ಮೂಡಿಸಿದೆ. ಯಾವುದೇ ಮನುಷ್ಯನ ನಿಷ್ಠೆ ಇರುವುದು ಕ್ರಮವಾಗಿ ಕುಟುಂಬಕ್ಕೆ, ಜಾತಿಗೆ ನಂತರ ದೇಶಕ್ಕೆ. ಹೀಗೆ 'ಜಾತಿ' ಎಂಬುದು ತನ್ನ ಪ್ರಭಾವ ಬೀರಿದೆ. ಜಾತಿಪದ್ಧತಿಯೇ ಅತ್ಯಂತ ಮಾರಕವಾದದ್ದು ಎಂಬ ತಿಳುವಳಿಕೆ ಮೂಡುವ ಸಂದರ್ಭದಲ್ಲಿಯೇ 'ಜಾತಿ ಸಂಘಟನೆ'ಗಳು ಬೆಳೆಯಲು ಪ್ರಾರಂಭವಾದವು. ಇದೊಂದು ಆರೋಗ್ಯಕರ ಬೆಳವಣಿಗೆಯಾದರೆ ಸಮಾಜಕ್ಕೆ ಹಿತ ಇಲ್ಲದಿದ್ದರೆ ಮಾರಕವಾಗುತ್ತದೆ. ಜಾತಿಪದ್ಧತಿಯಲ್ಲಿ ಮೇಲು ಕೀಳು ಎಂಬ ಭಾವನೆ ಇರುವಾಗಲೆ, ಸಂಘಟನೆಯಿಂದ ರಾಜಕೀಯ, ಸಾಮಾಜಿಕ ಲಾಭಪಡೆದು ಆರ್ಥಿಕವಾಗಿ ಗಟ್ಟಿಯಾಗುತ್ತಲೆ ಆ ಭಾವನೆ ಮಾಯವಾಗಬಹುದು. ಆರ್ಥಿಕವಾಗಿ ಯಾವುದೇ ಜಾತಿಯ ವ್ಯಕ್ತಿ ಸದೃಢನಾದರೆ ಅವನಿಗೆ ಸಮಾಜದಲ್ಲಿ ಗೌರವಲಭಿಸುವುದು ಕಾಣುತ್ತೇವೆ. ಇಷ್ಟೆಲ್ಲಾ ಸಂಗತಿಗಳು ಜರುಗುತ್ತಿದ್ದರು ನಮ್ಮ ದೇಶದಲ್ಲಿ ಸಾಮಾಜಿಕ ಪರಿವರ್ತನೆಯಾಗುತ್ತಿರುವುದು ಪ್ರಜಾಪ್ರಭುತ್ವದಿಂದ.

ರಾಜಕೀಯ ಕ್ಷೇತ್ರದಲ್ಲಿ 'ಹಿಂದುಳಿದ ಜನಾಂಗಗಳು' ಇಂದು ಪ್ರಜಾಪ್ರಭುತ್ವದ ಅಡಿಯಲ್ಲಿ ಒಂದು ಶಕ್ತಿಯಾಗಿ, ಸಾಮಾಜಿಕ ಪರಿವರ್ತನೆಗೆ ಕಾರಣವಾಗುತ್ತಿವೆ. ಈ ಬದಲಾವಣೆ ನಿಧಾನಗತಿಯಲ್ಲಿ ನಡೆಯುವಂತಹದು. ಪ್ರತಿಫಲ ಕಾಣಬೇಕಾದರೆ ಅನೇಕ ವರ್ಷಗಳೇ ಬೇಕು. ಈ ಬದಲಾವಣೆ ನಮಗೆ ತತ್‌ಕ್ಷಣ ಗೋಚರಿಸುವುದು ರಾಜಕೀಯ ಕ್ಷೇತ್ರದಲ್ಲಿ. ಇಲ್ಲಿ ಸಾಮಾಜಿಕ ಬದಲಾವಣೆಯ ಪ್ರತಿಫಲ ಶೀಘ್ರವಾಗಿ ಗೋಚರಿಸುತ್ತದೆ.

ಕಡುಬಡತನದ, ಬೇಗೆಯಲ್ಲಿ ಬೆಂದ ದೀವರ ಜನಾಂಗ ಇಂದು ಏನಾಗಿದೆ ಎಂಬುದಕ್ಕೆ ಕಾಗೋಡು ರೈತ ಹೋರಾಟವೇ ಕಾರಣ. ಕರ್ನಾಟಕದಲ್ಲಿ ಸಾಮಾಜಿಕ, ರಾಜಕೀಯ ಪ್ರಜ್ಞೆ ಮೊದಲು ಕಂಡುಬಂದದ್ದು ದೀವರ ಜನಾಂಗದಲ್ಲಿ. ಈ ಪ್ರಜ್ಞೆ ಬೆಳೆಯಲು, ಸಮುದಾಯವೇ ಒಗ್ಗಟ್ಟಿನಿಂದ ಹೋರಾಟಮಾಡಲು ಕಾರಣವಾಗಿದ್ದು ಗಣಪತಿಯಪ್ಪ ಮತ್ತು ಸಮಾಜವಾದಿ ಪಕ್ಷದಿಂದ. ಗೇಣಿ ಹೋರಾಟದ ಸಮಯದಲ್ಲಿ ಬೆಳೆದ ಜಾಗೃತ ಮನಃಸ್ಥಿತಿಯನ್ನು ರಾಜಕೀಯ ಕ್ಷೇತ್ರದಲ್ಲಿ ಭದ್ರ ಬುನಾದಿಯನ್ನು ಹಾಕಲು ಒಂದು ಶಕ್ತಿಯಾಗಿ ಪರಿವರ್ತಿಸಿ, ೧೯೫೨ರ ಮೊದಲ ವಿದಾನಸಭಾ ಚುನಾವಣೆಯಲ್ಲಿ ಸಮಾಜವಾದಿ ಪಕ್ಷ ಜಯಬೇರಿ ಭಾರಿಸುವುದರ ಮುಖಾಂತರ ಒಗ್ಗಟ್ಟಿನಲ್ಲಿ ಬಲವಿದೆ ಎಂಬ ಅಂಶ ಅರಿತರು. ತಲತಲಾಂತರದಿಂದ ದೇಶದಲ್ಲಿ ಭದ್ರವಾಗಿ ನೆಲೆಯೂರಿದ್ದ ಕಾಂಗ್ರೆಸ್ ಪಕ್ಷವನ್ನು ಮಣಿಸುವುದು ಸುಲಭದ ಮಾತಲ್ಲ. ಆದರೆ ಶಾಶ್ವತ ರೂಪಕೊಡುವಲ್ಲಿ ವಿಫಲವಾಗುತ್ತದೆ. ಇದಕ್ಕೆ ಕಾರಣ ಸಮಾಜವಾದಿ ಪಕ್ಷದ ನಿರ್ಲಕ್ಷ್ಯವೇ ಹೊರತು ದೀವರ ಜನಾಂಗದ ಸಂಘಟನೆಯಲ್ಲ. ಈ ಕಾಗೋಡು ಹೋರಾಟದ ಫಲವಾಗಿ ದೀವರಲ್ಲಿ ಮೂಡಿದ ಒಗ್ಗಟ್ಟು, ಜಾಗೃತಿ ಮೆಚ್ಚುವಂತಹದ್ದು. ಕೆಲವೊಂದು ಸಂದರ್ಭದಲ್ಲಿ ಆಘಾತಕಾರಿ ಬೆಳವಣಿಗೆ ಘಟಿಸಿದ್ದು ಇದೆ. ೧೯೬೭ರ ಚುನಾವಣೆಯಲ್ಲಿ ಕಾಗೋಡು ತಿಮ್ಮಪ್ಪನವರು ಸೋತು ಕೆ.ಎಚ್.ಶ್ರೀನಿವಾಸ ಗೆದ್ದು ಇಡಿ ಸಮುದಾಯ ತೀವ್ರವಾದ ಆಘಾತಕ್ಕೆ ಒಳಗಾಯಿತು. ಸೋಲಿನ ಪರಾಮರ್ಶೆ ನಡೆಸಿದ ದೀವ ಜನಾಂಗ, ತಮ್ಮ ಜೊತೆಗೆ ಇನ್ನೂ ಬೇರೆ ಬೇರೆ ಹಿಂದುಳಿದ ಜನಾಂಗಗಳ ಸೇರ್ಪಡೆಯಾದರೆ ಗೆಲುವು ಶತಸಿದ್ಧ ಎಂಬ ರಾಜಕೀಯ ತಂತ್ರವನ್ನು ಅರಿತು ಅದರಂತೆ ನಡೆದು ೧೯೭೨ರ ಚುನಾವಣೆಯಲ್ಲಿ ಕಾಗೋಡು ತಿಮ್ಮಪ್ಪನವರ ಜಯದಿಂದ, ಎಲ್ಲಾ ದೀವರು ಸಂಭ್ರಮಿಸಿದರು, ತಮ್ಮ ಜಯವೆಂದು ಭಾವಿಸಿದರು. ಸಾಗರ ತಾಲ್ಲೂಕಿನ ದೀವರ ಜನಾಂಗ ಕಾಗೋಡರನ್ನು ತಮ್ಮ ರಾಜಕೀಯ ಬೆಳವಣಿಗೆಯೆಂದು ಪರಿಗಣಿಸಿತ್ತು. ಕಾಗೋಡು ತಿಮ್ಮಪ್ಪ ಸಾಗರ ತಾಲ್ಲೂಕಿನ ದೀವರ ರಾಜಕೀಯ ಪ್ರಜ್ಞೆ ಬೆಳೆಯಲು ಕಾರಣರಾದರೆ, ಸೊರಬದಲ್ಲಿ ಬಂಗಾರಪ್ಪನವರು ದೀವರ ಬೆಳವಣಿಗೆಯಲ್ಲಿ ಮಹತ್ತರ ಪಾತ್ರ ವಹಿಸಿದರು. ಒಟ್ಟಾರೆ ದೀವರ ರಾಜಕೀಯ ಭವಿಷ್ಯ ಇವರಿಬ್ಬರ ನಾಯಕರ ಹೆಗಲ ಮೇಲಿತ್ತು. ಬಂಗಾರಪ್ಪನವರು ಸೋಲನ್ನು ನೋಡದ ನಾಯಕರಾದರೆ(ಲೋಕಸಭೆ ಚುನಾವಣೆಯಲ್ಲಿ ಸೋಲಿನ ಕಹಿ ಅನುಭವಿಸಿದ್ದಾರೆ), ಕಾಗೋಡು ತಿಮ್ಮಪ್ಪನವರು ಸೋಲಿನಲ್ಲಿ ತಮ್ಮ ರಾಜಕೀಯ ಜೀವನದ ಮಹತ್ವವನ್ನು ತಿಳಿದರು. ೧೯೭೮ರಲ್ಲಿ ಇವರ ಸೋಲು ಕಾಂಗ್ರೆಸ್ ಪಕ್ಷದ ಸೇರ್ಪಡೆಗೆ ಕಾರಣವಾಯಿತು. ಇವರಿಬ್ಬರ ರಾಜಕೀಯ ಏರುಪೇರುಗಳು ದೀವರ ಜನಾಂಗದ ರಾಜಕೀಯ ಬೆಳವಣಿಗೆಯಲ್ಲಿ ಪ್ರಮುಖವಾಗಿತ್ತು. ದೀವರ ರಾಜಕೀಯ ಶಕ್ತಿಯ ಕೇಂದ್ರಬಿಂದು ಈ ಇಬ್ಬರು ನಾಯಕರು ಆಗಿದ್ದರು. ರಾಜಕೀಯ ಪಕ್ವತೆ, ಮುತ್ಸದ್ದಿತನ ಇಬ್ಬರಲ್ಲೂ ಕಾಣುತ್ತೇವೆ.

ನಂತರದ ರಾಜಕೀಯ ಕ್ಷೇತ್ರದಲ್ಲಿ ದೀವರು ಪ್ರಬಲವಾಗುತ್ತಾ ಹಂತಹಂತವಾಗಿ ರಾಜಕೀಯ ಘಟ್ಟದಲ್ಲಿ ವಿವಿಧ ಅಧಿಕಾರದಲ್ಲಿ ದೀವರನ್ನು ಕಾಣುತ್ತೇವೆ. ಗ್ರಾಮ ಪಂಚಾಯ್ತಿ, ತಾಲ್ಲೂಕು ಪಂಚಾಯ್ತಿ, ಜಿಲ್ಲಾ ಪಂಚಾಯ್ತಿ, ಪುರಸಭೆ, ನಗರಸಭೆ ಹೀಗೆ ಎಲ್ಲಾ ರಾಜಕೀಯ ಕ್ಷೇತ್ರದಲ್ಲೂ ಇವರು ಕಾಣಬರುತ್ತಾರೆ. ಸಾಮಾಜಿಕ, ಆರ್ಥಿಕವಾಗಿ, ಶೈಕ್ಷಣಿಕ ನಿರ್ಲಕ್ಷ್ಯಕ್ಕೆ ಈ ಜನಾಂಗ ತುತ್ತಾಗಿತ್ತು. ಇಂದು ಗೌರವಾದರಗಳನ್ನು, ಪ್ರತಿಷ್ಠೆ ಸಮ್ಮಾನಗಳನ್ನು ಈ ಜನಾಂಗ ಪಡೆಯುತ್ತಿದೆ. ಹಲವರು ಉನ್ನತ ಹುದ್ದೆಗಳನ್ನು ಅಲಂಕರಿಸಿದ್ದಾರೆ. ರಾಜಕೀಯ

ವಲಯದಲ್ಲಿ ಪ್ರಬಲ ಶಕ್ತಿಯಾಗಿ ಹೊರಹೊಮ್ಮಿದೆ. ಬಂಗಾರಪ್ಪನವರು ರಾಜ್ಯದ ಮುಖ್ಯಮಂತ್ರಿಯಾಗಿ ದೀವರ ಜನಾಂಗವನ್ನು ಉನ್ನತಿಗೇರಿಸಿದ ಕೀರ್ತಿಯನ್ನು ಪಡೆದರೆ, ಕಾಗೋಡು ತಿಮ್ಮಪ್ಪನವರು ರಾಜಕೀಯ ಕ್ಷೇತ್ರದಲ್ಲಿ ಹಲವು ಸಚಿವ ಸ್ಥಾನಗಳನ್ನು ಅಲಂಕರಿಸಿ ಯುವಕರಿಗೆ ಮಾರ್ಗದರ್ಶಕರಾಗಿದ್ದಾರೆ. ಇತ್ತೀಚಿನ ಯುವನಾಯಕರಾದ, ಕುಮಾರ ಬಂಗಾರಪ್ಪ, ಡಾ.ಜೆ.ಡಿ.ನಾರಾಯಣಪ್ಪ ಮುಂತಾದವರು ಜನಾಂಗದ ಮುನ್ನಡೆಗೆ ಕಾರಣರಾಗಿದ್ದಾರೆ. ಇವರುಗಳಲ್ಲದೆ ಹಿರಿಯರಾದ ಧರ್ಮಪ್ಪ, ಕೆ.ಜಿ.ಶಿವಪ್ಪ, ಸ್ವಾಮಿರಾವ್ ಮುಂತಾದ ನಾಯಕರುಗಳನ್ನು ಈ ಜನಾಂಗ ಕಂಡಿದೆ. ಸಾಮಾಜಿಕ ಹಿನ್ನಡೆ ಈಗ ಸಂಪೂರ್ಣವಾಗಿ ಮಾಯ ವಾಗಿದೆ ಎನ್ನಬಹುದು. ಹಿಂದುಳಿದ ಜನಾಂಗ ರಾಜಕೀಯ ಶಕ್ತಿಯಾಗಿ ಹೊರಹೊಮ್ಮಿದ್ದು ಪ್ರಜಾಪ್ರಭುತ್ವದ ಕೊಡುಗೆ, ಕಾಗೋಡು ಹೋರಾಟದ ಪ್ರತಿಫಲಗಳು ಎನ್ನಬಹುದು. ಕೆಲವೇ ಕೆಲವು ದಶಕಗಳ ಹಿಂದೆ ದೌರ್ಜನ್ಯಕ್ಕೆ ತುತ್ತಾದ ಜನಾಂಗ ಇಂದು ಗೌರವಕ್ಕೆ ಪಾತ್ರವಾಗಿದೆ ಎಂದರೆ ಸ್ವಾತಂತ್ರ್ಯ ಭಾರತದ ಮಹತ್ವದ ರಾಜಕೀಯ ಸಾಮಾಜಿಕ ಬದಲಾವಣೆ ಎನ್ನಬಹುದು.

### ಶೈಕ್ಷಣಿಕ ಬದಲಾವಣೆ

ಸ್ವಾತಂತ್ರ್ಯ ಪೂರ್ವದಲ್ಲಿ ವಿದ್ಯಾವಂತರು ದೀವರ ಜನಾಂಗದಲ್ಲಿ ಬಹಳ ಅಪರೂಪವಾಗಿತ್ತು. ಊರಿನ ಒಂದಿಬ್ಬರು ವಿದ್ಯಾವಂತರಾಗಿದ್ದರು. ಕಾಗೋಡು ರೈತ ಹೋರಾಟದಲ್ಲಿ ಗಣಪತಿಯಪ್ಪನವರಿಗೆ ಜನ ಮನ್ನಣೆ ದೊರಕಿದ್ದು ವಿದ್ಯಾವಂತನೆಂದು. ಇವರ ಬಗ್ಗೆ ದೀವರಲ್ಲಿ ಒಂದು ರೀತಿಯ ಹೆಮ್ಮೆ ಇರುವುದೇ ಓದಿದವನೆಂದು. ಗೇಣಿರೈತರಾದ ದೀವರಲ್ಲಿ ಪ್ರಾಥಮಿಕ ಬದುಕಿನ ಸೌಲಭ್ಯಗಳ ಕೊರತೆಯೇ ಜಾಸ್ತಿ. ಇಂತಹದರಲ್ಲಿ ಓದು ಎಂಬುದು ಕೈಗೆಟುಕದ ವಸ್ತುವಾಗಿತ್ತು. ಇಡೀ ಜನಾಂಗದಲ್ಲಿ ಬೆರಳೆಣಿಕೆಯ ವಿದ್ಯಾವಂತರನ್ನು ಗುರುತಿಸ ಬಹುದಿತ್ತು. ಸರ್ಕಾರಿ ಹುದ್ದೆಯಲ್ಲಿರುವವರು ಯಾರು ಇರಲಿಲ್ಲ ಎನ್ನಬಹುದು. ದೀವರಲ್ಲಿ ಅನಕ್ಷರತೆ, ಬಡತನ, ಸ್ವಾತಂತ್ರ್ಯ ಪೂರ್ವದಲ್ಲಿ ಮನೆಮಾಡಿತ್ತು. ಒಂದು ಸಮುದಾಯ ಚಲನಶೀಲವಾದಾಗ ಏನೆಲ್ಲಾ ಘಟಿಸುತ್ತದೆ ಎಂಬುದನ್ನು ಎಲ್ಲಾ ರಂಗದಲ್ಲಿಯು ಕಾಣಬಹುದು. ರಾಜಕೀಯ ಕ್ಷೇತ್ರದಲ್ಲಿ ಒಂದು ಮೈಲಿ ಗಲ್ಲು ಸೃಷ್ಟಿಸಿದ ದೀವ ಜನಾಂಗ ಶೈಕ್ಷಣಿಕ ರಂಗದಲ್ಲಿಯು ಪ್ರಗತಿಯಲ್ಲಿದೆ. ದೀವ ವಿದ್ಯಾವಂತ ಯುವಕರ ಸಂಖ್ಯೆ ದಿನೇ ದಿನೆ ವೃದ್ದಿಸುತ್ತಿದೆ. ಸಾಕಷ್ಟು ಸಂಖ್ಯೆಯಲ್ಲಿ ವಿದ್ಯಾಭ್ಯಾಸ ಪಡೆದು ಸರ್ಕಾರಿ ಅಧಿಕಾರಿ ಗಳಾಗಿ ಸೇವೆ ಸಲ್ಲಿಸುವ ಅನೇಕ ಜನರಿದ್ದಾರೆ. ಪುರುಷರ ಬೆಳವಣಿಗೆಯನ್ನು ಸ್ತ್ರೀಯರಿಗೆ ಹೋಲಿಸಿದ್ದಲ್ಲಿ ಹಿನ್ನಡೆ ಇದೆ. ಹುಡುಗಿಯರ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಪ್ರಾಶಸ್ತ್ಯ ಸಿಗುತ್ತಿಲ್ಲ ಎನ್ನಬಹುದು. ಮಾತೃ ಪ್ರಧಾನ ದೀವರಲ್ಲಿ ಹೆಣ್ಣಿಗೆ ಪ್ರಮುಖ ಸ್ಥಾನಮಾನವಿದೆ. ಹೆಣ್ಣು ಕುಟುಂಬದ ಆಧಾರ ಸ್ತಂಭವಾಗಿದ್ದಾಳೆ. ಈಕೆಗೆ ಉಳಿದ ಜನಾಂಗಗಳಿಗೆ ಹೋಲಿಸಿದ್ದಲ್ಲಿ ಸಾಕಷ್ಟು ಪ್ರಮಾಣದ ಸ್ವಾತಂತ್ರ್ಯವಿದೆ. ಇಷ್ಟಾಗಿಯು ಶಿಕ್ಷಣ ಕ್ಷೇತ್ರದಲ್ಲಿ ಮಹಿಳೆಯರು ಕಡಿಮೆಯಾಗಲು ಕಾರಣ, ಬದಲಾವಣೆಯ ಘಟ್ಟದಲ್ಲಿರುವ ದೀವರು ಸಾಮಾಜಿಕವಾಗಿ ಮೇಲ್‌ಸ್ತರದಲ್ಲಿರುವ ಜನಾಂಗದವರನ್ನು ಅನುಕರಣೆ ಮಾಡುವುದು ಸಹಜವೇ ಆಗಿತ್ತು. ಅಥವಾ ಹೆಚ್ಚಿನ ದೀವ ಹೆಣ್ಣು ಮಕ್ಕಳೆಲ್ಲಾ ೧೮ರ ವಯಸ್ಸಿಗೆ ಮದುವೆ ಮಾಡುವುದರಿಂದ ವಿದ್ಯೆ ಏಕೆ ಎನ್ನುವ ಪ್ರಶ್ನೆಯು ಇರಬಹುದು. ಇತ್ತೀಚಿನ ದಿನಗಳಲ್ಲಿ ಸ್ವಲ್ಪ ಮಟ್ಟಿನ ಬದಲಾವಣೆಯಾಗಿದೆ. ಅನೇಕ ವಿದ್ಯಾವಂತ ದೀವ

ಮಹಿಳೆ ಉದ್ಯೋಗಿಯಾಗಿರುವುದನ್ನು ಕಾಣಬಹುದು. ದೀವರು ಶೈಕ್ಷಣಿಕ ರಂಗದಲ್ಲಿ ಹಿಂದುಳಿದ ಜನಾಂಗದಲ್ಲಿಯೇ ಮುಂಚೂಣಿಯಲ್ಲಿದ್ದಾರೆ. ಸರ್ಕಾರಿ ಕ್ಷೇತ್ರ, ಖಾಸಗಿ ಕ್ಷೇತ್ರ ಎರಡರಲ್ಲೂ ಇವರು ಭದ್ರವಾಗಿ ಆರ್ಥಿಕವಾಗಿ ಪ್ರಗತಿ ಸಾಧಿಸಿದ್ದಾರೆ. ಆಧುನಿಕತೆಯ ಸುಳಿಗೆ ಸಿಗದಂತೆ ಎಚ್ಚರವಾಗಿ ಮುನ್ನಡೆಯಲು ಮುಖಂಡರ ಮಾರ್ಗದರ್ಶನದ ಅವಶ್ಯಕತೆ ಇದೆ.

## ಆರ್ಥಿಕ ಬದಲಾವಣೆ

ಕಾಗೋಡು ಸತ್ಯಾಗ್ರಹದ ವೇಳೆ ದೀವರ ಆರ್ಥಿಕ ಸ್ಥಿತಿ ಬಹಳ ಕೆಳಮಟ್ಟದಲ್ಲಿತ್ತು. ತಮ್ಮ ದುಡಿಮೆಯಲ್ಲಿ ಅರ್ಧಭಾಗವನ್ನು ಗೇಣಿಯ ರೂಪದಲ್ಲಿ ಕೊಡುವುದರಿಂದ ಉಳಿದ ಭತ್ತ ಗಂಜಿಗೆ ಮಾತ್ರ ಸಾಕಾಗುತ್ತಿತ್ತು. ಕೆಲವರ ಸ್ಥಿತಿ ಇನ್ನೂ ಶೋಚನೀಯವಾಗಿತ್ತು. ಮಲೆನಾಡಿನ ಭಾಗದಲ್ಲಿ ಅತಿಯಾದ ಮಳೆಯಿಂದಾಗಿ ಫಲವತ್ತತೆ ಬಹಳ ಕಡಿಮೆ. ಇದರಿಂದಾಗಿ ಭೂಮಿಯ ಇಳುವರಿ ಕಡಿಮೆ. ಸಾಗರ, ಸೊರಬ, ಹೊಸನಗರದಲ್ಲಿ ದೀವರ ಗದ್ದೆಯ ಮಗ್ಗುಲಲ್ಲಿ ಹೊಳೆಯ ಇರುವುದರಿಂದ, ಮಳೆಗಾಲದಲ್ಲಿ ನೆರೆಹಾವಳಿ, ಬೇಸಿಗೆಯಲ್ಲಿ ನದಿ ಪಾತ್ರದಲ್ಲಿ ನೀರಿಲ್ಲ ಇಂತಹ ಸ್ಥಿತಿ ಇತ್ತು. ದೀವರು ಆರಕ್ಕೂ ಏರದ ಮೂರಕ್ಕೂ ಇಳಿಯದ ಅತಂತ್ರ ಆರ್ಥಿಕ ದುಃಸ್ಥಿತಿಯನ್ನು ಹೊಂದಿದ್ದರು. ಭೂಸುಧಾರಣಾ ಕಾನೂನಿನಿಂದ ಭೂಮಿ ಸ್ವಂತದಾಗುವುದರೊಂದಿಗೆ ಆರ್ಥಿಕ ಸುಧಾರಣೆ ಕಂಡರು. ರಾಜಕೀಯ ಕ್ಷೇತ್ರದಲ್ಲಿ ಇವರೆ ಹೆಚ್ಚಾಗಿರುವುದರಿಂದ ರೈತರ ಕಷ್ಟದ ಅರಿವಿತ್ತು. ಹೊಳೆಗೆ ಲಿಫ್ಟ್ ಇರಿಗೇಶನ್‌ಗಳಾದವು. ವಿದ್ಯುತ್ ಸೌಲಭ್ಯ ಹಳ್ಳಿಹಳ್ಳಿಗೂ ದೊರೆಯಿತು. ಭೂಮಿ ಸ್ವಂತದಾದ್ದರಿಂದ ಬ್ಯಾಂಕಿನ ಸಾಲ ಸೌಲಭ್ಯ ದೊರೆಯಿತು. ಹೀಗೆ ಕೃಷಿಯಲ್ಲಿ ಆಧುನಿಕ ಬೇಸಾಯ ಪದ್ಧತಿ ಅಳವಡಿಸಿ ಕೊಂಡು ಆರ್ಥಿಕ ಮುನ್ನಡೆ ಸಾಧಿಸಲು ಸಾಧ್ಯವಾಯಿತು. ಹೆಚ್ಚಿನ ದೀವರು ಭತ್ತವನ್ನು ಪ್ರಮುಖವಾಗಿ ಬೆಳೆಯುತ್ತಿದ್ದರು. ಆಧುನಿಕ ಸೌಲಭ್ಯಗಳು ದೊರೆತದ್ದರಿಂದ ವಾಣಿಜ್ಯ ಬೆಳೆಗಳನ್ನು ಬೆಳೆಯಲು, ಬೇಸಿಗೆಯ ಕಾಲದಲ್ಲಿ, ತರಕಾರಿ, ನಿತ್ಯ ಉಪಯೋಗಿಸುವ ಆಹಾರ ಪಧಾರ್ಥಗಳನ್ನು ಬೆಳೆಯುವುದರಿಂದ ಆರ್ಥಿಕ ಚೇತರಿಕೆ ಕಂಡರು. ವಿದ್ಯಾವಂತರಾದ ಯುವಕರು ಉದ್ಯೋಗಿಗಳಾದರು. ಇದಲ್ಲದೆ ಬೇರೆ ಬೇರೆ ಉಪಕಸುಬುಗಳನ್ನು ಕಲಿತರು. ಮಲೆನಾಡಿನ ಭಾಗದಲ್ಲಿ ಮರಗೆಲಸ ಮಾಡುವವರು. ಬಡಗಿ, ಘಟ್ಟದ ಕೆಳಗಿನಿಂದ ಬಂದ ಆಚಾರಿಗಳು ಆಗಿದ್ದರು. ಆದರೆ ಇಂದು ಒಳ್ಳೆಯ ಮರಗೆಲಸ ಮಾಡುವ ದೀವ ಯುವಕರನ್ನು ಕಾಣಬಹುದು. ಮೇಸ್ತ್ರಿಗಳು ಅಂದರೆ ಗಾರೆ ಕೆಲಸಗಾರರು, ಗಂಧ ಕೆತ್ತನೆಗಾರರು ಹೀಗೆ ಅನೇಕ ಉಪಕಸುಬುಗಳನ್ನು ಕಲಿತಿದ್ದಾರೆ. ಇವು ವಂಶಪಾರಂಪರ್ಯವಾದ ಕೆಲಸಗಳಲ್ಲ. ಮಲೆನಾಡಿನ ಭಾಗದಲ್ಲಿ ಕುಶಲಕರ್ಮಿಗಳು ಬಹಳ ಅಪರೂಪವಾಗಿದ್ದ ಕಾಲವೊಂದು ಇತ್ತು, ಈಗ ಬದಲಾವಣೆ ಕಂಡಿದೆ. ಲೋಕೋಪಯೋಗಿ ಇಲಾಖೆ, ಅರಣ್ಯ ಇಲಾಖೆಗಳ ಗುತ್ತಿಗೆದಾರರು ಹೆಚ್ಚಿನವರೆಲ್ಲಾ (ಮೂರು ತಾಲ್ಲೂಕಿನಲ್ಲಿ) ದೀವರೆ ಆಗಿರುವುದು ರಾಜಕೀಯ ವಿಶೇಷವಾಗಿದೆ. ಇಷ್ಟೆಲ್ಲಾ ರಂಗಗಳಲ್ಲಿ ಸಾಧನೆ ಮೆರೆದಿರುವ ದೀವರ ಜನಾಂಗ, ಎಲ್ಲಾ ಜನಾಂಗದಲ್ಲಿದ್ದಂತೆ ಒಳಮಾರ್ಗಗಳ ಮುಖಾಂತರ ಹಣ ಹೊಂದುವ ಪ್ರಲೋಭನೆಗೆ ಒಳಗಾಗಿರುವುದು ಸ್ವಾಭಾವಿಕವಾಗಿರಬಹುದು. ಇದನ್ನು ತಡೆಯುವಲ್ಲಿ ಹಿರಿಯರ ಮಾರ್ಗದರ್ಶನದ ಅಗತ್ಯವಿದೆ. ಈ ರೀತಿಯ ಆಕಾಂಕ್ಷೆಗಳು ಎಲ್ಲಾ ವರ್ಗದಲ್ಲಿಯು ಇದೆ. ಇವುಗಳಲ್ಲದೆ ಇತ್ತೀಚಿನ ದಿನಗಳಲ್ಲಿ ದೀವರಲ್ಲಿ ಬಗರ್‌ಹುಕುಂ ಸಾಗುವಳಿಯಿಂದಾಗಿ ಇವರಲ್ಲಿಯೇ

ಒಡಕು ಉಂಟಾಗುವ ಪ್ರಸಂಗಗಳು ಸಾಗರ, ಸೊರಬ ಮುಂತಾದ ಕಡೆಯಲ್ಲಿ ನಡೆಯುತ್ತಿರುವ ತೀವ್ರವಾದ ಬಿಕ್ಕಟ್ಟಿಗೆ, ಘರ್ಷಣೆಗೆ ಕಾರಣವಾಗುತ್ತದೆ. ಇಂತಹ ಬೆಳವಣಿಗೆ ಆರ್ಥಿಕ ಅಭಿವೃದ್ಧಿ ಸಾಧಿಸುವ ದೀವ ಜನಾಂಗದ ಏಳಿಗೆಗೆ ಮಾರಕ. ಇದನ್ನು ಶಾಂತಿಯುತವಾಗಿ ಪರಿಹರಿಸಿ ಕೊಳ್ಳಬೇಕು.

ಕೃಷಿ ಕ್ಷೇತ್ರದಲ್ಲಿ ದೀವರು ಆಧುನಿಕ ತಂತ್ರಜ್ಞಾನವನ್ನು ಬಳಸಿಕೊಳ್ಳುತ್ತಿದ್ದಾರೆ. ಮೊದಲು ನೇಗಿಲು ಎತ್ತುಗಳನ್ನು ಹೊಂದಿಸುವುದು ಇವರಿಗೆ ದುಸ್ತರವಾಗಿತ್ತು. ಇಂದು ಉತ್ತಮ ತಳಿಯ ರಾಸುಗಳು, ಟ್ರಾಕ್ಟರ್, ಟಿಲ್ಲರ್ ಮುಂತಾದ ಯಂತ್ರಗಳ ಬಳಕೆ ಕೃಷಿ ಕ್ಷೇತ್ರದಲ್ಲಿ ಗಣನೀಯ ಪ್ರಮಾಣದಲ್ಲಿ ಬಳಕೆಯಾಗುತ್ತಿದೆ.

ಹುಲ್ಲಿನ ಗುಡಿಸಲುಗಳೇ ಕಾಣಬರುತ್ತಿದ್ದ ಊರುಗಳಲ್ಲಿ ನಿಧಾನವಾಗಿ ಹೆಂಚಿನ, ತಾರಸಿಯ ಮನೆಗಳು ಕಂಗೊಳಿಸುತ್ತಿದೆ. ಗುಂಪಾಗಿ, ಮನೆಗಳನ್ನು ಕಟ್ಟುತ್ತಿದ್ದ ಇವರು ಇಂದು ಬಿಡಿ ಬಿಡಿಯಾಗಿ ಕೇರಿಗಳನ್ನು ವಿಭಾಗಮಾಡಿ ನಗರದ ಕಾಲೋನಿಯಂತೆ ಮನೆಗಳನ್ನು ಕಟ್ಟುತ್ತಿದ್ದಾರೆ. ಇವುಗಳೆಲ್ಲಾ ಸಾಧ್ಯವಾಗಿದ್ದು ಆರ್ಥಿಕ ವಾಗಿ ಸದೃಢರಾಗಿದ್ದರಿಂದ. ಮೇಲ್ಮುಖದ ಪರಿವರ್ತನೆಯನ್ನು ಹೊಂದುತ್ತಿರುವ ಜನಾಂಗ ಆರ್ಥಿಕ ಅಭಿವೃದ್ಧಿಯನ್ನು ಬಯಸುತ್ತದೆ. ರಾಜಕೀಯ ಬದಲಾವಣೆ ಕ್ಷಿಪ್ರವಾಗಿ ಬದಲಾಗುವಂತಹದು. ಆದರೆ ಆರ್ಥಿಕ ಮತ್ತು ಸಾಮಾಜಿಕ ಪರಿವರ್ತನೆ ನಿಧಾನಗತಿಯಲ್ಲಿ ಸಾಗುವಂತಹದು. ದೀವರು ಆರ್ಥಿಕವಾಗಿ ಗಟ್ಟಿಗೊಳ್ಳು ತ್ತಿರುವ ಇಂತಹ ಸಂದರ್ಭದಲ್ಲಿ ರೈತರ ಬೆಳೆಗಳಿಗೆ ಸರಿಯಾದ ಬೆಲೆ ಇಲ್ಲದಿರುವುದು, ಬೆಳೆದ ಬೆಳೆಯ ಆದಾಯದಲ್ಲಿ ಹೆಚ್ಚು ಭಾಗ ಮಧ್ಯವರ್ತಿಗಳ ಪಾಲಾಗುತ್ತಿರುವುದು, ಜಾಗತೀಕರಣದ ಭೂತವನ್ನು ಮುಂದಿಟ್ಟು ಮಧ್ಯವರ್ತಿಗಳು ರೈತರನ್ನು ಶೋಷಿಸುವ ಪರಿಪಾಠದಿಂದಾಗಿ ರೈತರು ಮತ್ತೊಂದು ಹೋರಾಟಕ್ಕೆ ತೊಡಗ ಬೇಕೇನೋ ಎಂಬ ಪ್ರಶ್ನೆ ಕಾಡುತ್ತಿದೆ. ಈ ಆರ್ಥಿಕ ಹೊಡೆತ ಎಲ್ಲಾ ರೈತವರ್ಗಕ್ಕೂ ಆಗುತ್ತಿದೆ. ಆದರೆ ಆರ್ಥಿಕವಾಗಿ ನಿಧಾನವಾಗಿ ಬದಲಾಗುತ್ತಿರುವ ಇಂತಹ ಜನಾಂಗಗಳಿಗೆ ಮತ್ತೊಂದು ಹೋರಾಟ ಅನಿವಾರ್ಯ ವಾಗಿದೆ. ಇಂತಹ ಪ್ರಕ್ರಿಯೆಗಳು ಘಟಿಸುತ್ತಿರುವಾಗಲೇ ದೀವರು ವೃತ್ತಿಯಲ್ಲಿ ಪಲ್ಲಟಗೊಳ್ಳುತ್ತಿದ್ದಾರೆ. ಮೂಲತಃ ಸೈನಿಕರಾಗಿ, ಗೇಣಿರೈತರಾಗಿ, ಕೂಲಿಯವರಾಗಿ ನಂತರ ಭೂಮಿಗೆ ಒಡೆಯರಾಗಿ ಕಾಣಬರುತ್ತಿದ್ದ ದೀವರು ಇಂದು ಮನೆಕಟ್ಟುವ ಮೇಸ್ತ್ರಿಯಾಗಿ, ಮರಗೆಲಸದ ಆಚಾರಿಯಾಗಿ, ದರ್ಜಿಯಾಗಿ, ವ್ಯಾಪಾರಿ, ಗುತ್ತಿಗೆ ದಾರರಾಗಿ, ಸರ್ಕಾರಿ ಅಧಿಕಾರಿಗಳಾಗಿ, ರಾಜಕಾರಣಿಯಾಗಿ, ಹೀಗೆ ಹತ್ತು ಹಲವು ಕ್ಷೇತ್ರದಲ್ಲಿ ಕಂಡುಬರುತ್ತಿರು ವುದು, ಈ ಜನಾಂಗದ ವೃತ್ತಿ ನೈಪುಣ್ಯಕ್ಕೆ ಹಿಡಿದ ಕನ್ನಡಿಯಾಗಿದೆ. ಹೀಗೆ ದೀವರಲ್ಲಿ ಆರ್ಥಿಕ ಪರಿವರ್ತನೆಯ ಲಕ್ಷಣಗಳನ್ನು ಗುರುತಿಸಬಹುದು.

### ಸಾಂಸ್ಕೃತಿಕ ಬದಲಾವಣೆ

ಅತ್ಯಂತ ಹಿಂದುಳಿದ ವರ್ಗಗಳಲ್ಲಿ ಕಡುಬಡತನದಲ್ಲಿರುವ ಜನಾಂಗಗಳಲ್ಲಿ ಸಾಂಸ್ಕೃತಿಕ ಬದುಕು ವೈಶಿಷ್ಟ್ಯ ಪೂರ್ಣವಾಗಿರುತ್ತದೆ. ಈ ಮಾತು ದೀವರ ಜನಾಂಗಕ್ಕೂ ಅನ್ವಯಿಸುತ್ತದೆ. ಇವರು ಆಚರಿಸುವ ಹಬ್ಬಗಳು ಇಲ್ಲಿ ಕಾಣಬರುವ ಪ್ರತಿಯೊಂದು ಆಚರಣೆಯ ವಿಧಿವಿಧಾನಗಳಲ್ಲಿ ಸಾಂಸ್ಕೃತಿಕ ಶ್ರೀಮಂತಿಕೆ ಕಂಡುಬರುತ್ತದೆ. ಆರಿದ್ರಾ ಮಳೆಯ ಹಬ್ಬಗಳ ಜೊತೆಯಲ್ಲಿಯೇ ಜಾನಪದ ಕಲೆಗಳು ಅರಳಿರುವುದು ಈ ಜನಾಂಗದ ವಿಶೇಷ.

ಆರಾಧನೆಯಲ್ಲಿ ರೂಪುಗೊಂಡ ಗಂಡು ಮೆಟ್ಟಿನ ಕಲೆ ಡೊಳ್ಳುಕುಣಿತ, ಇಂದು ದೇಶಾದ್ಯಂತ ಪ್ರಚಾರಗೊಂಡಿದೆ. ಅನೇಕ ಡೊಳ್ಳು ಕುಣಿತದ ಸಂಘಗಳು ಇವೆ. ಡೊಳ್ಳು ಕುಣಿತದ ಕಲಾವಿದರು ದೇಶ ವಿದೇಶಗಳಿಗು ಹೋಗಿ ಬಂದಿದ್ದಾರೆ. ಡೊಳ್ಳು ಕುಣಿತ ಕರ್ನಾಟಕದ ಕೆಲಭಾಗದಲ್ಲಿ ಕಂಡುಬಂದರೂ, ಮಲೆನಾಡಿನ ಲಯ, ಕುಣಿತದ ಗತ್ತುಗಾರಿಕೆ, ಡೊಳ್ಳಿನ ಗಾತ್ರ ಬೇರೆಲ್ಲೂ ಗೋಚರಿಸುವುದಿಲ್ಲ. ವೀರಾವೇಶದ ಕುಣಿತ ಈ ಕಲಾವಿದರಲ್ಲಿ ಇದೆ. ಸಂಪ್ರದಾಯದ ಜೊತೆಗೆ ಕಲೆಯ ಸೃಷ್ಟಿ ಇದು ಹೆಚ್ಚಿನ ದೀವ ಯುವಕರಿಗೆ ಪರ್ಯಾಯ ಆರ್ಥಿಕ ಮಾರ್ಗವಾಗಿದೆ. ಮನರಂಜನಾ ದೃಷ್ಟಿಯಿಂದ, ಈ ಕಲೆಯನ್ನು ನೋಡಲಾಗುತ್ತಿದೆ. ಗಣೇಶನ ಉತ್ಸವದಲ್ಲಿ, ರಾಜಕೀಯ ಸಮಾರಂಭಗಳಲ್ಲಿ, ದೇಶದ ಹಬ್ಬಗಳಲ್ಲಿ ಡೊಳ್ಳಿನ ಶಬ್ದದ ಅವಶ್ಯಕತೆ ಇದೆ. ಇದೊಂದು ಅಚ್ಚರಿಯ ಬೆಳವಣಿಗೆಯಾಗಿದೆ. ಡೊಳ್ಳಿನ ಕುಣಿತದಲ್ಲಿ ಹಳೆಯ ಗತ್ತುಗಾರಿಕೆಯೊಂದಿಗೆ ಹತ್ತು ಹಲವು ಕಸರತ್ತುಗಳು, ವೇಷಭೂಷಣಗಳಲ್ಲಿ ಹೊಸ ಹೊಸ ಮಾರ್ಪಾಟು ಪಡೆಯುತ್ತಿದೆ.

ಭೂಮಿ ಹುಣ್ಣಿಮೆಯಲ್ಲಿ ಬುಟ್ಟಿಗೆ ಬಿಡಿಸುವ ಚಿತ್ತಾರ, ಮದುವೆಯ ಸಂದರ್ಭದಲ್ಲಿ ಮಧ್ಯಮನೆಯ ಗೋಡೆಗೆ ಬಿಡಿಸುವ ಹಸೆ ಚಿತ್ತಾರ ಅದ್ಭುತವಾದದ್ದು. ವಿಶಿಷ್ಟ ರೀತಿಯ ರೇಖಾಚಿತ್ರ ಮಧ್ಯೆ ಗೊಂಬೆಸಾಲು, ಅಂಕುಡೊಂಕಿನ ಗೆರೆ, ರೈತ, ಗೊಣಬೆ, ಗದ್ದೆಯ ಚಿತ್ತಾರ. ಈ ಕಲೆ ವಿಶಿಷ್ಟವಾಗಿದೆ. ಇದೊಂದು ಶ್ರೀಮಂತ ಕಲೆಯಾಗಿದೆ. ಇದು ದೀವರ ಹೆಂಗಸರ ಕಲಾತ್ಮಕತೆಗೆ ಸಾಕ್ಷಿಯಾಗಿದೆ. ಮಲೆನಾಡಿನ ಪ್ರಾದೇಶಿಕ ಕಲೆಯಾಗಿದೆ. ಇಂದು ಈ ಕಲೆ ಪುಸ್ತಕದ ಅಂಚುಗಳಲ್ಲಿ ಕಾಣಬರುತ್ತಿದೆ. ಈ ಕಲೆಯ ಬೆಳವಣಿಗೆಗೆ ಹೆಸರಾಂತ ರಂಗಕರ್ಮಿ ಪ್ರಸನ್ನ ಅವರು ಕವಿಕಾವ್ಯದಲ್ಲಿ ಮಾಡಿದ ಪ್ರಯತ್ನ. ಹೆಚ್.ಹುಚ್ಚಪ್ಪ ಮಾಸ್ತರರವರು ಈ ಕಲೆಯ ತರಬೇತಿ ನೀಡುವ ಶಾಲೆಯೊಂದನ್ನು ಕೆಲಕಾಲ ನಡೆಸಿದರು. ನೀನಾಸಂ ತನ್ನದೇ ದಾಟಿಯಲ್ಲಿ ಸಾಂಸ್ಕೃತಿಕ ಜಗತ್ತಿಗೆ ಈ ಕಲೆಯನ್ನು ಪರಿಚಯಿಸಿತು. ರಾಜ್ಯ ಮತ್ತು ಹೊರರಾಜ್ಯಗಳಲ್ಲಿ ಈ ಕಲೆಯನ್ನು ಪ್ರಚಾರ ಪಡಿಸುತ್ತಿರುವವರು ಚಿತ್ತಾರ ಚಾವಡಿಯ ಈಶ್ವರ ನಾಯಕ್, ಚಿತ್ರಸಿರಿ ಚಂದ್ರಶೇಖರ ಎಸ್. ಶಿರವಂತೆ ಮುಂತಾದವರು.

ದೀವರ ಹೆಂಗಸರು ಮದುವೆ ಸಂದರ್ಭದಲ್ಲಿ ಹಾಡುವ ಸೋಬಾನೆ ಪದಗಳು, ತೊಟ್ಟಿಲು ತೂಗುವಾಗ ಹಾಡುವ ಜೋಗುಳಗಳು, ಅನೇಕ ಕಥನ ಗೀತೆಗಳು, ಇವುಗಳಿಗಿರುವ ಲಯ, ಸಂಗೀತದ ಗುಣ ಶ್ರೀಮಂತಿಕೆ ಯಿಂದ ಕೂಡಿದೆ. ಆದರೆ ಈ ಪದಗಳು ಇಂದು ಕ್ಯಾಸೆಟ್ ಲೋಕ ಮತ್ತು ನಾಗರಿಕತೆಯ ಕರಾಳ ರೂಪದಿಂದಾಗಿ ನಶಿಸುತ್ತಿದೆ. ಬಹಳ ಹಿಂದೆ ಸೋಬಾನೆ ಪದಗಳನ್ನು ಹೆಚ್ಚಿನ ಎಲ್ಲಾ ದೀವ ಹೆಂಗಸರು ಹಾಡುತ್ತಿದ್ದರು. ಗದ್ದೆಯ ಕಳೆ ತೆಗೆಯುವಾಗ, ನಾಟಿ ನೆಡುವಾಗ, ಭತ್ತ ಕುಟ್ಟುವಾಗ ಹೀಗೆ ಕೆಲಸ ಕಾರ್ಯದಲ್ಲಿ ಸಂಗೀತವನ್ನು ದುಡಿಸಿಕೊಳ್ಳುತ್ತಾ, ದಣಿವನ್ನು ಮರೆಸುತ್ತಿದ್ದರು. ಆದರೆ ಇಂದು ಈ ಪದಗಳಾವುವು ಇಂದಿನ ಯುವತಿಯರಲ್ಲಿ ಕಂಡುಬರುವುದಿಲ್ಲ. ಮದುವೆ ಸಮಾರಂಭಗಳಲ್ಲಿ ಹಳ್ಳಿಯ ಸಂಗೀತವನ್ನು ಮೈಕಾಸುರ ಆಕ್ರಮಿಸಿದ್ದಾನೆ. ಜನಾಂಗದ ಜನಪದ ಗೀತೆಗಳು ಮಾಯವಾದರು ಅಚ್ಚರಿಪಡಬೇಕಾಗಿಲ್ಲ. ದೀವರ ವೇಷಭೂಷಣಗಳಲ್ಲಿ ಆಧುನಿಕತೆ ಪ್ರವೇಶಿಸಿದೆ. ಎಲ್ಲಾ ಜನಾಂಗದವರಂತೆ ಇವರೂ ಬದಲಾಗಿದ್ದಾರೆ.

೧೯೮೮ರಲ್ಲಿ ಕಾಗೋಡು ಅಣ್ಣಪ್ಪನವರ ನೇತೃತ್ವದಲ್ಲಿ ಕಾಗೋಡು ರಂಗಮಂಚ ಸ್ಥಾಪನೆಗೊಂಡು ನಾಟಕ ರಂಗಭೂಮಿ ಕ್ಷೇತ್ರದಲ್ಲಿ ಸಕ್ರೀಯವಾಗಿದೆ. ಕಾಗೋಡು ರಂಗಮಂಚದ ಅತ್ಯಂತ ಯಶಸ್ವಿ ನಾಟಕ 'ಚಿತ್ರಲೆ

ಸೇವೆ' ರಾಜ್ಯದಲ್ಲಿ ಅಲ್ಲದೆ ರಾಷ್ಟ್ರಮಟ್ಟದಲ್ಲಿ ಹೆಸರು ಮಾಡಿತು. ಈ ರಂಗಮಂಚದ ಕಲಾವಿದರಲ್ಲಿ ಶ್ರೇಷ್ಠ ನಾಟಕ ರಚನೆಕಾರ, ಹಾಡುಗಾರರಾದ ಡಾ.ಕಂಬಾರರನ್ನು ಒಳಗೊಂಡಿತು. ರಂಗಮಂಚವು ೧೬-೧೦-೨೦೦೨ರಲ್ಲಿ ಕಬೀರ ಸನ್ಮಾನ ಪ್ರಶಸ್ತಿ ವಿಜೇತ ಡಾ.ಕಂಬಾರರನ್ನು, ದ್ವೀಪ ಕೃತಿಗೆ ಸ್ವರ್ಣಕಮಲ ಪ್ರಶಸ್ತಿ ಪಡೆದ ನಾ.ಡಿಸೋಜರನ್ನು ಅಭಿನಂದಿಸಲಾಯಿತು. ಸಾಗರದಲ್ಲಿ ಭವ್ಯವಾದ ಶ್ರೀ ಕಾಗೋಡು ತಿಮ್ಮಪ್ಪ ರಂಗಮಂದಿರ ೧೯.೦೨.೨೦೦೪ರಲ್ಲಿ ಉದ್ಘಾಟನೆಗೊಂಡು ಕಲಾಭಿಮಾನಿಗಳ ಮನ್ನಣೆಗೆ ಪಾತ್ರವಾಗಿದೆ. ಕಾಗೋಡು ರಂಗ ಮಂಚ ಕ್ರಿಯಾಶೀಲಾ ಚಟುವಟಿಕೆಯಲ್ಲಿ ಪ್ರಮುಖವಾಗಿದೆ. ಜಾನಪದ ತಜ್ಞರೆಂದೆ ಪ್ರಖ್ಯಾತರಾದ ಎನ್.ಹುಚ್ಚಪ್ಪ ಮಾಸ್ತರರವರ 'ಜಾನಪದ ರಂಗ ಸಂಕುಲ' ದಿಲ್ಲಿಯಲ್ಲಿಯು ಪ್ರದರ್ಶನಗಳನ್ನು ನೀಡಿದೆ. ಹೊಸಮನೆ ಯಲ್ಲಿ ಹಸಲರ ಮಕ್ಕಳಿಗಾಗಿ ಆಶ್ರಮ ಶಾಲೆ ಸ್ಥಾಪಿಸಿದ್ದು, ಮಾಸ್ತರ ಜಾನಪದ ಸಂವೇದನೆಗೆ ಸಾಕ್ಷಿಯಾಗಿದೆ. ಈಗ ಆಶ್ರಮ ಶಾಲೆ ಇಲ್ಲ, ಸರ್ಕಾರಿ ಶಾಲೆ ಇದೆ. ಮೂವತ್ತು ವರ್ಷಗಳ ಹಿಂದೆ. ಹಸಲರ ಬದುಕಿನ ದಿಕ್ಕನ್ನು ಬದಲಾಯಿಸಲು ಶ್ರಮಿಸಿದ ವ್ಯಕ್ತಿ ಇವರು. ಶಿರವಂತೆಯ ದುರ್ಗಾಂಬಾ ಯುವಕ ಸಂಘ, ಕೆರೆಗೆ ಹಾರ ನಾಟಕದ ಯಶಸ್ವಿ ಪ್ರದರ್ಶನ, ದ್ವಾರಕನಾಥ ಕಲಾಮಂದಿರದಲ್ಲಿ ನಡೆಯಿತು. ಮೆಳವರಿಗೆ ಭಜನಾ ಸಂಘ, ಅನೇಕ ವರ್ಷದಿಂದ ಕ್ರಿಯಾಶೀಲವಾಗಿದೆ. ಹಿರೇನೆಲ್ಲೂರು, ಕಾಗೋಡು ಮುಂತಾದ ಗ್ರಾಮಗಳಲ್ಲಿಯ ಡೊಳ್ಳು ಮೇಳಗಳು ಅನೇಕ ಪ್ರದರ್ಶನಗಳನ್ನು ನೀಡಿವೆ.

ಪತ್ರಿಕಾ ರಂಗದಲ್ಲಿ ಪ್ರಕಾಶ ಕುಗ್ವೆ, ಶಿವಾನಂದ ಕುಗ್ವೆ, ಶಶಿಸಂಪಳ್ಳಿ, ಹೆಚ್.ಎಸ್.ಮೋಹನ್ ಮುಂತಾದ ಯುವ ಲೇಖಕರನ್ನು ಹೊಂದಿದೆ. ಇವರ ವೈಚಾರಿಕ ಲೇಖನಗಳು, ನಿಸರ್ಗ ಕಾಳಜಿ ಕುರಿತಾದ ಲೇಖನಗಳು ಪ್ರತಿಷ್ಠಿತ ಪತ್ರಿಕೆಗಳಲ್ಲಿ ಬರುತ್ತಿವೆ. ಇನ್ನು ಹೆಚ್ಚಿನ ಕವಿಗಳು, ಲೇಖಕರು ಹೊರಹೊಮ್ಮಬೇಕಾಗಿದೆ. ಸಾಂಸ್ಕೃತಿಕ ರಂಗದಲ್ಲಿ ಇತ್ತೀಚಿನ ಯುವಕರಲ್ಲಿ ಆಸಕ್ತಿ ಕಂಡುಬರುತ್ತಿಲ್ಲ. ಕ್ರೀಡಾ ಕ್ಷೇತ್ರದಲ್ಲಿ ಯುವಕರ ಆಸಕ್ತಿ ಮೆಚ್ಚು ವಂತಹದು. ಎಲ್ಲಾ ಕಡೆಯು ಯುವಕ ಸಂಘಗಳನ್ನು ಸ್ಥಾಪಿಸಿಕೊಂಡು ಭೂಮಿ ಹುಣ್ಣಿಮೆ ಬುಟ್ಟಿ ಚಿತ್ತಾರದ ಪ್ರದರ್ಶನ ಏರ್ಪಡಿಸುವುದು ಹಾಗೂ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಮಟ್ಟದ ಕ್ರೀಡೆಗಳಾದ ಕ್ರಿಕೆಟ್ ಮತ್ತು ವಾಲಿಬಾಲ್ ಆಟಗಳ ಟೂರ್ನಿಮೆಂಟನ್ನು ಪಂಚಾಯಿತಿ ಮಟ್ಟದಲ್ಲಿ ಸಂಯೋಜಿಸಲಾಗುತ್ತಿದೆ. ರಾಷ್ಟ್ರೀಯ ಕ್ರೀಡೆಯಾದ 'ಕಬ್ಬಡಿ' ಆಟವನ್ನು ಆಡಿಸಲಾಗುತ್ತಿದೆ. ಈ ಎಲ್ಲಾ ಆಟಗಳಿಂದ ಜಾನಪದಿಯ ಆಟಗಳಾದ ಬುಗರಿ, ಚಿನ್ನಿದಾಂಡು, ಗೋಲಿ, ಚಿಕ್ಕರ್ ಚೆಂಡು ಮುಂತಾದ ಆಟಗಳು ಕ್ಷೀಣಿಸುತ್ತಿವೆ.

ಮೇಲ್‌ಮುಖ ಚಲನೆಯಲ್ಲಿ ಒಂದು ಜನಾಂಗ ವಿವಿಧ ಸ್ತರಗಳಲ್ಲಿ ಬದಲಾವಣೆ ಹೊಂದುತ್ತಿರುವಾಗ ಅನೇಕ ಪರಿಣಾಮಗಳು ಆಗಬಹುದು. ಲಾಭದ ಜೊತೆಯಲ್ಲಿ ಸ್ವಲ್ಪ ನಷ್ಟ ಎನ್ನುವಂತೆ ಆಧುನಿಕತೆಗೆ ಮುಖ ಮಾಡಿ ನಿಂತಾಗ ಕೆಲವೊಂದು ಅಂಶಗಳು ನಶಿಸುತ್ತವೆ. ರಾಜಕೀಯ ಶಕ್ತಿಯಾಗಿ ಹೊರಹೊಮ್ಮಿದ ಜನಾಂಗ ಸಾಮಾಜಿಕ, ಆರ್ಥಿಕ ಕ್ಷೇತ್ರದಲ್ಲಿ ಬದಲಾವಣೆಯಾಗುತ್ತಾ ಸಮಾಜದಲ್ಲಿ ಹಿಂದುಳಿದ ಜನಾಂಗ ಹೇಗೆ ಗೌರವಕ್ಕೆ ಪಾತ್ರವಾಗುತ್ತದೆ ಎಂಬುದಕ್ಕೆ ದೀವ ಜನಾಂಗವೇ ಸಾಕ್ಷಿ. ಒಂದು ಜನಾಂಗ ಆರ್ಥಿಕವಾಗಿ ಮೇಲ್‌ಮುಖ ಚಲನೆಯಲ್ಲಿ ತೊಡಗಿದಾಗ ಇನ್ನೊಂದು ಜನಾಂಗ ಕೆಳಮುಖ ಚಲನೆಗೆ ತೊಡಗುತ್ತದೆ. ಅಧಿಕಾರ ಮೇಲ್ವರ್ಗದ ಕೈಯಿಂದ ಹಿಂದುಳಿದ ವರ್ಗಕ್ಕೆ ಹಸ್ತಾಂತರಗೊಳ್ಳುತ್ತದೆ ಎಂಬುದು ಶಿವಮೊಗ್ಗ ಜಿಲ್ಲೆಯ ರಾಜಕೀಯ ಚಿತ್ರಣ

ತೋರಿಸುತ್ತದೆ. ಹೀಗೆ ಪ್ರಗತಿ ಪಥದತ್ತ ಸಾಗುತ್ತಿರುವ ಈ ಜನಾಂಗಗಳು ಉತ್ತರ ಭಾರತದಂತೆ ಸಂಘರ್ಷ, ರಕ್ತಪಾತ, ಹಿಂಸೆಗೆ ದಾರಿಮಾಡಿಕೊಡದೆ ಶಾಂತಿಯುತವಾಗಿ ನಡೆಯುತ್ತಿ ರುವುದು, ಮಲೆನಾಡ ಮಣ್ಣಿನ ಗುಣ ಅಂತಹುದು. ಶಾಂತಿ ಹುಟ್ಟಿದ ನಾಡಲ್ಲಿ ರಕ್ತದೋಕುಳಿಯಾಗುತ್ತಿರುವಾಗ ಕರ್ನಾಟಕದಂತಹ ರಾಜ್ಯಗಳು ಮಾದರಿಯಾಗಿರುವುದು ಹೆಮ್ಮೆಯ ಸಂಗತಿ.

## ಅಡಿಟಿಪ್ಪಣಿಗಳು

೧. ಈ ಭಾಗದ ಒಟ್ಟು ಜನಸಂಖ್ಯೆಯಲ್ಲಿ ದೀವರು ಮೂರನೆಯ ಎರಡರಷ್ಟಿದ್ದಾರೆ. ಇದರಲ್ಲಿ ಗೇಣಿರೈತರ ಪಾಲು ದೊಡ್ಡದು. ಬೆರಳೆಣಿಕೆಯ ರೈತರು ಸ್ವಂತ ಸಾಗುವಳಿ ಜಮೀನು ಹೊಂದಿದ್ದರು. ಲಿಂಗಾಯತರು ಹತ್ತನೇ ಒಂದರಷ್ಟಿದ್ದಾರೆ. ಇವರಲ್ಲಿ ಬಹುಪಾಲು ಭೂಮಾಲೀಕರೇ ಇದ್ದಾರೆ. (೧೯೫೦-೬೦)

೨. ಮುಲ್ಕಿ ಪರೀಕ್ಷೆ - ೭ನೇ ತರಗತಿ, ಮ್ಯಾಟ್ರಿಕ್ ಪರೀಕ್ಷೆ - ೧೧ನೇ ತರಗತಿ.

೩. ಪಿಕೆಟಿಂಗ್ - ಕಾನೂನುಭಂಗ ಚಳುವಳಿ, ಅಸಹಕಾರ ಚಳುವಳಿ.

೪. ಪಳತ - ಪಣತ - ಕಣಜ ಧಾನ್ಯ ಸಂಗ್ರಹಿಸುವ ಮನೆ.

೫. ಪ್ರವಾಹಕ್ಕೆ ಒಳಗಾಗುವ ಜಮೀನಿನ ಗೇಣಿ ಬಹಳ ಕಡಿಮೆ. ಕೆಲವು ಜಮೀನುದಾರರು ಗೇಣಿ ಹಾಕುತ್ತಿರಲಿಲ್ಲ.

೬. ಸವಾಜಿ ಬೀರನಾಯಕರಿಗೆ ಸ್ವಂತ ಸಾಗುವಳಿ ಜಮೀನು ಸ್ವಲ್ಪ ಇತ್ತು. ಗೇಣಿಭೂಮಿ ೧೫ ಎಕರೆ ಗುರುವಪ್ಪನವರು ಬಿಡಿಸಿಕೊಂಡಾಗ (೧೯೫೧-೫೯) ಆರ್ಥಿಕ ಸಂಕಷ್ಟಕ್ಕೆ ಒಳಗಾದರು. (ಕ್ಷೇತ್ರಕಾರ್ಯದಿಂದ ತಿಳಿದು ಬಂದದ್ದು)

೭. ೨೦ ಬೀಲಕ್ಕೆ ೧ ಖಂಡುಗ, ೧ ಬೀಲಕ್ಕೆ ೨೦ ಕೊಳಗ ಭತ್ತ. ಒಂದು ಕೊಳಗ ೨.೫೦ ಕೆ.ಜಿ. ಭತ್ತವನ್ನು ಕೊಡಬೇಕಾಗಿತ್ತು. ಕೊಳಗ - ಗಿದ್ನ

೮. ಸಲಿಗೆ ಭತ್ತ - ಪುಕಸಟ್ಟೆಯಾಗಿ ಹೆಚ್ಚುವರಿ ಭತ್ತ ಕೊಡುವುದು. ಭತ್ತ ಅಳೆಯುವಾಗ ಲೆಕ್ಕಕ್ಕೆ ಒಂದೊಂದು ಬೊಗಸೆ ಭತ್ತವನ್ನು ಸಾಲಾಗಿ ಇಡುವುದಕ್ಕೆ ಸಲಿಗೆ ಭತ್ತ ಎನ್ನುತ್ತಾರೆ. ಅಳತೆಯಾದ ನಂತರ ಈ ಭತ್ತವನ್ನು ಗೇಣಿಯ ಜೊತೆಗೆ ಕೊಡಬೇಕಿತ್ತು.

೯. ಬರಸಿನ ದ್ಯಾವಪ್ಪನವರು ಸ್ವಾತಂತ್ರ್ಯ ಹೋರಾಟಗಾರರು. ಬರೇನೆಲ್ಲೂರಿನಲ್ಲಿ ವಾಸವಾಗಿದ್ದಾರೆ. ಕಲ್ಲುಬಿ ಹುಚ್ಚಪ್ಪನವರು ೨೦೦೨ ಜುಲೈನಲ್ಲಿ ತೀರಿಕೊಂಡಿದ್ದಾರೆ. ಸವಾಜಿ ಬೀರನಾಯಕ, ಅಳ್ಳಿಸಣ್ಣ ಇವರೆಲ್ಲ ಒಡನಾಡಿಗಳಾಗಿದ್ದವರು.

೧೦. ವರಾಡ-ಮಂತಿಕೆ-ಮಂತಿಗೆ-ಮನೆ ಕಂದಾಯ. ಅವರವರ ಆರ್ಥಿಕ ಸ್ಥಿತಿಗೆ ಅನುಸಾರವಾಗಿ ಕಂದಾಯವನ್ನು ಗ್ರಾಮದವರು ಹಬ್ಬ, ಗ್ರಾಮದ ಕೆಲಸ ಕಾರ್ಯಗಳಿಗೆ ವಿಧಿಸುವುದು. ಈಶ್ವರ ದೇವಸ್ಥಾನ-ಇಂದಿಗೂ ಬರೇನೆಲ್ಲೂರಿನಲ್ಲಿ ಇದೆ. ಮಾರಿಗುಡಿಯನ್ನು ಕೆಡವಿ ಅದರ ಜಾಗದಲ್ಲಿ (ಆರ್.ಸಿ.ಸಿ) ಕಾಂಕ್ರೀಟ್ ದೇವಸ್ಥಾನವನ್ನು ಗ್ರಾಮದವರು ವರಾಡಹಾಕಿ ಕಟ್ಟಿರುತ್ತಾರೆ.

೧೧. ಕೊಳಗ - ಮಲೆನಾಡಿನ ಆಹಾರ ಧಾನ್ಯಗಳ ಅಳತೆಯ ಮಾನ. ೧ ಕೊಳಗ = ೩.೫ ಸೇರು, ೧ ಕೊಳಗ ಭತ್ತ = ೩ ಕೆ.ಜಿ. ಸಮ. ಪೆಚ್ಚು ಭತ್ತ - ಗೇಣಿಯ ಪ್ರತಿಯೊಂದು ಬೀಲದ ಭತ್ತದ ಮೇಲೆ ಒಂದೊಂದು ಗಿದ್ನ ಭತ್ತವನ್ನು ಧಣಿಗಳಿಗೆ

ಕೊಡಬೇಕಾಗಿತ್ತು. ವಾತ - ದವಸದಾನ್ಯವನ್ನು ಸಾಲ ಕೊಡುವ ಪದ್ಧತಿ.

೧೨. ಅಕ್ರಮ ಪ್ರವೇಶ (ಸೆಕ್ಷನ್ ೧೪೩.೧೪೯) ದೊಂಬಿ (೧೪೭) ಸರಕಾರೀ ನೌಕರರಿಗೆ ಜಮೀ ಮತ್ತು ಹಲ್ಲೆ (೩.೩.೨) ಕಾನೂನು ರೀತ್ಯಾ ಕ್ರಮಗಳಿಗೆ ಅಡ್ಡಿ (೨೨೪, ೨೨೫)

೧೩. ವಿದೇಶಿ ಕ್ರಾಂತಿಕಾರಿ ನಾಯಕರುಗಳಾದ ಚೀನಾದ-ಮಾವ್ಸೋತ್ಸೆ ತುಂಗ್, ಚೌ.ಎಲ್.ಲಾಯ್, ಮೊ-ಥೇ, ರಷ್ಯಾದ ಸ್ಟಾಲಿನ್, ಲೆನಿನ್ ಮುಂತಾದ ಮಹಾಪುರುಷರ ಆದರ್ಶಗಳನ್ನು ಕ್ರಾಂತಿಕಾರಿಗಳು ತಿಳಿದಿದ್ದರು.

# ಅಧ್ಯಾಯ ೯

# ಸಮಾರೋಪ

ಶ್ರೇಣಿಕೃತ ವಿಷಮ ಸಮಾಜದಲ್ಲಿ ಅನೇಕ ವರ್ಗ ಭೇದಗಳಿದ್ದರು ಸಹ ಅಪಾರ ಜ್ಞಾನವನ್ನು ಕಟ್ಟಿಕೊಂಡ, ಅನೇಕಾನೇಕ ಸಮುದಾಯಗಳು ಇನ್ನೂ ನಮ್ಮ ಮಧ್ಯದಲ್ಲಿ ಅನನ್ಯತೆಯನ್ನು ಕಾಯ್ದುಕೊಂಡಿವೆ. ಆಧುನಿಕ ಜಗತ್ತಿನ 'ಅಭಿವೃದ್ಧಿ' ಚಕ್ರಕ್ಕೆ ಸಿಲುಕಿದ ಸಮುದಾಯಗಳು ಬದಲಾಗುವುದು ಸಹಜ ಕ್ರಿಯೆಯಾಗಿದೆ. 'ಬದಲಾವಣೆ' ಎಂಬುದು ಆರ್ಥಿಕ ವೃತ್ತದ ನೀತಿಯೇನು ನಿಜ. ಆದರೆ ಸಮುದಾಯಗಳ ಪಾರಂಪರಿಕ ಜ್ಞಾನ, ಪಾಂಡಿತ್ಯ, ಕಲೆ ಮುಂತಾದ ವಿಷಯಗಳ ಸ್ಥಿತ್ಯಂತರವೇನಾಯಿತು ಎಂಬುದನ್ನು ತಿಳಿಯಲು ಸಮುದಾಯಗಳ ಅಧ್ಯಯನದ ಅವಶ್ಯಕತೆ ಇದೆ. ಭೌತಿಕ ಸಮಾಜವನ್ನು ಸುಂದರವಾಗಿ ನಿರ್ಮಿಸಿದ್ದು ಕೌಶಲ್ಯಗಳನ್ನು ಹೊಂದಿದ್ದ ಶ್ರಮಿಕ ಸಮಾಜಗಳು, ಈ ಶ್ರಮಿಕ ವರ್ಗವನ್ನು ನಿರಂತರವಾಗಿ ದೇಶವನ್ನು ಆಳಿದ ವಿವಿಧ ಪ್ರಭುತ್ವಗಳು ಅತ್ಯಂತ ಕ್ರೂರವಾಗಿ ನಡೆಸಿಕೊಂಡಿವೆ. ಅದರಲ್ಲೂ ಸ್ವಾತಂತ್ರ್ಯ ಪೂರ್ವದಲ್ಲಿ ಇಂತವರ ದಬ್ಬಾಳಿಕೆಗೆ ನಲುಗಿದ ಸಮುದಾಯಗಳು ಇಂದು ಪ್ರಜಾಪ್ರಭುತ್ವದ ನಿರ್ಧಾರದಿಂದಾಗಿ ಶ್ರಮಿಕ ವರ್ಗದ ಕೈಯಲ್ಲಿ ಅಧಿಕಾರ ಹಸ್ತಾಂತರಗೊಂಡಿತು. ಭಾರತದ ವರ್ಣೀಕೃತ ಸಮಾಜವನ್ನು ಸೃಷ್ಟಿಸಿದ ಧರ್ಮಶಾಸ್ತ್ರಗಳು ಅಚ್ಚರಿ ಪಡುವಂತ ವಿದ್ಯಾಮಾನಗಳು ನಡೆದುಹೋದವು. ಸ್ವತಂತ್ರಪರಿಸರದಲ್ಲಿ ಅನೇಕ ಘಟನೆಗಳು ಜರುಗಿ 'ಪ್ರಜಾಪ್ರಭುತ್ವ' ನೀತಿಯಿಂದಾಗಿ ಎಲ್ಲಾ ಸಮುದಾಯಗಳು ಆರ್ಥಿಕ ಮತ್ತು ಶೈಕ್ಷಣಿಕ ಸವಲತ್ತುಗಳನ್ನು ಪಡೆದುಕೊಂಡವು. ಈ ಐವತ್ತು ವರ್ಷದಲ್ಲಾದ ಬದಲಾವಣೆಯ ಗಾಳಿಯಿಂದಾಗಿ ಸಮುದಾಯಗಳ ಚಿತ್ರಣಗಳು ಬದಲಾದವು. ಲೌಕಿಕ ಅಧಿಕಾರದ ಹಸ್ತಾಂತರದಿಂದಾಗಿ ಸಾಮಾಜಿಕ ನ್ಯಾಯ ಮತ್ತು ಆರ್ಥಿಕ ವ್ಯವಸ್ಥೆಯಲ್ಲಿ ಅನೇಕ ಮಾರ್ಪಾಟುಗಳಾದವು.

ನಾನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ 'ದೀವರ ಜನಾಂಗ' ಭಾರತದ ಆರ್ಥಿಕ ವ್ಯವಸ್ಥೆಯಲ್ಲಿ ಉಂಟಾದ ಅನೇಕ ರೂಪಾಂತರಗಳಿಗೆ ಮೂಕ ಸಾಕ್ಷಿ. ೧೨೦೦ ವರ್ಷಗಳ ಇತಿಹಾಸ ಇರುವ ದೀವರು ಮೂಲತಃ ಬೇಟೆಗಾರರಾಗಿ ನಂತರದಲ್ಲಿ ವಿಜಯನಗರ, ಕೆಳದಿ ಅರಸರ ಕಾಲದಲ್ಲಿ ಸೈನ್ಯದ ದಂಡನಾಯಕರಂತಹ ಪದವಿಯನ್ನು ಹೊಂದಿದ್ದು ಈ ಜನಾಂಗದ ಧೈರ್ಯ, ಸಾಹಸಕ್ಕೆ ದೊರಕಿದ ಸ್ಥಾನಮಾನವಾಗಿದೆ. ನಂತರದಲ್ಲಿ ಬ್ರಿಟಿಷ್ ಆಳ್ವಿಕೆಯಿಂದಾಗಿ ಭೂಮಿ ಎಂಬುದು ಮೇಲ್ವರ್ಗದ ಹಿಡಿತಕ್ಕೆ ಸಿಲುಕಿದ ಮೇಲೆ ಗೇಣಿ ರೈತರಾಗಿ ಬದುಕಬೇಕಾದ ಅನಿವಾರ್ಯತೆ ಸೃಷ್ಟಿಯಾಯಿತು. ದೇಶಿಯ ರಾಜ ಪರಂಪರೆ ನಾಶದೊಂದಿಗೆ ಬ್ರಿಟಿಷ್ ಆಳ್ವಿಕೆಯಿಂದಾಗಿ ಅನೇಕ ಮಾರ್ಪಾಟುಗಳು ಸಂಭವಿಸಿದವು. ಭೂಮಿಯ ಪಾರಂಪರಿಕ ಅವಲಂಬ

ಯೂ ಮಧ್ಯಕಾಲೀನ ರಾಜಕೀಯ ಪಲ್ಲಟದಿಂದಾಗಿ ಶ್ರಮಿಕವರ್ಗ ಕಳೆದುಕೊಂಡಿತಲ್ಲದೆ ಅತ್ಯಂತ ಹೀನಾಯ ಟ್ಟಿ ತಲುಪಿತು. ವಿಶಾಲ ಭಾರತವನ್ನು ತಮ್ಮ ಭೇದೋಪಾಯದಿಂದ ಆಕ್ರಮಿಸಿದ ಬ್ರಿಟಿಷರು, ಈ ದೇಶದ ಜ ಮನೆತನಗಳ ಆಸ್ತಿ, ಅಂತಸ್ತುಗಳಲ್ಲದೆ ಅರಣ್ಯ, ಕೃಷಿಭೂಮಿಯನ್ನು ಲೂಟಿ ಹೊಡೆದರು. ಅಂದು ಜರಿಗೆ ನಿಷ್ಠೆ ತೋರಿದ ಮೇಲ್ವರ್ಗದವರು ಆ ನಿಷ್ಠೆಯನ್ನು ಬ್ರಿಟಿಷರಿಗೆ ತೋರಿದ್ದರಿಂದ ಭೂಮಿ ಮೇಲಿನ ಡಿತ ತಪ್ಪದೆ, ಶ್ರಮಿಕ ವರ್ಗವನ್ನು ನಿರಂತರವಾಗಿ ಶೋಷಿಸಿದರು. ವಸಾಹತುಶಾಹಿ ಆಡಳಿತ ಮತ್ತು ಶ್ಚಿಮದ ಆಧುನಿಕತೆ ಭಾರತಕ್ಕೆ ಬಂದ ನಂತರದಲ್ಲಿ ಪಾರಂಪರಿಕ ಉತ್ಪಾದನಾ ವ್ಯವಸ್ಥೆ, ನಿಶ್ಚಿತ ಆರ್ಥಿಕ ಮೂಲಗಳಿಲ್ಲದ ಸಮುದಾಯಗಳು ಅತ್ಯಂತ ಹೀನಾಯ ಸ್ಥಿತಿ ತಲುಪಿದವು. ವಸಾಹತುಶಾಹಿ ಕುಟಿಲ ನೀತಿ ಯಿಂದಾಗಿ ಅರಣ್ಯ ಸಂಪತ್ತು ಪಶ್ಚಿಮ ರಾಷ್ಟ್ರಗಳಿಗೆ ರವಾನೆಯಾದ ನಂತರದಲ್ಲಿ ಕಾಡನ್ನು ನಂಬಿದ್ದ ಬುಡಕಟ್ಟು ಜನಾಂಗಗಳು, ದೀವರು ಮುಂತಾದ ಜನಾಂಗಗಳು ದಿಕ್ಕೆಟ್ಟು ಭೂಮಾಲೀಕರ ಭೂಮಿಯಲ್ಲಿ ಗೇಣಿರೈತನಾಗುವ ಸ್ಥಿತಿ ನಿರ್ಮಾಣವಾಯಿತು. ಬ್ರಿಟಿಷರಿಗೆ ರಾಜಕೀಯ ವಿಸ್ತರಣೆಗೆ ಅತ್ಯಂತ ಪ್ರಬಲ ಪ್ರೋತ್ಸಾಹವನ್ನು ಒದಗಿಸಿದವರು ರಾಜ ಮನೆತನಗಳಾಗಿದ್ದವು. ಇವರನ್ನು ನಾಶ ಪಡಿಸಿದ ನಂತರದಲ್ಲಿ ಇವರ ಅರಣ್ಯನೀತಿಗೆ ಪ್ರತಿರೋಧವನ್ನು ವ್ಯಕ್ತ ಪಡಿಸಿದವರು ಬುಡಕಟ್ಟು ಜನಾಂಗ ಹಾಗೂ ಶ್ರಮಿಕ ವರ್ಗ. ಬ್ರಿಟಿಷರ ಎಸ್ಟೇಟು ನಿರ್ಮಾಣಕ್ಕಾಗಿ ಅರಣ್ಯದಿಂದ ಇವರನ್ನು ಒಕ್ಕಲೆಬ್ಬಿಸಿದರು. ತಿರುಗಿ ಬಿದ್ದವರನ್ನು ಬಂದೂಕುಗಳಿಂದ ಸುಡಲಾಯಿತು. ಈ ಕಾಲ ಘಟ್ಟದಲ್ಲಿ ಭಾರತದ ಅರಾಜಕ ಸಮಾಜವನ್ನು ಆಕ್ರಮಿಸಿಕೊಂಡ ವಸಾಹತು ಸಾಮ್ರಾಜ್ಯ, ಭೂಮಾಲೀಕ ರೊಂದಿಗೆ ಅಪವಿತ್ರ ಮೈತ್ರಿ ಮಾಡಿಕೊಂಡಿತು. ಈ ಮೈತ್ರಿಯಿಂದಾಗಿ ಅವರ ಆಡಳಿತ ಸುಲಭವಾಗಿ ಮುನ್ನಡೆ ಯಿತು. ಈ ಸಂದರ್ಭದಲ್ಲಿ ಜರುಗಿದ ಶ್ರಮಿಕ ವರ್ಗದ ಪ್ರತಿಭಟನೆಗಳನ್ನು ಹತ್ತಿಕ್ಕಲಾಯಿತು.

ಮಲೆನಾಡಿನ ಶ್ರಮಿಕ ವರ್ಗದವರಾದ 'ದೀವರು' ನಿರಂತರವಾಗಿ ಭೂಮಾಲೀಕರಿಂದ ಹಿಂಸೆಗೊಳಗಾದವರೆ ಆಗಿದ್ದಾರೆ. ಇಲ್ಲಿ ಗಮನಿಸಬೇಕಾದ ವಿಷಯವೊಂದಿದೆ. ಬ್ರಿಟಿಷ್ ಮತ್ತು ಭೂಮಾಲೀಕರ ಶೋಷಣೆಯಲ್ಲಿ ನಲುಗಿದ ದೀವರು ಸ್ವಾತಂತ್ರ್ಯ ನಂತರದಲ್ಲಿ ಕಾಂಗ್ರೆಸ್ ಮತ್ತು ಭೂಮಾಲೀಕರ ಹಿಡಿತಕ್ಕೆ ಸಿಲುಕಿದರು. ಇದೊಂದು ವಿಪರ್ಯಾಸವೇ ಆಗಿದೆ. ಸ್ವಾತಂತ್ರ್ಯ ನಂತರದ ಭಾರತದ ರಾಜಕೀಯ ಚಿತ್ರಣವನ್ನು ಗಮನಿಸಿದರೆ ಅಧಿಕಾರವೆಂಬುದು ಭೂಮಾಲೀಕರ ಹಿಡಿತದಲ್ಲಿದ್ದರಿಂದ ಶೋಷಣೆ ಎಂಬುದು ಶ್ರಮಿಕವರ್ಗಕ್ಕೆ ಶಾಪವಾಗಿ ಪರಿಣಮಿಸಿತು.

ನನ್ನ ಪ್ರಬಂಧದುದ್ದಕ್ಕೂ ದೀವರ ಜನಾಂಗದ ಬದುಕಿನ ವಿವರಗಳನ್ನು ಕೊಟ್ಟಿದ್ದೇನೆ. ಒಟ್ಟು ಒಂಬತ್ತು ಅಧ್ಯಾಯಗಳಿವೆ. ಜೊತೆಗೆ ಅನುಬಂಧದಲ್ಲಿ ಮಹಾ ಪ್ರಬಂಧಕ್ಕೆ ಸಂಬಂಧಿಸಿದಂತೆ ಹಲವು ಮಾಹಿತಿಗಳನ್ನು ಕೊಡಲಾಗಿದೆ. ಸಂಶೋಧನೆಯ ಶೀರ್ಷಿಕೆಯ ವಿಷಯಕ್ಕೆ ತಕ್ಕಂತೆ ಸಂಶೋಧನೆ ನಡೆಸಲಾಗಿದೆ. ಹಾಗಾಗಿ ಅಧ್ಯಯನಕ್ಕೆ ಉದ್ದೇಶವಿರುತ್ತದೆ, ವಿಧಾನ ಮತ್ತು ವ್ಯಾಪ್ತಿ ಇರುತ್ತದೆ. ಇವುಗಳಿಗೆ ಸಂಬಂಧಿಸಿದಂತೆ ಅಧ್ಯಾಯ ಒಂದರಲ್ಲಿ ಪ್ರಸ್ತಾಪಿಸಲಾಗಿದೆ.

ಅಧ್ಯಾಯ ಎರಡರಲ್ಲಿ ದೀವರ ಬದುಕಿನ ವಿವರಗಳು, ಪ್ರಾಚೀನತೆ, ಇವಕ್ಕೆ ಪೂರಕವಾಗಿ ದೀವರ ಬಗೆಗಿನ ದಂತಕಥೆಗಳೇನು, ದಾಖಲೆಗಳಲ್ಲೇನಿದೆ, ಶಾಸನಗಳಲ್ಲೇನಿದೆ, ಕೃತಿಯುತ್ತುಗಳಲ್ಲಿ ದೀವರ ಬಗ್ಗೆ ಯಾವ

ವಿವರಣೆ ಇದೆ ಎಂಬುದರ ಬಗ್ಗೆ ಚರ್ಚೆಮಾಡಲಾಗಿದೆ. ನಂತರ 'ದೀವರು' ಪದದ ಅರ್ಥವೇನು, ಅರ್ಥಕೋಶದಲ್ಲಿ ಏನನ್ನುವರು ಎಂಬುದರ ಬಗ್ಗೆ ವಿಮರ್ಶಿಸಲಾಗಿದೆ.

ದೀವರ ಸಾಮಾಜಿಕ ವ್ಯವಸ್ಥೆ ಎಂತಹದು ಕುಟುಂಬ ಪದ್ಧತಿ, ಬಳಿಗಳು, ಒಳಪಂಗಡಗಳು ಮುಂತಾದವುಗಳ ಬಗ್ಗೆ ಚರ್ಚಿಸಲಾಗಿದೆ. ನ್ಯಾಯ ಪದ್ಧತಿ, ಉಡುಗೆ ತೊಡುಗೆ, ಮನೆ, ಆಹಾರ ಪದ್ಧತಿ, ವೈದ್ಯ ಇನ್ನಿತರ ವಿಷಯಗಳ ಬಗ್ಗೆ ಅಧ್ಯಾಯ ಮೂರರಲ್ಲಿ ಚರ್ಚಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ದೀವರ ಜೀವನ ಶೈಲಿ ಯಾವ ರೀತಿ ಇದೆ ಇವರ ಜೀವನಾವರ್ತನದ ಆಚರಣೆಗಳು ಎಂತಹದು, ಜನನ, ಬಾಣಂತನ, ಸೂತಕ, ಋತುಮತಿ, ವಿವಾಹ, ಸೀಮಂತ, ಶವಸಂಸ್ಕಾರಗಳ ವಿಶೇಷತೆ ಯೇನು ಇವುಗಳ ಬಗೆಗೆ ದೀವರು ಸಮುದಾಯ ರೂಪಿಸಿಕೊಂಡ ಸಾಮಾಜಿಕ ಚೌಕಟ್ಟು ಎಂತಹದು ಇವು ಇತರ ಸಮುದಾಯಗಳಿಗಿಂತ ಹೇಗೆ ಭಿನ್ನವಾಗಿದೆ ಎಂಬುದನ್ನು ವಿವರಿಸಲು ಶ್ರಮಿಸಿದ್ದೇನೆ.

ದೀವರ ಸಾಂಸ್ಕೃತಿಕ ಬದುಕು ಎಂತಹದು. ಆಚರಿಸುವ ವಾರ್ಷಿಕಾವರ್ತನದ ಆಚರಣೆಗಳಾದ ಹಬ್ಬಗಳ ಬಗ್ಗೆ ಅಧ್ಯಾಯ ಐದರಲ್ಲಿ ಚರ್ಚಿಸಲಾಗಿದೆ. ದೀವರು ಆಚರಿಸುವ ಹಬ್ಬಗಳಿಗು ಕೃಷಿಗು ಯಾವರೀತಿ ಸಂಬಂಧವಿದೆ ಮತ್ತು ಈ ಹಬ್ಬಗಳು ಯಾಕಾಗಿ ವಿಶೇಷತೆಯನ್ನು ಪಡೆದುಕೊಂಡಿವೆ ಎಂಬುದರ ಜೊತೆ ಯಲ್ಲಿಯೇ ಮಲೆನಾಡಿನ ಇತರ ಕೃಷಿಕರು ಆಚರಿಸುವ ಕೆಲ ಹಬ್ಬಗಳಿಗು ಇರುವ ಸಾಮ್ಯತೆಗಳೇನು, ಭಿನ್ನತೆ ಗಳೇನು, ಆಚರಿಸುವ ವಿಧಾನ ಎಂತಹದು, ಅವುಗಳ ಬಗೆಗಿರುವ ನಂಬಿಕೆಗಳೇನು ಎಂಬುದರ ವಿವರಣೆಯನ್ನು ನೀಡುವುದರ ಜೊತೆಗೆ ಹಬ್ಬಗಳಲ್ಲಿ ಕಂಡುಬರುವ ಆಚರಣೆಗಳಲ್ಲಿ ವೈಜ್ಞಾನಿಕ ಜ್ಞಾನವೇನಾದರು ಇದೆಯೆ ಎಂಬುದನ್ನು ಚರ್ಚಿಸಿದ್ದೇನೆ.

ಅಧ್ಯಾಯ ಆರರಲ್ಲಿ ಜಾನಪದ ಕಲೆ ಮತ್ತು ಸಾಹಿತ್ಯದ ಬಗ್ಗೆ ದೀವರಲ್ಲಿ ಕಾಣಬರುವ ವಿಶೇಷತೆಗಳೇನು. ಕನ್ನಡವನ್ನೇ ಮಾತನಾಡುತ್ತಿದ್ದರು. ಮಾತಮಾಡುವ ಶೈಲಿ ಎಂತಹದಾಗಿತ್ತು, ಇಂದೇಕೆ ಕಣ್ಮರೆಯಾಗುತ್ತಿದೆ. ಎಂಬುದರ ಜೊತೆ, 'ಹಸೆ' ಚಿತ್ತಾರದ ಚರಿತ್ರೆಯೇನು. ವಿಕಾಸ ಹೇಗಾಯಿತು, ಇಂದಿನ ಸ್ಥಿತಿ ಏನು ಎಂಬುದನ್ನು ತಿಳಿಸಲಾಗಿದೆ. ಡೊಳ್ಳು, ಕೋಲಾಟದಂತಹ ಕಲೆಗಳು ರಾಷ್ಟ್ರ, ಅಂತರಾಷ್ಟ್ರ ಮಟ್ಟದಲ್ಲಿ ಹೇಗೆ ವಿಜೃಂಭಿಸಿದೆ ಎಂಬುದನ್ನು ವಿವರಿಸಿದ್ದೇನೆ. ಗಾದೆ ಒಗಟುಗಳ ಸಂಗ್ರಹ ಹಾಗೇ ದೀವರ ಮಹಿಳೆ ಹಾಡುವ ಹಬ್ಬದ ಹಾಡುಗಳು, ಸೋಬಾನೆ ಪದಗಳು, ಮದುವೆ ಹಾಡುಗಳನ್ನು ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಿದ್ದೇನೆ.

ಅಧ್ಯಾಯ ಏಳರಲ್ಲಿ ವೃತ್ತಿಯ ಬಗ್ಗೆ ಪ್ರಸ್ತಾಪಿಸಲಾಗಿದೆ. ಸಾಂಪ್ರದಾಯಿಕ ವೃತ್ತಿಯಿಂದ ದೀವರು ಅವಲಂಬಿತ ವೃತ್ತಿಗೆ ಹೇಗೆ ಬದಲಾದರು ಎಂಬುದರ ವಿವರಗಳನ್ನು ಕೊಡಲಾಗಿದೆ.

ಅಧ್ಯಾಯ ಎಂಟರಲ್ಲಿ ದೀವರ ಸ್ಥಿತ್ಯಂತರಕ್ಕೆ ಕಾರಣವಾದ ಕಾಗೋಡು ರೈತ ಹೋರಾಟ, ಹೋರಾಟದ ಹಿನ್ನೆಲೆ ಹೋರಾಟಕ್ಕೆ ಏನು ಕಾರಣ, ಹೋರಾಟದಿಂದಾಗಿ ದೀವರಲ್ಲಿ ಮೂಡಿದ ರಾಜಕೀಯ ಪ್ರಜ್ಞೆ ರಾಷ್ಟ್ರೀಯ

ನಾಯಕರ ಪ್ರವೇಶ, ಅನೇಕ ನಾಯಕರ ಸೃಷ್ಟಿಯಿಂದಾಗಿ. 'ಉಳುವವನೆ ಹೊಲದೊಡೆಯ' ಕಾನೂನನ್ನು ಕಟ್ಟುನಿಟ್ಟಾಗಿ ಜಾರಿಗೆ ತಂದಿದ್ದರಿಂದ ದೀವರ ಆರ್ಥಿಕ ಚಕ್ರದಲ್ಲಿ ವ್ಯತ್ಯಾಸಗಳೇನು ಎಂಬುದನ್ನು ವಿವರಿಸಿದ್ದೇನೆ. ಭೂಮಿಯ ಒಡೆಯರಾದ ದೀವರು ಶಿವಮೊಗ್ಗ ಜಿಲ್ಲೆಯಲ್ಲಿ ರಾಜಕೀಯ, ಶೈಕ್ಷಣಿಕ ಕ್ಷೇತ್ರದಲ್ಲಿ ಹೇಗೆ ಪ್ರಬಲರಾದರು ಎಂಬುದರ ಬಗ್ಗೆ ಕ್ಷೇತ್ರಕಾರ್ಯ, ದೀವ ಮುಖಂಡರ ಭೇಟಿ, ಪುಸ್ತಕಗಳ ಮಾಹಿತಿಯನ್ನಾಧರಿಸಿ ಅಧ್ಯಾಯವನ್ನು ವಿವರಿಸಿದ್ದೇನೆ. ಅಧ್ಯಯನ ಮಾಡುವಾಗ ಕೆಲವೊಂದು ತಪ್ಪುಗಳಾಗಿರಬಹುದು. ಈ ತಪ್ಪುಗಳಿಗೆ ಕಾರಣ ನನ್ನ ಜ್ಞಾನದ ಮಿತಿಯೇ ಆಗಿದೆ ಎಂದು ಒಪ್ಪಿಕೊಳ್ಳುತ್ತೇನೆ.

ಅಧ್ಯಾಯ ಒಂಭತ್ತರಲ್ಲಿ ಸಮಾರೋಪ. ನಂತರ ಅನುಬಂಧದಲ್ಲಿ ಗ್ರಂಥಋಣ. ಛಾಯಾಚಿತ್ರ, ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಸಂದರ್ಶಿಸಿದ ಮುಖ್ಯ ವಕ್ತೃಗಳ ವಿವರಗಳನ್ನು ಕೆಲವು ಕೋಷ್ಟಕಗಳನ್ನು ಕೊಡಲಾಗಿದೆ. ಈ ಎಲ್ಲಾ ವಿಷಯಗಳನ್ನು ಕ್ಷೇತ್ರಕಾರ್ಯದ ಮೂಲಕ ಪ್ರತ್ಯಕ್ಷವಾಗಿ ನೋಡಿ ಗಮನಿಸಿ ದಾಖಲಿಸಿದ್ದೇನೆ. ಛಾಯಾಚಿತ್ರಗಳು, ದೀವರು ಆಚರಿಸುವ ಹಬ್ಬಗಳು, ಜಾನಪದ ಗಂಡು ಕಲೆಯಾದ ಡೊಳ್ಳುಕುಣಿತದ ಚಿತ್ರಗಳು, ಮದುವೆ, ಹಚ್ಚೆ, ಹಸೆ ಚಿತ್ರಗಳನ್ನು ಹಾಕಲಾಗಿದೆ. ಕೆಲ ಅಧ್ಯಾಯಗಳಲ್ಲಿ ಅವಶ್ಯಕತೆಯಿದ್ದಲ್ಲಿ ರೇಖಾ ಚಿತ್ರಗಳನ್ನು ಹಾಕಿರುತ್ತೇನೆ.

ದೀವರ ಜನಾಂಗವನ್ನು ನಾನು ಮೊದಲಿನಿಂದಲೂ ಗಮನಿಸುತ್ತಾ ಬಂದಿದ್ದೇನೆ. ಒಡನಾಡಿಯಾಗಿ ಬದುಕಿದ್ದೇನೆ. ನನ್ನ ವಿದ್ಯಾಭ್ಯಾಸದುದ್ದಕ್ಕೂ ಸಹಪಾಠಿಗಳಾಗಿ, ಸ್ನೇಹಿತರಾಗಿ, ಹಿತೈಷಿಗಳಾಗಿ ನನ್ನೊಟ್ಟಿಗೆ ಇದ್ದುದರಿಂದ ನನ್ನಲ್ಲಿ ಈ ಜನಾಂಗದ ಬಗೆಗೆ ಅಧ್ಯಯನ ಮಾಡುವ ಹಂಬಲ ಬೆಳೆಯಲು ಕಾರಣವಾಯಿತು. ಅದರಲ್ಲೂ ನನ್ನ ಕಾಲೇಜು ವ್ಯಾಸಂಗದಲ್ಲಿ ಗುರುಗಳಾದ ದಿವಂಗತ ರೇಣುಕಪ್ಪ ಗೌಡರು ಪಾಠ ಮಾಡುತ್ತ ಕನ್ನಡ ಭಾಷೆಯ ಪ್ರಾದೇಶಿಕ ಶೈಲಿಯ ಬಗ್ಗೆ ಮಾತನಾಡುವಾಗ ದೀವರು ಮಾತನಾಡುವ ಶೈಲಿಯಲ್ಲಿ, ದಾಟಿಯಲ್ಲಿ ಇರುವ ಕಾಳಜಿ, ಪ್ರೀತಿ, ವಾತ್ಸಲ್ಯ, ಮಮತೆಯ ಎಳೆಯನ್ನು ಗುರುತಿಸಿ ಹೇಳುತ್ತಿದ್ದರು. "ಅಕ್ಕ ಜ್ಯಾಕೆ, ಮುದವ್ವ ಗನಕಿದಿಯಾ?" ಎಂಬ ಮಾತುಗಳನ್ನು ಹೇಳುತ್ತಿದ್ದುದು, ಈ ಜನಾಂಗದ ಅಧ್ಯಯನಕ್ಕೆ ಕಾರಣವಾಗಿರಬೇಕು. ಅಲ್ಲದೆ ಸ್ನಾತಕೋತ್ತರ ಪದವಿ ಗಳಿಸುವಾಗ ಸೆಮಿನಾರ್ ಕ್ಲಾಸಿಗೆ ನಾನು ಪ್ರಬಂಧ ಕೊಟ್ಟಿದ್ದು (ಜಾನಪದ ವಿಭಾಗ) 'ಭೂಮಿಹುಣ್ಣಿಮೆ' ಹಬ್ಬದ ಕುರಿತ ಲೇಖನವಾಗಿತ್ತು. ಹೀಗೆ ಪದವಿ ತರಗತಿಯಲ್ಲಿ ಮೊಳಕೆಯೊಡೆದ ದೀವರ ಜನಾಂಗದ ಅಧ್ಯಯನದ ಮೇಲಿನ ವ್ಯಾಮೋಹ ಸ್ನಾತಕೋತ್ತರ ನಂತರದಲ್ಲಿ ಕನ್ನಡ ವಿ.ವಿ. ಹಂಪಿಯಲ್ಲಿ ಪಿಎಚ್.ಡಿ. ಮಾಡುವುದರೊಂದಿಗೆ ಪೂರೈಸಿತು. 'ದೀವರ ಜನಾಂಗದ' ಕುರಿತ ಚಿತ್ರಣವನ್ನು ಕೊಡಲು ಪ್ರಯತ್ನಿಸಿದ್ದೇನೆ. ಆದರೆ ಈ ಅಧ್ಯಯನದಲ್ಲಿ ನನ್ನ ಗಮನಕ್ಕೆ ಬರದ ಹಾಗು ವ್ಯಕ್ತಪಡಿಸಲಾಗದ ಎಷ್ಟೋ ವಿಷಯಗಳು ಉಳಿದಿರಬಹುದು. ಆದರೆ ಮುಂದಿನ ಅಧ್ಯಯನಗಳಿಗೆ ಸಹಕಾರಿಯಾಗಬಲ್ಲ ಪ್ರಬಂಧವಾಗಿದೆ.

ಈ ಅಧ್ಯಯನದಲ್ಲಿನಾನು ಕಂಡುಕೊಂಡ ಫಲಿತಾಂಶಗಳು ಈ ರೀತಿ ಇವೆ.

೧. ದೀವರು ಸಾಗರ, ಸೊರಬ, ಹೊಸನಗರದಲ್ಲಿ ಹೆಚ್ಚಾಗಿ ವಾಸವಾಗಿದ್ದು, ತೀರ್ಥಹಳ್ಳಿ ಶಿಕಾರಿಪುರ, ಸಿದ್ದಾಪುರ (ಉ.ಕ.) ಭಾಗಗಳಲ್ಲಿ ವಿರಳವಾಗಿ ವಾಸವಾಗಿರುವರು.

೨. ಈ ಜನಾಂಗದ ಮೇಲೆ ಮೊದಲು ಶೈವ ಪ್ರಭಾವವಿದ್ದು, ನಂತರ ವೈಷ್ಣವ ಪ್ರಭಾವವಾಗಿದೆ.

೩. ಹಸೆ ಚಿತ್ತಾರದಲ್ಲಿ ದೀವರು ನಿಷ್ಣಾತರಾಗಿದ್ದಾರೆ.

೪. ಭೂಮಿ ಹುಣ್ಣಿಮೆ 'ಬುಟ್ಟಿಯ ಚಿತ್ತಾರ'ದಲ್ಲಿಯೂ ಪರಿಣತರಾಗಿದ್ದಾರೆ.

೫. ಕೃಷಿ ಸಂಬಂಧಿತ ಆರಾಧನೆಗಳು ಇವರಲ್ಲಿ ಹೆಚ್ಚಾಗಿ ಕಂಡು ಬರುತ್ತವೆ.

೬. 'ಆರಿದ್ರಾ ಮಳೆ' ಹಬ್ಬವನ್ನು ದೀವರು ಮಾತ್ರ ಆಚರಿಸುವರು.

೭. ಕರ್ನಾಟಕದಲ್ಲಿ ಪ್ರಥಮ ರೈತ ಹೋರಾಟವನ್ನು ೧೯೫೧-೫೨ರಲ್ಲಿ ಸಂಘಟಿಸಿರುವರು.

೮. ಬೇಟೆ, ಸೈನಿಕ, ಗೇಣಿರೈತ ಹಾಗೂ ಭೂಮಾಲಿಕ ಸ್ಥಿತಿಗೆ ಪರಿವರ್ತನೆ ಹೊಂದಿದ ಇವರು ಇಂದು ಎಲ್ಲಾ ಕ್ಷೇತ್ರಗಳಲ್ಲೂ ಕಂಡು ಬರುವರು.

೯. ಆಧುನಿಕತೆ ಮತ್ತು ಜಾಗತೀಕರಣದ ಇಂದಿನ ವ್ಯವಸ್ಥೆಯಲ್ಲಿ ಇವರು ಸಂಪ್ರದಾಯ, ಆಚರಣೆಗಳನ್ನು ಇಂದಿಗೂ ರೂಢಿಸಿಕೊಂಡಿರುವರು.

೧೦. ರಾಜಕೀಯ ಕ್ಷೇತ್ರವಾದ ಶಿವಮೊಗ್ಗ ಜಿಲ್ಲೆಯಲ್ಲಿ ಪ್ರಮುಖ ಇವರು ಪ್ರಮುಖ ಪಾತ್ರ ವಹಿಸಿದ್ದಾರೆ.

ದೀವರ ಸಾಂಸ್ಕೃತಿಕ ಬದುಕನ್ನು ಮತ್ತು ಸ್ಥಿತ್ಯಂತರಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ. ಇಲ್ಲಿ ಕೊಡುವ ಹಲವು ಅನುಭವಗಳು ಮತ್ತು ಮಾಹಿತಿಗಳು ಪ್ರಬಂಧದುದ್ದಕ್ಕೂ ಕಂಡುಬರುತ್ತವೆ. ಈ ಎಲ್ಲಾ ಮಾಹಿತಿಗಳು ಮುಂದೆ ಬೇರೆ ಬಗೆಯ ಅಧ್ಯಯನಗಳಿಗೆ ಹೆಚ್ಚು ಪೂರಕವಾಗಬಲ್ಲವು.

# ನಕ್ಷೆ (ಶಿವಮೊಗ್ಗ ಜಿಲ್ಲೆ)

 ಜಿಲ್ಲಾ ಕೇಂದ್ರ

 ತಾಲ್ಲೂಕು ಕೇಂದ್ರ

 ದೀವರ ಜನಾಂಗ

೧. ಸಾಗರ

೨. ಸೊರಬ

೩. ಶಿಕಾರಿಪುರ

೪. ಹೊಸನಗರ

೫. ತೀರ್ಥಹಳ್ಳಿ

# ಪರಾಮರ್ಶನ ಗ್ರಂಥಗಳು


೧. ಅನಂತಮೂರ್ತಿ ಯು.ಆರ್., ೨೦೦೨, 'ಕಾಗೋಡು ಚಳುವಳಿ' ಸುವರ್ಣ ಸಂಪುಟ, ಹಿ.ಚಿ.ಬೋರಲಿಂಗಯ್ಯ, ಹುಚ್ಚಪ್ಪ ಮಾಸ್ತರ, (ಸಂ) ಮಲೆನಾಡಿನ ಜಾನಪದ ಲೋಕ, ಸಾಗರ.

೨. ಅಂಬಳಿಕೆ ಹಿರಿಯಣ್ಣ, ೧೯೭೮, 'ಮಲೆನಾಡ ಜಾನಪದ ಸಂಪ್ರದಾಯಗಳು' ಪುಸ್ತಕ ಚಿಲುಮೆ ಪ್ರಕಾಶನ, ಮೈಸೂರು.

೩. ಉಪಾಧ್ಯಾಯ ಕೆ.ಎಸ್., ೧೯೯೪, 'ಜಾನಪದ ಕಲೆ ಮತ್ತು ಬದುಕು' ಕರ್ನಾಟಕ ಸಂಘ, ಪುತ್ತೂರು.

೪. ಕಲಬುರ್ಗಿ ಎಂ.ಎಂ., ೧೯೮೬, 'ಸಮಗಾರ ದೇವರಿಗೆ ಮುಚ್ಚಿಪೆಟ್ಟು ಇತ್ಯಾದಿ' ಉದಯವಾಣಿ, ದೀಪಾವಳಿ ಸಂಚಿಕೆ.

೫. ಕಲಬುರ್ಗಿ ಎಂ.ಎಂ., ೧೯೯೪, 'ಕರ್ನಾಟಕದ ಕೈಫಿಯತ್ತುಗಳು' ಮೆಕೆಂಝಿ ಸಂಪುಟ, ಕನ್ನಡ ವಿ.ವಿ. ಹಂಪಿ.

೬. ಕಲಬುರ್ಗಿ ಎಂ.ಎಂ., ೧೯೯೦, 'ಉತ್ತರ ಕರ್ನಾಟಕದ ಜನಪದ ಪದ್ಯ ಸಾಹಿತ್ಯ' ಕರ್ನಾಟಕ ವಿ.ವಿ.ಧಾರವಾಡ.

೭. ಕಲಬುರ್ಗಿ ಎಂ.ಎಂ., ೧೯೯೪, 'ಕರ್ನಾಟಕದ ಕೈಫಿಯತ್ತುಗಳು' ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ.

೮. ಕಮಲಾ ಹೆಮ್ಮಿಗೆ, ೧೯೯೪, 'ಆಭರಣಗಳು ಕರಕುಶಲ ಕಲೆಗಳ ವಿಶ್ವಕೋಶ' ಕರ್ನಾಟಕ ವಿ.ವಿ.ಧಾರವಾಡ.

೯. ಕರೀಗೌಡ ಬೀಚನಹಳ್ಳಿ, ೨೦೦೦, 'ಕರಕುಶಲ ಕಲೆಗಳು' ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ.

೧೦. ಕಾಳೆ ಕೆ.ವಿ., ೨೦೦೦, 'ಕರ್ನಾಟಕದ ಚಿತ್ರಕಲೆಯಲ್ಲಿ ಬಣ್ಣದ ಬಳಕೆ' ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ.

೧೧. ಕಾಳೇಗೌಡ ನಾಗವಾರ, ಜಿ.ವಿ. ಆನಂದ ಮೂರ್ತಿ (ಸಂ) ೧೯೯೭, 'ಶಾಂತವೇರಿ ಗೋಪಾಲಗೌಡ ನೆನಪಿನ ಸಂಪುಟ' ಪ್ರ[illegible]ರಾಂಗ ಕನ್ನಡ ವಿ. ವಿ ಹಂಪಿ.

೧೨. ಕಾಳೇಗೌಡ ನಾಗವಾರ, ಡಾ. ನಟರಾಜ್ ಹುಳಿಯಾರ್ (ಸಂ) ೧೯೯೭, 'ಸ್ವಾತಂತ್ರ್ಯದ ಅಂತರ್ಜಾಲ' ಕರ್ನಾಟಕ ಸರ್ಕಾರ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೧೩. ಕಾಳೇಗೌಡ ನಾಗವಾರ, ಎಸ್. ಹುಚ್ಚಪ್ಪ ಮಾಸ್ತರ (ಸಂ), ೨೦೦೦, 'ಗಿರಿಜನ ಸಂಸ್ಕೃತಿ' ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಬೆಂಗಳೂರು.

೧೪. ಕೊಟ್ರಶೆಟ್ಟಿ ಎಂ.ಜಿ., ೧೯೯೪, 'ಜಾನಪದ ಸಾಹಿತ್ಯ ದರ್ಶನ', ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿ.ವಿ. ಧಾರವಾಡ.

೧೫. ಗಂಗಾಧರ ದೈವಜ್ಞ, ೨೦೦೦, 'ಬುಡಕಟ್ಟು ಸಮಾಜ ಹುಟ್ಟು ಸಾವಿನ ನಡುವೆ' ಬುಡಕಟ್ಟು ಅಧ್ಯಯನ ಮಾಲೆ, ಕನ್ನಡ ವಿ.ವಿ ಹಂಪಿ.

೧೬. ಗಣಪತಿಯಪ್ಪ ಎಚ್., ೧೯೯೬, 'ಕಾಗೋಡು ರೈತ ಸತ್ಯಾಗ್ರಹ ಮತ್ತು ಗೋಪಾಲಗೌಡರು' ಕಾಳೇಗೌಡ ನಾಗವಾರ ಜಿ.ವಿ. ಆನಂದಮೂರ್ತಿ (ಸಂ) ೧೯೯೭, 'ಶಾಂತವೇರಿ ಗೋಪಾಲಗೌಡ ನೆನಪಿನ ಸಂಪುಟ' ಪ್ರಸಾರಾಂಗ ಕನ್ನಡ ವಿ. ವಿ ಹಂಪಿ.

೧೭. ಗುಂಡಾ ಜೋಯಿಸ್, ೧೯೬೧, 'ಕೆಳದಿಯ ಸಂಕ್ಷಿಪ್ತ ಇತಿಹಾಸ' ಕೆಳದಿ.

೧೮. ಗೋಕಾಕ್ ವಿ.ಕೃ. ೧೯೭೮, 'ಇಳೆಯ ನೆಲೆ' ಮೈಸೂರು ವಿ.ವಿ. ಮೈಸೂರು.

೧೯. ಚಲುವೆಗೌಡ ತ.ಬಿ. ೧೯೭೮. 'ಕೆಲವು ಜಾನಪದ ಸಂಪ್ರದಾಯಗಳು' ತಳಗವಾಡಿ ಪ್ರಕಾಶನ. ಬೆಂಗಳೂರು.

೨೦. ಚಿದಾನಂದ ಮೂರ್ತಿ ಎಂ., ೧೯೭೭. 'ಗ್ರಾಮೀಣ' ಬಾಪ್ಕೋಲ್ಕ ಪ್ರಕಾಶನ, ಬೆಂಗಳೂರು.

೨೧. ಜೋಗನ ಶಂಕರ, ೧೯೯೫, 'ಗ್ರಾಮ ಸಮಾಜ' ಜೀವ ಪ್ರಕಾಶನ, ಮೈಸೂರು.

೨೨. ತಿಪ್ಪೇಸ್ವಾಮಿ ಪಿ.ಆರ್.(ಸಂ) ೧೯೯೪, 'ಕಲಾಕೋಶ' ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು,

೨೩. ತಿಪ್ಪೇಸ್ವಾಮಿ ಪಿ.ಆರ್., ೧೯೯೮, 'ಜನಪದ ಚಿತ್ರ ಮತ್ತು ಶಿಲ್ಪ ಕಲೆ ಚಿತ್ರ' ಸುವರ್ಣ ಜಾನಪದ, ಕರ್ನಾಟಕ ಜಾನಪದ ಮತ್ತ ಯಕ್ಷಗಾನ ಅಕಾಡೆಮಿ, ಬೆಂಗಳೂರು.

೨೪. ದಾಸೇಗೌಡ ಜಿ.ವಿ., ೧೯೭೩, 'ನಮ್ಮ ಜಾನಪದ ನಂಬಿಕೆಗಳು' ಕನ್ನಡ ಅಧ್ಯಯನ ಸಂಸ್ಥೆ ಮೈಸೂರು.

೨೫. ದಿನೇಶ್ ಎ. ಜೆಕ್ಕಿ., ೧೯೯೫, 'ಆಭರಣಗಳ ಬಗೆಗೆ ದೃಷ್ಟಿಕೋನ' ಕರ್ನಾಟಕ ವಿ.ವಿ.ಧಾರವಾಡ.

೨೬. ಧರ್ಮಾರಾವ್ ತಾ.ಪಿ., ೧೯೯೨, 'ವಿವಾಹ ಹುಟ್ಟು ಮತ್ತು ಪೂರ್ವೋತ್ತರ' ನವಕರ್ನಾಟಕ ಪ್ರಕಾಶನ, ಬೆಂಗಳೂರು.

೨೭. ಸಂಜಮ್ಮಣ್ಣಿ ಎಂ., 'ಸಾಮಾಜಿಕ ಮಾನವ ಶಾಸ್ತ್ರ' ಮೈಸೂರು ವಿ.ವಿ.

೨೮. ನಾಗೇಶ ಎಚ್.ವಿ., ೧೯೯೬, 'ಭಾರತೀಯ ಗ್ರಾಮ' ಕನ್ನಡ ಅಧ್ಯಯನ ಸಂಸ್ಥೆ ಮೈಸೂರು.

೨೯. ನಾಗೇಶ ಎಚ್.ವಿ., ೧೯೮೮, 'ಗ್ರಾಮಾಂತರ' ಸುಜಾತಾ ಪ್ರಕಾಶನ, ಮೈಸೂರು.

೩೦. ನಾಯಕ್ ಎನ್.ಆರ್., ೧೯೯೬, 'ಶಿರಸಿಯ ಶ್ರೀ ಮಾರಿಕಾಂಬೆ ಮತ್ತು ಜಾತ್ರೆ' ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೩೧. ನಾಯಕ್ ಎನ್.ಆರ್., ೧೯೯೩, 'ಹಾಲಕ್ಕಿ ಒಕ್ಕಲಿಗರ ಸಂಸ್ಕೃತಿ' ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೩೨. ನಾಯಕ್ ಎನ್. ಆರ್., ೨೦೦೧. 'ಉ.ಕ.ಜಿಲ್ಲೆಯ ನಾಡವರ ಸಂಸ್ಕೃತಿ' ಜಾನಪದ ಪ್ರಕಾಶನ, ಹೊನ್ನಾವರ.

೩೩. ನಾಯಕ್.ಜಿ., ೧೯೯೭, 'ಕರ್ನಾಟಕ ಕಲೆಗಳು' ಕರ್ನಾಟಕ ಲಲಿತ ಕಲಾ ಅಕಾಡೆಮಿ ಬೆಂಗಳೂರು.

೩೪. ನಾಯಕ ಹಾ.ಮಾ., ೧೯೭೨. 'ಸಂಪಾದ'

೩೫. ನಾರಾಯಣ ಎಂ., ೧೯೯೩, 'ಗ್ರಾಮೀಣ ಮತ್ತು ನಗರ ಸಮಾಜಶಾಸ್ತ್ರ' ಚೇತನ ಬುಕ್ ಹೌಸ್, ಮೈಸೂರು.

೩೬. ನಾರಾಯಣ ಎಂ., ೧೯೯೩, 'ಗ್ರಾಮೀಣ ಮತ್ತು ನಗರ ಸಮಾಜ ಶಾಸ್ತ್ರ' ಚೇತನಬುಕ್ ಹೌಸ್, ಮೈಸೂರು.

೩೭. ಪಾಟೀಲ್ ಎಸ್.ಸಿ., ೧೯೯೫. 'ಜನಪದ ಚಿತ್ರಕಲೆ' ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು.

೩೮. ಪುರುಷೋತ್ತಮ ಬಿಳಿಮಲೆ, ೧೯೯೦. 'ಕರಾವಳಿ ಜಾನಪದ' ಮಂಗಳ ಗಂಗೋತ್ರಿ ಮಂಗಳೂರು.

೩೯. ಪೂರ್ಣಚಂದ್ರ ತೇಜಸ್ವಿ ಕೆ.ಪಿ., ೧೯೯೭. 'ಲೋಹಿಯಾ ಬರಹಗಳು' ಕಾಳೇಗೌಡ ನಾಗವಾರ, ನಟರಾಜ್ ಹುಳಿಯಾರ್ (ಸಂ) ೧೯೯೭. 'ಸ್ವಾತಂತ್ರ್ಯದ ಅಂತರ್ಜಲ' ಕರ್ನಾಟಕ ಸರ್ಕಾರ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು.

೪೦. ಬೋರಲಿಂಗಯ್ಯ ಹಿ.ಚಿ., ೧೯೯೧. 'ಗಿರಿಜನ ನಾಡಿಗೆ ಪಯಣ' ರಾಶಿರೊಟ್ಟಿ ಪ್ರಕಾಶನ. ಬೆಂಗಳೂರು.

೪೧. ಬೋರಲಿಂಗಯ್ಯ ಹಿ.ಚಿ., ೧೯೯೬. 'ಕಾಡು ಕಾಂಕ್ರೀಟ್ ಮತ್ತು ಜಾನಪದ' ಅಕ್ಷರ ಪ್ರಕಾಶನ ಹೆಗ್ಗೋಡು.

೪೨. ಬೋರಲಿಂಗಯ್ಯ ಹಿ.ಚಿ., ೨೦೦೧. 'ವಿಸ್ಮೃತಿ ಮತ್ತು ಸಂಸ್ಕೃತಿ' ಪಿ.ವಿ.ಜಿ. ಪಬ್ಲಿಕೇಷನ್ ಬೆಂಗಳೂರು.

೪೩. ಬೋರಲಿಂಗಯ್ಯ ಹಿ.ಚಿ., 'ಕರ್ನಾಟಕ ಕಲೆಗಳ ಕೋಶ' ಪ್ರಸಾರಾಂಗ ಕನ್ನಡ ವಿ.ವಿ.ಹಂಪಿ.

೪೪. ಬೋರಲಿಂಗಯ್ಯ ಹಿ.ಚಿ., ೨೦೦೨, 'ಕಾಗೋಡು ಚಳುವಳಿ' (ಸುವರ್ಣ ಸಂಪುಟ), ಎಸ್. ಹುಚ್ಚಪ್ಪ ಮಾಸ್ತರ (ಸಂ) ಜಾನಪದ ಲೋಕ, ಸಾಗರ

೪೫. ಭಾನುಮತಿ ವೈ.ಸಿ. ೧೯೯೪, 'ಮಲೆನಾಡಿನ ಶೈವ ಒಕ್ಕಲಿಗರು' ಕೇಶವ ಪ್ರಕಾಶನ, ಮೈಸೂರು

೪೬. ಮಹೇಶ್ವರಯ್ಯ ಎಚ್. ಎಮ್., ೧೯೯೮, 'ಹಚ್ಚೆ ಒಂದು ಜಾನಪದ ಕಲೆ' ಸುವರ್ಣ ಜಾನಪದ, ಕರ್ನಾಟಕ ಜಾನಪದ ಮತ್ತ ಯಕ್ಷಗಾನ ಅಕಾಡೆಮಿ ಬೆಂಗಳೂರು.

೪೭. ಮೈಲಾರಪ್ಪ ಬಿ.ಸಿ., ೧೯೯೮, 'ಗ್ರಾಮೀಣ ಬದುಕು ಮತ್ತು ಸಾಮಾಜಿಕ ಚಳುವಳಿ' ಬೆಂಗಳೂರು ವಿಶ್ವವಿದ್ಯಾಲಯ.

೪೮. ರಮೇಶ ಸ.ಚಿ. ೧೯೯೪, 'ಉಪ್ಪಾರರ ಮದುವೆ ಸಂಪ್ರದಾಯಗಳು' (ಎಂ.ಫಿಲ್ ಪ್ರಬಂಧ) ಕನ್ನಡ ವಿ.ವಿ ಹಂಪಿ.

೪೯. ರಮೇಶ ಸ.ಚಿ., ೧೯೯೪, 'ಶಿಕಾರಿ ಪರಂಪರೆ' ಕನ್ನಡ ವಿ.ವಿ. ಹಂಪಿ.

೫೦. ರಮೇಶ ಸ. ಚಿ., ೨೦೦೧, 'ಸಂಕ್ರಾಂತಿ ಪದಗಳು'. ಮಂಜುನಾಥ ಬೇವಿನಕಟ್ಟಿ. (ಸಂ) ಜಾನಪದ ಕರ್ನಾಟಕ, ಕನ್ನಡ ವಿ.ವಿ ಹಂಪಿ.

೫೧. ರಮೇಶ ಸ.ಚಿ., ೨೦೦೧, 'ದೀಪಾವಳಿ ಹಬ್ಬದ ಹಾಗಿನ ಅಂಟಿಕೆ-ಪಂಟಿಕೆ' ಶ್ರೀಕಂಠ ಕೂಡಿಗೆ, ಜಾನಪದ ವಿವಿಧ ಮುಖಗಳು. ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೫೨. ರಮೇಶ ಸ.ಚಿ., ೨೦೦೧, 'ಬೇಟೆ ಸಾಂಸ್ಕೃತಿಕ ಪದಕೋಶ' ಪ್ರಸಾರಾಂಗ ಕನ್ನಡ ವಿ.ವಿ

೫೩. ರಾಮಚಂದ್ರ ಶರ್ಮ ಎಚ್. ಕೆ., ೧೯೯೧. 'ಕಲೆ ಮತ್ತು ಸಾಮಾಜಿಕ ಜೀವನ'

೫೪. ಲಕ್ಷ್ಮಣ ತೆಲಗಾವಿ, ೧೯೯೯, 'ಹಿಂದುಳಿದ ವರ್ಗಗಳು ಮತ್ತು ದಲಿತ ಚಳುವಳಿಗಳು' ಪ್ರಸಾರಾಂಗ ಕನ್ನಡ ವಿ.ವಿ ಹಂಪಿ.

೫೫. ಲಿಂಗಯ್ಯ ಡಿ., ೧೯೯೩, 'ಕರ್ನಾಟಕದ ಗ್ರಾಮ ದೇವತೆಗಳು' ಐ.ಬಿ.ಹೆಚ್. ಪ್ರಕಾಶನ, ಬೆಂಗಳೂರು.

೫೬. ವತ್ಸಲಾ ಅಯ್ಯಂಗಾರ್, ೧೯೯೪. 'ಅಲಂಕಾರ ಭೂಷಿತ ಆಭರಣಗಳು' ಕರ್ನಾಟಕ ವಿ.ವಿ.ಧಾರವಾಡ.

೫೭. ವೀಣಾ ಎಂ.ಪಿ., ೨೦೦೦, 'ಮನೆ ಸಮಾಜ ಮತ್ತು ಸಂಸ್ಕೃತಿ' ನೆಲಮನೆ ಪ್ರಕಾಶನ, ಶ್ರೀರಂಗಪಟ್ಟಣ ಮಂಡ್ಯ.

೫೮. ಶಂಕರನಾರಾಯಣ ತೀ. ನಂ., ೧೯೮೨, 'ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು' ಮೈಸೂರು ವಿ.ವಿ.

೫೯. ಶಾಂತವೇರಿ ಗೋಪಾಲಗೌಡ, ೧೯೯೭, 'ಕಾಗೋಡು ಚಲೋ' 'ಶಾಂತವೇರಿ ಗೋಪಾಲಗೌಡ ನೆನಪಿನ ಸಂಪುಟ' ಡಾ. ಕಾಳೇಗೌಡ ನಾಗವಾರ, ಜಿ.ವಿ. ಆನಂದ ಮೂರ್ತಿ (ಸಂ) ಪ್ರಸಾರಾಂಗ ಕನ್ನಡ ವಿ.ವಿ.

೬೦. ಶ್ರೀಕಂಠ ಕೂಡಿಗಿ, ೧೯೮೨, ಭೂಮಿಹುಣ್ಣಿಮೆ.

೬೧. ಸುಂದರ ಅ. (ಸಂ) ೧೯೯೭, 'ಕರ್ನಾಟಕ ಚರಿತ್ರೆ ಸಂಪುಟ-೧' ಕನ್ನಡ ವಿ.ವಿ. ಹಂಪಿ.

೬೨. ಹಿರೇಮಠ ಎಸ್.ಎಸ್., ೧೯೯೨, 'ಹಬ್ಬಗಳು' ಸಮತಾ ಪ್ರಕಾಶನ ಹರಪನಹಳ್ಳಿ.

೬೩. ಹುಚ್ಚಪ್ಪ ಮಾಸ್ತರ್ ಎಸ್. (ಸಂ) ೨೦೦೨. 'ಕಾಗೋಡು ಚಳುವಳಿ ೫೦ ವರ್ಷ' (ಸ್ಮರಣ ಸಂಚಿಕೆ) ಮಲೆನಾಡು ಜಾನಪದಲೋಕ, ಸಾಗರ.

1. Edwin Jayads. 1995. 'Tribals in our Global Village' - - Pan media Bangalore-
2. Hawanur L.G., 1975. 'Karnataka Backward Classess Commission Report' Government press, Bangalore.
3. Hayavadana Rao.C., 1929. 'Mysore Gazeter (Vol II part I- Historical) B.R. Publisher Corporation, New Delhi.
4. Jagadish ayyar P.V., 1989. Sourth Indian Festivities' - Asian Educational Services, New Delhi.
5. Nanjundayya H.V. and Iyear. A I. K., 1930. 'The Mysore Tribes and Castes' (Vol IV) - Mysore University.
6. Nirmal Kumar Bose. 1972. 'Some Indian Tribes' -National book trust. New Delhi.
7. Ramadhamija 'Indian Jewllery' Image Indian Heritag of Indian arts & crafts
8. Thurstan and Rangachar k., 1909 'Caste and Tribes of Southern (Vol. IV) Asian Educational Services, New Delhi.


**ನಿಘಂಟು**


೧. ಅಚ್ಚಗನ್ನಡ ನುಡಿಕೋಶ, ೧೯೯೩. ಪುಸ್ತಕ ಪ್ರಕಾಶನ ಮೈಸೂರು.

೨. ಕನ್ನಡ - ಕನ್ನಡ ನಿಘಂಟು (೨ ನೇ ಸಂ) ಕನ್ನಡ ಸಾಹಿತ್ಯ ಪರಿಷತ್ ಬೆಂಗಳೂರು.

೩. ಕನ್ನಡ-ಕನ್ನಡ ಶಬ್ದಕೋಶ- ೧೯೯೭, ಎಮ್.ಎಸ್. ಶಾಬಾದಿಮಠ ಬುಕ್ ಡಿಪ್ಪೊ, ಗದಗ.

೪. ಕನ್ನಡ ಜಾನಪದ ವಿಶ್ವಕೋಶ ೧೯೮೫, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು.

೫. ಕರ್ನಾಟಕ ಜಾನಪದ ವಿಶ್ವಕೋಶ ಸಂ ೧, ೨., ೧೯೮೫, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು.

೬. ಕರ್ನಾಟಕ ಬುಡಕಟ್ಟುಗಳು ೧೯೯೮, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

**ಪತ್ರಿಕೆ**

೧. ಕನ್ನಡ ಪ್ರಭ

೨. ಪ್ರಜಾವಾಣಿ (ಸಾಪ್ತಾಹಿಕ ಪುರವಣಿ)

೩. ಮಣ್ಣಿನ ವಾಸನೆ

೪. ವನರಾಜ (ಬೆಳ್ಳಿ ಹಬ್ಬದ ವಿಶೇಷಾಂಕ)

೫. ವಿಜಯ ಕರ್ನಾಟಕ

೬. ಸುಧಾ (ವಾರ ಪತ್ರಿಕೆ)

# ಜನಪದ ಸಾಹಿತ್ಯ

## ಜನಪದ ಹಾಡುಗಳು

### ಆರಿದ್ರ ಮಳೆಯ ಹಾಡು

ತಂದೆ ಬೀರಪ್ಪನ ಕಾಜವಳಿ ತನಕೆ ಶೋಬಾನ ಅನ್ನಿರಿ

ದರುಕನೊಬ್ಬಳಿಸಿ ಗುಡಿ ಕಟ್ಟೀ ಶೋಬಾನ ಅನ್ನಿರಿ

ದರಕನು ಒಬ್ಬಳಿಸಿ ಗುಡಿ ಕಟ್ಟೀ ಬೀರಪ್ಪ

ಜಾಗ ಒಳ್ಳೆದೆಂದೇ ನೆಲಗೊಂಡೆ ಶೋಬಾನ ಅನ್ನಿರೆ

ಗುತ್ತಿಂದ ಎಳೆ ಬಂದೆ ಗುತ್ತಿಂದ ಗಳ ಬಂದೇ

ಗುತ್ತಿಂದ ಜಾರಿ ಮಗ ಬಂದೆ ಗುತ್ತಿಂದ ಜಾರಿ ಮಗ ಬಂದು ಕಟ್ಟ್ಯಾರೆ ಶೋಬಾನ ಅನ್ನಿರೆ

ವಾಲೆ ಮಾಚುತ್ತಲೆ ಹೊಸಗುಡಿ ಶೋಬಾನೆ,,

ಹೊಸಗುಡಿ ಬೀರಪ್ಪನ ಶೋಬಾನ ಅನ್ನಿರೆ,,

ತಾವಳ್ಳೆದೆಂದೇ ನೆಲೆ ಗುಂದ ಶೋಬಾನೆ,,

ಕಾಯಿ ಹೇರಿ ಬಂದು ಬಾಗಲಗು ನಿಂದಾವೆ ಶೋಬಾನ ಅನ್ನಿರೆ

ತಂದೆ ಬೀರಪ್ಪನ ಸುಳವಿಲ್ಲ ಶೋಬಾನೆ,,

ತಂದೆ ಬೀರಪ್ಪ ಸುಳವಿಲ್ಲ, ಆ ಹೆರತಾಕಿ ಬರಿ ಅವರ ವಳವಿಕೆ ಶೋಬಾನ,,

ಬಾಳೆಹಣ್ಣು ಹೇರ ಬಂದು ಬಾಗಲಿಗು ನಿಂದಂತಿ ಶೋಬಾನ ಅನ್ನಿರೆ

ತಂದೆ ಬೀರಪ್ಪನ ಸುಳವಿಲ್ಲ ಶೋಬಾನೆ,,

ತಂದೆ ಬೀರಪ್ಪನ ಸುಳವಿಲ್ಲ ಅಪೇರ ಶೋಬಾನ ಅನ್ನಿರೆ

ತೂರೆ ಬಲ್ಲಿ ಅವನ ವಳವಿಕೆ ಶೋಬಾನೆ,,

ಮುತ್ತಿನ ದೋಳ್ಳೆ ಮತ್ತೆಲ್ಲಿ ನುಡದವೆ ಶೋಬಾನ ಅನ್ನಿರೆ

ಚಿಕ್ಕ ಪಟ್ಟಣದೆ ನೇ [illegible] ರೆ [illegible] ಬಾನ,,

ಚಿಕ್ಕ ಪಟ್ಟಣದೆ ನೆಲಸ್ಸಿರ [illegible] ಗೆ ಶೋಬಾನ ಅನ್ನಿರೆ

ಮುತ್ತಿನ ಡೊಳ್ಳೆ ನುಡದಾವೆ ಶೋಬಾನೆ,,

ಕೆನ್ನೆ ವಲವಲಿದೆ ಕುಣವರಿಗೆ ಶೋಬಾನೆ,,

ಕೆನ್ನೆ ವಲವಲಿದೆ ಕುಣಾಯ ಜಣ್ಣಾಯ್ಯಗೆ ಶೋಬಾನ ಅನ್ನಿರೆ

ನ್ಯಾವಳ ಒಪ್ಪೆ ಕೊರಳಿಗೆ ಶೋಬಾನೆ

## ನೀರು ತುಂಬುವ ಹಾಡು

ಆಚೇರ ಬಲಗೊಂಚೆ ಈಚೇರ ಬಲಗೊಂಚೆ

ಎಳ್ಳು ಜೀರಿಗೆಯ ಬಲಗೊಂಚೆ

ಎಳ್ಳು ಜೀರಿಗೆಯ ಬಲಗೊಂಚೆ ಭೂಮಿಕವ್ವ

ಎಲ್ಲರ ಸೋಬಾನಕ್ಕೆ ಇವಮೊಲು (೧)

ಆಚೇರ ಬಲಗೊಂಚೆ ಈಚೇರ ಬಲಗೊಂಚೆ

ಕಾಕ ಜೀರಿಗೆ ಬಲಗೊಂಚೆ

ಕಾಕ ಜೀರಿಗೆ ಬಲಗೊಂಚೆ ಭೂಮಿಕವ್ವ

ಎಲ್ಲರ ಸೋಬಾನಕ್ಕೆ ಬಲಗೊಂಚೆ (೨)

ಬಂದ ಸೋಡಕೆ ಒಂದೇ ಗಂಧದ ಬಟ್ಟೆ

ಬಂದೇ ಸುರುವರದ ಕೊನೆ ಹಣ್ಣು

ಬಂದೇ ಸುರುವರದ ಕೊನೆ ಹಣ್ಣು ತಕ್ಕಂಡು

ಮಾಡ್ಯಾರೆ ಗಂಗವ್ವನ ಪೂಜೇಯ (೩)

ಆರಲು ಬೆಳಕೀಲಿ ನಾರಿಯರು ದೇವ ಗೊಡತುಂಬಿ

ತುಂಬೆ ಹೂ ಮೇಲೆ ಉದಯ್ಯಾವ ಗಂಗವ್ವ

ತುಂಬಿ ಕೊಡು ತಾಯಿ ನೀ ದಾನವ (೪)

ತುಂಬಿ ಕೊಡು ತಾಯಿ ನೀ ದಾನವ ನಮ್ಮನೆಯ

ನಿಸ್ತ್ರೇಯ ಮಗನ ಜಳಕಕೆ

ಎರಡೆಲೆ ಎರಡಡಿಕೆ ಎರಡೇ ಗಂಧದ ಬಟ್ಟೆ

ಎರಡೆ ಸುರುವರದ ಕೊನೆ ಹಣ್ಣು

ಎರಡೇ ಸುರುವರದ ಕೊನೆ ಹಣ್ಣು ತಕ್ಕೊಂಡು

ಮಾಡ್ಯಾರೆ ಗಂಗವ್ವನ ಪೂಜೇಯ (೫)

ತಿಂಗಳ ಬೆಳಕೀಲಿ ನಾರಿಯರು ದೇವಗೊಡ ತುಂಬಿ

ಹುಣಸೇ ಹೂಮ್ಯಾಲೆ ಉದಯ್ಯಾವು

ಹುಣಸೇ ಹೂವು ಮ್ಯಾಲೆ ಉದಯ್ಯಾವು ಗಂಗಮ್ಮ

ತುಂಬಿಕೊಡು ತಾಯಿ ನೀ ದಾಸವ

ತುಂಬಿಕೊಡು ತಾಯಿ ನೀ ದಾಸವ ನಮ್ಮನೆಯ

ಕನ್ಯೆಯ ಮಗನ ಜಳಕಕೆ

॥ ೫ ॥

**ಗೌರಮ್ಮನಿಗೆ ಬಳುವಳಿ ಕೊಡುವ ಹಾಡು**

ನಾಗಭೂಷಣ ತನ್ನ ನಾರಿ ಶಿರಿಗೌರಿ ಹೋಗಿ ಬಾರೆಂದನು

ತವರಿಗೆ ಜಯಮಂಗಳ ನಿತ್ಯ ಶುಭ ಮಂಗಳೇ„

ಮಂದಿ ಒಳಗೆ ಗೌರಿ ಬಂದು ಮಾತನಾಡೆ ಒಳಗೆಲ್ಲ

ಸುಖವೇನೇ ಜಯಮಂಗಳ ನಿತ್ಯ ಶುಭ ಮಂಗಳೇ„

ತಂದೆ ಗಿರಿ ರಾಜರು ಬಹುಕಾಲ ಹಿರಿಯರು ನಿನ್ನರು

ನಿನಗೇನು ಕೊಟ್ಟರು ಜಯ ಮಂಗಳ ನಿತ್ಯ ಶುಭ ಮಂಗಳೇ„

ಒಂದೇರು ಸಣ್ಣಕ್ಕಿ ಒಂದೇರು ಬೇಳೆ ಬೆಲ್ಲ ಒಂದು ಮಣಲವಂಗ

ಹೇರ ಕಾಯಿ ಕೊಟ್ಟಾರು ನಮ್ಮಾರು ನಿನ್ನೇನು ಕೊಟ್ಟರು

ಜಯಮಂಗಳೇ ನಿತ್ಯ ಶುಭ ಮಂಗಳೇ„

ಎರಡ ಹೇರು ಸಣ್ಣಕ್ಕಿ ಎರಡ ಹೇರು ದೊಡ್ಡಕ್ಕಿ ಎರಡು ಹೇರು

ಬೇಳೆ ಬೆಲ್ಲ ಎರಡು ಮಣ ಲವಂಗ ಹೇರ ಕಾಯಿ ಕೊಟ್ಟರು

ನಮ್ಮಾರು ನಿನ್ನೇನು ಕೊಟ್ಟರು ಜಯ ಮಂಗಳ ನಿತ್ಯ ಶುಭ ಮಂಗಳೇ„

ಎಲ ವನಕಿ ಕೀಲಂಕಿ ಕೊಪ್ಪರಿಗೆ ಹೊನ್ನ ಕೊಟ್ಟಾರು

ಎಂಬತ್ತಾ ಸಾವಿರ ಆನೆ ಒಂಟೆ ಕುದುರೆಗಳೇ ನೂರುಗಾಲ ಬಚ್ಚಿಟ್ಟುವ

ವರಗಳಾ ಕೊಟ್ಟರು ನಮ್ಮಾರು ನಿನ್ನೇನು ಕೊಟ್ಟಾರು

ಜಯಮಂಗಳೇ ನಿತ್ಯ ಶುಭ ಮಂಗಳೇ„

ಕಾಲಿಗೆ ಕಾಲುಂಗುರ ನಡುವಿಗೆ ವಡ್ಡಾನ ತೊಡುವ ಕುಪ್ಪಸದ

ಮೇಲೆ ನಲಿದಾಡ ಗಿಣಿಗಳೇ ಕಡಿಲೆ ಕಾಳುಂಟು

ಮುತ್ತು ಅಕ್ಕಿ ಇಬ್ಬರು ನಿಮ್ಮ ಲಗುನಕೆ

ಜಯಮಂಗಳೇ ನಿತ್ಯ ಶುಭಮಂಗಳೇ„

ಮುತ್ತಿನ ಮೂಗುತಿ ರತ್ನಾದ ಸರ ಹೊಚೆಲ್ಲಿ ಹೊಳೆವಂತ

ವಾಲೆಗಳೇ ಮತ್ತೊಂದು ಕರಿಮಣಿ ತಾಳಿಯನ್ನಿಟ್ಟಾರು

ನನ್ನಾರು ನಿನ್ನೇನು ಕೊಟ್ಟಾರು

ಜಯ ಮಂಗಳ ನಿತ್ಯ ಶುಭ ಮಂಗಳೇ॥

ಕಟ್ಟಾಣಿ ಕಡಿಮುತ್ತು ಕಂಚಿ ಕಾಸಿನ ಸರ ಗೋಧಿ ಪತ್ರಳ್ಳಿ

ಹತ್ತಾನೇ ರತ್ನಾದ ಉಂಗುಲ ಕೊಟ್ಟಿರು

ನನ್ನಾರು ನಿನ್ನೇನು ಕೊಟ್ಟಾರು

ಜಯ ಮಂಗಳ ನಿತ್ಯ ಶುಭ ಮಂಗಳೇ॥

ಹಾನದು ಹಸಮಂಚ ಜೇನದು ಬೀಸಣಿಗೆ ಐದಾಸೆ

ವರವಾನ ಗೂರಿಗಡಿಗಳ ಕೊಟ್ಟಾರು

ನನ್ನಾರು ನಿನ್ನೇನು ಕೊಟ್ಟಿರು

ಜಯಮಂಗಳ ನಿತ್ಯ ಶುಭ ಮಂಗಳೇ॥

ಇಷ್ಟೆಲ್ಲಾ ಕೊಟ್ಟಿರು ನನ್ನು ನಿನಗಿಟ್ಟಾರು

ಸುಳ್ಳೆ ಕರೆಂಬಂದು, ಈಶ್ವರ ಸ್ವಾಮಿ ಕೇಳಂದಳೋ ಹರಸಿ

ಜಯ ಮಂಗಳ ನಿತ್ಯ ಶುಭಮಂಗಳೇ॥

## ಗೌರಮ್ಮನ ಮುಖ ತೊಳೆಯುವ ಹಾಡು

ಹಸನಾದ ಮಂಚ ಹಾಸಿ ಕುಸಲಾದ ತಲಿದಿಂಬ

ಬಿಸಿನೀರ ಬಾವಿ ಮನಿ ಮುಂದೆ ಏಳವ್ವ॥

ಪಾರ್ವತಿ ದೇವಿ ಏಳ ಏಳವ್ವ

ಪಾರ್ವತಿ ನಂದ ಏಳೆ

ಚಿನ್ನ ನೀರ ಬಾವಿ ಮನಿಮುಂದೆ ಗೌರಮ್ಮನ

ಸಣ್ಣಾಳೆದ್ದು ಮುಖವ ತೊಳೆದಳೆ ಏಳವ್ವ॥

ಪಾರ್ವತಿ ನಂದ ಏಳು ಏಳವ್ವ

ಪಾರ್ವತಿ ನಂದ ಏಳೆ

ಮುಖವನ್ನಾ ತೊಳೆದಳೆ ಮಜ್ಜನಕೆ ನೀಡ್ಯಾಳೆ

ಬಸವನ ಇಬೂತಿ ಎಸಳು ಹಚ್ಚಿ ಏಳವ್ವ॥

ಪಾರ್ವತಿ ದೇವಿ ಏಳೆ ಏಳವ್ವ

ಪಾರ್ವತಿ ನಂದ ಏಳೆ

ಹಣ್ಣ ಅಡಿಕೆ್ಽ ಹಸಿ ಚಪ್ಪರ ಹೊನ್ನಿನ ತಲೆದಿಂಬ

ತಣ್ಣೀರ ಬಾವಿ ಮುಂದೇ ಏಳವ್ವಽಽ

ಪಾರ್ವತಿ ದೇವಿ ಏಳೆ ಏಳವ್ವ

ಪಾರ್ವತಿ ನಂದ ಏಳೆ

ತಣ್ಣನೀರ ಬಾವಿ ಮನಿಮುಂದೆ ಗೌವರವ್ವನ

ದೊಡ್ಡವರೆದ್ದು ಮುಖವ ತೋಳುದಾಳೆ ಏಳವ್ವ

ಪಾರ್ವತಿ ದೇವಿ ಏಳೆ ಏಳವ್ವಽಽ

ಪಾರ್ವತಿ ನಂದ ಏಳೆ

ಮುಖವನ್ನು ತೊಳುದಾಳೆ ಮಜ್ಜನಕೆ ನೀಡ್ಯಾಳೆ

ಹೊಂದಿಟ್ಟಳು ಗಂಧ ಕಣಕಪ್ಪ

ಏಳವ್ವ ಪಾರ್ವತಿ ದೇವಿ ಏಳೆ ಏಳವ್ವಽಽ

ಸಣ್ಣ ಸಣ್ಣ ಮಕ್ಕಳು ಸಣ್ಣ ಸಿಬ್ಬಲ ಹಿಡದು

ಆರೇಳ ಗುಡ್ಡೇ ತಿರಿಗ್ಯಾರೆ ಏಳವ್ವ

ಪಾರ್ವತಿ ದೇವಿ ಏಳೆ ಏಳವ್ವಽಽ

ಪಾರ್ವತಿ ನಂದ ಏಳೆ

ಆರು ಏಳು ಗುಡ್ಡೆ ತಿರುಗಿ ಹೂವು ತಂದು

ತಾಯಿ ಗವರಮ್ಮ ವನ ಮಾಲೆ ಏಳವ್ವ

ಪಾರ್ವತಿದೇವಿ ಏಳೆ ಏಳವ್ವಽಽ

ಪಾರ್ವತಿ ನಂದ ಏಳೆ

ಮುತ್ತೈದೆ ಹೆಣ್ಣಮಕ್ಕಳು ಮುತ್ತಿನ ಸಿಬ್ಬಲ ಹಿಡದು

ಹತ್ತೆಂಟ ಗುಡ್ಡೆ ತಿರಿಗ್ಯಾರೆ ಏಳವ್ವ

ಪಾರ್ವತಿ ದೇವಿ ಏಳೆ ಏಳವ್ವ

ಪಾರ್ವತಿ ನಂದ ಏಳೆ

ಹತ್ತೆಂಟು ಗುಡ್ಡ ತಿರುಗಿ ಹೂವ ತಂದು

ತಾಯಿ ಗವರಮ್ಮ ವನಮಾಲೆ ಏಳವ್ವ

ಪಾರ್ವತಿ ದೇವಿ ಏಳೆ ಏಳವ್ವ

ಪಾರ್ವತಿ ನಂದ ಏಳಿ

ದೇಶದೇಶ ತಿರಿಗೆ ಬಾಸ ಹೊತ್ತು ನಾಬಂದೆ

ಈ ಕೂಸ ಕೈಯ ಬಿಡವಲದು ಏಳವ್ವ

ಪಾರ್ವತಿ ದೇವಿ ಏಳೆ ಏಳವ್ವ

ಪಾರ್ವತಿ ನಂದ ಏಳೆ

ಇದ ಕೂಸ ಕೈಯ ಬಿಡವಲದು

ಗೌವರಮ್ಮನ ಹಣ್ಣ ಕೊಟ್ಟೇನು ಬಿಡಕಂಡ ಏಳವ್ವ

ಪಾರ್ವತಿ ದೇವಿ ಏಳೆ ಏಳವ್ವ

ಪಾರ್ವತಿ ನಂದ ಎದ್ದು ಮುಖವ ತೊಳೆದಾಳೆ,,

## ಉಡಿ ತುಂಬುವ ಹಾಡು

ಪುಟ ಪುಟ ಮಕ್ಕಳಿರ ಪಟ್ಟೆಯ ನೆಲದೊಡೆ ಕಪ್ಪ ತಕ್ಕಳಿರೆ
ಗವರೀಗೇ ಶಿವೋ ಶಿವೋ ॥ ಪ ॥

ಕಪ್ಪ ತಕ್ಕಳಿಗೆ ಗವರಿಗು ನಾಳೆ ಬರುವ ಬೆನವಾಗು ತಕ್ಕಳಿರೆ
ನೆನಿಗಡಲೆ ಶಿವೋ ಶಿವೋ ॥ ೧ ॥

ಬೆನವಗು ತಕ್ಕಳಿರೆ ನೆನಿಗಡಲೆ ವಾಲೆ ತಕ್ಕಳಿರೆ
ಗವರೀಗೆ ಶಿವೋ ಶಿವೋ ॥ ೨ ॥

ವಾಲೆ ತಕ್ಕಳಿರೆ ಗವರೀಗು ನಾಳೆ ಬರುವ ಬೆನವಾಗು ತಕ್ಕಳಿರೆ
ಗೊನಿ ಹಣ್ಣೇ ಶಿವೋ ಶಿವೋ ॥ ೩ ॥

ಹಾಲಗಜ್ಜಾಯ ನೀಲದ ಚಿಬ್ಬಲ ತುಂಬೆ ಸಾಲೆಯ ಸೀರೆ
ಸವಿಯಗೆ ಶಿವೋ ಶಿವೋ ॥ ೪ ॥

ಸಾಲೆಯ ಸೀರೆ ಸವಿಯಾಗೆ ಹೋಗನಿ ಬನ್ನಿ ಸೀತೆ ಸಿರಿ
ಗವರೀಯ ಕರವೋರೆ ಶಿವೋ ಶಿವೋ ॥ ೫ ॥

ತುಪ್ಪದ ಗಜ್ಜಾಯ ಮುತ್ತಿನ ಚಿಬ್ಬಲ ತುಂಬೆ ಪಟ್ಟೆಯ
ಸೀರೆ ಸವಿಯಾಗೆ ಶಿವೋ ಶಿವೋ ॥ ೬ ॥

ಪಟ್ಟೆಯ ಸೀರೆ ಸವಿಯಾಗಿ ಹೋಗನಿ ಬನ್ನಿ ಅಕ್ಕ ಗವರಿಯ
ಕರವೋರೆ ಶಿವೋ ಶಿವೋ ॥ ೭ ॥

ಬಾಳೆಯ ಕಾಯಿ ಬನದಲ್ಲಿ ಪಾಲ್ಯಾಡುತ್ತಾ ಬಾಲ್ಯೆ ಪೆಟ್ಟಿಲನೆ
ಸುಡಿಸೋತ ಶಿವ್ವೋ ಶಿವ್ವೋ ॥ ೮ ॥

ಬಾಲ್ಯೆ ಪೆಟ್ಟಿಲನೆ ಸುಡಿಸುತೋಗನಿ ಬನ್ನಿ ಸೀತೆ ಗವರೀಯ
ಕರಿಮೋರೆ ಶಿವ್ವೋ ಶಿವ್ವೋ ॥ ೯ ॥

ಇಬತ್ತಿ ಉಂಡೆ ಬೆಳ್ಳಿಲ್ಲಿಟಗೊಂಡು ಕೇರ್ಯಾಗಿನ ಹೆಣ್ಣು ಮಕ್ಕಳೊಳ
ಗೊಂಡು ಹೊರಟಾರೆ ಶಿವ್ವೋ ಶಿವ್ವೋ ॥ ೧೦ ॥

ಅಣ್ಣಾದೀರೆಲ್ಲ ಬಣ್ಣದ ಚಾವಡಿ ತಂಕ ಕನ್ನೆ ನಮ ನೀರೆ
ಹೊಳಿತನಕ ಶಿವ್ವೋ ಶಿವ್ವೋ ॥ ೧೧ ॥

ಕನ್ನೆ ನಮನೀರೆ ಹೊಳಿತಂಕೋಗನಿ ಬನ್ನಿ ಅಕ್ಕ ಗವರೀಯ
ಕರೆಮೋರೆ ಶಿವ್ವೋ ಶಿವ್ವೋ ॥ ೧೨ ॥

ಗುತ್ತಿ ಹೊಳಿಯಾಗೆ ಹತ್ತೆಂಟ ಗಿಂಡೀ ಪೂಜೆ ನಿಸ್ತೇ ಹತ ಬೆಳ್ಳಿ
ನೆಲಕುರೆ ಶಿವ್ವೋ ಶಿವ್ವೋ ॥ ೧೩ ॥

ನಿಸ್ತೇ ಹತಬೆಳ್ಳಿ ನೆಲಕೂರೆ ಹೋಗನಿ ಬನ್ನಿ ತಾಯಿ ಗೌವರ ಏನ
ಕರವ್ಪೋರೆ ಶಿವ್ವೋ ಶಿವ್ವೋ ॥ ೧೪ ॥

ಗುತ್ತಿ ಹೊಳಿಯಾಗ ಮತ್ತಾತಕು ತಡವಾಗೆ ಅಕ್ಕ ಗವರವನ
ತಲಿ ಬಾಚೆ ಶಿವ್ವೋ ಶಿವ್ವೋ ॥ ೧೫ ॥

ಅಕ್ಕ ಗವರವನ ತಲಿ ಬಾಚಿ ಬಂಗಾರಾ ಕದೆ ಮತ್ತೊಂದರಗಳಿಗೆ
ತಡವಾಗೋ ಶಿವ್ವೋ ಶಿವ್ವೋ ॥ ೧೬ ॥

ಸಣ್ಣಳು ಗವರಮ್ಮ ತಲಿ ಬಾಚಿ ಹೂವಾ ಮುಡಿಸುವುದೆ
ಮತ್ತೊಂದರಗಳಿಗೆ ತಡವಾಗೆ ಶಿವ್ವೋ ಶಿವ್ವೋ ॥ ೧೭ ॥

ಕುಲಬಾವಿ ಕಂಕಣ ಬಾವಿ ಮಳ ಬಾವಿ ಮುತ್ತಿನ ಬಾವಿ
ಸೇದೊಯ್ಯ ಬಾವೇ ಶಿವ್ವೋ ಶಿವ್ವೋ ॥ ೧೮ ॥

ತುಂಬಿದ ಬಾವ್ಯಾಗೆ ಹೆಂಗಿದ್ದೆ ಗವರಮ್ಮ ಇತಾತಾ ಬಾರೊ
ದಿಡಿಸೂಸೇ ಶಿವ್ವೋ ಶಿವ್ವೋ ॥ ೧೯ ॥

ಇತತಾ ಬಾರೆ ದಿಡ ಸೂಸಿ ನಾವೇ ತಂದ ವಾಲೆ ಬಂಗಾರ
ಇಡತೀವೇ ಶಿವ್ವೋ ಶಿವ್ವೋ ॥ ೨೦ ॥

ಮುಂದಾತ ಬಾಃ ವಿಡ ಸೂಸಿ ನಾವೇ ತಂದೆ ಬಂದಿ
ಬಂಗಾರ ನಿಡತ್ರೀಪ್ರೋ ಶಿವ್ರೋ ಶಿವ್ರೋ ॥ ೨೧ ॥

ಸಣ್ಣಾಳು ಸಿರಿ ಗವರಿ ಶಿವ ಪೂಜೆ ಆಗೊತ್ತಿಗೆ ಆಕಾಶದ
ಗಂಟೆ ನುಡುದಾವೆ ಶಿವ್ರೋ ಶಿವ್ರೋ ॥ ೨೨ ॥

ನಿಸ್ತ್ರೀ ಗೌಪರಪನ ಶಿವ ಪೂಜೆ ಆಗೋತ್ತಿಗೆ ಭೂಲೋಕದ
ಗಂಟೆ ನುಡುದಾವೆ ಶಿವ್ರೋ ಶಿವ್ರೋ ॥ ೨೩ ॥

ಪಾಲಗರ ಮುಂದಾಗಿ ಗರತಿಯರ ಹಿಂದಾಗಿ ಶಿವರಾಯನ
ಮಡವಿ ನಡಗಾಗೇ ಶಿವ್ರೋ ಶಿವ್ರೋ ॥ ೨೪ ॥

ಶಿವರಾಯನ ಮಡವಿ ನಡಗಾಗಿ ಹೋಗಾಗ ಸುತ್ತೇಳ ಸರ
ಗಂಟೆ ನುಡುದಾವೇ ಶಿವ್ರೋ ಶಿವ್ರೋ ॥ ೨೫ ॥

ಪುಟ ಪುಟ ಮಕ್ಕಳಿರ ಪಟ್ಟೆಯ ನೆಲದೊಡೆ ಕಪ್ಪ ತಕ್ಕಳಿರೆ
ಗವರೀಗೆ ಶಿವ್ರೋ ಶಿವ್ರೋ

## ಗೌರಿಯನ್ನು ತಂದೆ ಗಿರಿರಾಜ ಕರೆಯುವ ಹಾಡು

ಮಾಳಪಿಗೆ ಬಳಗೆ ಸಾಲೆ ಮಂಚದ ಮೇಲೆ

ನಾರಿ ಬಳುವಲಿಯ ಗಳಿಗೆಯ ಸುವ್ವೀ

ನಾರಿಯ ಬಳುವಲಿಯ ಗಳಿಗೆ ಮಗಚಿದಂಗೆ

ಗೌವರಿ ಹೋಗಿ ವರಷನು ದಿನವಾಗೆ ಸುವ್ವೀ

ಗೌವರಿ ಹೋಗಿ ವರಷನ ದಿನವಾಗಿ ಹೆಣ್ಣ ಮಕ್ಕಳಿರ

ಗೌವರಿಗೂ ಬಂದು ಕರಿಯ ಹೋಗಬೇಕು ಸುವ್ವೀ

ಇಷ್ಟವಲದ ಮಾತ ಹೇಳಿಳ್ಳಾಳೆ

ಗಿರಿರಾಜ ಸಾಲೆ ಪೆಟ್ಟಿಗೆಯ ಇಳಿಗ್ಯಾರೆ ಸುವ್ವೀ

ಸಾಲೆ ಪೆಟ್ಟಿಗಿಯುದ ಇಳಿಗಿ ಬಾಯ ತಗುದು

ಬೇಕೆಂಬ ಸಾಲೆ ಪಳಮುಟ್ರೆ ಸುವ್ವೀ

ಬೇಕಂಬ ಸಾಲೆನ್ನುಟ್ಟಿರೆ

ಗಿರಿರಾಜೋ ಕಟ್ಟಿನ ಮುಂಡಸನ ತಲಗಿಟ್ಟಿರೆ ಸುವ್ವೀ

ಕಟ್ಟಿನ ಮುಂಡಸನ ತಲಗಿಟ್ಟಿರೆ

ಗಿರಿರಾಜ ಪರ್ವತೆ ನೀಲ ಕುದುರೆಯ ಸುವ್ವೀ
ಏರಿಯಾನೆ ನೀಲ ಕುದುರೆಯ ಗಿರಿರಾಜ
ಮಗಳಾ ಊರು ಅಗುಸ್ಯಾಗೆ ಇಳಿದಾರೆ ಸುವ್ವೀ
ಅಪ್ಪನ ಸಿರಿಪಾದ ಅಷ್ಟ ದೂರಲಿ ಕಂಡು
ಮುತ್ತಿನ ಗಿಂಡ್ಯಾಗ ಉದುಕಾವ ಸುವ್ವೀ
ಮುತ್ತಿನ ಗಿಂಡ್ಯಾಗ ಉದುಕಾವ ಮಕ್ಕಂದು
ಅಪ್ಪನ ಸಿರಿಪಾದ ತೊಳಿದಾಳೆ ಸುವ್ವೀ
ಪಾದವ ತೊಳದಾಳೆ ಒಡಳಾನ ತುಂಬ್ಯಾಳೆ
ಕೊಡಗಿ ಹಾಸಾಳೆ ಸಣ ಗಿಳಿ ಮಂಚ ಸುವ್ವೀ
ಹಾಲರಾದ ಹಸಿ ಅಡಿಕೆ ನೀರಾರದ ಹಸಿ ಸುಣ್ಣ .
ಜೇನಿ ಕರಪುರದ ಬಳ್ಳಿ ಎಲೆ ಸುವ್ವೀ
ಜೇನಿಯ ಕರಪ್ಪುರದ ಬಿಳಿ ಎಲೆ ನಿಡ್ಯಾಳೆ
ಅಪ್ಪಯನ ಬಾಗಲಲ್ಲಿ ಸುವ್ವೀ
ಊರು ಸುಬನೇನ ಅಪ್ಪ ಕೇರಿ ಸುಬನೇನ ಅಪ್ಪ
ಮನಿಯಾಗ ಹವಪ್ಪ ಸುಬನೇನು ಸುವ್ವೀ
ಊರು ಸುಬನೇ ಮಗಳೇ ಕೇರಿ ಸುಬನೆ ಮಗಳೆ
ಮನಿಯಾಗೆ ಹೆತ್ತಾಳು ಸುಬಕಾಣೆ ಸುವ್ವೀ
ಊರು ಸುಬನೇ ಅಪ್ಪ ಕೇರಿ ಸುಬನೇನ ಅಪ್ಪ
ಮನಿಯಾಗೆ ಅಣ್ಣದೀರು ಸುಬನೇನು ಸುವ್ವೀ
ಊರು ಸುಬನೇ ಮಗಳೇ ಕೇರಿ ಸುಬನೇ ಮಗಳೇ
ಮನಿಯ ಅಣ್ಣದೀರು ಸುಬಕಾಣೆ ಸುವ್ವೀ
ಯಾಕಲೇ ಗೌವರಮ್ಮ ನೀನ ಬಿಟ್ಟಳೆ ಐದಿಯ
ಶಿವರಾಯ ಇಲ್ಲೇನೆ ಮನಿಯಾಗೆ ಸುವ್ವೀ
ಹೊತ್ತು ಮುಂಜೆಲೆ ಎದ್ದು ಮುಂಗೈ ಜೋಳಿಗಿ ಹಾಕಿ
ಮುತ್ತಿನ ಕಿನ್ನರಿ ಬಲಗೈಲಿ ಸುವ್ವೀ
ಮುತ್ತಿನ ಕಿನ್ನರಿ ಬಲಗೈಲಿ ತಕ್ಕಂದು

ಅತ್ತಂಬ ಪುರಕೆ ನಡೆದಾರೆ ಸುವ್ವಿ

ಅತ್ತಂಬ ಪುರಕೆ ನಡೆದಾರು ಅಪ್ಪಯ್ಯ

ಬರುವ ಅರಗಳಿಗೆ ತಡವಾಗಿ ಸುವ್ವಿ

ಗಟ್ಟಿವಳ್ಳಿ ಗೌರಿ ವಳಗೇನು ಮಾಡತೀಯ

ಕಾಲಿಗೆ ತಾರೆ ಉದಕಾವ

ನಾ ತಂದ ಹಣ್ಣ ಸಕ್ಕರಿಯ ವಳಗಿರಿಸೆ ಸುವ್ವಿ

ಪಾದ ತೊಳೆದ ನೀರು ಬಾಗಲಿಗು ಹರುದಾವೆ

ಮಂಚದ ಮೇಲ್ಯಾರೆ ಮನಿಗ್ಯಾರೆ ಸುವ್ವಿ

ಪುರದಿಂದ ನಮ್ಮ ಅಪ್ಪ ನಮ್ಮ ಕರೆಯಲು ಬಂದು

ಕಾಲ ಸೋತ ಅಲ್ಲಿ ಒರಗ್ಯಾರೆ ಸುವ್ವಿ

ಆರೇಳ ಮನಿ ತಿರಿಗಿ ಕೋರಣ ಬಿಕ್ಷೆ

ಮಾಡಿಕ್ಕೆ ನಮ್ಮ ಅಪ್ಪಯ್ಯಗೆ ಹುಳಿಪಾಸೆ ಸುವ್ವಿ

ಹುಳಿಪಾಸ ಊಟಕ್ಕೆ ಒರಗಟ್ಟು ಬರಲಿಲ್ಲ

ಕರದೀನ ಏಳಮ್ಮ ನೊರಿಹಾಲ ಸುವ್ವಿ

ಕರದೀನ ಏಳ ಎಮ್ಮೆ ನೊರಿಹಾಲ ಪಾಸೆ

ಈಗ ಬಂದ ಅಪ್ಪಯ್ಯಗೆ ಹಗಲೂಟ ಸುವ್ವಿ

ಸಣ್ಣ ಅಕ್ಕಿ ಬಾನ ಬೆಣ್ಣೆ ಕರಗಿದ ತುಪ್ಪ

ಉಣ್ಣಾನ ಏಳಿ ಅಪ್ಪ ಹಗಲೂಟ ಸುವ್ವಿ

ಉಂಡರೆ ಊಟವ ಗರಿಗೆಲ ಹಸ್ತಿ ತೊಳೆದು

ಒಂದೇ ಮಂಜದಲಿ ವರಗ್ಯಾರೆ ಸುವ್ವಿ

ಒಂದ ಮಂಜದಲಿ ವರಗ್ಯಾರೆ ಗಿರಿರಾಜ

ಗಂಧದಿಳ್ಳೀವ ಏಲಿಮೇದೆ ಸುವ್ವಿ,,

ಗಂಧದ ಇಳ್ಳೆವ ಏಲೆ ಮೇದು ಮಾತಾಡಾಗ

ಶಿವರಾಯರು ಕರವೆ ಬಿಸಗೊಂಡೇ ಸುವ್ವಿ,,

ಇಂದೇಯೆ ನಮ್ಮಲ್ಲಿ ತುಂಬಿದಂತ ಹಬ್ಬ

ರಂಬೆರಿಗೆಲ್ಲ ಉಪವಾಸ ಸುವ್ವಿ

ರಂಜೇರಿಗೆಲ್ಲ ಉಪವಾಸ ಶಿವರಾಯ

ತಂಗೀ ಗೌವರವ್ವನ ಕಳ್ಸಕೋತು ಸುವ್ವೀ

ಇಂದೇ ನಮ್ಮಲಿ ಹಾಲಿನಂತೆ ಹಬ್ಬ

ನಾರೆರಿಗೆಲ್ಲ ಉಪವಾಸ ಸುವ್ವೀ

ನಾರೆರೆಲ್ಲರಿಗು ಉಪವಾಸ ಶಿವರಾಯ

ತಂಗೀ ಗೌವರಮ್ಮನ ಕಳ್ಕೋತು ಸುವ್ವೀ

ತಂಗಿಯ ಗೌವರಮ್ಮ ಕಳಗೂಸು ಶಿವರಾಯ

ಇಂದೋಗಿ ನಾಳೆ ಬರುತ್ತಾಳೆ ಸುವ್ವಿ,,

ಬಂದೋನೆ ಮಾವಯ್ಯ ಬಂದ ನೀ ಹೋಗಿ

ಒಂದೊಂದೇ ಮಾತ ನುಡಿಬ್ಯಾಡಿ ಸುವ್ವಿ,,

ಒಂದು ಒಂದೆ ಮಾತ ನುಡಿಬ್ಯಾಡಿ

ನಮಗೀಗ ಕಂಡಬಂದಾವು ಮನಸೀಗೆ ಸುವ್ವಿ

ಇಷ್ಟವಂದ ಮಾತ ಕೇಳ್ಯಾರೆ ಗಿರಿರಾಜ

ದಕ್ಷನೆ ಮೆಟ್ಟಿಲು ಇಳಿದಾರೆ ಸುವ್ವೀ

ದಕ್ಷನೆ ಮೆಟ್ಟಿಲು ಇಳಿದಾರೆ ಗಿರಿರಾಜ

ಪರ್ಯಾರ ನೀಲ ಕುದುರೆಯ. ಸುವ್ವೀ

ನನ್ನಾರು ಓತ್ತಲಾಗಿ ನಾಗಳು ಗೌವರಿ ಹೂವು

ಆಗಿ ಆಗಿ ಅಲ್ಲಿ ಉದವೆ ಸುವ್ವೀ

ಆಗಿ ಆಗಿ ಅಲ್ಲೀ ಅಲುದಾವೆ ಆ ಹೂವು

ಹೋಗಿ ಕೊಯ್ಯಲಿಗೆ ಮನವಿಲ್ಲ ಸುವ್ವೀ

ನನ್ನರು ಇತ್ತಲಿಗೆ ಜಗಳು ದಾಳಿಂಬ್ರಿ ಹೂವು

ಆಗಿ ಆಗಿ ಅಲ್ಲೆ ಉದಿರ್ಯಾವೆ ಸುವ್ವೀ

ಆಗಿ ಆಗಿ ಅಲ್ಲೆ ಉದಿರ್ಯಾವೆ, ಆ ಹೂವು

ಹೋಗಿ ಕೊಯ್ಯಲಿಗೆ ಮನವಿಲ್ಲ ಸುವ್ವೀ,,

ಹೋಗಿ ಕೊಯ್ಯಲಿಗೆ ಮನವಿಲ್ಲ

ಆ ಕೊಂಬೆ ಮುಟ್ಟಿಲೇ ಶಿವನ ಸರಗೀಗೆ ಸುವ್ವಿ

ಇಷ್ಟು ಬಂದ ಮಾತ ಹೇಳ್ಯಾಳೆ ಗೌವರಮ್ಮ

ಮಾಳಿಗೆ ಒಳಗೆ ನಡದಾಳೆ ಸುವ್ವಿ

ಮಾಳಗೀ ಒಳಗೆ ನಡದಾಳೆ ಗೌವರಮ್ಮ

ಸಾಲೆ ಸರಗ ಹಾಕಿ ಮಸಿಗ್ಯಾಳೆ ಸುವ್ವಿ

ಅಡಕೊಂಡ ಜೆನವ ಓಡಿ ಓಡಿ ಬಂದನ

ಮನಿಗೆ ಯಾಕೆ ತಾಯವ್ವ ಅಳತಿಯ ಸುವ್ವಿ

ಪುರದಿಂದ ನಿಮ್ಮ ಅಜ್ಜ ನಮ್ಮ ಕರವಲು ಬಂದು

ಗಂಡ ನಮ್ಮ ಅವರು ಕಳಗಲ್ಲಿ ಸುವ್ವೀ

ನಮ್ಮ ಅವರು ಕಳಗಲ್ಲ ನಮ್ಮ ನೀ ಹೋಗು

ನಿಮ್ಮ ಅಜ್ಜಿ ಕರಿ ಮಾಡೇ ಸುವ್ವೀ

ಅಂದಿಗೆ ಸರದ ತಂದಿಗೆ ಕೇಳ್ಯಾದು

ಅಂದಿಗೆ ತಗುದು ನೆಲಕಿಟ್ಟು ಸುವ್ವೀ

ಅಂದಿಗೆ ತಗುದು ನೆಲ ಕಿಟ್ಟರೆ ಜೆನವಯ್ಯ

ಕಿಡಕಿ ಕಂಡ್ಯಾಗ ನುಸುದಾನೆ ಸುವ್ವೀ

ಕಿಡಕಿ ಕಂಡ್ಯಾಗ ನುಸುದಾನೆ ಜೆನವಯ್ಯ

ಹೋದನು ಬೈರಮ್ಮನ ಅರಮನಿಗೆ ಸುವ್ವೀ

ಏಂದ ಬರದ ಜೆನವ ಇಂದೇ ಬಂದಾನೆ

ಕುಂದ್ರಲು ಕೊಟ್ಟ ಮಣೆಗಳೆ ಸುವ್ವಿ

ಕುಂದ್ರರು ಬರನಿಲ್ಲ ನಿಲ್ಲರು ಬರನಿಲ್ಲ

ನೀ ಬಂದ ನಮ್ಮ ಕಳಣಿಸೆ ಸುವ್ವೀ

ಪುರದಿಂದ ನಮ್ಮ ಅಜ್ಜ ನಮ್ಮ ಕರವರು ಬಂದು

ನಮ್ಮ ಅಪ್ಪ ಕಳಗ್ಯಿಲ್ಲ ಸುವ್ವೀ

ಹುಡಿಯ ಹಿಂದೆ ಹೋದಾರೆ ಜಾಡಿಕಾರರು ಅಂದಾರು

ಜೆನವಯ್ಯ ನೀ ಮುಂದೆ ನಡಿಯ್ಯ ಸುವ್ವೀ

ಜೆನವಯ್ಯ ಮುಂದೆ ಮುಂದೆ ಬೈರಮ್ಮ ಹಿಂದೆ ಬಂದರೆ

ಶಿವರಾಯರ ಶಿವಪುರಕ್ಕೆ ಸುವ್ವೀ

ಊರಲ್ಲಿ ಶಿವರಾಯ ನೀರ ಕೊಡರಿಲ್ಲದೆ

ಗೌವರಮ್ಮ ಇಲ್ಲೇನು ಮನೆಯಾಗಿ ಸುವ್ವಿ

ಪುರದಿಂದ ಅವಳಪ್ಪ ಅವಳ ಕರವರು ಬಂದು

ನೀ ಬರಲ್ಲ ಅಂದೇಳಿ ಕಳಗ್ಯಲ್ಲ ಸುವ್ವೀ

ತಾಯಿ ಇಲ್ಲದವರು ತಾಯಿ ಇಲ್ಲ ಅನ್ನುತ್ತಾರೆ

ತಾಯಿ ಇದ್ದಳ್ಯಾಕೆ ತೊರಸದೇ ಸುವ್ವಿ

ತಂದೆ ಇಲ್ಲವರು ತಂದೆ ಇಲ್ಲ ಅನ್ನುತ್ತಾರೆ

ತಂದೆ ಇದ್ದಳ್ಯಾಕೆ ತೊರಸದೀ ಸುವ್ವಿ

ತಂದೆ ಇದ್ದಳ್ಯಾಕೆ ತೊರಸಿದೊ ತಮ್ಮಯ ಆಕೆ ಹೋಗಲ

ಆಕೆಯ ತವ[illegible] ಸುವ್ವೀ

ಗಂಧ ತೇಯುರಿಲ್ಲಾ ಗಿಂಡಿ ಬೆಳಗರಿಲ್ಲ ಮಜನಿಗೆ

ನೀತವರು ಮೊದರಿಲ್ಲ ಸುವ್ವೀ

ಬಾಗಲ ಬಳಿಯಾರ ಇಲ್ಲ ರಂಗೋಲಿ ಹಾಕರು ಇಲ್ಲ

ದೇವರಿಗೂ ಹೂವ ದರಸರು ಮೊದರಿಲ್ಲ ಸುವ್ವೀ

ಬಾಗಲ ಬಳಿಯೋಳು ಉಂಟು ರಂಗೋಲಿ ಹಾಕರು ಉಂಟು

ದೇವರಿಗೂ ದರಸೂರು ಮೊದಲುಂಟು ಸುವ್ವಿ

ದೇವರಿಗೂ ದರಸೂರು ಮೊದಲುಂಟು ತಮ್ಮಯ್ಯ

ಆಕೆ ಹೋಗಲಿ ಆಕೆಯ ತವರಿಗೆ ಸುವ್ವೀ

ನಿಂಬಿ ಹಣ್ಣಿನಂಗೆ ರಂಬೆಯ ಮೈ ಬಣ್ಣ

ರಂಬೆ ಕಂಡವರು ಬಿಡನಲ್ಲ ಸುವ್ವಿ

ರಂಬೆಯ ಕಂಡವರು ಬಿಡರಲ್ಲ ಅಕ್ಕಯ್ಯ

ಆಮಾಲೆಗೂ ನೀನೆ ಹೋಣೆ ಕಾಣೆ ಸುವ್ವಿ

ರಾಗಿಯ ರೊಟ್ಟಿಗೆ ಜೋನಿಯ ಬೆಲ್ಲಕ್ಕೆ

ಈಗೇನು ನಿನ್ನ ತವರು ಬಡವರು ಸುವ್ವಿ

ತರಕಲ ರೊಟ್ಟಿಗೆ ಹರಬೆಯ ಸಪ್ಪಿಗೆ

ಮತ್ತೇನು ನನ್ನ ತವರ ವರದಿಯೇ ಸುವ್ವಿ

ಮುರುಕು ರೊಟ್ಟಿ ಹರಬೆಯ ಸಪ್ಪೀಗೆ

ಪಪ್ಪಗಳು ದಸೆಂಬರು ಬಡವರು ಸುವ್ವೀ..

ನೀನ ಹೋಗ ಮನೆಗೆ ಅಜಿಲ್ಲ ಪೂಜಿಲ್ಲ

ಬಾಗಲಿಗೆ ಜೇಡ ಮೊದಲಿಲ್ಲ ಸುವ್ವೀ

ನಾನು ಹೋಗ ಮನಿಗೆ ಅಜೆಂದು ಪೂಜೆಂಟು

ಜೇಡಿ ಕೆಮ್ಮಣ್ಣು ಮೊದಲುಂಟು ಸುವ್ವೀ

ನೀನು ಹೋದರ ಹೋಗ ಬಾಲಯ್ಯನು ಬಿಟ್ಟ ಹೋಗ

ಬಾಲಯ್ಯನಿಗೆ ಅಲ್ಲಿ ಚಳಿಜ್ವರ ಸುವ್ವಿ

ಬಾಲಯ್ಯರಿಗೆ ಅಲ್ಲಿ ಚಳಿ ಜ್ವರ ನಿನ್ನರ ಮನೆಗೆ

ಬಾಳೆಹಣ್ಣು ಕೇಳಿ ಅಳುತಾನೆ ಸುವ್ವೀ

ಬಾಳೆಹಣ್ಣು ಕೇಳಿ ಅಳುತ್ತಾನೆ ನಿಮ್ಮನಿಯಾಗೆ .

ಬಾಯ ಮೇಲೆ ಹೊಡದು ಕೊಡುತ್ತಾರೆ ಸುವ್ವೀ

ನೀನು ಹೋದರು ಹೋಗೆ ದತ್ತಯ್ಯನ ಬಿಟ್ಟು ಹೋಗೆ

ದತ್ತಯ್ಯರಿಗೆ ಅಲ್ಲಿ ಉರಿಜ್ವರ ಸುವ್ವೀ

ದತ್ತಯ್ಯರಿಗೆ ಅಲ್ಲಿ ಉರಿಜ್ವರ ನಿನ್ನರ ಮನಿಯಾಗೆ

ಚಕ್ಕುಲಿ ಕೇಳಿ ಅಳುತ್ತಾನೆ ಸುವ್ವೀ..

ಚಕ್ಕುಲಿ ಕೇಳಿ ಅಳುತ್ತಾನೆ ನಿನ್ನರು ಮನಿಯಾಗೆ

ಚಕ್ಕನ ಮೇಲೆ ತಿವದು ಕೊಡುತ್ತಾರೆ ಸುವ್ವಿ

ನೀನ ಹೋದರ ಹೋಗೆ ಪಾಲಿ ತಗದಿಟ್ಟು ಹೋಗೆ

ಪಾಲಿನಿಟ್ಟು ಮನಿಗೆ ಬರಬೈದು ಸುವ್ವೀ

ನೀನು ಹೋದರು ಹೋಗೆ ಸಾಲೆ ಬಿಟ್ಟು ಹೋಗೆ

ಸಾಲೆ ಬಿಟ್ಟು ಮನಿಗೆ ಬರಬೈದು ಸುವ್ವೀ

## ಭೂಮಿ ಪೂಜೆ ಹಾಡು

ಹೆಡಗೆಲಿ ಗೊಬ್ಬರ ಒಯ್ಯೋ ಕೊಡನಗೆ ನೀರ ಒಯ್ಯೋ

ಹರಸಿ ಭೂಮಿಕೆಪ್ಪ ಎಡೆಮಾಡಿ ಪ ಸುವ್ವೀ

ಎಂಟು ಎತ್ತನಿಗ ಕುಂಟೆತ್ತ ಹೊಡಕಂದು ಬಿತ್ತಿ ಬಂದಿವು ಶಿವನೆ

ಮಳೆ ಇಲ್ಲ ಪ ಸುವ್ವೀ

ಚಿತ್ತೀ ಬಂದೆಪ್ರ ಶಿವನೆ ಮಳೆ ಇಲ್ಲ

ಬಂಗಿನ ಕಡೆಗೆ ಮುತ್ತಿನ ಮಾಡಿಕ್ಕೆ ಮಳೆ ಹೊಯ್ದು

ಹರಗಿ ಬಂದ ಅಣ್ಣಯ್ಯ ಹವಳ ಮಂಚಸೇರಿ

ಹರಹರನೇ ಶಿವನೇ ಮಳೆ ಇಲ್ಲ

ಬಂಗಿನ ಕಡೆಗೆ ಹವಳದಂತ ಮಳೆಯು ಹೊಯ್ದುತೆ ಏ ಸುವ್ವೀ

ಭೂಮಣ್ಣೆ ಹಬ್ಬಕ್ಕೆ ನಮ್ಮಬ್ಬರ ಕರಸಣ್ಣ

ನಾವಿಬ್ಬರು ಮಿಂದು ಮಡಿಸುಟ್ಟೆ ಏ ಸುವ್ವೀ

ನಾವಿಬ್ಬರು ಮಿಂದು ಮಡಿಸುಟ್ಟಾರತಿ ಬೆಳಗಿ

ಒತ್ತಾಗಿ ಬೆಳಗಿ ಭೂಮಿಕೆವ್ವ ಏ ಸುವ್ವೀ

ಭೂಮಣ್ಣೆ ಹಬ್ಬಕ್ಕೆ ನಮ ನಾಲ್ವರು ಕರಸಣ್ಣ

ನಾವು ನಾಲ್ವರು ಬಂದು ಮಡಿ ಸುಟ್ಟು ಏ ಸುವ್ವೀ

ನಾವು ನಾಲ್ವರು ಮಿಂದು ಮಡಿಸುಟ್ಟಾರತಿ ಬೆಳಗಿ

ಒತ್ತಾಗಿ ಬೆಳಗಿ ಭೂಮಿಕೆವ್ವ ಏ ಸುವ್ವೀ

ನಾವು ಅಕ್ಕತಂಗೇರು ಲೆಕ್ಕಕ್ಕೇಳು ಮಂದಿ

ಒತ್ತಾಗಿ ಬೆಳೆಯ ಭೂಮಿಕೆವ್ವ

ಒತ್ತಾಗಿ ಬೆಳೆಯ ಭೂಮಿಕೆವ್ವ ಚಿತ್ತಾರದೆಡಿಗೆ ಕಳಗೀನೆ ಏ ಸುವ್ವೀ

ಉದ್ದಿನ ಎಲೆಯಾಗೆ ಭದ್ರಿರು ಕಣಕಪ್ಪ

ಒಡಿದು ಭದ್ರೀ ಭೂಮಿಕವ್ವ ಏ ಸುವ್ವೀ

ಬಿಳಿ ಜೋಳ ಕಡ್ಡಿಲೆ ಗಿಡ ಮುರದು

ಗುದ್ದಿಲೆ ಕಾವನಾಕ್ಕೆ ಕಡದರು ಮಾಳಿಗೆ ಕದನಾದೆ ಸುವ್ವೀ

ಕಡಿದರೆ ಮಾಳಿಗೆ ಕದನಾದೆ ಭೂಮಿಕವ್ವ

ಕಡಿಜಾಣೆ ನಿ ಕುಂತ್ರ ಮನೆಯಾದೆ ಏ ಸುವ್ವೀ

ಹಸಿರ ಕುಬ್ಬುಸ ಬಯ್ಸ್ಯೋ ಮನೆಯ ಅನ್ನ ಬಯ್ಸ್ಯೋ

ಚರಗ ಮಗನ ಬಯ್ಸ್ಯೋ ಬಯಕೆಯ ಚರಗ ಮಗನೇ ಬಯ್ಸ್ಯೋ

ಬಯಕೆ ಭೂಮಿಕೆವ್ವ ಹಸಿರಾದವು ಗದ್ದೆ ಬವಲಾಗೆ ಏ ಸುವ್ವೀ

ಹಸಿರ ಕುಬ್ಬುಸ ಬಯ್ಸ್ಯೋ ಹಾಲ ಬಾನ ಬಯ್ಸ್ಯೋ ಸಣ ಮಗನೆ ಬಯ್ಸ್ಯೋ

ಬಯಕೆ ಭೂಮಿಕೆವ್ವ ಹಸಿರಾದವು ಗದ್ದೆ ಬವಲ್ಯಾಗೆ ಏ ಸುವ್ವೀ

ಹಸಿರಾದವು ಗದ್ದೆ ಬವಲ್ಯಾಗೆ ಊಟವ ಉಂಡದ ಕಂಡಾಳೆ

ಕೈಪ್ಪಿದ ಶಿವ ದಂಡೆಯ ನೋಗುವೆ ಹರತೆಯ ಪ ಸುವ್ವೀ

ದಂಡಿಯ ನೋಗುವೆ ಹರತೆ ಕುಂಟೆಯ ಮೇಲೆ

ಗಂಡನ ತೋಳೆಂದು ವರಗ್ಯಾಳೆ ಏ ಸುವ್ವೀ

## ದೀಪಾವಳಿ ಹಬ್ಬದ ಹಾಡು (ಬಸವಣ್ಣನ ಕಾಲು ಪೂಜೆಯ ಹಾಡು)

ಕಲ್ಲು ಕದಲೆ ಮಾಡಿ ಹುಲ್ಲು ರಾಜನ ಮಾಡಿ

ಸಲ್ಲೀ ಬಸವಯ್ಯರ ವಚನವ ಸೂವಯ್ಯ

ಸಲ್ಲೀ ಬಸವಯ್ಯ ವಚನವ ಓದಲುತ್ತೀವಿ

ಲಾಲಿಸಿ ಕೇಳಿರಿ ಜನರೆಲ್ಲಾ ಸೂವಯ್ಯ

ನಮ್ಮ ಹಾಡ ಬಲ್ಲವರೇ ಬರಕ್ಯಳಿ ಸೂವಯ್ಯ

ಇಷ್ಟಂದ ಮಾತ ಕೇಳ್ಯಾನೆ ತಮ್ಮಯ್ಯ

ತಾಯವ್ವನ ಕರವೇ ಬೆನಗೊಂಡೇ ಸೂವಯ್ಯ

ತಾಯವ್ವನ ಕರವೇ ಬೆನಗೊಂಡೇನಂದನ್ನ

ಹಾಲು ಬಾನಸಿದ್ಧಾರ ಉಣಲಿಕ್ಕೆ ಸೂವಯ್ಯ

ಉಂಡಾನ ಊಟವ ಗಂಗೆ ಹಸ್ತ ತೊಳೆದು

ಬಂದೇ ಮುಂಚಾಲೆ ವರಿಗ್ಯಾರೆ ಸೂವಯ್ಯ

ಬಂದ ಮುಂಚವಲೆ ವರಿಗ್ಯಾರೆ ತಮ್ಮಯ್ಯ

ಗಂಧ ದಿಳ್ಳೆವ ಎಲೆ ಮೇದ್ರೆ ಸೂವಯ್ಯ

ಮುತ್ತಿನ ಕಂದಿಲಿಯ ಬಲಗ್ಗೆಯಲಿ ತಕ್ಕಂದು

ರನ್ನದ ಗುದ್ದಲಿಯ ಹೆಗಲೇರಿ ಸೂವಯ್ಯ

ರನ್ನದ ಗುದ್ದಲಿಯ ಹೆಗಲೇರನೇ ತಮ್ಮಯ್ಯ

ಗುತ್ತಿ ಗುಡ್ಡಕ್ಕೆ ನಡದಾನೆ ಸೂವಯ್ಯ

ಗುತ್ತಿ ಗುಡ್ಡಕ್ಕೆ ನಡದಾನೆ ತಮ್ಮಯ್ಯ

ಅಚ್ಚ ಕವಲು ಗವಸ ಕಡದನೆ ತಮ್ಮಯ್ಯ

ಅಚ್ಚ ಕವಲಿಯ ಕಡಮ ನಾರನೆತ್ತಿ ಸೂವಯ್ಯ

ಸೂರ್ಯನ ಬಿಸಿಲಿಗೆ ಒಣಸ್ಯಾರೆ ತಮ್ಮಯ್ಯ

ಹಂಡ ಎತ್ತಿಗೆ ಹಣೆಕಟ್ಟು ಹುಂಡೆತ್ತಿಗೂ ಮುಖ ಚೌರಿ

ಜಾಲಿಗೆ ದಂಡೆ ಉಡದಾರೆ ಸೂವಯ್ಯ

ಇಷ್ಟಂದ ಮಾತ ಹೇಳ್ಯಾನ ತಮ್ಮಯ್ಯ

ಗೆಣೆಕಾರರ ಮನೆಗೂಗಿ ಬರತ್ತೀನಿ ಸೂವಯ್ಯ

ಭಟ್ಟರ ಮನಿಗೋಗ ದಾರ್ಯಾಗೆ ಹಾಲದ ಕೊಡ ಬಂದ ಎದರಿಗೆ ಸೂವಯ್ಯ

ಹಾಲದ ಕೊಡ ಬಂದ ಎದುರಿಗೆ ಈಗೊಳ್ಳೆದೆಂದು ನಡದಾರೆ ಸೂವಯ್ಯ

ಮತ್ತೆ ದಾರ್ಯಾಗ ತುಪ್ಪದ ಕೊಡ ಬಂದ ಎದುರಿಗೆ ಸೂವಯ್ಯ

ತುಪ್ಪದ ಕೊಡ ಬಂದ ಎದುರಿಗೆ ಅಂದೇಳಿ ಮತ್ತೊಳ್ಳೆದಂದೇ ನಡದಾರೆ ಸೂವಯ್ಯ

ಗುತ್ತಿ ಗುಮ್ಮದ ಮೇಲೆ ಎತ್ತಕಾಯು ಮಕ್ಕಳಿರ„

ಎತ್ತ ಕಡೆ ಐತಿ ದೊಡಿಗರ ಅರಮನೆ ಸೂವಯ್ಯ.

ಇಲ್ಲಿ ಎಡಕಾನ ಬಾಳೆಯ ಬಲಕಾಸಿ ನಾಗ ಸಂಪಿಗೆಯ ಎಡನಡಗೆ ಸೂವಯ್ಯ

ನಾಗಸಂಪಿಗೆಯ ಎಡನಡಗಾಸಿ ಹೋದರೆ„

ಅಲ್ಲಿ ಐತಿ ದೊಡಿಗರ ಅರಮನೆ ಸೂವಯ್ಯ

ಎಂದು ಬರದ ಮನಿಸ್ಯ ಇಂದೆ ಬಂದಾನ„

ಕುಂಡ್ರಾಲು ಕೊಡಿ ಮಣೆಗಳ ಸೂವಯ್ಯ

ಕುಂಡ್ರಾಲು ಬರನಿಲ್ಲ. ನಿಲ್ಲಾಲು ಬರನಿಲ್ಲ„

ಬಸವನ ಪೂಜೆ ದಿನ ಹೇಳಿ ಸೂವಯ್ಯ

ಬುಧವಾರ ಬೂರೆ, ಬೆಸ್ತಾವಾರ ಅಮವಾಸ್ಯೆ

ಬಸವನ ಪೂಜೆ ಶುಕ್ರವಾರ ಸೂವಯ್ಯ

ಇಷ್ಟಂದ ಮಾತ ಕೇಳ್ಯಾನೆ ತಮ್ಮಯ್ಯ

ತಿರುಗಿ ಬಂದಾನೆ ತಮ್ಮನಿಗೆ ಸೂವಯ್ಯ

ತಾಯಪ್ಪನ ಕರದ ಬುಧವಾರ ಬೂರೆ, ಬೆಸ್ತಾವಾರ ಅಮವಾಸ್ಯೆ

ಶುಕ್ರವಾರ ಬಸವನ ಪೂಜೆ ಸೂವಯ್ಯ

ಇಷ್ಟಂದ ಮಾತ ಹೇಳ್ಯಾನೆ ತಮ್ಮಯ್ಯ ಮುತ್ತಿನ ಮಣಿ ಹಗ್ಗ

ಬಲಗೈಲಿ ಹಿಡಿದಾನ ಸೂವಯ್ಯ

ಮುತ್ತಿನ ಮಣಿ ಹಗ್ಗ ಬಲಗೈಯಲಿ ತಕ್ಕಂಡು

ಎತ್ತ ಮೈದೊಳಯಾಕ ಹೊರಟಾರೆ ಸೂವಯ್ಯ

ಗುತ್ತಿ ಹೊಳಿಯಾಗ ಮತ್ತೇರಿಗು ನೀರಾಟ

ಕನ್ನೆದೇವಿ ಹೆತ್ತ ಕುಮಾರಾಗ ಸೂವಯ್ಯ

ಕನ್ನೆದೇವಿ ಹೆತ್ತ ಕುಮಾರ ಚನ್ನಯ್ಯರಿಗೆ

ಎತ್ತ ಮೈದೊಳೆವ ಸಡಗಾರ ಸೂವಯ್ಯ

ಎತ್ತ ಮೈದೊಳೆದು ಮತ್ತಿಲ್ಲಿ ಬರುತಾವೆ,,

ಅಪ್ಪಯ್ಯ ತಗಸ ಹೊಸ ಕೆರೆ ಸೂವಯ್ಯ

ಅಪ್ಪಯ್ಯ ತಗಸೀದ ಹೊಸ ಕೆರೆ ಏರಿ ಮೇಲೆ

ಎತ್ತು ಮೈದೊಳೆದು ಬರುತ್ತಾವೆ ಸೂವಯ್ಯ

ಮೈದೊಳೆದ ಎತ್ತು ಬರುತ್ತಾವೆಂದು ಗೋಮ ಸಾರಿಸಿದ್ದೆ

ಪರಿವಣ ಒಕುಳಿಯ ಹಿಡಿದಿದ್ದೆ ಸೂವಯ್ಯ

ಪರಿವಣ ಒಕುಳಿಯ ಹಿಡಿದಿದ್ದ ಅಣ್ಣಯ್ಯ

ಮೈದೊಳೆದ ಎತ್ತಿಗೆ ಒಕುಳಿ ಸುಳಿದಿದ್ದೆ ಸೂವಯ್ಯ

ಯಾರು ಏಳಾದು ಮುನ್ನೆ ಕೋಳಿ ಕೂಗಾದು ಮುನ್ನೇ

ಮಾಳಿಗೆ ಕದವೆ ತೆಗೆಲಂದೇ ಸೂವಯ್ಯ

ಮಾಳಿಗೆ ಕದವೇ ತೆಗೆಲಂದೇ ನಮ್ಮನಿಯ ನಾರಿ ಎದ್ದು

ತೂರೆ ರೊಟ್ಟಿ ಸುಡುತ್ತಾಳೆ ಸೂವಯ್ಯ

ಯಾರು ಏಳಾದು ಮುನ್ನೆ ಕೋಳಿಕೂಗಾದು ಮುನ್ನೆ

ಉಪ್ಪರಿಗೆ ಕದವೆ ತೆಗೆಲಂದೇ ನಮ್ಮನಿಯ ನಾರಿ ಎದ್ದು,,,

ತೂರೆ ರೊಟ್ಟಿ ಸುಡುತ್ತಾಳೆ ಸೂವಯ್ಯ

ಒಂದ ಸಿಬ್ಬಲ ಹಣ್ಣು, ಒಂದ ಸಿಬ್ಬಲ ಕಾಯಿ, ಮತ್ತೊಂದು ಸಿಬ್ಬಲ

ನೆನೆಗಡಲೇ ಸೂವಯ್ಯ

ಮತ್ತೊಂದು ಸಿಬ್ಬಲ ನೆನೆಗಡಲೇ ತಕ್ಕಂದು ಬಸವನ ಪೂಜೆಗೆ

ಅನಗೊಂಡೆ ಸೂವಯ್ಯ

ಹಕ್ಕಿ ಮುಟ್ಟಿದ ನೀರು, ಪಕ್ಷಿ ಮುಟ್ಟಿದ ನೀರು ಮತ್ತೆ ಹೋಗಿ,,

ಪನ್ನೀರು ಮಗ ತಂದೇ ಸೂವಯ್ಯ

ಮತ್ತೆ ಹೋಗಿ ಪನ್ನೀರು ಬೂರೆ ನೀರು

ಅಂಜಬೇಡಿ ಬಸವ ತಳದೀವು ಸೂವಯ್ಯ

ಸರದ ತೂರೆ ರೆಟ್ಟೆ ಆದ ಬಂಗಾರ

ಹಸಿ ಅಡಕೆ ಸಾರವಾರೆ ಸೂವಯ್ಯ

ಹಸಿ ಅಡಕೆ ಪಚ್ಚೆಯ ತೆನೆಯೆ ಬಸವನ

ಕೊರಳಾಗೆ ಮೆರವಾವೆ ಸೂವಯ್ಯ

ಪಾದಕೊಡಿ ಬಸವ ಪಾದಕು ಶರಣೆಂದೇವ್ರು

ಪಾದಕ್ಕೆ ಹೊಸ ಹೊನ್ನ ಇಡಸೇವ್ರು ಸೂವಯ್ಯ

ಪಾದಕ ಹೊಚ್ಚ ಹೊನ್ನ ಇಡಸೀವ್ರು, ಮರತದ್ದು ಮೇಲೆ ನೀಡಿ ಬಸವಯ್ಯ

ಹೆಜ್ಜೆ ಕೊಡಿ ಬಸವ ಹೆಜ್ಜೆಗೂ ಶರಣೆಂದೀವ್ರು

ಹೆಜ್ಜೆಗೂ ಹೊಚ್ಚ ಹೊನ್ನ ಇಡಿಸೇವ್ರು ಸೂವಯ್ಯ

ಹೆಜ್ಜೆಗೂ ಹೊಚ್ಚ ಹೊನ್ನ ಇಡಸೇವ್ರು, ಮರತದ್ದು ಮೇಲೆ ನೀಡಿ ಬಸವಯ್ಯ

ಸುಖಿ ಬಾಳಿ ಎಂದು ನಮ್ಮನ್ನು ಹರಸಿ ಬಸವಯ್ಯ

ಉದ್ದೀನ ಕಾಳಹಂಗೆ ಪರದಿಟ್ಟ ಬಸವನ ಕೋಡು

ಓಟೂರು ಸೀಮೆಯ ದೊರೆ ಬಂದ ಸೂವಯ್ಯ

ಓಟೂರು ಸೀಮೆಯ ದೊರೆ ಬಂದ

ಜಾನಾಡಿ ಎತ್ತಿ ಆರುತಿಯ ಬಸವಯ್ಯಗೆ ಬೆಳಗಿ ಸೂವಯ್ಯ

## ದೀಪಾವಳಿ ಹಬ್ಬದ ಹಾಡು

ದೀಪಾವಳಿ ಹಬ್ಬವೆಂದರೆ ಹಬ್ಬಗಳ 'ರಾಜ'. ರೈತರಿಗೆ 'ದಟ್ಟ ಹಬ್ಬ'ವಾಗಿದೆ. ಈ ಹಬ್ಬದಲ್ಲಿ ಗೋವುಗಳಿಗೆ ವಿಶೇಷ ಪೂಜೆ. ಅಂಬಾಡಿ ಎಲೆ, ಪಚ್ಚೆತೆನೆ, ಹಣ್ಣು ಅಡಿಕೆ, ಸಿಂಗಾರ, ಚೆಂಡಿನ ಹೂ ಮುಂತಾದವುಗಳನ್ನು ಸೇರಿಸಿ ಮಾಲೆ (ಹಾರದ ಸರ) ಮಾಡುತ್ತಾರೆ. ಹಿಂದಿನ ದಿನವೇ ಪೂಜೆಗೆ ಪೂರ್ವ ಸಿದ್ಧತೆ ಮಾಡಿಕೊಳ್ಳುತ್ತಾರೆ.

'ನಕ್ಷತ್ರ ಅಡಗಿದ ಪುಷ್ಪಗಳರಳಿದ

ಕತ್ತಲೆ ಹರಿದು ಬೆಳಗಾದ ಜಾವಕ್ಕೆ

ಅಕ್ಕಂದಿರೇಳಿ ಪೂಜೆಗೆ...

ಉದಯದಲೆದ್ದು ಹಳ್ಳಕ್ಕೆ ಎತ್ತುಗಳ

ಹೊಡೆದೊಯ್ದು ಮೈತೊಳೆದು ಕರೆತಂದ್ರು

ಗುತ್ತಿಯ ಹೊಳೆಯಲಿ (ಎತ್ತು ಮೈ ತೊಳೆದೇವ್ರು)

ಮುತ್ತಿನ ಸರಗಂಟೆ ಮರತೇವ್ರು (ಅಪ್ಪಯ್ಯ)

ಅಣ್ಣಯ್ಯನ ಕಳುಹಿ ತರಿಸೀರಿ.... ।

ಗುತ್ತಿಯ ಹೊಳೆಗೆ ಹೋದಾನೆ ಅಣ್ಣಯ್ಯ

ಮುತ್ತಿನ ಸರಗಂಟೆ ತಂದಾನ್ಸ

ದನಕರು ಎತ್ತುಗಳನ್ನೆಲ್ಲಾ ಮೀಯಿಸಿ

ಮುತ್ತಿನ್ಹರಿವಾಣದಲ್ಲಿ ಒಪ್ಪುಳ್ಳ ಕೆಮ್ಮಣ್ಣು ತುಂಬಿ ।

ಚಿತ್ರೋಜಿ ಕಡೆದ ಮರಸಿದ್ದೆ । ತಕ್ಕೊಂಡು

ಗೋವಿಗೆ ದಾಕು ಬಡಿದಾರು ॥

ಹೂವಿನ್ಹರಿವಾಣದಲಿ ಜೇಡಿಯ ತುಂಬಿ

ಬಡಗಿ ಕಡೆದ ಮರದ ಶಿದ್ದೆ । ತಕ್ಕೊಂಡು

ಗೋವಿಗೆ ದಾಕು ಬಡಿದಾರು ।

ಜೇಡಿ ಕೆಮ್ಮಣ್ಣಿನಿಂದ ಸಿಂಗಾರಗೊಂಡ ದನಕರುಗಳಿಗೆ ।

ಅತ್ತಿಯ ಎಲಯಾಲಿ ಹತ್ತುಕೊಳಗಕ್ಕಿ ರೊಟ್ಟಿ ।

ಅಚ್ಚ ಸಿಂಗಾರ ಎಲೆಯಡಿಕೆ । ಪಚ್ಚೆತೆನೆ

ಒಪ್ಪೀತು ಗೋವಮ್ಮನ ಕೊರಳೀಗೆ ।

## ಗೋಪೂಜೆ ಹಾಡು

"ಮುತ್ತಿನ ಹರಿಗ್ಯಾಡೆ । ಮುತ್ತೀನ ಮುರಿಗ್ಯಾಡೆ ।

ಮುತ್ತ ಕೆತ್ತಿನಿಪಾ ಅರಮನೆ । ಗೋವಮ್ಮಗೆ

ಮುತ್ತೀನಾರತೀಯ ಬೆಳಗೀರೆ ।

ಸೀತಾಳೆ ಚಪ್ಪರ ಶ್ರೀಗಂಧಮಪ್ಪರಿಗೆ

ರಾಮಲಕ್ಷ್ಮಣರ ಅರಮನೆ । ಗೋವಮ್ಮಗೆ

ಮುತ್ತಿನಾರತೀಯ ಬೆಳಗೀರೆ ।

ಗಂಧದ ಚಪ್ಪರ । ಗರುಡನ ತಪಸಾಲೆ

ಕೃಷ್ಣ ಬಲರಾಮನ ಅರಮನೆ । ಗೋವಮ್ಮಗೆ

ಹೂವಿನಾರತೀಯ ಬೆಳಗಿರೆ ॥

ಗುತ್ತಿಗು ಇಲ್ಲೀಗೂ ಹೂವಾ ಥಂಗುರಸ್ಥರಸಿ

ಮತ್ತ್ಯಾರು ಬೀದೀಲಿ ನಿಲದೀರಿ । ನಮ್ಮನೆಯ

ಗೋವು ಸಿಂಗರಿಸಿ ಬರುತಾವೆ ॥

ಗೋವುಗಳು ಸಿಂಗರಿಸಿಕೊಂಡು ದಾರಿಯ ಮಧ್ಯದಲ್ಲಿ ಸಾಗುತ್ತಿರುತ್ತವೆ. ದಾರಿಬಿಟ್ಟು ಗದ್ದೆಗೆ ಹೋಗದಿರಲೆಂದು ಹಾಡುವ ಹಾಡು

"ಬಾಗಿಲ ಮುಂದಕ್ಕೆ ಹತ್ತು ಖಂಡಗದ ಹೊಲ
ಮುಟ್ಟದೇ ಹೋಗೆ ಪಶುತಾಯಿ | ನಿನ್ನ ಪಾದಕ್ಕೆ
ಮುತ್ತಿರಿಸಿ ಕೈಯ್ಯಾ ಮುಗಿದೇನು ||
ದಂಡೆ ಸೂಡಿದ ಹೂವು ಚಂದಾಗಿ ಬಂದಾರೆ |
ಎಲ್ಲಾ ದೇವರಿಗೂ ಇಡಗಾಯಿ ಒಡೆಸುವೆನೆಂದು
ಹೊತ್ತಾನಪ್ಪಯ್ಯ ಹರಕೇಯ ||

ಗೋವುಗಳು ದಾರಿಯಲಿ ಸಾಗುತ್ತಿರುವಾಗಿನ ಹಾಡು

"ಕಗ್ಗಲ್ಲು ಕಡಿಯಾವ
ಸುಗ್ಗಲ್ಲು ಸುಟ್ಯಾವ |
ಬಾಗೀಲ ತೋರಣವೆ
ಚಿಗುರಿದ | ನಮ್ಮನೆಯ ಗೋವು
ಕೊಟ್ಟಿಗೆಯ ನಿಳಿವಾಗ ||
ಹೊಸ್ತಿಲದ ಮುಂದಕ್ಕೆ
ಹತ್ತು ತೆಂಗಿನ ಮರ | ಚಿಪ್ಪು ಚಿಪ್ಪೊಡೆದು
ಫಲಬಂದ | ನಮ್ಮನೆಯ ಗೋವು
ಕೊಟ್ಟಿಗೆಯನಿಳಿವಾಗ
ಕಂಚುಗಾರರ ಕೇರಿ | ಎಂಟು ನೂರಂಗಡಿ
ಕಂಚುಗಾರರ ಕೇರಿ ಒಳಗೆಲ್ಲ ನಮ್ಮಗೋವ |
ನಿಂತು ನೋಡುವವರ ಪರಿ ನೋಡು ||

ಗೋವುಗಳು ಸಿಂಗರಿಸಿಕೊಂಡು ಸಾಗುವಾಗ ದೃಷ್ಟಿಯಾಗುವುದು ಬೇಡ ಎಂದು ಹಾಡುವ ಹಾಡು

"ಹಂಡೆ ಕೆಚ್ಚಲ ಕಟ್ಟಿ | ಹಿಂಡೀನಲ್ಲಿರುವೊದು |
ಬಲ್ಲವರ ದೃಷ್ಟಿ ಗನವಲ್ಲಿ | ಗೋವಳಿಗ
ಹೊತ್ತೂಳ್ಳಲ್ಲೆ ಗೋವ ಹೊಡೆತಾರೋ ||
ಕಾಳಿ ಕಚ್ಚಲ ಕಟ್ಟಿ ಕಾಸಿಗೆ ಬಂದಿಹುದು |
ಕಾನಲ್ಲ ನಾಡು ಗೋವಳಿಗ |

ಹೊತ್ಮುಂಚೆ ಗೋವು ಕರೆತಾರೋ ॥

ಅಜ್ಜಿಯ ಮಾತಿಗೆ ಗೋವತ್ತಾಲಾದಾವು । ನಾವಿತ್ತ ಬಂದೇವು

ಗುತ್ತಿಯ ಗುಡ್ಡ ಮರೆಯಾದ ॥

ಬಸವಣ್ಣ ಮರೆಯಾದ । ನಾವಿತ್ತ ಮುಖವಾದ ।

ಗ್ಯಾವೆಯ ಗುಡ್ಡ ಮರೆಯಾದ । ನೆತ್ತಿಯ ಮೇಲಿದ್ದ

ಸೂರ್ಯ ಮರೆಯಾದ ॥

## ವೀಳ್ಯದ ಹಾಡು

ಗೋವಿನ ಸಗಣಿ ಕಾಲಲ್ಲಿ ತಕ್ಕಂದು ದೊಡ್ಡಮಾಳಿಗೊಳಗೆ ದೌವಡಾಸಿ

ದೊಡ್ಡಮಾಳಿಗಿಯೊಳಗೆ ದೌವಡಾಸಿ ಹೆತ್ತವ್ವ ನಿನ್ನ ಬೀಗರು ಬರುತ್ತಾರೆ

ದೊಡ್ಡ ಬೆರಳಿಗೆ ತಕ್ಕ ದೊಡ್ಡ ಉಂಗುರನಾಕಿ, ದೊಡ್ಡೋಣಿಗಾಸೆ ಬರುತ್ತಾರೆ

ಅಲದಾರ್‍ಯಾಗೆ ಆರು ಜನ ನೆಂಟರು ಅಲದೆಲಿಗಿಂತ ಮುದಕರು

ಅಲದೆಲಿಯ್ಯಾಂಗೆ ಮುದಕರು ಬಂದೈದಾರೆ ಬಾಗಲುವುದಕೆ ಸಗುತೆಲ್ಲಾ

ಬಾಗಲುವುದಕೆ ಸಗುತೆಲ್ಲಾ ಅಪ್ಪಯ್ಯ ದಂಟಗೋಲ ಕೊಟ್ಟೆ ಕರಕಳ್ಳಿ

ನೆಂಟರು ಬರುತಾರಂದು ಮಂಟಪ ಸವರಿಸಿ ಎಂಟು ಮೂಲೆಗೆಂಟ ಹಸೆಹಾಕಿ

ಎಂಟು ಮೂಲೆಗೆಂಟ ಹಸೆ ಹಾಕಿ ಹೆತ್ತವ್ವ ನಿಮ್ಮ ನೆಂಟರು ಬರುತಾರೆ

ಮನಿಯೆ ಮನಿಯುಂದಿರಿ ಮನಿಯೆ ಮಂಟಪ ಸಾಲಿ ಗಲಿಗಲಿ ಎಂಬ ಗಿಳಿ ಹಿಂಡು

ಗುತ್ತಿ ಸೀಮೆಯಿಂದ ನೆಂಟರು ಬಂದಾರೆ ಅಪ್ಪಯ್ಯ ನಿಮ್ಮ ಸರಿಕರು

ಅಪ್ಪಯ್ಯ ನಿಮ್ಮ ಸರಿಕರು ಬಂದಾರೆ ಸಾಲೆ ಮುಂಚಿಡುದೆ ಕರತನ್ನಿ

ಕರಿಯ ಕಂಬಳಿ ಹೊಂದಿಸಿ ಗದ್ದಿಗೆನಾಸಿ ಇತ್ತ ಕರೆಯರಿ ಹಿರಿಯರ

ಇತ್ತ ಕರೆಯದ ಹಿರಿಯರ ಹರಿವಣದಿಳ್ಯೇವ ನಡಿಯಲಿ

ಹಲ್ಲಿಗೆ ಹರಿಯುದಡಿಕೆ, ಕಲ್ಲಿಗು ಮುರಿಯುದಡಿಕೆ ಎಲ್ಲಿ ತಂದಿರಿ ಬೀಗರೆ

ಎಲ್ಲಿ ತಂದಿರಿ ಬೀಗರೆ ಬಿಳಿಗೊಟು ನೆಲ್ಲೂರ ಬೀದ್ಯಾಗ ಬಿದ್ದಾ ಬಿಳಿ ಕಲ್ಲು

ಹೆಡೆಗೆಲಿ ಗೊಬ್ಬರ ಹಾಕಿ ಕೊಡನಾಗೆ ನೀರ ಹೊಯಿದು ಬೆಳೆದ ರಥ ಬಳ್ಳಿ

ಬೆಳೆದ ರಥ ಬಳ್ಳಿ ನಾಗೊಳ್ಳಿ ಹರದಿ ನೀ ಮುಂದ ಬರಬೇಕು

ಹೆರೆಯಿಂದ ಕೆಳಗೆ ಜೀರಿಗೆ ಮಾವಿನ ತೊಳಲೆ ಸಣ್ಣ ಮಕ್ಕಳ ಮರತಿದ್ದೆ

ಅಕ್ಕಿ ಗೂಡಿಗೆ ವರಗಿ ನಿಂದೋಳ್ಯಾರೆ ಚಿತ್ತಾರಿನವರ ಹಿರಯಕ್ಕ

ಮುತ್ತೈದೆ ಅಕ್ಕಿಯ ತಾರೆ ಬಿಬ್ಬಲದಾಗೆ

ಅಕ್ಕಮ ತುಂಬಿದ ಬಿಬ್ಬಲ ಚಂದವಿಲ್ಲದ್ಹೋಳಿ ನಿತ್ರಂತ ಜಾಣೆ ಜರುದಾಳೆ

ನಿತ್ರಂತ ಜಾಣೆ ಜರದು ತಾ ತಂದಾಳೆ, ದ್ಯಾವರಿಗೆ ಇದುರಾಗ

ಉಪ್ಪರಿಗೆ ಹೊಳೆಗೆ ವಪ್ಪಿರುವ ನೆಂಟರೆ ವಪ್ಪದಲ್ಲಿಗ ತಗತಲ್ಲಿ

ಇಳ್ಳೆವು ತಿದ್ದುವ್ರಣ್ಣನ ಕಡಿಕುಸಲ ನೋಡಿರೆ, ಕಡಿರೆನಾ ಕಿವಿಗೆ ಬರಿಬೆಂಡು

## ಮಕ ಪೆನ್ನೆ ಹಾಡು (ಮುಖ ಕ್ಷೌರ)

ಗುತ್ತಿಗುಡ್ಡದ ಮೇಲೆ ಎತ್ತರಾಯ ಮಕ್ಕಳಿರ ಎಲ್ಲೈತಿ ಬಿನ್ನಾಣಿ ಅರಮನೆ

ಇಲ್ಲಿಯೇ ಎಡಕಾಸಿ ಬಾಳೆಯ ಬಲಕಾಸಿ ನಾಗ ಸಂಪಿಗೆ ನಡುಗಾನೆ

ನಾಗ ಸಂಪಿಗೆಯ ನಡುಗಾನ ಹೋದರೆ ಅಲ್ಲೈತಿ ಬಿನ್ನಾಣಿ ಅರಮನೆ

ಎಂದು ಬಾರದ ತಮ್ಮ ಇಂದೆ ಬಂದ್ಯೆದಾರೆ ಕುಂದ್ರಕೆ ಕೊಡಿ ಮಣೆಗಳ

ಕುಂದ್ರಾಕ ಬರಸಿಲ್ಲ ನಿಲ್ಲಾಕ ಬರಸಿಲ್ಲ, ಮರಾಯರ ಮಗನಾ ಮಕಪೆನ್ನೆ

ಮರಾಯರ ಮಗನ ಮಕಪೆನ್ನೆ ಮೂಪಾದಕೆ ಕರಿಯಾ ಕಳಿಗ್ಯಾರೆ

ಇಷ್ಟೊಂದು ಮಾತ ಕೇಳ್ಯಾನೆ ಬಿನ್ನಾಣಿ, ತಮ್ಮಯ ನೊತಗೂಡಿ

ಮುತ್ತಿನ ಕೈ ಪಡಪಾ ಬಲಗೈಲಿ ತಕುಂದು ರುಪಾರದಗುಸೆ ಇಳದಾರೆ

ಅಪ್ಪಾರ ಬಿಸಲಾಗೆ ಬತ್ತಿದಾ ಹೊಲನಾಗೆ ಓಡೋಡಿ ಓಡೋಡಿ ಬಿನ್ನಾಣಿ ಬರುತಿದ್ದ

ಬಂದ ಬಿನ್ನಾಣಿ ಅಂಗಳದಾಗು ನಿಂದಾರೆ, ಬಿನ್ನಾಣಿಗೆ ಆಸರಕ ಕೊಡಿ

ಬಂದ ಬಿನ್ನಾಣಿಗೆ ಗಂಧ ದೂಪತಲ್ಲಿ ನಿಟ್ಟಿಯ ಹಣ ತಗತಲ್ಲಿ

ಬೇಳೆ ಓರುದಂದ ಬೆಲ್ಲಕಿರುದಂದ ಇಂದಿನ ಕಾರ್ಯವು ಇರುದಂದ

ಕಾಲುಗುರ ತಿದ್ದು ಕೈ ಉಗುರ ತಿದ್ದು ಬಾಲನು ಕೊನೆ ಮೀಸೆ ತಿದ್ದೊ

ಕಾಲುಗುರ ತಿದ್ಯಾನೆ ಕೈ ಉಗುರ ತಿದ್ಯಾನೆ ಬಾವನ ಸಾಗೆ ಬಾರಿ ಜಳಕ

ಕೆಸರಿಲ್ಲದಂಗಳ ಕೆಸರು ತಾಕಾದವೆ ಹೆಸರಿಗೆ ದೊಡ್ಡರ ಮಗಮುಂದೆ

ಹೆಸರಿಗೆ ದೊಡ್ಡಮಗ ಮಿಂದ ನೀರು ಕೆಸರಾದವು ಬೀದಿಬಾಗಲೆಲ್ಲ

## ಧಾರೆ ಹಾಡು

ಗುತ್ತಿಯ ಹೊಳೆಯಾಗೆ ಮತ್ತ ದಾನ ಮಾಡಿ। ಇಪ್ಪಾತ್ತಾರು ಕೊಂಡ್ರೆ ಕವಲಿಯ

ಇಪ್ಪತ್ತಾರು ಕೊಂಡ್ರೆ ಕವಲಿಯ ದಾನ ಮಾಡಿ। ಪತ್ರೆ ಕಲ್ಲಣಕ ನಡದಾರೆ

ಹೊನ್ನೂರು ಹೊಳೆಯಲ್ಲಿ ಹೊನ್ನ ದಾನ ಮಾಡಿ | ಚಿನ್ನಯ ಕಲ್ಲಣಕ ನಡದಾರೆ

ಆನೆಯ ಹತ್ತಾಕ ಅರ್ಧ ಮುತ್ತ ಜ್ಯಾಕೆ | ಅರ್ಧ ಹೊನ್ನಿನ ತೊಳೆ ಬಲು ಜ್ಯಾಕೆ

ಆರು ಹೊನ್ನಿನ ತೊಳೆ ಬಲು ಜ್ಯಾಕೆ | ಜೇರೂರ ನಾರಿ ಗೆಲುವುದೆ ಬಲು ಜ್ಯಾಕೆ

ಎತ್ತನೆ ಹತ್ತಾಗ ಪತ್ತ ಮುತ್ತೆ ಜ್ಯಾಕೆ | ಹತ್ತೈನ ತೋಳೆ ಬಲುಜ್ಯಾಕೆ

ಹತ್ತು ಹೊನ್ನಿನ ತೋಳೆ ಬಲು ಜ್ಯಾಕೆ | ಪರವರ ನಿಸ್ತೇ ಗೆಲುವದೆ ಬಲು ಜ್ಯಾಕೆ

ಮುತ್ತಿನ ಕರಡಿಗಿಯ ಮರತಿವ್ರು ತಮ್ಮಯ್ಯ ನಿಲ್ಲಿಸು ನೀಲ ಕುದುರೆಯ್ಯಾss

ನಿಲ್ಲುವು ನೀಲ ಕುದುರೆ ನಿಲ ಬಂದ್ರೆ ಮಾವಯ್ಯ

ಅರಮನಿಗೆ ಬಂದರೆ ನಿಂದಾರು

ಊರ ಅಗಸಾಗೆ ಒಂದೊಂದೆ ವಾಲಿ ಬರುದಾರೆ

ಬಂದು ಒಂದೇ ವಾಲಿ ಏನೆಂದು ಬರುದಾರೆ

ಜಾಗುಂಟೆ ಮಾವಯ್ಯರಮನೆ

ಆನೆ ಕಟ್ಟಲು ಜೈದು ಅರಸೇ ಉಳಿಯಲು ಜೈದು

ಏಳೇಳು ಅಕ್ಕುಸುವೆ ನಿಲ ಜೈದು

ಏಳೇಳು ಅಕ್ಕುಸುವೆ ನಿಲಜೈದು ನಮ್ಮಳಿಯನ

ದಂಡು ಬಂದರು ನಿಲಜೈದು

ನೆಲ್ಲೂರು ಹೊಳಯಾಗೆ ಬಣ್ಣ ನೆಲದುಟ್ಟಾವು

ಚಿನ್ನದ ಕರಡಗಿಯ ಮರತೀವು

ಚಿನ್ನದ ಕರಡಗಿಯ ಮರೆತಿವು ತಮ್ಮಯ್ಯ

ನಿಲ್ಲಿಸೋ ನಿನ್ನ ಕುದುರೆಯss

ನಿಲ್ಲು ನಿಲ್ಲು ಎಂದರೆ ನಿಲ್ಲುವು ನೀಲ ಕುದುರೆ

ನಿಲ ಬಂದ್ರೆ ಅತ್ತಮ್ಮರ ಅರಮನೆಗೆ ಬಂದರೆ ತಮ್ಮಯ್ಯ

ನಿಂದರೆ ಊರ ಅಗಸಾಗೆ ಎರಡೆ ಎರಡು ವಾಲೆ ಬರುದಾರೆ

ಎರಡೆ ಎರಡು ವಾಲೆ ಏನೆಂದು ಬರೆದಾರೆ

ಅತ್ತೆಮ್ಮರ ಅರಮನೆ ಕುದುರೆ ಕಟ್ಟಲು ಜೈದು

ಜಾಲಸು ದಾರೆ ಎರವದುಕೆss

ಹಂದರದಡಿಗೆ ನಿಲಗಾಳಿ ಬೀಸಗಾಳಿ

ನೀನೊಂದ ಗಳಿಗೆ ನಿಲಗಾಳಿ

ನೀನೊಂದು ಅರಗಳಿಗೆ ನಿಲಗಾಳಿ ನಮ್ಮನಿಯ

ಮಗನು ದಾರೆ ಎರವದಕ

ಅಪ್ಪಯ್ಯ ಕವುಣದಾಗೆ ಭಟ್ಟರು ಚಾವುಡಿ ಮೇಲೆ

ಹೂವಯ್ಯ ಧಾರೆಂಬ ಗಳಿಗೆಯ$_{ss}$

ಹೂವಯ್ಯ ಧಾರೆಂಬ ಗಳಿಗೆ ಬಟ್ಟಲು ಹೂಡಿ

ಕಂದನ ಕೈ ಧಾರೆ ಅನಗೂಡಿ

ಭಟ್ಟರು ಶಾಸ್ತ್ರ ಹೇಳಿ ಮಂತ್ರಾಕ್ಷತೆ ತಳುದಾರೆ$_{ss}$

ಶಾಸ್ತ್ರ ಹೇಳಿ ಮಂತ್ರಾಕ್ಷತೆ ತಳುದಾರೆ ಭಟ್ಟರು

ಭೂಮಿ ಸುತ್ತರಿಸಿ ನಿಲಿಸಾರೆ

ಭೂಮಿಯ ಸುತ್ತಾರಿಸಿ ನಿಲಸಾರೆ ಭಟ್ಟರು

ಒಬ್ಬರು ಸಾಲೆ ಹಚ್ಚಡ ಮಾವಯ್ಯ ತಲಿಗೆ ಸುತ್ತಿ

ನೀಲ ಗಿಂಡಿ ಅವರ ಹೇಗಲೇರಿ$_{ss}$

ನೀಲ ಗಿಂಡಿ ಅವರ ಹೇಗಲೇರಿ ದಾರೆ ಎರೆವ

ಮಾವಯ್ಯರ ಸತಿ ಬರಹೇಳಿ

ಮಾವಯ್ಯರ ಸತಿ ಸಾಲೆ ಸೀರೆ ಉಟ್ಟು

ತುಪ್ಪದ್ದು ಚೆಟ್ಟಿಗವರ ಬಲಗೈಲಿ

ತುಪ್ಪಾದು ಚೆಟ್ಟಿಗವರ ಬಲಗೈಲಿ ಇಡಕೊಂಡು$_{ss}$

ಸೋನಿ ಮಳಿಯೇ ಹೊಯಿದು ಸಮುದ್ರಕ್ಕೂ ತೆಕ್ಕಾಲೇ

ನಾರೆರೇ ಹೋಗೆ ಕಲ್ಯಾಣೆ ಅನಕೊಂಡೆ

ಕಾನನ ಕರಿಯ ಮಣಿ, ದುಂಡಿನ ವ್ಯಾಳೆ ಮಣಿ

ತೀಸಪತಿಯೆಂಬ ಐದಾಳಿ ಕಲ್ಯಾಣಿ

ಕಲ್ಯಾಣಿ ತೀಸಪತಿಯೆಂಬ ಐದಾಳಿ ಕರಿಯ ಮಣಿ

ಓಟೂರೆ ಮುಟ್ಟೆ ಜನ ಮುಟ್ಟೆ ಕಲ್ಯಾಣಿ

ಓಟೂರೆ ಮುಟ್ಟಿ ಜನ ಮುಟ್ಟಿದ ಐದಾಳಿ

ಸೀತೆಗೆ ಕಾಡ್ಯಾನೆ ಸಮ ರಾಮ

ಚತುರರ ಉಳಿಯ ಬೈದು ಮತ್ತೇಳು ಲಕ್ಕುಸುವೇ ನಿಲಬೈದು

ಮತ್ತೇಳು ಲಕ್ಕುಸುವೆ ನಿಲಬೈದು ನಮ್ಮ ಅಳಿಯನ ಬರಹೇಳಿ$_{ss}$

ಅಪಯ್ಯ ಹಂದರದಾಗೆ ಭಟ್ಟರು ತಾವು ಮೇಲೆ

ಹೂವೆ ದಾರೆಂಬ ಗಳಿಗೆಯ

ಹೂವು ದಾರೆಂಬ ಗಳಿಗೆಯ ಬರದು ಕಂದನ ಕೈ ದಾರಿಗೆ ಅನಗೂಡಿ~ss~

ಬಾಲಯ್ಯ ಧಾರೆಗೂ ಬಂದು ಗಳಿಗೆಗಾಗಿ ನೋಡುತ್ತಾರೆ

ವಳಗಿರುವ ನಾರಿ ಕವಣಕೆ ಕರತಲ್ಲಿ~ss~

ಅತ್ತಲಿಂದ ತಂದ್ರೆ ಅಚ್ಚಗನ್ನ ಹರಳಿಯ ಗಮನಿಯ

ಪತ್ರೈಯ್ಯ ದಾರಿಗೂ ಬಂದು ಹನ್ನೆರಡ ಗಳಿಗಾಗಿ

ಪತ್ರೈಯ್ಯ ಹೋಗುತ್ತಾರೆ ಬೇಗತ್ತಾರೆ~ss~

ಬೇಗತ್ತಾರೆ ವಳಗಿರುವ ನಿಸ್ತ್ರೀ ಕವಣಕೆ ಕರತಲ್ಲಿ

ಹಂಗೆಲ್ಲಿಂದಾ ತಂದೆ ಹೊಂಗೆ ಗಣ್ಣ ಹರಳಿಯ ಕಸ್ತೂರಿ ಮುಖದ ಮನನಿಯ

ಕಸ್ತೂರಿ ಮುಖದ ಮನನಿಯ ಕರೆ ತಂದಾರು

ನಮ ಬಾಸಿಂಗ ಇಡಿಯ ತೆಂಗಿನ ಕಾಯಿ

ಬರದ ವಾಲೆ ಕೋಡು ಹರದಿ ನಿನ್ನ ಮಡದಿ ಜರಕುತ್ತಾ

ಹರದಿ ನಿನ ಮೊದಲೆ ಜರಕುತ್ತಾ ಹಂದರದ ಹರನೆ ಗತಿಯೆಂದು ನಿಲಬಾರೆ

ಗೊನೆಯ ಬಾಳೆಹಣ್ಣು ಬರದ ವಾಲೆ ರಂಬೆ ಜಳಕುತ್ತಾ

ರಂಬೆಯ ನೀನ ಮೊದಲೆ ಜಳಕುತ್ತಾ ಕವಣದಡಿಗೆ

ಶಿವನೇ ಗತಿಯೆಂದು ನಿಲಬಾರೆ

ಹತ್ತೆಂಟು ವರಸಾನ ತುಪ್ಪುಂಡ ಮಟ್ಟಕ್ಕೆ

ಮಗನೇ ಇವಳ ಮೆಚ್ಚೋ

ಆರೇಳ ವರಸಾನ ಹಾಲುಂಡ ಮಟ್ಟಕ್ಕೆ

ಮರಾಯರ ಮಗಳೇ ಇವ ಮೆಚ್ಚೇ

ಅತ್ತಿಯ ಮಣೆ ಮೇಲೆ ನಿತ್ತಾರ ಅವರಿಬ್ಬರು

ಆಲದ ಮಣೆ ಮೇಲೆ ಸೇರಾರ ಅವರಿಬ್ಬರು

ಅಚ್ಚ ಹಸುವಿನ ಹಾಲ ಕರತಲ್ಲಿ~ss~

ಅಚ್ಚ ಹಸುವಿನ ಹಾಲ ಕರತಲ್ಲಿ ನಮ್ಮನಿಯ

ಕುಮಾರನ ಧಾರೆ ಎರವದಕ

ಮೆಚ್ಚುವಾಗಿರುವ ಕೆಂದಾಸುವಿನ ಹಾಲ ಕರತನ್ನಿ

ಕೆಂದಾಸುವಿನ ಹಾಲ ಕರತನ್ನಿ ನಮ್ಮನಿಯ

ಕುಮಾರನ ಧಾರೆಯೆರವದಕ ss

## ಬಾಸಿಂಗದ ಹಾಡು

ಉದ್ದಿನ ನೀರು ತಿದ್ದಿದಂಗೆ ಹೋಗೂದೆ ರುದ್ರರಾ ಮಗನೆ ಕಲಿವೀರ ಸೋಬಾನವೆ

ರುದ್ರನ ಮಗನೆ ಕಲಿ ವೀರಭದ್ರ ತೋರಯ್ಯ ಮನಕೆ ಸೋಬಾನವೆ

ಹಾಳೆಯ ನೀರು ತೋಳಿದಂಗೆ ಹೋಗೂದೆ ದ್ಯಾವರ ಮಗನೆ ಕಲಿವೀರ ಸೋಬಾನವೆ

ದ್ಯಾವರ ಮಗನೆ ಕಲಿವೀರ ವೀರಭದ್ರ ತೋರಯ್ಯ ಮನಕೆ ಮತಿಗಳ ಸೋಬಾನವೆ

ಗುತ್ತಿಯ ಹೊಳೆಯಾಗ ಚಿತ್ತ ಬೆಂಡ ತಂದು ಪಪ್ಪಾದ ಅಡಿಬೆಂಡ ಅರುದಾರೆ ss

ಹೊನ್ನೂರು ಹೊಳೆಯಾಗ ಬಾಗಿದ ಬೆಂಡ ತಂದು ಪಪ್ಪಾದ ಮೇಲು ಬೆಂಡ ಅರುದಾರೆ ss

ಅಣ್ಣ ತಮ್ಮ ಸೇರಿ ಚೂರಿ ಓಡಿದು ಪಪ್ಪದಲಿ ಬೆಂಡ ಅರುದಾರೆ ಸೋಬಾನವೆ ss

ಪಪ್ಪದಲಿ ಬೆಂಡ ಅರುದಾರೆ ತಮ್ಮಯ್ಯ ಬಾಲ ಬಾಸಿಂಗಕ್ಕೆ ಗಿಣಿ ಬರಲಿ

ಬಾವನೆಂಟರು ಸೇರಿ ಚೂರಿ ಹಿಡದು ಆಯುದಲಿ ಬೆಂಡ ಅರುದಾರೆ

ನಮ್ಮನಿಯ ಮಂಚದ ಮೇಲೆ ಆಡ ಮಗನಿಗೆ ಸೋಬಾನವೆ ss

ಗುತ್ತಿ ಗುಡಿಗಾರ ಅಪ್ಪಯ್ಯಗೆ ಗೆಣಕಾರ ಮುತ್ತೆ ಬ್ಯಾಗಡಿಯ ಗೈಯುದಾರೆ ಸೋಬಾನವೇ

ಮುತ್ತೆ ಬ್ಯಾಗಡಿಯ ಗೈಯುದಾರೆ ನಮ್ಮನಿಯ ನೆಲ ಮೇಲಾಡ ಮಗನಿಗೆ ಸೋಬಾನವೇ

ಹೊನ್ನೂರು ಗುಡಿಗಾರ ಅಣ್ಣಯ್ಯನ ಗೆಣಕಾರ ಹೊನ್ನ ಬ್ಯಾಗಡಿಯ ಗೈಯುದಾರೆ
ಸೋಬಾನವೇ

ಹೊನ್ನ ಬ್ಯಾಗಡಿಯ ಗೈಯುದಾರೆ ನಮ್ಮನಿಯ ಮಂಚದ ಮೇಲಾಡ ಮಗನಿಗೆ ss

ಬಾಸಿಂಗ ಕೇಳಿ ಏಸೊಂದ ದಿನವಾಗಿ ಬಾಸಿಂಗ ನಮನಿಗೆ ಬರನಿಲ್ಲ ss

ಬಾಸಿಂಗ ನಮನಿಗೆ ಬರನಿಲ್ಲ ಗುಡಿಗಾರ ಎಮ್ಮೆ ಇದ್ದರು ಹೊಡಕೊಡು ಸೋಬಾನವೇ

ಎಮ್ಮೆ ಹೊಡವದಕೆ ನಾ ಮಾಡಿದ್ದೇನು ಇರುಳೆದ್ದು ಗೈವೆ ಬೆಳತಂಕ ಸೋಬಾನವೆ

ತೊಂಡಲ ಕೇಳಿ ಏಸೊಂದೆ ದಿನವಾಗಿ ತೊಂಡಲು ನಮನಿಗೆ ಬರನಿಲ್ಲ ಸೋಬಾನವೆ

ತೊಂಡಲ ನಮ್ಮನಿಗೆ ಬರನಿಲ್ಲ ಗುಡಿಗಾರ ಆಕಳಿದ್ದರ ಹೊಡಕೊಡು ಸೋಬಾನವೆ

ಆಕಳ ಹೊಡಿಯಾಕೆ ನಾ ಮಾಡಿದ ತಪ್ಪೇನು ಇರುಳೆದ್ದೆ ಗೈದೆ ಬೆಳತನಕ ಸೋಬಾನವೆ

ಇರುಳೆದ್ದೆ ಗೈದೆ ಬೆಳತಂಕ ತೊಂಡಲದ ಗೊಂಡೆವು ತಿದ್ದದೇ ಬೆಳಗಾಗಿ ಸೋಬಾನವೆ

ಬಾಸಿಂಗ ಕೊಂಡಾರು ಬಾವಿ ಕಟ್ಟೆ ಮೇಲೆ ಸೂರ್ಯನ ತಮ್ಮ ಜಾಣರು ಸೋಬಾನವೆ

ಸೂರ್ಯನ ತಮ್ಮ ಜಾಣರು ಮದವಿಗೆ ಬಾಸಿಂಗ ಕೊಂಡರು ಸುಬದಿಂದೆ

ಮುತ್ತಿನ ಬಾಸಿಂಗ ಅಪ್ಪಯ್ಯ ನೊಡಲು ಬಂದಾರು ಸೋಬಾನವೆ

ಮತ್ತೆ ಮಂಗಳವೆ ಜಯ, ಜಯ ಆಗಲೆಂದ ಅಪ್ಪಯ್ಯ ನೋಡೇರೆ ಸುಬದಿಂದ ಸೋಬಾನವೆ

ಬೆಂಡಿನ ಬಾಸಿಂಗ ಅಣ್ಣಯ್ಯ ನೋಡೇರು ಬಂದ ಮಂಗಳವೇ ಜಯ ಜಯ ಸೋಬಾನವೆ

ಮಂಗಳವೇ ಜಯ ಜಯ ಅಗಲೆಂದು ಅಣ್ಣಯ್ಯ ನೋಡ್ಯಾರೆ ಸುಖದಿಂದ ಸೋಬಾನವೆ

**ಹಸೆ ಹಾಸುವ ಹಾಡು**

ಅಟ್ಟಾ ಮೇಲಿರುವ ಕಟ್ಟೆನು ಚಾಪೆ ತಲ್ಲಿ

ಅಚ್ಚಿನ ಬೆಲ್ಲ ತಗ ತಲ್ಲಿ ಸೋಬಾನವೆ~ss~

ಅಚ್ಚಿನ ಬೆಲ್ಲ ತಗತಲ್ಲಿ ನಮನಿಯ

ಕೆಂಚೇರೆ ಒಂದು ತರದ ಹಸೆ ಹಾಕೆ ಸೋಬಾನವೆ~ss~

ಗೋಡೆಯ ಮೇಲಿರುವ ಜೋಡಿ ಚಾಪೆ ತಲ್ಲಿ

ಜೋನಿಯ ಬೆಲ್ಲ ತಗತಲ್ಲಿ ಸೋಬಾನವೆ~ss~

ಜೋನಿಯ ಬೆಲ್ಲ ತಗತಲ್ಲಿ ನಮನೀಯ

ರಂಬೆರ ಒಂದು ತರದ ಹಸೆ ಹಾಕೆ ಸೋಬಾನವೆ~ss~

ಕಂಚಿ ಕಂಚಿ ಕೇರಿ ಕಂಚಿ ಮೊದಲ ಕೇರಿ ಮಲ್ಲಕೇರಿ

ಕಂಚಿವಂತರ ಮಲಕಿನ ಸೀರೆ ಉಟ್ಟು

ಕೆಂಚೇರು ಒಂದ ತರದ ಹಸೆ ಹಾಕೆ ಸೋಬಾನ ಬನ್ನಿರೆ

ಲಿಂಬಿ ಲಿಂಬಿ ಕೇರಿ ಲಿಂಬಿ ಮೊದಲ ಕೇರಿ

ಲಿಂಗವಂತರ ಕೇರಿ ಮಲ್ಲಕೇರಿ ಸೋಬಾನವೆ~ss~

ಲಿಂಗವಂತರ ಕೇರಿ ಮಲಕಿನ ಸೀರೆ ಉಟ್ಟು

ರಂಬೆರ ಒಂದತರದ ಹಸೆ ಹಾಕೆ ಸೋಬಾನವೆನ್ನಿರೆ~ss~

ಆ ಕೈಲಿ ಅ ಗಂಟೇ ಮಾ ಕೈಯಲಿ ಮಡಿಯ ಗಂಟೆ

ಮಡಿವಾಳನ ಮಡವಿ ಹಸೆ ಹಾಕೆ ನೆಡಮಾಡಿ ಸೋಬಾನವೆ~ss~

ನಿಸ್ತ್ರೀ ತಮ್ಮ ಅಳಿಯನ ಪಾದ ನೊಂದವೆಂದು ಬಣ್ಣ ಹಾಸಾಳೆ ತರತರಕೆ

ಬಣ್ಣದ ಹಸೆ ಹಾಸಾಳೆ ತರತರಕೆ ಸೋಬಾನವೆನ್ನಿರೆ~ss~

ಹಂದರ ಚಪ್ಪರ ಹನ್ನೆರಡು ಗಾವ ವಾಗೆ

ಕನ್ನೆ ಗೆದ್ದು ತಮ್ಮ ಬಂದಾರೆ
ಕನ್ನೇಯ ಗೆದ್ದು ತಮ್ಮ ಬಂದಾರೆ ಅಂದ ಹೇಳಿ
ಹೂವ ತುಂಬ್ಯಾರೆ ಎಡಬಲಕೆ ಸೋಬಾನವೆ

## ತೌರಿಗೆ ಕರೆಯುವ ಹಾಡು

ಕದಲಿಯ ಕಟ್ಟಿಸುವೆ ಶಿವನಿಗೆ
ಶಿವನಿಗೆವಿಳ್ಳೊಕ್ಕಿನ
ನೆಲ್ಲಕ್ಕಿ ನಿಧಿಯ ಏ ನಡಸುವೆ ‖ ೧ ‖

ಬಾಣಂತಿ ಸೀರೆ ಸುಟ್ಟು
ಬಾವಿ ನೀರಿಗ್ಹೋಗಿ
ಬಾವಿ ಗಂಗಮ್ಮ ಏ ತಡುದಾಳೆ ‖ ೨ ‖

ಬಾವೀನೆ ಗಂಗಮ್ಮ
ತಡದು ಕೇಳಾಳಲ್ಲೆ
ಕರುದೆಷ್ಟೆ ನಾರಿ ಏ ಬೆಲಿ ಪಿಷ್ಟೆ ‖ ೩ ‖

ಕರದು ಕಾಮನ ದುರ್ಗ
ಬೆಲೆಯು ಬೆಂಕಿ ಶೂರ
ದೊರೆಯೆ ನನ್ನ ತಮ್ಮ ಏ ಉಡನಿದ್ದ ‖ ೪ ‖

ಎಕ್ಕೆ ಹೂ ಆದಾಗ
ಬಿಕ್ಕೆ ಫಲ ಬಿಟ್ಟಾಗ
ನಿನಗೆ ಗಂಡು ಮಗು ಆದಾಗ ಬರುತೀನಿ ‖ ೫ ‖

ನಿನಗೇನೆ ಗಂಡು ಮಗವು
ಆದಾಗ ಬರುತೀನಿ
ತವರೂರಗೆಲ್ಲ ಏ ತಣ್ಣಗಿರಲಿ ‖ ೬ ‖

## ಬೀಸುವ ಹಾಡು

ಅವಳ ಮನಿಗೆ ಹೋಗಲಿ ಬ್ಯಾಡ
ಮನಸಾ ನೊಂದಾವೆ
ಅವಳಾ ಮನೀಗೆ ವೀಳ್ಯಾದೆಲಿಗೆ ‖ ಪ ‖

ಹಸರು ಉಡಲಿ ಬ್ಯಾಡ
ದಸರಿ ಹೊದಿಯಲಿ ಬ್ಯಾಡ

ಹಗಲು$_{ss}$ ನಮ್ಮನಿಗೆ ಬರದೀರೊ
ಅವಳ ಮನೀಗೆ ವೀಳ್ಯಾದೆಲಿಗೆ ॥ ೧ ॥

ಹಗಲೂನೆ ನಮ್ಮನಿಗೆ
ಬರದಿರು ಮಾವನ ಮಗನೆ
ದೂರು$_{ss}$ ಬಂದಾವೆ ಏ ನಮ್ಮ ಮ್ಯಾಲೆ
ಅವಳಾ ಮನೀಗೆ ವೀಳ್ಯಾದೆಲಿಗೆ ॥ ೨ ॥

ದೂರೂನೆ ಬಂದಾರೆ
ಧೀರಾ ನಾನ್ಯೆದೀನೆ
ಗತಿಯ್ಕೆ$_{ss}$ ಚಿತ್ತರದಗಣಿಯ
ಅವಳಾ ಮನೀಗೆ ವೀಳ್ಯಾದೆಲಿಗೆ ॥ ೩ ॥

ಹಳದಿ ಉಡಲಿದಿರೊ
ಬಿಳದು ಹೊದಿಯಲುದಿರೊ
ಇರುಳು$_{ss}$ ನಮ್ಮನಿಗೆ ಏ ಬರದೀರೊ ॥ ೪ ॥

ಇರುಳೂನೆ ನಮ್ಮನಿಗೆ
ಬರದಿರು ಮಾವನ ಮಗನೆ
ದೂರು ಬಂದಾವೊ ಏ ನಮ್ಮ ಮ್ಯಾಲೆ
ಅವಳಾ ಮನೀನೆ ವೀಳ್ಯಾದೆಲಿಗಿ ॥ ೫ ॥

ದೂರೂನೆ ಬಂದಾರೆ
ಧೀರನಾನ್ಯೆದೀನೆ
ತೆಗಿಯ್ಕೆ$_{ss}$ ಚಿತ್ತರದ ಏ ಚಿಲಕಾಲ
ಅವಳಾ ಮನೀಗೆ ವೀಳ್ಯಾದೆಲಿಗೆ ॥ ೬ ॥

ತೆಗಿಯೇನೆ ಚಿತ್ತರದ
ಚಿಲಕ ಮಾವನ ಮಗಳೆ
ಮದಿವ್ಯಾಗಲು ಬಂದೆ ಹೆದರ ಬ್ಯಾಡಲು ಹೆಣ್ಣೆ
ಅವಳಾ ಮನೀಗೆ ವೀಳ್ಯಾದೆಲಿಗಿ ॥ ೭ ॥

ಬಣ್ಣ ಅಂಗಿ ತಮ್ಮಾ ಬಾ ನನ್ನ ಇದರಿಗೆ
ನಾನೋಡಿ ಸಂತೋಷ ಪಡತೀನೋ
ರಾತ್ರಿಯು ಕಳೆದು ‖ ಪ ‖

ನನ್ನ ತಮ್ಮ ಕಾಣೆ ಮುರಿದರು ಚಿನ್ನ ಕಾಣೆ
ಸಣ್ಣಮಲ್ಲೀಗೆ ಪರಿಮಳ
ರಾತ್ರಿಯು ಕಳೆದು ‖ ೧ ‖

ಸಣ್ಣಾನೆ ಮಲ್ಲೀಗೆ ಪರಿಮಳ ಪಟ್ಟೀಯು ತೆನೆಯು
ಸುಗ್ಗಾದಪ್ಪ ನನ್ನ ತಲೆಯಾಗೆ
ರಾತ್ರಿಯು ಕಳೆದು ‖ ೨ ‖

ಕರೆಯು ಬರುತಾನೆಂದು ಕೆರೆಯು ನೀರಸು ಮಿಂದೆ
ಕರೆಯು ತಮ್ಮಯ್ಯ ಬರಲಿಲ್ಲ
ರಾತ್ರೀಯು ಕಳೆದು ‖ ೩ ‖

ಕೂಸೀಗೆ ಕುಂಚೀಗೆ ರೇಶಿಮೆ ಗೊಂಡೇವು
ತಾಸೊತ್ತಿನ್ಯಾವಿ ತವರೂರು
ರಾತ್ರಿಯು ಕಳೆದು ‖ ೪ ‖

ತಾಸೊತ್ತಿನಾ ಹಾದಿ ತವರೂರು ದೇವರಿಗೆ
ಕೂಸ್ಕೆಟ್ಟ ಕೈಯ ಮುಗಿದಾಳೆ
ರಾತ್ರಿಯು ಕಳೆದು ‖ ೫ ‖

ಬಾಗಿಲ ಅಂಚಿಗೆ ಬಾವಿ ತೆಗಿಸಲು ಬೇಕೆ
ಬಳ್ಳಿ ಮಲ್ಲೀಗೆ ನಡಬೇಕೆ
ರಾತ್ರೀಯು ಕಳೆದು ‖ ೬ ‖

ಬಳ್ಳಿಯು ಮಲ್ಲೀಗೆ ನೆಡಬೇಕೆ ತಮ್ಮಯ್ಯ
ಬಳಿ ನೋಡಿ ಹೆಣ್ಣ ತರಬೇಕೆ
ರಾತ್ರೀಯು ಕಳೆದು ‖ ೭ ‖

ಬಳಿಯ ನೋಡಿ ಹೆಣ್ಣಾ ತರಬೇಕು ತಮ್ಮಯ್ಯಗೆ
ನಮ್ಮ ನಿಲ್ಲೀಸಿ ಕೆಲಸಾವ
ರಾತ್ರೀಯೆ ಕಳೆದು ‖ ೮ ‖

ನಮ್ಮನ್ನೆ ನಿಲ್ಲಿಸಿ ಕೆಲಸಾವ ಮಾಡುವಂತಾ
ತರಬೇಕು ಬಡವರಾ ಮಗಳಾವ
ರಾತ್ರೀಯ ಕಳೆದು ॥ ೯ ॥

ಸಂತೀಗೆ ಹೋದಣ್ಣ ಮಲ್ಲಿಗೆ ದಂಡೆ ತಂದಾ
ತಂಗಿ ಕೇಳಿದರೆ ಕೊಡಲಿಲ್ಲ
ರಾತ್ರೀಯ ಕಳೆದು ॥ ೧೦ ॥

ತಂಗೀಯು ಕೇಳಿದರೆ ಕೊಡಲಿಲ್ಲ ಅಣ್ಣಯ್ಯ
ಮಡದಿ ಕೇಳಿದರೆ ಮುಡಿಯೆಂದಾ
ರಾತ್ರೀಯ ಕಳೆದು ॥ ೧೧ ॥

ಇಷ್ಟಾನೆ ಮಾತೀಗೆ ಸಿಟ್ಟೀನೆ ತಂಗ್ಯಮ್ಮ
ಪಟ್ಟೆ ತಂದೀನಿ ಉಡಬಾರೆ
ರಾತ್ರೀಯ ಕಳೆದು ॥ ೧೨ ॥

ಪಟ್ಟೆ ಸೀರೆ ಒಯ್ಯು ಪಟ್ಟದ ರಾಣಿಗೆ ಕೊಡೊ
ಹಾಸ್ಕೊಳೊ ನಿನ್ನ ಹೊಗಸ್ಕೊಳೊ
ರಾತ್ರೀಯ ಕಳೆದು ॥ ೧೩ ॥

ಸಿಂದುಗಾ ಪತ್ರ ಕಟ್ಟಿ ಕೈಯಿಲ್ಲಾ ಗುಳ್ಳೆ ಬಂದೊ
ಒಡ ಹುಟ್ಟಿದಣ್ಣ ಕೈ ನೋಡೊ
ರಾತ್ರೀಯ ಕಳೆದು ॥ ೧೪ ॥

ಕೈಯಾ ತೋರಲು ಬೇಡ ಕಣ್ಣೀರುದ್ಲು ಬೇಡ
ಗಡಿನಾಡಿ ಗ್ಹೋಗಿ ಗರತೀಯ
ರಾತ್ರೀಯ ಕಳೆದು ॥ ೧೫ ॥

ಗಡಿಯ ನಾಡಿಗ್ಹೋಗಿ ಗರತೀಯ ತರೋತನಕ
ಗಡಸಾಗಿರು ತಂಗಿ ಮನಿಯಾಗೆ
ರಾತ್ರೀಯ ಕಳೆದು ॥ ೧೬ ॥

## ಬೀಸುವ ಹಾಡು

ಕಲ್ಲಿದೆ ಕಂದಪ್ಪ ಬಳ್ಳಿ ಸಲ್ಲ ನುಡಿಯೆ
ಪಲ್ಲಕ್ಕಿ ಮ್ಯಾಲೆ ಮಗ ಬರಲೆ
ಮುಡಿಯಲಿಲ್ಲೋಳೆ ಹೂವ ||ಪ||

ಪಲ್ಲಕ್ಕಿ ಮೇಲೆ ಮಗ ಬರಲಿ ಈ ಮನೆಗೆ
ಮಲ್ಲಿಗೂವು ಮುಡಿವ ಸೊಸಿ ಬರಲಿ
ಮುಡಿಯಲಿಲ್ಲೋಳೆ ಹೂವ ||೧||

ನೀರಿಗೆ ಹೋದಲ್ಲಿ ನೀಲದ ಬಳೆ ಬಂದು
ಈ ನಾಡಗಿಂತ ಬಳೆಯಿಲ್ಲ
ಮುಡಿಯಲಿಲ್ಲೋಳೆ ಹೂವ ||೨||

ಈ ನಾಡಗಿಂತ ಬಳೆಯಿಲ್ಲ ಬಳೆಗಾರ
ಹೋಗಯ್ಯ ನನ್ನ ತವರೀಗೆ
ಮುಡಿಯಲಿಲ್ಲೋಳೆ ಹೂವ ||೩||

ನಿನ್ನ ತವರೂರ ನಾನೇನ ಬಲ್ಲೇನೆ
ಇನ್ನೊಮ್ಮೆ ಹೇಳೆ ಗುರುತಾವ
ಮುಡಿಯಲಿಲ್ಲೋಳೆ ಹೂವ ||೪||

ವೀಳ್ಯೆಯ ಎಡಕಾಸಿ ಬಾಳೆಯ ಬಲಕಾಸಿ
ನಾಗ ಸಂಪಿಗೆಯ ನಡುಕಾಸಿ
ಮುಡಿಯಲಿಲ್ಲೋಳೆ ಹೂವ ||೫||

ನಾಗ ಸಂಪಿಗೆಯ ನಡುಕಾಸಿ ಹೋದರೆ
ಅಲ್ಲೆ ತಣ್ಣಯ್ಯ ಅರಮನೆ
ಮುಡಿಯಲಿಲ್ಲೋಳೆ ಹೂವ ||೬||

ಅಲ್ಲೆ ತಣ್ಣಯ್ಯನ ಅರಮನೆ ಬಾಗಿಲಮುಂದೆ
ಬಾಗಿಲಾಗೆ ನವಿಲ ಬರಸೈತೆ
ಮುಡಿಯಲಿಲ್ಲೋಳೆ ಹೂವ ||೭||

ಬಳೆಯನ್ನಿಡುವಾಗ ಬಲಕ್ಕೆ ನೀನಾದಾವೊ
ಬಳೆಗಾರರಣ್ಣ ಕೈ ಬಿಡೊ
ಮುಡಿಯಲಿಲ್ಲೋಳೆ ಹೂವ ||೮||

ಇಕ್ಕೇರಿ ಸೀಮಿಗೆ ದೂರಿ ಕಾಣೊ ಅಣ್ಣಯ್ಯ
ಗಿರಿಕಾಣೆ ನನ್ನ ಹಿರಿಯಣ್ಣ
ಮುಡಿಯಲಿಲ್ಲೇಳೆ ಹೂವ ॥ ೯ ॥

ಗಿರಿಕಾಣೆ ನನ್ನ ಹಿರಿಯಣ್ಣ ನಿರುವಾಗ
ದೊರೆಯಾಡ ಮಾತ ನುಡಿದಾನ
ಮುಡಿಯಲಿಲ್ಲೇಳೆ ಹೂವ ॥ ೧೦ ॥

ದೊರೆಯಾಡ ಮಾತ ನುಡಿದಾನ ಅಣ್ಣಯ್ಯ
ನನಗೇನಂಜಿಕೆ ಅನುಗಾಲ
ಮುಡಿಯಲಿಲ್ಲೇಳೆ ಹೂವ ॥ ೧೧ ॥

ಗಂಡ ದಂಡಿಗ್ಹೋಗಿ ಮಂಡೆ ಬಾಚಲಿಲ್ಲ
ದುಂಡ ಮಲ್ಲೀಗೆ ಮುಡಿಯಲಿಲ್ಲ
ಮುಡಿಯಲಿಲ್ಲೇಳೆ ಹೂವ ॥ ೧೨ ॥

ದುಂಡ ಮಲ್ಲೀಗೆ ಮುಡಿಯಲಿಲ್ಲೆಂಬ ಸುದ್ದಿ
ದಂಡಿನಾಗ ತಾರೆ ನುಡಿದಾವೆ
ಮುಡಿಯಲಿಲ್ಲೇಳೆ ಹೂವ ॥ ೧೩ ॥

ದಂಡಿನಾಗೆ ತಾರೆ ನುಡಿದದ್ದು ಕೇಳಿ
ಎನ್ನರಸ ಬಂದು ಹೂವು ಮುಡಿಯುಂದಾನ
ಮುಡಿಯಲಿಲ್ಲೇಳೆ ಹೂವ ॥ ೧೪ ॥

## ಗುಣಸಾಗರಿ ಹಾಡು

(ಹೇಳಿದವರು : ಶ್ರೀಮತಿ ಕೆರಿಯಮ್ಮ ಬಲೀಗಾರು, ಸಂಗ್ರಹ : ಶ್ರೀ ಹುಚ್ಚಪ್ಪ ಮಾಸ್ತರ)

### ಮೊದಲನೆ ಸಂಧಿ

ಹತ್ತೆಂಟ ಪದನ ಕಪ್ಪಿನ ಭರಣಿ ತುಂಬಿ ।
ಮತ್ತವರ ಕೀಲೆ ಒಡೆದಾವು ।
ಮತ್ತವರ ಕೀಲೆ ಒಡೆದಿದ್ದು ಹೇಳತ್ತೀನಿ
ತಾಯಿ ಗುಣಸಾಗ್ರಿ ವಚನಾವ ॥ ೧ ॥

ಆರೇಳ ಪದನ ಹಾಲೆ ಭರಣಿ ತುಂಬಿ
ಈಗವರ ಕೀಲೆ ಒಡೆದಾವು

ಈಗವರ ಕೀಲೆ ಒಡೆದಿಸ್ಸು ಹೇಳತ್ತೀನಿ
ತಂದೆ ಚನ್ನಶೆಟ್ಟಿ ಪಚನಾವ

॥ ೨ ॥

ಕೇಳುಂಬವರಿಗೆ ಹೇಳದಿದ್ದರು ಪಾಪ
ಕೇಳುತ್ತಾರವರ ಪರಚಿತ್ರ
ಬಲ್ಲವರಿಗೀ ಹಾಡು ಬೆಲ್ಲಾವ ಮೆದ್ದಂತೆ
ಅಲ್ಲಾದ ಮೂಢ ಮನುಜಾಗೆ ।
ಅಲ್ಲಾದಾನೇ ಮೂಢ ಮನುಜರಿಗೆ ಈ ಹಾಡು
ಕಲ್ಲ ಮೇಲೆ ಮಳೆಯ ಸುರಿದ್ಹಾಂಗೆ ॥

ಬಲ್ಲವರೀಗೀ ಹಾಡು ಬೆಲ್ಲಾವ ಮೆದ್ದಂತೆ
ಅಲ್ಲಾದ ಮೂಢ ಮನುಜಾಗೆ
ಅಲ್ಲಾದಾನೇ ಮೂಢ ಮನುಜರಿಗೆ ಈ ಹಾಡು
ಅಡವ್ಯಾಗೆ ಮಳೆಯ ಕರೆದ್ಹಾಂಗೆ

ಅಕ್ಕ ನಮ್ಮ ಧ್ವನಿಗೆ ಜೊತ್ತೆಲಿ ನಾಲ್ವರು ಬೇಕು
ಚಿಟ್ಟೂರ ಮ್ಯಾಳ ಬರಬೇಕು ।
ಚಿಟ್ಟೂರ ಮಲ್ಲಿಗೆ ತೋಟ್ಟೆಲ್ಲ ಪರಿಮಳ
ನಿನ್ನೀಯ ತರುವ ಗಮನಾವ ।

ಬೇಲೂರ ಮಲ್ಲೀಗೆ ಬೇರೆಲ್ಲ ಪರಿಮಳ
ನಾರಿಯ ತರುವಗಮನಾವ ।

ಹತ್ತೊರುಷದ ಗಂಡಿಗೆ ಐದೊರುಷದ ಹೆಣ್ಣೀಗೆ
ಅಪ್ಪ ಅವ್ವ ಹೋಗಿ ವರನೋಡಿ
ಅಪ್ಪ ಅವ್ವ ಹೋಗಿ ವರನೋಡಿ ಮಲ್ಲಿಗುದೇವಿ
ಪುತ್ರಗು ತಂದಾರೊಂದು ಗರತೀಯ ।

ಆರೊರುಷದ ಗಂಡೀಗೆ ಮೂರೊರುಷದ ಹೆಣ್ಣೀಗೆ
ತಾಯಿ ತಂದ್ಯೋಗಿ ವರನೋಡಿ
ತಾಯಿ ತೊಂದ್ಯೋಗಿ ವರನೋಡಿ ಮಲ್ಲಿಗುದೇವಿ
ಬಾಲಗು ತಂದಾರೊಂದು ಗರತೀಯ ॥

ಇಪ್ಪತ್ತಾರವ ಕೊಟ್ಟು ಗುತ್ತಿಗು ಕಳಿಗ್ಯೆದಾರೆ
ಗುತ್ತಿಯುಂಬಾಚೆ ಪರಿವಾರ

ಗುತ್ತಿಯಿಂದಾಚೆ ಪರಿವಾರದೊಳಗಿರುವ
ಉತ್ತುಂಬರಿ ಗೋಲೆ ಬರುದಾರೆ

ಉತ್ತುಂಬರಿ ಗೋಲೆ ಮತ್ತೈನ ಬರೆದಾರೆ
ಮುಕ್ತಿಸೋಲಗವೆ ಬರಲೆಂದು ||
ಮುಕ್ತಿಸೋಲಗವೆ ಬರಲೆಂದವ್ವ ತೆದವ್ವ
ಉತ್ತುಂಬರಿಗೋಲೆ ಬರೆದಾರೆ ||

ಹನ್ನೆರಡೊರವ ಕೊಟ್ಟು ಹೊನ್ನೂರಿಗೆ ಕಳಿಗೈದಾರೆ
ಹೊನ್ನುರಾಜ್ಯಾಕೆ ಹರಿವಾರ
ಹೊನ್ನೂರಾಜ್ಯಾಕೆ ಪರಿವಾರದೊಳಗಿರುವ
ಮಹರಾಯರಿಗೋಲೆ ಬರೆದಾರೆ |

ಮಹರಾಯರಿಗೋಲೆ ಏನೆಂದು ಬರೆದಾರೆ
ಚಿನ್ನದ ಬಾಸಿಂಗ ಬರಲೆಂದು
ಚಿನ್ನದ ಬಾಸಿಂಗ ಬರಲೆಂದವರ ಹಡೆದವ್ವ
ಮಹಾರಾಯರಿಗೋಲೆ ಬರೆದಾರೆ ||

ಆಗಲಾಗಲಿ ಮದುವೆ ಹೋಗಾಲಿ ವಿಘ್ನ
ಈಗೇನ ಬೇಕೊ ಪಡುಗಾಲ |
ಈಗೇನ ಬೇಕೊ ಪಡುಗಾಲು ಮೂಡಲು ರಾಜ್ಯ
ತಾನೆ ಚಿನ್ನ ಶೆಟ್ಟಿ ಸುಧಿದಾನೆ |

ಹತ್ತೆಂಟೊರುಷಾದ ಸಿಸ್ತೀ ನಾವ್ ತಂದೀವಿ
ಮತ್ತೇನ ಕಂಡ್ಯೊ ಎಲೆ ಮಗನೆ
ಮತ್ತೇನ ಕಂಡ್ಯೊ ಎಲೆ ಮಗನೆ ಚಿನ್ನ ಶೆಟ್ಟಿ
ಪುತ್ರಯ ನಿನಗೆಂತ ಪಡ ಗಾಲ

ಉಪ್ಪರಿಗೆ ಒಳಗೆ ಸುತ್ತ ಹೊನ್ನಿನ ಕಣಜ
ಕಿತ್ತೆಚ್ಚಿ ಮಾಡೋ ಎಲೆ ಮಗನೆ
ಕಿತ್ತೆಚ್ಚಿ ಮಾಡೊ ಎಲೆ ಮಗನೆ ಚಿನ್ನ ಸೆಟ್ಟಿ
ಸಣ್ಣವ ನಿನಗೆಂತ ಪಡುಗಾಲೋ |

ಮುತ್ತೀನ ಮುಂಡೀಗೆ ಒಪ್ಪ ನಿಂದ್ಯೆದಾವೆ
ಚಿಕ್ಕ ಬಣಜಿಗನ ಸತಿಯೋಳು

ಹವಳದ ಗೊಂಚಿ ಬಿಟ್ಟು ಹರದೆಲ್ಹೋಗುತ್ತೀಯೊ
ಹವಳಿಲ್ಲವೇನೊ ಮನಿಯಾಗೆ
ಹವಳಿಲ್ಲವೇನೊ ನಮ್ಮನಿಗೆ ನೀ ಬಂದ್ರೆ
ಹವಳಾದ ಕದವ ಕೊಡಿಸುವೆ ॥

ಎರಡನೇ ಸಂಧಿ

ಹಚ್ಚಡ ಸೆರಗೀಲಿ ಬಿಚ್ಚೊತ್ತಿನ್ನ ಕಟ್ಟ್ಯಾರೆ
ಎತ್ತಿಗು ದೋರಿಗರ ಕಳಿಗ್ಯಾರೆ ಸುವ್ವಿ
ಸುವ್ವಿಗು ಸುಭರಣಾವೆ ಸುವ್ವಿ
ಪಾವಡು ಸೆರಗಲ್ಲಿ ಜೋಡ್ತೊನ್ನ ಕಟ್ಟ್ಯಾರೆ
ಹೋರಿಗು ದೋರಿಗರ ಕಳಿಗ್ಯಾರೆ ಸುವ್ವಿ
ಸುವ್ವಿಗು ಸುಭರಣಾವೆ ಸುವ್ವಿ ।

ಸುವ್ವಿಗು ಸುಭರಣಾವೆ ಸುವ್ವಿ
ಹೋರಿ ತಂದಾರೆ ಏರಿಗೆ ತೋರ್ಯಾರೆ
ಏರಿಗ ನೋಡಿದರೆ ಕಡೆಕಣ್ಣ ಸುವ್ವಿ
ಎತ್ತ ತಂದಾನೆ ಸೆಟ್ಟೀಗೆ ತೋರ್ಯಾನೆ
ಸೆಟ್ಟಿ ನೋಡ್ಯಾನೆ ಕಡೆಕಣ್ಣ ಸುವ್ವೀ । ಸುವ್ವಿಗು ।

ಸೆಟ್ಟಿ ನೋಡ್ಯಾನೆ ಕಡೆಗಣ್ಣಲ್ಲಾ ಎತ್ತ
ಕಟ್ಟಿ ಮೇಟಿಗೆ ಹೊಡೆ ಎಂದ ಸುವ್ವಿ ॥ ಸುವ್ವಿಗು ॥

ಕಗ್ಗಲ್ಲ ಪುಡಿಮಾಡಿ ಸುಗ್ಗಲ್ಲು ಸುರಿಮಾಡಿ
ಮುತ್ತಲು ಮರ ಸವರಿ ಬಯಲು ಮಾಡಿ ಸುವ್ವಿ ॥
ಮುತ್ತಲು ಮರ ಸವರಿ ಬಯಲು ಮಾಡಿ ಚೆನ್ನಸೆಟ್ಟಿ
ನಿನ್ನೇಗರ ಮನೆಯ ರಥನೆಸ್ತೋ ಸುವ್ವೀ ।

ಓಟ್ಟುಗಲ್ಲು ಓಟ್ಟು ಮಾಡಿ ಸುಟ್ಟುಗಲ್ಲು ಸುರಿಮಾಡಿ
ಕಡಲೆ ಗಿಡ ಕಡಿದು ಬಯಲು ಮಾಡಿ ಸುವ್ವಿ ।
ಕಡಲೆ ಗಿಡ ಕಡಿದು ಬಯಲು ಮಾಡಿ ಚೆನ್ನಸೆಟ್ಟಿ
ರಂಜಿಗರಮನೆಯ ರಥ ನೆಸ್ತೋ ಸುವ್ವಿ ।

ಇಂಗು ಯಾಲಕ್ಕಿ ಸಂಭ್ರಮದ ಜೀರಿಗೆ
ಎಂದೆಂದಿಗುಂಬ ನಿದನಾವ ಸುವ್ವೀ

ಎಂದೆಂದಿಗುಂಬ ನಿದನಾವ ಚೆನ್ನಶೆಟ್ಟಿ
ರಂಬೆಗರಮನೆಯ ರಥನೆಸ್ತ್ಯ ಸುವ್ವಿ

ಹಂಜಕ್ಕ ಹುಂಜಕ್ಕ ಗಂದಾವ ತೇಯಕ್ಕ
ಮುಂಜೆಲೆದ್ದು ಮೊಸರ ಕಡೆವಕ್ಕ ಸುವ್ವಿ
ಮುಂಜುಕಳೆದ್ದು ಮೊಸರ ಕಡೆವಕ್ಕಂತೆಂಬರನೆ
ರಂಬೆಗೆ ಗೌಡೇರ ರಥನೆಸ್ತ್ಯ ಸುವ್ವಿ....

ಅಲ್ಲಕ್ಕ ಮಲ್ಲಕ್ಕ ಎಲ್ಲಾರೊಂದೆ ಕಾಣ್ರೆ
ನಲ್ಲೆ ನನ್ನ ಸತಿಯ ಉರಿಸೀರಿ ಸುವ್ವಿ
ನಲ್ಲೆ ನನ್ನ ಸತಿಯ ಉರಿಸೀದುಂಟಾದರೆ
ನೆತ್ತಿಗು ನಾಲಗೆಯ ತೆಗ ಹೀನೆ ಸುವ್ವಿ

ಮಲ್ಲೀಗೆ ಹೂವ್ವ ಚೆಲ್ಲಿಗುಂಡಾದಾವೆ
ನಲ್ಲೆ ನನ್ನ ಸತಿಗೆ ಮುಡಿಸವ್ವ ಸುವ್ವಿ
ನಲ್ಲೆ ನನ್ನ ಸತಿಗೆ ಮುಡಿಸವ್ವ ಮುಡಿಸಾದಿದ್ರೆ
ತಾಯಲ್ಲೆ ನಾನು ಮಗನಲ್ಲೆ ಸುವ್ವೀ ...

ಸಂಪೀಗೆ ಹೂವು ಚಂಪಾಲೆ ಗುಂಡೈದಾವೆ
ಕೆಂಚೆ ನನ್ನ ಸತಿಗೆ ಮುಡಿಸವ್ವ ಸುವ್ವಿ
ಕೆಂಚೆ ನನ್ನ ಸತಿಗೆ ಮುಡಿಸವ್ವ ಮುಡಿಸಾದಿದ್ರೆ
ತಾಯಲ್ಲೆ ನಾನು ಮಗನಲ್ಲೆ ಸುವ್ವಿ

ಸಾವರ್ಕೆ ಸರಗಂಟೆ ನೂರಕ್ಕೆ ಹಣಹಗ್ಗ
ಅಂದಕೆ ಹಾಕ್ಯಾನೊ ಮುಖಿಚವರಿ ಸುವ್ವಿ
ಅಂದಕೆ ಹಾಕ್ಯಾನೊ ಮುಖಿಚವರಣ್ಣಾನ್ಹೋರಿ
ಶಹರಾದಾಗೆ ಸಾಗಿ ಬರುತಾವೆ ಸುವ್ವಿ

ಉಪ್ಪರಿಗೆ ಒಳಗೆ ಹೋದಾಳೆ ಗುಣಸಾಗ್ರಿ
ನಿಟ್ಟೀಗೆ ಕೈಯ ಮುಗಿದಾಳೇ ಸುವ್ವಿ
ನಿಟ್ಟೀಗೆ ಕೈಯ ಏನೆಂದು ಮುಗಿದಾಳೆ
ನೀವು ನಮ್ಮೊಡೆಯ ಸುಖೀಬಾಳಿ ಸುವ್ವಿ

ಮಾಳಿಗೆ ಒಳಗೆ ಹೋದಾಳೆ ಗುಣಸಾಗ್ರಿ
ಹೇರಿ ಗಾರುತಿಯ ಬೆಳಗಾಳೇ ಸುವ್ವಿ

ಹೇರಿಗಾರುತಿಯ ಬೆಳಗಿ ಏನಂದಾಳೆ
ಭಾಗ್ಯದ ಮಹಾಲಕ್ಷ್ಮಿ ಒಲಿಯವ್ವ ಸುವ್ವಿ

ಸಟ್ಟೆ ಹೇರಲಾರ ಸಟ್ಟೆ ಇಳುಗಲಾರ
ಸಟ್ಟೇಗೆ ತೋಳ ಕೊಡಲಾರ ಸುವ್ವೀ
ಸಟ್ಟೇಗೆ ತೋಳ ಕೊಡಲಾರ ಚೆನ್ನಶೆಟ್ಟಿ
ಸಣ್ಣವ ನಿನಗೆಂತ ಪಡುಗಾಲೋ ಸುವ್ವಿ

ಸಟ್ಟೆ ಹೇರೋದು ಬ್ಯಾಡ ಸಟ್ಟೆ ಇಳುಗದು ಬ್ಯಾಡ
ಸಟ್ಟೇಗೆ ತೋಳ ಕೊಡಬ್ಯಾಡ ಸುವ್ವೀ ।
ಸಟ್ಟೇಗೆ ತೋಳ ಕೊಡಲಾರ ಚೆನ್ನ ಶೆಟ್ಟಿ
ಸಣ್ಣವ ನಿನಗೆಂತ ಪಡುಗಾಲೋ ಸುವ್ವಿ

ದೇವಾರ ದೇವ ಉರಿಗಣ್ಣ ಬಿಟ್ಟಾರೆ
ಬಾಗಿ ಬೆನ್ನುಗಳ ಕೊಡುತ್ತಾವೆ ಸುವ್ವಿ
ಹೇರ ಹೇರಾಗ ಹೋರಿ ಬಿಮ್ಮ್ಯಾದಾವೆ
ನಾರೆರತ್ತಿತ್ತ ಸರಿರವ್ವ ಸುವ್ವಿ
ನಾರೆರತ್ತಿತ್ತ ಸರಿರವ್ವ ನಮ್ಮನೆಯ
ಸಣ್ಣವ ಚೆನ್ನ ಶೆಟ್ಟಿ ಬರುತ್ತಾನೆ ಸುವ್ವೀ..

## ಮೂರನೇ ಸಂಧಿ

ನಾರಿ ಬಾಗಿಲ ಮುಂದೆ ಓದ ಪಂಡಿತ ಬಂದ
ನಾರಿ ಮೈನೆರವ ದಿನ ಅಂದು
ಮಗು ಮಗುದೊಂದಡಗುತಿರಲೊ
ಮುಗಿದ ಮೋಡಗಳು ಕವಿದವಲ್ಲೊ ।

ನಾರಿ ಮೈ ನೆರದ ದಿನ ಅದು ಘಳಿಗೆ ಕೇಡು
ನಾರಿ ಹನ್ನೆರಡೊರುಷ ವನವಾಸ । ದು ॥

ಬಾಳುವ ಮಗಳಿಗೆ ಬದುಕುವ ಮಗಳಿಗೆ
ದಿನ ಕುಂದಾವ ನುಡಿದಾನೆ ॥ ದು ॥

ಹಾಕೀರೆ ಹೆಬ್ಬಾಗ್ಲ ನೂಕೀರೆ ತಳಬಾಗ್ಲ
ಕಾಕಳ್ಳರು ಬಂದು ಮುಸುಗ್ಯಾರೆ । ದು ।

ಕಾಕಳ್ಳರು ಬಂದು ಮುಸುಗ್ಯಾರೆ ಪರಜೋಗಿಯ
ಆಯುಳ್ಳ ಕಾಲ ಮುರಿದಾರೆ ॥ ದು ॥

ಜೈಯ್ಯಬ್ಯಾಡ ಅತ್ತೆಮ್ಮ ಅಸ್ನ ಬ್ಯಾಡ ಅತ್ತೆಮ್ಮ
ಅದು ನಮ್ಮ ಹಣೆಯಾಗೆ ಬರೆದದ್ದು ॥ ದು ॥

ಜೈಯ ಬ್ಯಾಡ ಅತ್ತೆಮ್ಮ ಅನಬ್ಯಾಡ ಅತ್ತೆಮ್ಮ
ಅಕ್ಕೀಯ ನೀಡಿ ಕಳುಗೀಸಿ ॥ ದು ॥

## ನಾಲ್ಕನೇ ಸಂಧಿ

ಗೀಜೀಗನರಮನೆ ಗಾಜಿನ ಕಡಿಕಂಬ
ರಾಜ ಮಾಣಿಕ್ಯದಾ ನೆಲಗಟ್ಟೆ
ಬಾರೋ ಗೀಜುಗ ಪಕ್ಷಿಯರಸೆ ನಡಿಯೋಗೀಜುಗ ॥

ಗೀಜುಗನೆಂಡತಿ ಬಸಿರಿ ಅಗ್ಯಾಳೆಂದು
ತಾವರಿ ಕಮಲ ಬಯಸೀತೆ ॥ ಬಾ ॥

ತಾವರಿ ಕಮಲ ಬಯಸೀತೆ ಆ ಹಕ್ಕಿ
ತಾವರಿ ಕೆರೆಗೆ ನಡದೀತೆ ॥ ಬಾ ॥

ತಾವರಿ ಕೆರೆಗೆ ನಡದೀತೆ ಆ ಹಕ್ಕಿ
ಅಲ್ಲೊಂದು ರಾತ್ರಿ ಉಳದೀತೆ ॥ ಬಾ ॥

ಅಲ್ಲೊಂದು ರಾತ್ರಿ ಉಳದೀತೆ ಆ ಹಕ್ಕಿ
ಕಾಲು ಸಿಕ್ಕಿಕೊಂಡು ತೆವಳೀತೆ ॥ ಬಾ ॥

ಹೊಟ್ಟ್ಯಾಗೆ ಬಂದು ಕೆಟ್ಟ ಕೆಡುಕಮೂಳ
ಹೆತ್ತವರ ಕಾಡಿ ತೆಗದೀತೆ ॥ ಬಾ ॥

ಹೆತ್ತವರ ಕಾಡಿ ತೆಗದೀತೆ ಈ ಕೆಡುಕ
ಹುಟ್ಟಿದರೆ ಇದರ ಮೆಟ್ಟಿಬಿಡುವೆ ॥ ಬಾ ॥

ಸಣ್ಣಗಂಬಳಿಯ ಜೋಡಿಸಿ ಗದ್ದುಗೆ ಹಾಸಿ
ಕನ್ಯೆ ನಿನಗೆಂತ ಕಡಿಮುಟಿ ॥ ಬಾ ॥

ಕನ್ಯೆ ನಿನಗೆಂತ ಕಡಿಮುಟಿ ಮಾಡುತ್ತ
ಚೆಂಬಿಲಿ ಹಣೆ ನೀರ ಮುಗತಾರೆ ॥ ಬಾ ॥

ಒಂದಾಲ ಕರಿಯಾಲ ಒಂದಾಲ ಬಿಳಿಯಾಲ
ಮತ್ತೊಂದು ಆಲ ಕರಿಯಾಲ ‖ ಬಾ ‖

ಮತ್ತೊಂದು ಆಲ ಕರಿಯಾಲದ ಮರದಡಿಗೆ
ಈಗ ಚೆನ್ನ ಶೆಟ್ಟಿ ಉಳಿದಾನೆ ‖ ಬಾ ‖

ಸೆಟ್ಟಿ ಹೋದ ಮೇಲೆ ಸೆಟ್ಟಿ ಹೆಂಡ್ತಿಮ್ಮ ನೆರದಾಳೆ
ಸೆಟ್ಟಿಗೊಂದ ಮಾತ ತಿಳಸೂವೆ ‖ ಬಾ ‖

ಸೆಟ್ಟಿಗೊಂದ ಮಾತ ತಿಳಿಸಿದುಂಟಾದರೆ
ಆನೆ ಕಾಲಿನ ಮಗನಾದೆ ‖ ಬಾ ‖

ಹೋರಿಯ ಹೊಡೆವ ಬಾರಿ ಸೆಟ್ಟಿ ಗೋಲಾಗೆ
ಏರಿಸಿ ಬಿಟ್ಟಾನೆ ಹೊಲಿಮುತ್ತೆ
ಎತ್ತಾನೆ ಹೊಡೆವ ಮುತ್ತಿನಸೆಟ್ಟಿಗೋಲಾದೆ
ಮುತ್ತೇರಿಸಿ ಬಿಟ್ಟೆ ಹೊಲಿಮುತ್ತೆ

ಐದನೇ ಸಂಧಿ

ಸ್ವಾಮಿಗೆ ಶರಣೆಂದ ಭೂಮಿಗೆ ಶರಣೆಂದ
ಶೂಲಿದ್ಯಾವರಿಗೆ ಶರಣೆಂದ ‖

ಕತ್ತಾಲೆ ದಾರಿ ದೂರೋ ಕೂಗಾಲೆ
ಹೊತ್ತುಂಟೆ ಕೂಗದಿರೊ

ಶೂಲಿಯ ದ್ಯಾವರಿಗೆ ಶರಣೆಂದ ಸೂರ್ಯಚಂದ್ರ
ನಾ ಬರೋ ತಂಕ ನೀ ಮೂಡದಿರೊ ‖ ಕ ‖

ಕಾ ಎಂಬ ಕಾಗೆ ಕರೆದ ಓ ಎಂಬ ಓತಿ ಕರೆದ
ಮಿರುಗ ಮಿರು ಜಾತಿ ಕರೆದಾನೋ ‖ ಕ ‖

ಮಿರುಗ ಮಿರು ಜಾತಿ ಕರೆದು ಏನಂದಾನೊ
ನಾ ಬರೋ ತಂಕ ನೀವೇಳದಿರೊ ‖ ಕ ‖

ಜೋಡು ಜೋಡಿನ ಸದ್ದೆ ಜೋಡಿನ ಚಮ್ಮಾಳೆ
ಜೋಡಿನ ಸದ್ದೆ ಬಲು ಸದ್ದೆ ‖ ಕ ‖

ಜೋಡಿನ ಸದ್ದೆ ಬಲು ಸದ್ದೆ ಚೆನ್ನಸೆಟ್ಟಿ
ಜೋಡೀಲಿ ಬಂದ ಬಲು ಬೇಗ ‖ ಕ ‖

ಜೇಕು ಜೇಕಿನ ಸದ್ದೆ ಜೇಕಿನ ಚಮ್ಮಾಳ
ಜೇಕಿನ ಸದ್ದೆ ಬಲು ಸದ್ದೆ ॥ ಕ ॥

ನಾರಿ ಬಾಗಿಲಲಿ ನಿಂತು ನಲವತ್ತು ಘಳಿಗಾತೆ
ಈಗೆರಡು ಘಳಿಗೆ ಉಳಿದಾವೆ ॥ ಕ ॥

ರಂಜೆ ಬಾಗಿಲಲಿ ನಿಂತು ಐಂಬತ್ತು ಘಳಿಗಾದೆ
ಈ ಗೆರಡ ಘಳಿಗೆ ಉಳಿದಾವೆ ॥ ಕ ॥

ಊರ ಬಾರಿಕ ಕಳ್ಳ ಊರ ತಳವಾರ ಕಳ್ಳ
ಊರ ಬಾರಿಕನ ಮಗ ಕಳ್ಳ ॥ ಕ ॥

ಊರ ಬಾರಿಕನ ಮಗ ಕಳ್ಳ ಎಲೆ ಹರನೆ
ಯಾರೆಂದು ಕದವ ತೆಗೆಯಾಲಿ ॥ ಕ ॥

ಊರ ಬಾರಿಕನಲ್ಲ ಊರ ತಳವಾರನಲ್ಲ
ಧೀರ ಚೆನ್ನ ಸೆಟ್ಟಿ ಹೌದು ಅನ್ನೆ ॥ ಕ ॥

ಧೀರ ಚೆನ್ನ ಸೆಟ್ಟಿ ಹೌದನ್ನೆ ಗುಣಸಾಗರಿ
ಬಾಗಿಲಗಣಿಯ ತೆಗಿಯುತ್ತೆ ॥ ಕ ॥

ಸಿಡಿಮಿಡಿ ಗುಟ್ಟುತ್ತ ಮುಡಿಯನಲ್ಲಾಡುತ್ತ
ಅಡಗಿದ್ದ ಬೆರಳ ಅರಿಯಾದೆ ॥ ಕ ॥

ಅಡಗಿದ್ದ ಬೆರಳ ಅರಿಯಾದೆ ಗುಣಸಾಗರಿ
ಎಡಗೈಯ ಕದವ ಹಿಡಿದಾನೆ ॥ ಕ ॥

ಹೆತ್ತಪ್ಪ ಕಟ್ಟೀದ ರೊಟ್ಟಿಯುತ್ತಿ ಕಜ್ಜಾಯ
ಒಪ್ಪಿದ ಗೆಳೆಯಾರೆ ಮುಗಿಸಾರೆ ॥ ಕ ॥

ಒಪ್ಪಿದ ಗೆಳೆಯಾರೆ ಮುಗಿಸಾರೆ ಗುಣಸಾಗರಿ
ಬೇಗನಡಿಗೀಗೆ ಅಣಿಮಾಡೆ ॥ ಕ ॥

ಅಷ್ಟೊಂದ ಮಾತ ಕೇಳ್ಯಾಳೆ ಗುಣಸಾಗರಿ
ಸಣ್ಣ ಅಕ್ಕಿ ಮೂಟೆ ಒಡೆದಾಳೆ ॥ ಕ ॥

ಸಣ್ಣಕ್ಕಿ ಮೂಟೆ ಒಡೆದಾಳೆ ಗುಣಸಾಗರಿ
ಸಂಭ್ರಮದ ಅಡಿಗೆ ಮಾಡಿದಾಳೆ ॥ ಕ ॥

ಸಣ್ಣಕ್ಕಿ ಬಾನ ಬೆಣ್ಣೆಕಾಸಿದ ತುಪ್ಪ
ಉಣ್ಣೋಳಿ ರಾಯರೆ ರಾತ್ರಿ ಊಟ ॥ ಕ ॥

ಉಂಡಾರೆ ಉಟ್ಟಾರೆ ಗಂಗೆಲಿ ಹಸ್ತತೊಳೆದು
ಬಂದು ಮಂಚಕೆ ಒರಿಗ್ಯಾರೆ ॥

ಬಂದು ಮಂಚಕೆ ಒರಿಗ್ಯಾರೆ ಚೆನ್ನಸೆಟ್ಟಿ
ಮಾಪಿದ ವೀಳ್ಯೇವ ಮೆಲುದಾರೆ ॥ ಕ ॥

ಸತಿಯು ಸಣ್ಣವಳೆಂದು ನಾ ತುಂಬಿದೆ ಹೊಸ ಸರಕ
ಸತಿ ಬಂದವಳೆನ್ನ ಹರೆಯಾಕೆ

ಹರ ಹರ ಎನ್ನದೇವ ನಾ ಎನ್ನ
ಸತಿಯ ಬಿಟ್ಟಗಲಲಾರೆ ॥

ಮಡದಿ ಸಣ್ಣವಳೆಂದು ನಾ ತುಂಬಿದೆ ಹೊಸ ಸರಕ
ಮಡದಿ ಬಂದವಳೆನ್ನ ಹರೆಯಾಕೆ ॥ ಹ ॥

ಇಪ್ಪತ್ತೊಂಬ್ರವ ಕೊಟ್ಟು ತುಪ್ಪದ ಬಾವಿತೆಗೆ
ಈಗ ಸಂಭ್ರಮದ ಜಲಧಿಯ ॥ ಹ ॥

ಈಗ ಸಂಭ್ರಮದ ಜಲದಿಯ ಜಲ ಬಾರದೆ
ದೇವಾರ ದೇವ ನನಗುತಾ ॥ ಹ ॥

ಉಪ್ಪರಿಗೆ ಒಳಗೆ ಅತ್ತೆಮ್ಮ ಇದಾರೆ
ಪಟ್ಟೆ ಮಂಚಾಕೆ ತೆರಳೀರಿ ॥ ಹ ॥

ಮಾಳಿಗೆ ಒಳಗೆ ಮಾವಯ್ಯ ಇದಾರೆ
ಸಾಲೆ ಮಂಚಾಕೆ ತೆರಳೀರಿ ॥ ಹ ॥

ಇಂದು ಹೋದ ರಾಯರು ಇನ್ನೆಂದು ಬರುವುದು
ತುಂಬಿ ಚಂದ್ರಮರು ಹೊಳೆದಂಗೆ ॥ ಹ ॥

ತುಂಬಿ ಚಂದ್ರಮರು ಹೊಳೆದಂಗೆ ಅಂದ್ಯೋಳೆ
ಅಂಗೀಯ ಸೆರಗ ಹಿಡಿದಾಳೆ ॥ ಹ ॥

ಅಪ್ಪೊಂದು ಹೆದರಿಕೆ ನಿನಗೇಕೆ ಎಲೆ ಸತಿಯೆ
ಉಂಗುರ ಕೊಡುತೇನೆ ಗುರುತಾಪ ॥ ಹ ॥

ಇಂದು ಹೋದ ಮಾವರು ಇನ್ನೇನು ಬರುವ್ರು
ಮತ್ತಿ ಬುದ್ಧಿ ಮಾತು ಹೇಳ್ತಾರಗೆ ॥ ೮

ಇಷ್ಟೆಲ್ಲ ಮಾತು ಹೇಳಿದರೆ ನಿನಗೇಕೆ ಏಟೆ ಸತ್ತಿಯೇ
ನಿಮ್ಮ ಕೇಳುತ್ತೇನೆ ಗುಣಸಾಗರಿ ॥ ೯ ॥

ಊರ ಮಾರಿಕ ಕಲ್ಲ ಊರ ತಳವಾರ ಕಲ್ಲ
ಹೊರ ಹೋಂದಮಿರೆ ಏನ್ನ ಸತ್ತಿಯೇ
ಹೊರ ಹೋಂದಮಿರೆ ಏಟೆ ಸತ್ತಿಯೇ ಗುಣಸಾಗರಿ
ಹೋಗಿ ಬರುತ್ತೇನೆ ಸುಮ್ಮನಾಗಿ ॥ ೧೦ ॥

ಆರನೇ ಸಂಧಿ

ಗಂಡನ ಕಳುಗಿಸಿ ಬಾಲ ಮಂಗಳವಾಗಿದ ಹಾಕಿ
ಈಗೊಂದ ನಿದ್ದೆ ಬರಿಗಾಳಿ
ಈಗೊಂದ ನಿದ್ದೆ ಬರಿಗಾಳಿ ಗುಣಸಾಗರಿ
ಮುತ್ತಿನ ಕಟ್ಟು ಮರವೆ ಬಲಗೈಲಿ
ಮುತ್ತಿನ ಕಟ್ಟು ಮರವೆ ಬಲಗೈಲಿ ತಕ್ಕೊಂಡು
ಅಕ್ಕಿ ಮಗದಾಳೆ ಮರತುಂಬ

ಅಕ್ಕಿಯ ಮಾಡುತ್ತಾ ಅಕ್ಕಿಯ ಕೇರುತ್ತ
ಅಕ್ಕಿಯ ಕಲ್ಲ ಆಯುತ್ತಾ
ಅಕ್ಕಿಯ ಕಲ್ಲ ಆಯುತ್ತಾ ಗುಣಸಾಗರಿ
ಇಟ್ಟಾಳೆ ತನ್ನ ಮಡಿಲ್ಯಾಗೆ
ಇಟ್ಟಾಳೆ ತನ್ನ ಮಡಿಲಾಗೆ ಹಡೆದವ್ವ
ಸೊಸಿ ಎಂಬಳು ಈಗ ಏಳುಬಸುರಿ ॥

ಜೋಳಿಯ ಮಾಡುತ್ತಾ ಜೋಳಿಯ ಕೇರುತ್ತ
ಜೋಳಿಯ ಕಲ್ಲ ಕಲ್ಲ ತಿನವುತ್ತ ।
ಜೋಳಿಯ ಕಲ್ಲ ತಿನವುತ್ತ ಗುಣಸಾಗರಿ
ಇಟ್ಟಾಳೆ ತನ್ನ ಸೆರಗಾಗೆ

ಇಟ್ಟಾಳೆ ತನ್ನ ಸೆರಗಾಗೆ ಹಡೆದವ್ವ
ಸೊಸಿ ಎಂಬಳು ಈಗ ಕಡಿ ಬಸುರಿ

ಮುಚ್ಚೀರೆ ಮುಚ್ಚೀರೆ ಮುಚ್ಚೀರೆ ನನ್ನ ಮಕ್ಕಳಿರಾ
ಪುತ್ಯಮ್ಮಗೂ ಗೋಳ ಕೊಡಬ್ಯಾಡ್ರಿ
ಮುಚ್ಚು ಮುಚ್ಚೆಂದರೆ ಮುಂದಕು ಬರುವುದಲ್ಲ
ತಂದಳು ನಿನ್ನ ಕುಲಕೆ ಕೊಡಲೀಯ

ಅಲ್ಲಕ್ಕ ಒಂದಾಗಿ ಮಲ್ಲಕ್ಕ ಮುಂದಾಗಿ
ಹೋದರು ಗುಣಸಾಗರಿ ಅರಮನೆಗೆ
ಕನ್ನೀರು ಇಡುವ ಬಣ್ಣದ ಬಳೆ ಬಂದಾವೆ
ಬಳೆ ಇಟ್ಟು ಮನಿಗೆ ಬರ ಬಹುದೆ
ನಿನ್ನೆ ನಮ್ಮವರು ಮೂಡಲಿಗ್ಹೋಗ್ಯಾರೆ
ನಾ ಇಟ್ಟೇನವ್ವ ಹೊಸ ಬಳೆಯ

ಅಲ್ಲಕ್ಕ ಒಂದಾಗಿ ಮಲ್ಲಕ್ಕ ಮುಂದಾಗಿ
ನಲ್ಲೆ ಗುಣಸಾಗರಿ ನೆಡಗಾಗಿ
ನಲ್ಲೆ ಗುಣಸಾಗರಿ ನೆಡಗಾಗಿ ಹೋದಾರೆ
ಮೈದುನ ನಿರವಾಗೆ ಅರಮನೆಗೆ

ನಿಯಮಾಳ ಕಂಪಾಳೆ ಗಡಗಡನೆ ನಡುಗ್ಯಾಳೆ
ಸುಂಗಾರದ ಮುಸುಕ ಎಳೆದಾಳೆ

ಊರ ಬಾರಿಕ ನೋಡೆ ಊರ ತಳವಾರ ನೋಡೆ
ಊರ ಬಾರಿಕನ ಮಗನೋಡೆ
ಊರ ಬಾರಿಕನ ಮಗನೋಡೆ ಗುಣಸಾಗರಿ
ನೀನು ಗೈದಿರುವ ಈ ಕೆಲಸ

ಮೊನ್ನೆ ನಮ್ಮವರು ಮೂಡಲಿಗ್ಹೋಗ್ಯಾರೆ
ಇಲ್ಲೊಂದು ರಾತ್ರಿ ಉಳಿದಾರೆ
ಇಲ್ಲೊಂದು ರಾತ್ರಿ ಉಳಿದರು ಅವರ ಕೈಯ
ಉಂಗುರ ಕೊಟ್ಟಾರೆ ಗುರುತಾವ
ಉಂಗುರ ಕೊಟ್ಟಾರೆ ಗುರುತಾವ ಅದರೆನ್ನಯ್ಯ
ಇಟ್ಟೇನಿ ನನ್ನ ಅರಮನೆಗೆ

ಅಲ್ಲಕ್ಕ ಒಂದಾಗಿ ಮಲ್ಲಕ್ಕ ಮುಂದಾಗಿ
ಹೋದರು ಗುಣಸಾಗರಿ ಅರಮನೆಗೆ

ಹೋದರು ಗುಣಸಾಗರಿ ಅರಮನೆಗೆ ಆ ಉಂಗುರವ
ಇಟ್ಟಾರೆ ತಮ್ಮ ತುರುಬಾಗೆ

ಮೊದಲಿಗ್ಯೋದಣ್ಣ ಈಗ ಬರುವುದು ಉಂಟೆ
ಹುಟ್ಟೀನೆ ನಮ್ಮಣ್ಣ ಮರುಳೀನೆ

ಕಟ್ಟಿ ತಳಗಾನ ಬಿಟ್ಟಿದ ಓಲೆ ತೋಡ
ಸೆಟ್ಟಿಗಾರ್ರ್ಹುಡುಗ ತಗತ್ತಾರು

ಸೆಟ್ಟಿಗಾರರ ಹುಡುಗ ತಗತ್ತಾರು ಗುಣಸಾಗರಿ
ಹೆತ್ತಪ್ಪಗೋಲೆ ಬರಿತ್ತೀವಿ
ಓಲೆ ಬಯ್ಯುವರಿಗೆ ಒಳಗೆ ಊಟಾದಾವೆ
ಕೇಳಾರವಮ್ಮ ಕೆನೆ ಮೊಸರು
ಕೇಳಾರವಮ್ಮ ಕೆನೆಮೊಸರೂಟ ಮಾಡಿ
ಹೋದರು ಗುಣಸಾಗರಿ ತವರಿಗೆ

ಕಾಲೆಲ್ಲ ಕಿರಿಮುಗುಳು ಮಾರ್ಕೆಲ್ಲ ಹನಿಜಿವರು
ಮತ್ತೇನ ಬಂದ್ಯೋ ಬರದಂಡ
ಏನ ಹೇಳಲಿ ಅಪ್ಪ ಹಾಳಾದ ಸುದ್ದೀಯ
ನೀರ ಮಿಂದಾಳೆ ನಿನ ಮಗಳು
ನೀರ ಮಿಂದಾಳೆ ನಿನ ಮಗಳು ಹಡೆದಪ್ಪ
ಮೋರೆ ನೋಡೋರೆ ಗತಿಯಿಲ್ಲ

ನೀರ ಮಿಂದಿರೊ ಮಗಳ ಮೋರೆ ನೋಡೋರೆನೊ
ಅರಣ್ಯಕ್ಕೊಯ್ದು ತಲೆ ಹೊಡಿಯೋ
ಮಾತು ತಂದಿರೊ ಮಗಳ ಮುಖವ ನೋಡುವರೇನೊ
ಅರಣ್ಯಕ್ಕೊಯ್ದು ತಲೆ ಹೊಡಿಯೊ

## ಗಾದೆಗಳು

'ಗಂಜಿ ಕುಡಿಯೋನಿಗಿಂತ ಅನ್ನ ಉಣ್ಣೋನು ಸಾವುಕಾರ'

'ಕಹಳೆ ಊದವನಿಗೆ ಕೊಳೆ ಬಂಗಾರ'

'ಬಡವನ ನೋಡಿ ಮೊಲ ಮೂರು ಕಾಲಗೆ ನೆಡಿತು'

'ಅಪ್ಪಗೆ ಅರಬಿ ಚಿಂತೆ ಮಗಳಿಗೆ ಮದುವೆ ಚಿಂತೆ'

'ಬಡವನ ಹೆಂಡ್ತಿ ಊರಿಗೆ ಅತ್ತಿಗೆಮ್ಮ'

'ಮುದಿ ಎತ್ತಿಗೆ ಧರೆ ಮೇಲಿನ ಹುಲ್ಲ್ಯಾಕ?'

'ಕಳ್ಳರಿಗೆ ಬಲಿಯೋ ಕವಿರುಮುಂಡಿಗೆ ಹನುಮ'

'ಸೀನೆ ಸೀನೆ ಶೆಟ್ಟಿ, ಅಂದ್ರೆ ಅಂಡಿನ್ಯಾಗ ಅಳುದುದ್ದ'

'ಅಲ್ಪನಿಗೆ ಐಶ್ವರ್ಯ ಬಂದರೆ ನಡುರಾತ್ರಿ ಕೊಡೆ ಹಿಡಿದುದ್ರು'

ಈ ಎಲ್ಲಾ ಗಾದೆಗಳು ರೈತರ ಅಂದಿನ ಜೀವನ ಮಟ್ಟ ಯಾವ ರೀತಿ ಇತ್ತು. ಈ ವ್ಯವಸ್ಥೆಗೆ ಜನರು ಹೇಗೆ ಹೊಂದಿಕೊಳ್ಳುವಂತೆ ಆಯಿತು ಎಂಬುದನ್ನು ಈ ಗಾದೆಗಳು ತಿಳಿಸುತ್ತವೆ.

'ಮಿಂಡುಗ ಹೊರುವವನಿಗೆ ತೊಂಡ್ಲುಬಾಸಿಂಗ ಹೊರೆ ಅಲ್ಲ' ಜನಪದರು ಶ್ರಮಜೀವಿ ಎಂಬುದನ್ನು ಸೂಚಿಸುತ್ತದೆ.

'ಕಂಡದ್ದು ಹೇಳಿದರೆ ಕುಂಡ್ಯಾಗ ಉರಿಬಿತ್ತು'

'ಕಾಣರ ಕಂಡು ಕೌದಿ ಹೊಲೆದರೆ ನಾಟು ಹೋಲಿಗೆ ಬಿತ್ತು'

'ಹರಕೆ ಇದ್ದವ ಹರಕೆ ಹೊತ್ರೆ. ಹರಕೆ ಇಲ್ಲದವ ನೆರಕೆ ಹೊತ್ತ'

ಈ ಗಾದೆಗಳು ಮನುಷ್ಯ ನೀರವಂತಿಕೆ, ತನ್ನತನ, ಸ್ವಾಭಿಮಾನ ಇರಬೇಕು ಎಂಬುದನ್ನು ತಿಳಿಸುತ್ತವೆ.

ಊಟಕ್ಕೆ ಇಲ್ಲದ ಉಪ್ಪಿನ ಕಾಯಿ. ಶ್ಯಾಟಕ್ಕೆ ಸಮ

ಯಾವ ಕಾಲದಲ್ಲಿ ಏನಾಗಬೇಕು ಅದು ಆದ್ರೆ ಚಂದ ಇಲ್ಲದಿದ್ದರೆ ಉದುರಿಹೋಗುವ ಕೂದಲಿಗೆ ಸಮ ಎಂದರ್ಥ.

'ಸಿಟ್ಟಿಗೆ ಶ್ಯಾಟ ಹರಕಂಡ್ರೆ ಬದ್ದೆ ಯಾರದುರಿತು'

ಕೋಪದ ಕೈಯಲ್ಲಿ ಬುದ್ಧಿಯನ್ನು ಕೊಡಬಾರದು, ಬದುಕಿನಲ್ಲಿ ಸಮಾಧಾನ ಮುಖ್ಯ.

'ಮೂಗು ಇರುವವರಿಗು ಸಿಂಬಳ ತಪ್ಪಲ್ಲಾ'

ಸಂಬಂಧಗಳು ಇದ್ದೆ ಇರುತ್ತವೆ. ಅವುಗಳನ್ನು ಬಿಡಲು ಸಾಧ್ಯವಿಲ್ಲ.

'ಬೆಳ್ಳುಳ್ಳಿ ಲಾಭ ಉಳ್ಳಾಗಡ್ಡಿಯಾಗೆ ಹೋತು'

ಜಿಪುಣನಿಗೆ ಹೇಳುವ ಮಾತು. ಬೆಳ್ಳುಳ್ಳಿ ತರುವಾಗ ಮಾಡುವ ಮೋಸ ಉಳ್ಳಗಡ್ಡೆ ತರುವಾಗ ಹೋಯಿತು.

'ಹಳೆ ಅರವಿಗೆ ಹೇಲ್ ಹತ್ತಿದಂಗೆ'

"ಹೇಳಿದ್ದೆ ಹೇಳು ಕಿಸಬೈದಾಸ"

ಈ ಗಾದೆಗಳೆರಡು ಒಂದೆ ಅರ್ಥವನ್ನು ಧ್ವನಿಸಿದರೆ, ಮೊದಲ ಗಾದೆ ವಿಸ್ತಾರವುಳ್ಳದ್ದು. ಹಳೆಯದಾದ ಬಟ್ಟೆಗೆ ಹೇಲು ಮೆತ್ತಿದಾಗ ಅದನ್ನು ತೊಳೆಯಲು ತೊಡಗಿದರೆ ಅರವಿ ಹಾಳಾಗುತ್ತದೆ. ಅದರ ಜೊತೆಯಲ್ಲಿಯೇ ಹೇಲನ್ನು ತೊಳೆಯಬೇಕಾಗುತ್ತದೆ ಸಮಯ ಹಾಳು.

'ಗಂಡಸತ್ತ ಮುಂಡೆಗೆ ಶಾನುಭೋಗನ ಕಾಟ' ಗಂಡನ ಕಿರುಕುಳದಿಂದ ಪಾರಾದ ಹೆಣ್ಣಿಗೆ ಮತ್ತೆ ಅದೇ ಕಾಟ ಶುರುವಿಡುತ್ತದೆ.

'ಇದ್ದು ಕಾಡ್ಯದ, ಸತ್ತು ಕಾಡ್ಯದ'

ಕಿರುಕುಳದ ಇನ್ನೊಂದು ಮುಖವನ್ನು ತೋರಿಸುತ್ತದೆ.

'ಸೆಗಣಿ ಸಾವರ, ಮಜ್ಜಾನಕ್ಕೆ ಲಯ'

ಸಗಣಿಯಲ್ಲಿ ಕ್ರಿಮಿಗಳು ಸಾರಾರು ಆದರೆ ಬಿಸಿಲು ಏರುತ್ತಿದ್ದಂತೆ ಅವುಗಳೆಲ್ಲಾ ಸಾಯುತ್ತವೆ. ಮತ್ತು ಊಟದ ಹೊತ್ತಿಗೆ ಎಲ್ಲರು ದುಡಿಯಲು ಯಾರೂ ಇಲ್ಲ ಎಂಬ ಸಂದರ್ಭದಲ್ಲಿ ಬಳಸಲಾಗುತ್ತದೆ.

'ಕೂಸು ಹುಟ್ಟಾಕೆ ಮೊದಲೆ ಕುಲಾಯಿ ಹೊಲಿಸಿದ್ರು'

ಬಹಳ ಅವಸರದ ವ್ಯಕ್ತಿಗೆ ಈ ಗಾದೆಯನ್ನು ಬಳಸಲಾಗುತ್ತದೆ.

'ಬಡವನ ಊಟ ಚೆಂದ ದೊಡ್ಡವರ ಮಾತು ಚೆಂದ'

ಈ ಗಾದೆ ಇಂದಿಗೂ ಪ್ರಸ್ತುತವಾಗಿದೆ. ಬಡವರ ಮನೆಯ ಆತಿಥ್ಯ, ಆದರದ ಸ್ವಾಗತ, ಕಾಳಜಿ ಬಹಳ ದೊಡ್ಡದು. ಆದರೆ ಶ್ರೀಮಂತರು ತಮ್ಮ ದೊಡ್ಡ ಮಾತುಗಳಲ್ಲಿಯೇ ಆತಿಥ್ಯ ಮಾಡಿ ಕಳುಹಿಸುವರು. ವಾಸ್ತವಕ್ಕೆ ಹತ್ತಿರದ ಗಾದೆ.

'ಊರು ಸುಟ್ಟರು ಹನುಮಪ್ಪ ಹೊರಗೆ'

ಯಾವ ತಂಟೆ ತಕರಾರಿಗು ಹೋಗದ. ತನ್ನಷ್ಟಕ್ಕೆ ಇರುವವರನ್ನು ಕುರಿತು ಹೇಳಿದ ಗಾದೆ.

'ಹಗಲೆಲ್ಲ ಹಾರಾಟ ಗಂಡ ಬಂದಾಗ ತೂರಾಟ'

ವಾಚಾಳಿ, ಮನೆ ಮನೆ ತಿರುಗುವವ ಹೆಣ್ಣಿಗೆ ಹೇಳುವ ಗಾದೆ. ಬುದ್ಧಿಮಾತು.

'ನೆರಮನೆಯವನು ಗಂಡ ಅಲ್ಲ, ಡೊಳ್ಳು ನಗಾರಿ ಅಲ್ಲ'

ನಮ್ಮ ಕಷ್ಟ ನಮ್ಮದು ಅದನ್ನು ಬೇರೆಯವರ ಹತ್ತಿರ ಹೇಳಬಾರದು. ಕುಟುಂಬದ ಗುಟ್ಟು ರಟ್ಟಾಗಬಾರದು ಆದ್ದರಿಂದ ನೆರಮನೆಯವನು ಗಂಡನಾಗುವುದಕ್ಕೆ ಸಾಧ್ಯವಿಲ್ಲ. ಹಾಗೇನೆ ಡೊಳ್ಳು ನಗಾರಿಯಾಗಲಿಕ್ಕೆ ಸಾಧ್ಯವಿಲ್ಲ ಎಂದರ್ಥ.

'ಹುಳ್ಕ ಹುಳ್ಳಿ ಒಡಕು ಹೆಂಚು'

ತಾಳಮೇಳ ಸರಿಯಾಗಿದೆ. ಅಂಥವರಿಗೆ ಅಂಥವರೆ ಸೇರಿದ್ದಾರೆ ಎಂದು ವ್ಯಂಗ್ಯದಿಂದ ಹೇಳುವ ವಿವೇಕ ಪೂರ್ಣ ಮಾತು.

'ಪುಕಸಟ್ಟೆದಕ್ಕೆ ..ಬೆಳತನಕ ದೀಪ'

ದುಡಿಮೆ ಮಾಡದೆ ಉಚಿತವಾಗಿ ಸಿಗುವುದಕ್ಕೆ ಎಲ್ಲರು ಬರುತ್ತಾರೆ ಎಂಬುದನ್ನು ಸೂಚಿಸುತ್ತದೆ.

'ಅಕ್ಕಸಾಲಿಗ ಚುಚ್ಚಿದರೆ ನೊಚ್ಚಗೆ'

ಯಾವುದನ್ನು ಯಾರು ಮಾಡಬೇಕು ಅವರೆ ಮಾಡಿದರೆ ಚೆಂದ ಇನ್ನುಳಿದವರು ಮಾಡಿದರೆ ಸರಿಬರಲ್ಲ.

'ನೆಂಟರ ಹೇಳ್ಯಾಗೆ ಊಟ, ಕೂಸಿನ ಹೇಳ್ಯಾಗ ನಿದ್ದೆ'

'ಸಲಿಗೆ ಕೊಟ್ಟ ನಾಯಿ ಮೊಸಲ ನಿಕ್ಕಿತು'

'ಕತ್ತೆಗೆ ಏನ್ ಗೊತ್ತು ಹತ್ತಿ ಕಾಳಿನ ಸವಿ'

'ಆರು ಕೊಟ್ರೆ ಅಕ್ಕನ ಕಡೆಗೆ, ಮೂರು ಕೊಟ್ರೆ ಭಾವನ ಕಡೆಗೆ'

'ಆಸೆ ಪಟ್ಟು ಅಕ್ಕನ ಮನೆಗೆ ಹೋದ್ರೆ ಕೂಸು ಕೊಟ್ಟು ಕೂಡ್ರಿಸಿದ್ರು'

'ಹೊಲೆಯ ಹೋದಲ್ಲಿ ಹುಲ್ಲು ಹೊರೆ ತಪ್ಪಲ್ಲ'

'ಕರದೆಣ್ಣ ಕೊಟ್ರೆ ಅಳಿಯಗೆ ಮಲರೋಗ'

'ಕದ್ದು ಹೋಳಿಗೆ ಕೊಟ್ಟರೆ ಬೆಲ್ಲ ಸಾಲದು'

'ಪುಗಸಟ್ಟೆ ಎಮ್ಮೆ ಕೊಟ್ಟರೆ ಹಲ್ಲು ಹಿಡಿದು ನೋಡಿದ'

ಈ ಗಾದೆಗಳೆಲ್ಲ ಒಂದೇ ಅರ್ಥ ಧ್ವನಿಸುತ್ತವೆ.

'ತಲೆಗೆ ಕಲ್ಲು ಮುಕುಳಿಗೆ ಹುಲ್ಲು' ಈ ಗಾದೆ ರೈತನ ಆರ್ಥಿಕ ಸ್ಥಿತಿಯನ್ನು ತಿಳಿಸುತ್ತದೆ. ಗೇಣಿಭೂಮಿ ಮಾಡುತ್ತಿದ್ದ ರೈತನಿಗೆ ಕೊನೆಗೆ ಉಳಿಯುವುದು ಏನು? ಎಂಬುದನ್ನು ಈ ಗಾದೆ ತಿಳಿಸುತ್ತದೆ. ಗಾದೆಯಲ್ಲಿ ಚರಿತ್ರೆ ಅಡಗಿದೆ ಎಂಬುದಕ್ಕೆ ನಿದರ್ಶನವಾಗಿದೆ.

## ಒಗಟುಗಳು

'ಶೆಟ್ಟರ ಕುದುರೆ ಬಿಟ್ರೆ ಸಿಗದಿಲ್ಲ' - ಹೂಸು

'ಉಂಡು ಬಿಟ್ಟ, ಅಡಿ ಬಿಟ್ಟ' - ಎದೆಹಾಲು, ತೊಟ್ಟಿಲು

'ಬಿಳಿ ಹಕ್ಕಿ ಮುಳ್ಳಿಗೆ ಮೊಟ್ಟೆ ಹಾಕ್ತು' - ಸಿಂಬೆಹಣ್ಣು

'ಅಟ್ಟಕ್ಕೆ ಆರು ಕಣ್ಣು' - ಕೊಳಲು

'ಮುದುಕಗೆ ಮೂರುಕಣ್ಣು' - ತೆಂಗಿನ ಕಾಯಿ

'ಗೌಡರ ಕೆಂದೆತ್ತಿಗೆ ಒಂದೇ ಕಣ್ಣು' - ಅಡಿಕೆ

'ಅಂಗಣ್ಣ ಮಂಗಣ್ಣ ಅಂಗಿ ತೆಗೆದು ನುಂಗಣ್ಣ' - ಬಾಳೆಹಣ್ಣು

'ತೊಟ್ಟಿನ ತುದಿಯಾಗಿ ತುಣ್ಣೆ ಕಿಸಿಕಂಡ ಕುಂತೈತಿ' - ಗುಡ್ಡೆಗೇರು

'ಸುಗ್ಗಿಯಾಗೆ ಹೋಗಾನ ಅಂದ್ರೆ ಅರಿವಿ ಇರಲ್ಲ - ಮಳೆಗಾಲದಾಗ ಹೋಗಾನ ಅಂದೆ ಮಕ್ಕಳು ಬಾಳ' - ಅಮಟೆಮರ

'ಒಬ್ಬನು ಒಕ್ಕಣ್ಣ, ಮತ್ತೊಬ್ಬ ಮುಕ್ಕಣ್ಣ' - ಅಡಿಕೆ, ತೆಂಗಿನಕಾಯಿ

'ಕೆರ್ಯಾಗೆ ಏಳೆಮ್ಮೆ ಏರಿಯಾಗೆ ಹತ್ತೆಮ್ಮೆ - ಒಟ್ಟು ಎಷ್ಟು ಎಮ್ಮೆ' - ಒಂದು ಎಮ್ಮೆ

'ಉದ್ದನಾವನೆ ಉರಿಮುಕುಳಿಯವನೆ, ಸುದ್ದಿ ಹೇಳು ಸೂಳೆಮಗನೆ' - ಮೆಣಸಿನ ಕಾಯಿ

'ಹೊಟ್ಟೆ ಮೇಲೆ ಹೊಟ್ಟೆ ತೂತಕ್ಕೆ ಒಂದ್ಗೂಟ' - ಬೀಸುವ ಕಲ್ಲು

'ಬಿಳಿ ಹುಡುಗ ಕರಿ ಟೋಪಿ' - ಬೆಂಕಿ ಕಡ್ಡಿ

'ಓಡು ಕುದ್ರೆ ನೀರ್ ಕುಡ ಜಾಗದ ನಿಲ್ಲು ಕುದುರೆ' - ಮೆಟ್ಟು

'ಕೆಂದು ಕುದುರೆ ಮಿರಾಸ ಬೆಟ್ಟ, ಕೆಂಪ, ಹೆಂಚು ಒಬ್ಬಣ್ಣ ಹತ್ತಾನೆ, ಒಬ್ಬಣ್ಣ ಇಳಿತಾನೆ' - ಚಿಬ್ಲ, ರೊಟ್ಟಿ

'ಬಾಗಿಲಿಗೆ ಬರತ್ತಾಳೆ ಬಸಿರಾಗತಾಳೆ' - ರೊಟ್ಟಿ

'ಊರು ತಿರುಗುತ್ತಾನೆ ಮೂಲೇಲಿ ಕೂರುತ್ತಾನೆ' - ಚಪ್ಪಲಿ, ಊರುಗೋಲು

'ಅಂಕು ಡೊಂಕು ಶಂಕು ಪಾದ ಮೂರು ಮುಕುಳಿಗೆ ಹತ್ತು ಕಾಲು' - ನೇಗಿಲು, ಎತ್ತು, ರೈತ

'ಅಟ್ಟದ ಮೇಲೆ ಪುಟ್ಟಗೌರಿ' - ಕುಂಕುಮ

'ಬಿಳಿ ಹುಲ್ಲಾಗೆ ಹೊರಳಾಡಿಸಿದ್ದೆ' - ಹಲಸಿನ ಹಣ್ಣು

'ಬಿಳಿ ಮಕ್ಕಳನ್ನು ಹೆತ್ತಿದ್ದೆ' - ತ್ರೊಳಿ, ಬೀಜ

'ಹಾದಿ ಬದಿಯಾಗೆ ಬಿದ್ದಿದ್ದೆ' - ಹಲಸಿನ ಮಾಡ

'ಹಾದ್ಯಾಗೆ ಹೋಗಾಗ ಧರೆ ಕುಣಿಯಾಗ ಕೈಹಾಕ' - ಎಲೆ ಅಡಿಕೆ ಚಂಚಿ

'ಒಬ್ಬನಿಗೆ ಒಂದು ಕಾಲು, ಕಾಲ್ ಕೆಳಗೆ ತೂತ, ತೂತಕ್ಕೆ ಒಂದ ಶಾಟ' - ಸೂಜಿ ದಾರ

'ಬಿಳಿ ಬಯಲಾಗೆ ಕರಿನಾಟಿ'' - ಬರವಣಿಗೆ

'ಹಾಕನೊಬ್ಬ ನೂಕನೊಬ್ಬ ಉದರ ಶಾಟ ಏಣಿಸಾನೊಬ್ಬ' - ಶಾವಿಗೆ

'ಹಗ್ಗ ಮೆಯಿತ್ತು, ಕೋಣ ಬಿದ್ದಿಕಂತು' - ಬಳ್ಳಿ, ಕುಂಬಳಕಾಯಿ

'ತೊಲೆ ಇಲ್ಲ ಗಳ ಇಲ್ಲ ದೊಡ್ಡಮನೆಯಾಗೆ ನೂರಾರು ಜನ' - ಹುತ್ತ, ಹುಳ

# ಬೇಟೆಯ ವಿಧಗಳು

## ಮೀನು ಬೇಟೆ, ಇರಗೂನಿ, ಕೆರೆಬೇಟೆ

ಕೆರೆಬೇಟೆಯನ್ನು ಬೇಸಿಗೆ ಕಾಲದಲ್ಲಿ ಮಾಡುವಂತಹದು. ಇದು ಈಗಲು ಮಲೆನಾಡಿನ ಭಾಗದಲ್ಲಿ ಕಂಡು ಬರುತ್ತದೆ. ಕೆರೆಬೇಟೆಯಲ್ಲಿ ಆ ಊರಿನ ಜನ ಒಂದು ದಿನ ನಿಗದಿ ಮಾಡಿ ಕೆರೆಗೆ ಇಳಿಯುತ್ತಿದ್ದರು. ಕೆರೆಬೇಟೆಗೆ ಬಳಸುವ ಸಾಧನ ಇರಗೂಣಿ, ಮಂಕರಿ, ಬುಟ್ಟಿ ಮುಂತಾದವು ಇರಗುಣಿ ಎಂದರೆ ಬಿದಿರು ಕಡ್ಡಿ ವರೆದು ಸುತ್ತಲು ಹೆಣಿಗೆ ಹಾಕಿ ದುಂಡಾಕಾರವಾಗಿ ಕೂಡಿರುತ್ತಾರೆ. ಮೇಲ್ಭಾಗ ಚಿಕ್ಕದಾಗಿದ್ದು ಮಧ್ಯೆ ಒಂದು ಕೈ ಹೋಗುವಷ್ಟು ಜಾಗ ಬಿಟ್ಟಿರುತ್ತಾರೆ. ಕೆಳಭಾಗ ಅಗಲವಾಗಿರುತ್ತದೆ. ಕೆರೆಯಲ್ಲಿ ಇರಗುಣಿ ಯಿಂದ ಇರಿಯುತ್ತಾ ಹೋಗುತ್ತಾರೆ. ಗುಣಿಯಲ್ಲಿ ಬಡಿದಾಡುವ ಶಬ್ದವಾದಾಗ ಮೇಲಿಂದ ಕೈ ಹಾಕಿ ಮೀನು ಹಿಡಿಯುತ್ತಾರೆ. ಕುಚ್ಚು, ಮುರಗೋಡು, ಚೇಳುಮೀನು, ಬಾಳೆಮೀನು ಮುಂತಾದವುಗಳನ್ನು ಹಿಡಿಯುತ್ತಾರೆ. ಹೆಂಗಸರು ಮಂಕ್ರಿಯಲ್ಲಿ ಗೋರಿ ಸಣ್ಣ ಜಬ್ಬು ಹಿಡಿಯುತ್ತಾರೆ.

**ಕಟ್ಟು (ಹಾಸು) :** ಹರಿಯುವ ನದಿಗೆ ಎರಡು ಕಡೆ ದಪ್ಪನಾದ ಗೂಟ ನಿಲ್ಲಿಸಿ ಬೇರೆ ಮಾಡುತ್ತಾರೆ. ಮಧ್ಯ ದಲ್ಲಿ ಅಡ್ಡಳೆ ಹಾಕಿ ಅದರ ಮೇಲೆ ಬಣಜ ಮಾಡುತ್ತಾರೆ. ಇದು ವಿಮಾನ ಹತ್ತುವ ಏಣಿಯಂತೆ ಇರುತ್ತದೆ. ಇಲ್ಲಿ ಮೆಟ್ಟಿಲು ಇರುವುದಿಲ್ಲ ಇಳಿಜಾರು ಇರುತ್ತದೆ. ಬಣಜದ ಮಧ್ಯದಲ್ಲಿ ಕೂಣಿ ಹಾಕುತ್ತಾರೆ. ನೀರಿನ ಮಟ್ಟು ವ್ಯತ್ಯಾಸವಾದಂತೆ ಕೂಣಿಯು ಬದಲಾಗುತ್ತಾ ಇರುತ್ತದೆ. ಮಳೆಗಾಲದ ಜುಲೈ ತಿಂಗಳ ಒಳಗೆ ಈ ಹಾಸು ಮಾಡುತ್ತಾರೆ. ಮಳೆಗಾಲ ಮುಗಿಯುವ ತನಕ ಮೀನು ಹಿಡಿಯಬಹುದು. ಇದು ಮಲೆನಾಡಿನ ವರದಾ ನದಿ, ಕನ್ನ ಹೊಳೆ, ಮಾವಿನ ಹೊಳೆ, ಅಘನಾಶಿನಿ ಹೊಳೆ ಇವುಗಳಿಗೆ ಊರಿಗೆ ಒಂದರಂತೆ ಕಟ್ಟು ಇರುತ್ತದೆ. ಈಗ ಸ್ವಲ್ಪ ಕಡಿಮೆಯಾಗಿದೆ. ಅಲ್ಲೊಂದು ಇಲ್ಲೊಂದು ಕಾಣಬಹುದು. ಕಾರಣ ಕಟ್ಟು ಹಾಕಲು ಸಲಕರಣೆಗಳಾದ ಏಳೆ, ಗಳ, ಕಂಬ, ಗೂಟಗಳು ಕಾಡಿನಲ್ಲಿ ಲಭ್ಯವಿಲ್ಲದಕ್ಕಾಗಿ ಇರಬಹುದು. ಕಟ್ಟು ಹಾಕುವ ಕೆಲಸ ಒಂದಿಬ್ಬರು ಸೇರಿ ಮಾಡುವಂತಹದ್ದಲ್ಲ. ಕೇರಿಯ ಜನ ಅಥವಾ ಐದಾರು ಮನೆಯವರು ಸೇರಿ ನಿರ್ಮಿಸಬೇಕಾಗುತ್ತದೆ.

**ಹತ್ ಮೀನು :** ಜೂನ್ ತಿಂಗಳಲ್ಲಿ ಮೃಗಶಿರ ಮಳೆಯಿಂದ ಪುನರ್ವಸು ಮಳೆಯವರೆಗೆ ಮೀನು ಹೊಳೆ ಯಿಂದ ಪಡ ಅಂಚಿನಲ್ಲಿ ಮೇಲಿಂದ ಬರುವ ನೀರಿನ ಕೋಡಿಗೆ ಮೀನು ಹತ್ತುತ್ತಿರುತ್ತವೆ. ರಾತ್ರಿ ವೇಳೆ ಬ್ಯಾಟರಿ, ಲಾಟೀನ್ ಅಥವಾ ದೊಂದಿ ಬೆಳಕಿನಲ್ಲಿ ದಡದ ಅಂಚಿನ ಕೋಡಿಗೆ ಬರುವ ಮೀನನ್ನು ಕತ್ತಿಯಿಂದ ಹೊಡೆಯುತ್ತಾರೆ. ಚೇಳು, ಬಾಳೆ, ಕುಚ್ಚು, ಮುರಗೋಡು ಮೀನುಗಳು ಮೊಟ್ಟೆ ಬಿಡುವ ಕಾಲಕ್ಕೆ ಹೊಸ ನೀರು ಹುಡುಕುತ್ತಾ ಹೊರಡುತ್ತವೆ. ಆಗ ನೆಚ್ಚಿಕತ್ತಿಯಿಂದ ಮೀನು ಹೊಡೆಯುತ್ತಾರೆ.

**ಬಲೆ :** ಬಲೆಯಲ್ಲಿ ಮೂರು ನಾಲ್ಕು ವಿಧದ ಬಲೆ ಇವೆ. ಅವು ಈ ರೀತಿ ಇದೆ. ಗೇರು ಬಲೆ, ಬೀಸು ಬಲೆ, ದೊಡ್ಡ ಬಲೆ (ಮಾರಿ ಬಲೆ). ಜಬ್ಬಿನ ಬಲೆ ಮುಂತಾದವು. ಬಲೆಯಲ್ಲಿ ಎಲ್ಲಾ ಜಾತಿಯ ಮೀನು ಹಿಡಿಯುತ್ತಾರೆ. ದೊಡ್ಡ ಬಲೆ(ಮಾರಿ ಬಲೆ)ಯನ್ನು ಬೇಸಿಗೆಯ ಕಾಲದಲ್ಲಿ ದೊಡ್ಡ ಕೆರೆಕಟ್ಟೆಗಳ ಮೀನು ಹಿಡಿಯಲು ಬಳಸುತ್ತಾರೆ. ಈಗ ಕೆರೆಕಟ್ಟೆಗಳು ಸರ್ಕಾರ ಅಥವಾ ಗ್ರಾಮ ಪಂಚಾಯತಿ ಅಧೀನಕ್ಕೆ ಒಳಪಡುವುದರಿಂದ ಹಣ ಕಟ್ಟಿ, ಒಂದು ಕೇರಿಯ ಜನ ಹರಾಜು ಹಿಡಿಯುತ್ತಾರೆ. ಈಗಲು ಕೆರೆಬೇಟೆ ಹಳ್ಳಿಗಳಲ್ಲಿ ಕಾಣಬಹುದು.

**ಅಂಡೆ ಮತ್ತು ತಟ್ಟೆ :** ಬಿದಿರಿನಿಂದ ಅಂಡೆ ಮಾಡಿರುತ್ತಾರೆ. ಅಂಡೆ ಎಂದರೆ ಬಿದಿರನ್ನು ಸಿಗಿದು ಒಳಭಾಗ ಟೊಳ್ಳಾಗುವಂತೆ ಗೆಣ್ಣು ಕಡಿದು ಅದನ್ನು ಮತ್ತೆ ಸೇರಿಸಿ ಕಟ್ಟುತ್ತಾರೆ. ನೀರು ಬೀಳುವ ಗದ್ದೆಯ ಜಾಗದಲ್ಲಿ, ಸಣ್ಣ ನೀರು ಕೋಡಿಯ ಪಕ್ಕದಲ್ಲಿ ಈ ಅಂಡೆಯನ್ನು ಹಾಕಿರುತ್ತಾರೆ. ಈ ಟೊಳ್ಳುವಿನ ಒಳಗಡೆ ಮುರಗೋಡು ಮೀನು ಹೋಗಿ ಬೀಳುತ್ತವೆ. ಈ ರೀತಿ ಅಂಡೆಯಲ್ಲಿ ಮೀನು ಹಿಡಿಯುವ ಪದ್ಧತಿ ಇದೆ. ತಟ್ಟೆ ಎಂದರೆ ಊಟದ ಗಂಗಾಳ, ಇದನ್ನು ಬಿಳಿಯ ಬಟ್ಟೆಯಿಂದ ಕಟ್ಟುತ್ತಾರೆ. ಮಧ್ಯೆ ಒಂದು ತೂತು ಮಾಡಿರುತ್ತಾರೆ. ತಟ್ಟೆಯಲ್ಲಿ ಹಿಟ್ಟಿನ ಉಂಡೆ ಇಟ್ಟಿರುತ್ತಾರೆ. ಈ ತಟ್ಟೆಯನ್ನು ಕಡಿಮೆ ನೀರು ಇರುವ ಕಡೆ ಮುಳುಗಿಸಿಡುತ್ತಾರೆ. ಸಣ್ಣ ಮೀನುಗಳು ಹಿಟ್ಟಿನ ಉಂಡೆ ತಿನ್ನುವ ಸಲುವಾಗಿ ತಟ್ಟೆಯ ತುಂಬ ಸೇರುತ್ತವೆ. ಆ ಸಮಯದಲ್ಲಿ ತಟ್ಟೆಯನ್ನು ಎತ್ತಿಕೊಂಡರೆ ಆಯಿತು ಮಡಿಲ ತುಂಬ ಮೀನುಗಳು ಸಿಗುತ್ತವೆ. ಈ ರೀತಿ ಮಲೆನಾಡಿನ ದೀವರು ಮೀನು ಹಿಡಿಯುವರು.

**ಬೇಟೆ, ಸೋವು ಬೇಟೆ :** ಕಾಡಿನ ಒಂದು ಭಾಗದಲ್ಲಿ ಪ್ರಾಣಿಗಳು ಇದ್ದಾವೆ ಎಂಬುದನ್ನು ಖಚಿತ ಪಡಿಸಿಕೊಂಡು ಆ ಪ್ರಾಣಿಗಳು ಬರುವ ದಿಕ್ಕಿನಲ್ಲಿ ಬಂದೂಕು ಹಿಡಿದು ಕೂತಿರುತ್ತಾರೆ. ಇನ್ನೊಂದಿಷ್ಟು ಜನ ಕಾಡಿನ ಒಂದು ಭಾಗದಿಂದ ಕೂಗುತ್ತಾ ಬಂದೂಕುಧಾರಿಯ ಕಡೆಗೆ ಪ್ರಾಣಿಗಳನ್ನು ಓಡಿಸುತ್ತಾ ಬರುತ್ತಾರೆ. ಮಿಕ, ಕಾಡುಹಂದಿ, ಕಾಡುಕುರಿ, ಕಡವೆ ಮುಂತಾದವುಗಳನ್ನು ಬೇಟೆಯಾಡುತ್ತಾರೆ. ಹೀಗೆ ಬಂದೂಕುಧಾರಿಯ ಕಡೆಗೆ ಬಂದ ಪ್ರಾಣಿಗಳನ್ನು ಗುಂಡು ಹೊಡೆದು ಕೊಲ್ಲುತ್ತಿದ್ದರು. ಈ ರೀತಿಯ ಬೇಟೆ ಈಗಲು ಮಲೆನಾಡಿನ ಕೆಲವು ಭಾಗದಲ್ಲಿ ಇದೆ. ಸರ್ಕಾರದ ಬೇಟೆ ನಿಷೇಧದ ನಡುವೆಯು ಅಲ್ಲಲ್ಲಿ ಬೇಟೆಯಾಡುವ ಪದ್ಧತಿ ಇದೆ. ಈ ಹಂದಿ, ಮಿಕ, ಕಡವೆ, ಕುರಿಗಳ ಸಂತತಿ ವೃದ್ಧಿಯಾದಾಗ ಪ್ರಾಣಿ ಗಳು ಕಾಡು ಬಿಟ್ಟು ನಾಡಿನ ಪಸಲು ಹಾಳುಮಾಡುವುದನ್ನು ತಪ್ಪಿಸುವ ದಿಕ್ಕಿನಲ್ಲಿ ಬೇಟೆಯಾಡುವುದು ಕಂಡುಬರುತ್ತದೆ.

**ಮೊಲದ ಬೇಟೆ :** ಕಾಡಿನ ಅಂಚಿನಲ್ಲಿ ಅಥವಾ ಬ್ಯಾಣ, ಹಕ್ಕಲುಗಳ ಜಾಗೆಯಲ್ಲಿ ಮೊಲ ಬೇಟೆಯಾಡುತ್ತಾರೆ. ಐದಾರು ಮಾರು ಉದ್ದದ ನಾಲ್ಕು ಅಡಿ ಎತ್ತರದ ಬಲೆಯನ್ನು ಅಲ್ಲಲ್ಲಿ ಕಟ್ಟಿರುತ್ತಾರೆ. ಅಲ್ಲಲ್ಲಿ ಸೊಪ್ಪಿನ ಒಡ್ಡು ಹಾಕಿರುತ್ತಾರೆ. ಕೆಲವರು ಬಲೆಯ ಸಮೀಪ ಕಾಣದ ಹಾಗೆ ಕುಳಿತಿರುತ್ತಾರೆ. ಇನ್ನುಳಿದ ಜನ ಬ್ಯಾಣದ ಸುತ್ತ ಗಲಾಟೆ ಮಾಡುತ್ತಾ ಬಲೆಯ ಕಡೆಗೆ ಮೊಲವನ್ನು ಅಟ್ಟಿಸಿಕೊಂಡು ಬಂದು ಅವುಗಳನ್ನು ಬಲೆಯಲ್ಲಿ ಕೆಡವಿ ಹಿಡಿಯುತ್ತಾರೆ. ಇನ್ನೊಂದು ಪದ್ಧತಿ ಎಂದರೆ ತಂತಿಯ ಉರುಳು ಮಾಡಿ ಮೊಲ ಬರುವ ದಿಕ್ಕಿನ ದಾರಿಯಲ್ಲಿ ಸೊನ್ನೆಯಾಕಾರದ ಉರುಳುಗಳ ಸರಮಾಲೆಯನ್ನು ಇಟ್ಟಿರುತ್ತಾರೆ. ಮೊಲ ಈ ಉರುಳಿಗೆ ಸಿಕ್ಕಿ ಬೀಳುತ್ತದೆ. ಬೆಳಿಗ್ಗೆ ಬೇಗ ಬಂದು ಮೊಲವನ್ನು ತೆಗೆದುಕೊಂಡು ಹೋಗುತ್ತಾರೆ. ಇಲ್ಲಿ ಯಾರು ಉರುಳು ಕಾವಲು ನಿಲ್ಲುವುದಿಲ್ಲ. ಕೆಲವೊಂದು ಸಾರಿ ಬೇಟೆ ನಾಯಿ, ನರಿ ಪಾಲಾಗುವುದು ಉಂಟು.

**ನಾಯಿ ಬೇಟೆ :** ಮೊಲ, ಕಬ್ಬೆಕ್ಕು, ಪುನಗುಬೆಕ್ಕು, ಮುಂಗಸಿ, ಉಡ ಈ ಪ್ರಾಣಿಗಳನ್ನು ನಾಯಿಗಳಿಂದ ಹಿಡಿಸುತ್ತಿದ್ದರು. ಎರಡು ಮೂರು ಜನ ಸೇರಿ ಒಂದೆರಡು ನಾಯಿಗಳೊಂದಿಗೆ ಬೇಟೆಯಾಡಲು ತೆರಳುತ್ತಾರೆ. ನಾಯಿಯು ತನ್ನ ಚುರುಕುತನದಿಂದ ಬೇಟೆಯನ್ನು ಗುರುತಿಸುತ್ತಿತ್ತು. ನಾಯಿ ಅಟ್ಟಿಸಿಕೊಂಡು ಹೋಗಿ ಕಚ್ಚಿ ಹಿಡಿಯುತ್ತಿತ್ತು. ಅಲ್ಲದೆ ನಾಯಿ ಕಬ್ಬೆಕ್ಕು ಜಗಳ ಕಾಯುವ ಸಂದರ್ಭದಲ್ಲಿ ಜನರೆ ಹಿಂದಿನಿಂದ ಬಂದು ಕಬ್ಬೆಕ್ಕುಗಳನ್ನು ಹಿಡಿಯುತ್ತಿದ್ದರು. ಇದು ಈಗಲೂ ಹಳ್ಳಿಗಾಡಿನಲ್ಲಿ ಸರ್ವೇಸಾಮಾನ್ಯವಾಗಿರುವ ಬೇಟೆಯ ಪದ್ಧತಿಯಾಗಿದೆ.

**ಹಂದಿ ಬಲೆ ಬೇಟೆ :** ಪುಂಡಿಯ ನಾರು ಅಥವಾ ಬಳ್ಳಿಯ ನಾರಿನಿಂದ ಬಲೆಯನ್ನು ನೇಯ್ದು ಇಟ್ಟಿರುತ್ತಾರೆ. ಈ ಬಲೆಯು ಉದ್ದ ಹತ್ತು ಮಾರು ಅಥವಾ ಹದಿನೈದು ಮಾರು ಎತ್ತರ ಎಂಟು ಅಡಿ, ಈ ರೀತಿಯ ಐದಾರು ಬಲೆಯನ್ನು ಈ ಬೇಟೆಗೆ ಬಳಸುತ್ತಾರೆ. ಬೆಳಗ್ಗೆ ಬೇಗ ಕಾಡಿನ ಅಂಚಿನ ಭಾಗಕ್ಕೆ ಹೋಗಿ ಹಂದಿಯ ಗೊರಸಿನ ಗುರುತನ್ನು ನೋಡಿ, ಈ ಭಾಗದಲ್ಲಿ ಹಂದಿ ಇದೆ ಎಂಬುದನ್ನು ಖಚಿತಪಡಿಸಿಕೊಂಡು ಬರುತ್ತಾರೆ. ಕೇರಿಯ ಜನರೆಲ್ಲಾ ಸೇರಿ ಆಡುವ ಬೇಟೆ ಇದಾಗಿದೆ. ಒಂದೊಂದು ಬಲೆಯನ್ನು ನಾಲ್ಕು ಐದು ಜನ ಸೇರಿ ಹೊತ್ತುಕೊಂಡು ಪ್ರಾಣಿ ಇದ್ದ ಕಡೆ ಹೋಗುತ್ತಾರೆ. ಐವತ್ತು ಮಾರು ದೂರದಲ್ಲಿ ಒಂದುವರೆ ಆಳು ಎತ್ತರದ ನಾಲ್ಕು ಕವೆ ಕೋಲಿಗೆ ಬಲೆಯನ್ನು ಹಾಕಿ ನಿಲ್ಲಿಸುತ್ತಾರೆ. ಇಲ್ಲಿ ಈಟಿ, ಭರ್ಜಿಯ ಬಳಕೆಯಿದೆ. ಈಟಿಯನ್ನು ಹಿಡಿದು ಬಲೆಯ ಮರಸಿನಲ್ಲಿ ನಾಲ್ಕು ಜನ ಬಲೆಗೊಂದರಂತೆ ನಿಲ್ಲುತ್ತಾರೆ. ಇನ್ನುಳಿದ ಜನ ಪ್ರಾಣಿ ಇರುವ ಜಾಗೆಯ ಸುತ್ತ ಕೂಗುತ್ತ ಬಲೆಯ ದಿಕ್ಕಿನೆಡೆಗೆ ಬೇಟೆ ಬರುವಂತೆ ಮಾಡುತ್ತಾರೆ. ರಾತ್ರಿಯಿಡಿ ಮೇಯಿದ ಪ್ರಾಣಿ ಮಟ್ಟಿಯ ಮಧ್ಯದಲ್ಲಿ ಮಲಗಿರುತ್ತದೆ. ಇವರ ಗದ್ದಲ ಕೇಳಿ ಗಾಬರಿಯಿಂದ ಗದ್ದಲವಿಲ್ಲದ ದಿಕ್ಕಿನೆಡೆಗೆ ಓಟ ಕೀಳುತ್ತದೆ. ಹೀಗೆ ಹಂದಿ ಬಲೆಗೆ ಬಂದು ಬೀಳುತ್ತದೆ. ಬಲೆಗೆ ಬೀಳುತ್ತಲೆ ಕವೆ ಗೋಲು ಬಿದ್ದು ಹೋಗುತ್ತವೆ. ಬಲೆ ಹಂದಿಯನ್ನು ಮುಚ್ಚಿಕೊಳ್ಳುತ್ತದೆ. ಹಂದಿ ಬಲೆಯನ್ನು ಹೊತ್ತುಕೊಂಡು ಮೂರು ನಾಲ್ಕು ಮಾರು ದೂರ ಹೊತ್ತುಕೊಂಡು ಹೋಗುತ್ತಿತ್ತು. ಬಲೆ ಕಾಯುವ ಈಟಿ ಹಿಡಿದ ಜನ ಇರಿದು ಕೊಲ್ಲುತ್ತಿದ್ದರು. ಇಲ್ಲಿ ಕೆಲವೊಂದು ಸಾರಿ ಹಂದಿ ಜನರ ಮೇಲೆ ಹಾಯ್ದು ಹೋಗುವ ಪ್ರಸಂಗವು ನಡೆಯುತ್ತದೆ. ಕೆಲ ಜನರಿಗೆ ಪೆಟ್ಟಾದದ್ದು ಇದೆ.

**ಪಕ್ಷಿಬೇಟೆ, ಕಳ್ಳಂದೆ :** ಕಳ್ಳಿಕಾಯಿ, ಬಸರಿಮರದ ಮೇಣ ತೆಗೆದು ಅದನ್ನು ಮಡಕೆಗೆ ಹಾಕಿ ಬೇಯಿಸಿ, ಕುದಿಸಿ ಚೆನ್ನಾಗಿ ಕಾದ ಮೇಲೆ ಬಿದಿರು ಅಂಡೆಗೆ ಹಾಕುತ್ತಾರೆ. ಬಿದಿರು ಕಡ್ಡಿಯನ್ನು ಮಾಡಿ ಬಿದಿರು ಗಳಕ್ಕೆ ಸಿಕ್ಕಿಸುವರು. ಮರ ಅಥವಾ ಬೇಲಿಯ ಹತ್ತಿರ ಕೊಂಬೆ ಅಥವಾ ಗೂಟಕ್ಕೆ ಮೇಣವನ್ನು ತೆಗೆದು ಸವರಬೇಕು. ಕೊಂಬೆ ಅಥವಾ ಗೂಟದ ತುದಿಗೆ ಗೊಕ್ಕ(ಸಣ್ಣ ಇಲಿ)ವನ್ನು ಕಟ್ಟಬೇಕು. ಇಲಿಯ ಸುತ್ತ ಮೇಣದ ಬಿದಿರು ಕಡ್ಡಿಯನ್ನು ಕಟ್ಟಬೇಕು ಇಲಿಯನ್ನು ಹಿಡಿಯಲು ಬಂದ ಪಕ್ಷಿ ಮೇಣದಲ್ಲಿ ಸಿಕ್ಕಿಹಾಕಿಕೊಳ್ಳುತ್ತದೆ. ಹೀಗೆ ಪಕ್ಷಿಯನ್ನು ಹಿಡಿಯಲಾಗುತ್ತದೆ. ಗದ್ದೆಯ ಬದುವಿನ ಮೇಲೆ ಗೂಟವನ್ನು ನಿಲ್ಲಿಸಿ ಮೇಣವನ್ನು ಹಚ್ಚಿ ಹಕ್ಕಿಯನ್ನು ಹಿಡಿಯಲಾಗುತ್ತದೆ. ಪಿಕಳಾರ, ಶಕುನಾರ, ಕುಂಡೆಕುಸಕ, ಬೆಳಾಲು, ಉರಿಚಿಟ್ಟೆ, ಮಂಡೆಗಿಡುಗ ಮುಂತಾದವು ಕಳ್ಳಂಡೆಗೆ ಬೀಳುವ ಹಕ್ಕಿಗಳಾಗಿವೆ.

**ಉರ್ಲು ಜೇಟೆ :** ಪುಂಡಿದಾರದ ಒಂದು ಮಾರುದ್ದ ಹುರಿ ಬಗ್ಗುವಂತ ಒಂದು ಗಿಡಕ್ಕೆ ಹುರಿಕಟ್ಟಿ, ಎರಡು ಕವಲುಗಂಬ ನಿಲ್ಲಿಸಿ ಕವಲುಗಂಬಕ್ಕೆ ಒಂದಡಿ ಜೇಲಿ ಕಟ್ಟಿ ಚಿಕ್ಕದೊಂದು ಕಂಡಿ ಬಿಟ್ಟಿರುತ್ತಾರೆ. ಭತ್ತವನ್ನು ಹಾಕಿರುತ್ತಾರೆ. ಭತ್ತ ತಿನ್ನುವ ಆಸೆಗೆ ಕಂಡಿ ಒಳಗಡೆ ಹಕ್ಕಿ ಹೊಕ್ಕಾಗ ಉರ್ಲು ಸಿಡಿದು ಪಕ್ಷಿಯ ಕುತ್ತಿಗೆಗೆ ಸಿಕ್ಕಿಕೊಳ್ಳುತ್ತದೆ. ಕುಕ್ಕ, ಕುಂಟಕೋಳಿ, ಕಾಕೋಳಿ, ಟಿಪ್ರೆಕೋಳಿ, ಗೌಜಿನಕ್ಕಿ ಉರ್ಲಿಗೆ ಬೀಳುವ ಹಕ್ಕಿಗಳು.

**ಕುಂಟೆ ಜೇಲಿ :** ಕಾಡಿನ ಒಂದು ಭಾಗದ ಸುತ್ತಲು ಉದ್ದ ಬೇಲಿ ಹಾಕಿ ಬೇಲಿ ಮದ್ಯೆ ೩,೪ ಕುಂಟೆ ಏರಿಸುತ್ತಾರೆ. ಎರಡು ಕಡೆ ಕಿರಿ ಜೇಲಿ (ಗೂಟ ನಿಲ್ಲಿಸಿ) ನಡುವೆ ಬಾರದಂತಹ ಕುಂಟೆ (ಕಟ್ಟಿಗೆ ತುಂಡು) ಹಾಕಿ, ಎರಡು ಕಡೆ ಗೂಟ ನಿಲ್ಲಿಸಿ ಬಳ್ಳಿಗೆ ಗೂಟ ಕೊಟ್ಟು ಕುಂಟೆಯನ್ನು ಒಂದೂವರೆ ಅಡಿ ಎತ್ತರ ಎಬ್ಬಿಸಿ ತುಂಡಿನ ಕೆಳಗಡೆ ಕಡ್ಡಿ ಹಾಕಿ ನಿಲ್ಲಿಸಿರುತ್ತಾರೆ. ಆಚೆ ಈಚೆ ಓಡಾಡುವ ಪ್ರಾಣಿಗಳು ಕುಂಟೆಯ ಕೆಳಗೆ ಹೋದಾಗ ಕಡ್ಡಿ ಸಿಡಿದು ಪ್ರಾಣಿಗಳ ಮೇಲೆ ಕುಂಟೆ ಬೀಳುತ್ತದೆ, ಪ್ರಾಣಿ ಸಾಯುತ್ತದೆ. ಇಲ್ಲಿ ಮೊಲ, ಕಾನುಕುರಿ, ಮುಂಗ್ರಿ, ಉಡ, ಕಾಕೋಳಿ, ನವಲಕ್ಕಿ ಮುಂತಾದವು ಸಾಯುತ್ತವೆ.

**ಹಂದಿ ಕುಣಿ (ಪೆದ್ದ) :** ಕಾಡಿನ ಒಂದು ಭಾಗದ ಸುತ್ತಲೂ ಜೇಲಿ ಹಾಕಿ ನಡು ಕಾಡಿನಲ್ಲಿ ಎರಡು ಮೂರು ಕಡೆ ಗುಂಡಿ ತೋಡುತ್ತಿದ್ದರು. ಎರಡು ಆಳು ತಗ್ಗು (ಗುಂಡಿ) ಇರುತ್ತಿತ್ತು. ಮೇಲೆ ಅಗಲವಾಗಿದ್ದು ಕೆಳಗಡೆ ಕಿರಿದಾಗಿರುತ್ತಿತ್ತು. ಕುಣಿಯ ಮೇಲ್ಭಾಗದಲ್ಲಿ ಸಲ್ಲು, ಅಡ್ಡೆಹಾಕಿ ಮುಚ್ಚುತ್ತಿದ್ದರು. ರಾತ್ರಿ ಓಡಾಡುವಾಗ ಹಂದಿ ಬೀಳುತ್ತಿದ್ದವು. ಭರ್ಜಿ, ಬಡಗೆಯಿಂದ ಕೊಂದು ಹಾಕುತ್ತಿದ್ದರು. ಹಂದಿಕುಣಿ ಜೇಟೆಯಲ್ಲಿ ಹಂದಿಯಲ್ಲದೆ ಬೇರೆ ಪ್ರಾಣಿಗಳು ಬೀಳುತ್ತಿದ್ದವು. ಕಾನುಕುರಿ, ಮಿಕ, ಕಡವೆ ಮುಂತಾದವು.

# ವಕ್ತೃ ವಿವರ

| ಹೆಸರು | ಜಾತಿ | ವಯಸ್ಸು | ಸ್ಥಳ |
|---|---|---|---|
| ೧. ಶ್ರೀ ಹೆಚ್. ಗಣಪತಿಯಪ್ಪ | ದೀವರು | ೭೫ ವರ್ಷ | ವಡ್ನಾಳ, ಸಾಗರ |
| ೨. ಶ್ರೀ ಬರಸಿನ ದ್ಯಾವಪ್ಪ | " | ೮೫ ವರ್ಷ | ಹಿರೇನೆಲ್ಲೂರು, ಸಾಗರ |
| ೩. ಶ್ರೀ ಹುಚ್ಚಪ್ಪ ಮಾಸ್ತರ | " | ೭೫ ವರ್ಷ | ಹಿರೇಮನೆ, ಸಾಗರ |
| ೪. ಶ್ರೀ ಕಾಗೋಡು ಅಣ್ಣಪ್ಪ | " | ೫೬ ವರ್ಷ | ಗಾಂಧಿನಗರ, ಸಾಗರ |
| ೫. ಶ್ರೀ ಪುಟ್ಟಪ್ಪ | " | ೭೪ ವರ್ಷ | ಶಿರವಾಳ, ಸಾಗರ |
| ೬. ಶ್ರೀ ಎಸ್. ಚಂದ್ರಶೇಖರ | ತೆಂಗಿನ ದೀವರು | ೫೨ ವರ್ಷ | ಶಿರವಂತೆ, ಸಾಗರ |
| ೭. ಶ್ರೀ ಶಿವಾನಂದ ಕುಗ್ವೆ | ದೀವರು | ೪೦ ವರ್ಷ | ಕುಗ್ವೆ, ಸಾಗರ |
| ೮. ಶ್ರೀ ರಾಮಭದ್ರನ್ ರಾಮಪ್ಪ | " | ೬೮ ವರ್ಷ | ಕಾಗೋಡು, ಸಾಗರ |
| ೯. ಶ್ರೀ ಈಟಿ ಕನ್ನಮ್ಮ | " | ೬೯ ವರ್ಷ | ಹಿರೇನೆಲ್ಲೂರು, ಸಾಗರ |
| ೧೦. ಶ್ರೀ ಕೂಡ್ಲಿ ಕನ್ನಮ್ಮ | " | ೫೦ ವರ್ಷ | ಹಿರೇನೆಲ್ಲೂರು, ಸಾಗರ |
| ೧೧. ಶ್ರೀ ಭಾಗ್ಯಮ್ಮ | " | ೫೧ ವರ್ಷ | ಶಿರವಾಳ, ಸಾಗರ |
| ೧೨. ಶ್ರೀ ಹಾಲಮ್ಮ | | ೫೪ ವರ್ಷ | ಸೂರನಗದ್ದೆ, ಸಾಗರ |
| ೧೩. ಶ್ರೀ ಬಾಗೀರಥಿ | " | ೫೧ ವರ್ಷ | ಕೆಳದಿ, ಸಾಗರ |
| ೧೪. ದಿ.ದಿಗರಿ ನಾಗಪ್ಪ | " | ೭೨ ವರ್ಷ | ಮೆಳವರಿಗೆ, ಸಾಗರ |
| ೧೫. ದಿ.ಹಸುವಂತೆ ದ್ಯಾವಪ್ಪ | " | ೭೦ ವರ್ಷ | ಮಂಡಗಳಲೆ, ಸಾಗರ |
| ೧೬. ದಿ.ಅಳ್ಳೆ ಸಣ್ಣಪ್ಪ | " | ೭೨ ವರ್ಷ | ಹಿರೇನೆಲ್ಲೂರು, ಸಾಗರ |
| ೧೭ ದಿ.ನೆಲ್ಲೂರು ಸುಬ್ರಹ್ಮಣ್ಯ | " | ೭೦ ವರ್ಷ | ಮಂಡಗಳಲೆ, ಸಾಗರ |
| ೧೮. ದಿ.ಶ್ರೀ ತಿಮ್ಮಪ್ಪ | " | ೭೨ ವರ್ಷ | ಚಿಕ್ಕನೆಲ್ಲೂರು, ಸಾಗರ |
| ೧೯. ಶ್ರೀ ಬರ್ರಿಸ್ ಪಕೀರಪ್ಪ ಬಿನ್ ದ್ಯಾವಪ್ಪ | " | ೭೫ ವರ್ಷ | ಹಿರೇನೆಲ್ಲೂರು, ಸಾಗರ |
| ೨೦. ಶ್ರೀ ಹೆಚ್.ಬಸವಣೆಪ್ಪ | " | ೭೦ ವರ್ಷ | ಕುಪ್ಪಗಡ್ಡೆ, ಸೊರಬ. |
| ೨೧. ಶ್ರೀ ರಂಗಪ್ಪ ಗುಡಿಮನೆ | " | ೬೮ ವರ್ಷ | ತವನಂದಿ, ಸೊರಬ |
| ೨೨. ಶ್ರೀ ಎಂ.ಸಣ್ಣಪ್ಪ ಮಾಗಡಿ | " | ೬೯ ವರ್ಷ | ಮಾಗಡಿ, ಸೊರಬ |
| ೨೩. ಶ್ರೀ ಓಣಿಕೆರಿಯಪ್ಪ | " | ೭೦ ವರ್ಷ | ತವನಂದಿ, ಸೊರಬ |
| ೨೪. ಶ್ರೀ ತಗ್ಗಿನ ಮನಿಚೀಕಪ್ಪ | " | ೬೮ ವರ್ಷ | ಹುಲ್ತಿಕೊಪ್ಪ, ಸೊರಬ |

